# LŌKŌPAKĀRAM

Critically edited with Introduction

BY

H. SESHA IYENGAR,
*(Retd. Lecturer in Kannada, University of Madras.)*




GOVERNMENT ORIENTAL MANUSCRIPTS LIBRARY, MADRAS.

1950

[Price Rs.8 —0—0

PRINTED AT
THE SREEVATHSA PRESS
ROYAPETTAH, MADRAS.

# Introduction

The Government of Madras took up for consideration the question of publication of the various manuscripts in different languages on subjects like Philosophy, Medicine and Science, etc., early in May, 1948. Important manuscript libraries in the Madras Presidency were requested to send a list of unpublished manuscripts with them for favour of being considered by the Government for publication. The Honorary Secretary of the Tanjore Maharaja Serfoji's Sarasvathi Mahal Library, Tanjore, alone complied with this request. This list as well as a similar list of unpublished manuscripts in the Government Oriental Manuscripts Library, Madras, were carefully examined and a tentative selection of manuscripts suitable for publication was made. The Government in their Memorandum No. 34913/48-10, Education, dated 4-4-49, constituted an Expert Committee with the Curator of the Government Oriental Manuscripts Library, Madras, as the Secretary for the final selection of manuscripts suitable for printing and for estimating the cost of publication.

The following are the members of the Committee :—

1. Sri T. M. Narayanaswami Pillai, M.A., B.L.
2. ,, R. P. Sethu Pillai, B.A., B.L
3. ,, C. M. Ramachndra Chettiar, B.A., B.L.
4. ,, R. Krishnamoorthy, (Kalki).
5. Dr. N. Venkataramanayya, M.A., Ph. D.
6. Sri M. Ramanuja Rao Naidu, M,A.
7. ,, V. Prabhakara Sastri.
8. ,, N. Venkata Rao, M.A.
9. ,, H. Sesha Ayyangar.
10. ,, Masti Venkatesa Ayyangar, M.A.
11. ,, M. Mariappa Bhat, M.A., L.T,
12. Dr. C. Achyuta Menon, B.A., Ph.D.
13. ,, C. Kunhan Raja, M.A., D.Phil.
14. ,. A. Sankaran, M.A., Ph. D., L.T.
15. Sri P. S. Rama Sastri.
16. ,, S. K Ramanatha Sastri.
17. Dr. M. Abdul Haq, M.A., D. Phil., (Oxon).
18. Afzul-ul-Ulama Hakim Khader Ahamed.
19. Sri P. D. Joshi.
20. ,, S. Gopalan, B.A.,B.L.
21. ,, T. Chandrasekharan, M.A., L.T.

The members of the Committee formed into Sub-Committees for the various languages, Sanskrit, Tamil, Telugu, Kannada, Malayalam, Marathi, and Islamic Languages. They met during the month of May, 1949, at Madras and at Tanjore to examine the manuscripts and make a selection. The recommendations of the Committee were accepted by the Government in G.O. No. Mis. 2745 Education, dated 31-8-1949, and they decided to call these publications as the "MADRAS GOVERNMENT ORIENTAL SERIES" and appointed the Curator, Government Oriental Manuscripts Library, Madras, as the General Editor of the publications.

The following manuscripts have been taken up for publication during the current year :—

"A" From the Government Oriental Manuscripts Library, Madras.

TAMIL

1. KAPPAL S'ĀTTIRAM.
2. ANUBHAVA VAIDYA MURAI.
3. ĀTTĀNAKŌLĀHALAM.
4. UPADĒS'A KĀNDAM.
5. CŌLAN PŪRVA PAṬṬAYAM.
6. KOṄGA DĒS'A RĀJAKKAL.
7. S'IVAJNĀNA DĪPAM.

TELUGU

1. SANGĪTARATNĀKARAMU.
2. AUṢADHA YŌGAMULU.
3. VAIDYA NIGHANṬUVU.
4. DHANURVIDYĀ VILĀSAMU.
5. YŌGA DARS'ANA VIṢAYAMU.
6. KHAḌGA LAKṢAṆA S'IRŌMAṆI.

SANSKRIT

1. VIṢANĀRĀYAṆĪYAM.
2. BHĀRGHAVA NĀDIKA.
3. HARIHARACATURANGAM.
4. BRAHMA SŪTRAVṚTTI MITĀKṢARA.
5. NYĀYASIDDHĀNTA TATVĀMṚTAM.

MALAYALAM

1. GARBHA CIKITSA.
2. a. VĀSTULAKṢAṆAM.
   b. S'ILPAS'ĀSTRAM.
   c. S'ILPAVIṢAYAM.
3. MAHĀSĀRAM
4. KAṆAKKUSĀRAM.
5. KRIYĀKRAMAM.

KANNADA

1. LŌKŌPAKĀRA.
2. RAṬṬAMATA.
3. AS'VAS'ĀSTRA.
4. a. AUṢADHAGAḶU.
   b. VAIDYAVIṢAYA.
5. SANGĪTARATNĀKARA.
6. SŪPAS'ĀSTRA.



ISLAMIC LANGUAGES

1. JAMI—AL—ASHYA.
2. TIBB—E—FARIDI.
3. TAHQIQ—AL—BUHRAN.
4. SAFINAT—AL—NAJAT.

B" From the Tanjore Maharaja Serfoji's Sarasvathi Mahal Library. Tanjore.

TAMIL

1. S'ARABĒNDRAVAIDYA MURAI, (Dibates).
2. do (Eyes).
3. AGASTIYAR
4. KONKAṆARSĀRAKKU VAIPPU.
5. TIRUCHITRĀMBALAKKŌVAIYAR with padavurai.
6. KĀLACAKRAM.
7. TAṬVASAMUDRAM.
8. BHARATANĀṬYAM.
9. a. PUNDIKELI VILĀSAM.
   b. PURŪRAVA CAKRAVARTI NĀṬAKAM.
   c. MADANA SUNDARA VILĀSA NĀṬAKAM.
   d. PERCY MACQUEEN'S COLLECTION in the Madras University Library on Folklore.
10. RĀMAIYAN AMMANAI.
11. TAMIL PADALKAL including Pattinattar Venba and Vannankal.

TELUGU

1. KĀMANDAKANĪTISĀRAMU.
2. TĀLADAS'APRĀṆAPRADĪPIKA.
3. a. RAGHUNĀTHA NAYAKĀBHYUDAYAMU.
   b. RAJAGŌPĀLA VILĀSAMU.
4. RĀMĀYAṆAMU by Kaṭṭā Varadarāju.

MARATHI

1. NĀṬYAS'ĀSTRA SANGRAHA.
2. a. BOOK OF KNOWLEDGE.
   b. FOLK SONGS.
   c. DORA DARUN VENI PADDHATI.
   d. ASVA CATULA DUMANI.
3. a. PRATĀPASIMHENDRA VIJAYA PRABANDHA
   b. S'ARABHĒNDRA THIRTHĀVALI.
   c. LĀVAṆI.
4. DEVĒNDRA KURAVANGI.
5. BAKTA VILĀSA.
6. SLOKA BANDHANA RĀMĀYANA.

## SANSKRIT

1. AS'VAS'ASTRA with Tricolour illustrations.
2. RAJAMRGANKA.
3. CIKITSAMRTASAGARA.
4. AYURVEDAMAHODADHI.
5. GITA GOVINDA ABHINAYA.
6. a. COLACAMPU.
   b S'AHENDRAVILASA.
7. DHARMAKUTAM—Sundara Kāṇḍa.
8. JATAKASARA.
9. VIṢṆUTATTVANIRNAYA VYAKHYA.
10. SANGĪTA DARPAṆA.
11. BIJAPALLAVA.

It is hoped that the publication of most of the important manuscripts will be completed within the next four years.

Some of the manuscripts taken up for publication are represented by single copies in the Library and consequently the mistakes that are found in them could not be corrected by comparing them with other copies. The Editors have, however, tried their best to suggest correct readings. The wrong readings are given in round brackets and correct readings have been suggested in square brackets. When different readings are found, they have been given in the footnotes except in the case of a few books in which the correct readings have been given in the footnote or incorporated in the text itself.

The Government of Madras have to be thanked for financing the entire scheme of publication although there is a drive for economy in all the departments. My thanks are due to the members of the Expert Committee who spared no pains in selecting the manuscripts for publication. I have also to thank the various editors who are experts in their own field, for readily consenting to edit the manuscripts and see them through the press. The various presses that have co-operated in printing the manuscripts in the best manner possible also deserve my thanks for the patience exhibited by them in carrying out the corrections made in the proofs.

This edition of Lokopakara is based on the newly acquired paper manuscript bearing D. No. 2147 containing 407 pages of 20 lines each. This manuscript is a transcript of the work, got on loan from Pandit H. Sesha Iyengar, Retired Kannada Lecturer of the Madras University. From the literary as well as from the utilitarian point of view this work is expected to be of great value to one and all.

**Govt. Oriental Manuscripts Library, Madras.**

T. CHANDRASEKHARAN,
*General Editor,*
*Madras Govt. Oriental Series.*

# ಮುನ್ನುಡಿ

## ಮುದ್ರಣ ವಿಚಾರಂ

ಲೋಕೋಪಕಾರವೆಂಬ ಈ ಗ್ರಂಥವು ನಾಲ್ಕು ಹಸ್ತಲಿಖಿತಪ್ರತಿಗಳ ಆಧಾರದಿಂದ ಮುದ್ರಿತವಾಗಿರುವುದು. ಒಂದನೆಯದು – ಮೂಡಬಿದ್ರೆ ವೀರವಾಣೀವಿಲಾಸ ಜೈನಸಿದ್ಧಾಂತಭವನದ ಸೆಕ್ರೆಟರಿ ಶ್ರೀ. ಲೋಕನಾಥ ಶಾಸ್ತ್ರಿಗಳು ಕಳುಹಿಸಿಕೊಟ್ಟ ಓಲೆಯ ಪ್ರತಿ. ಮತ್ತಿನೆರಡು ಪ್ರತಿಗಳೂ ಮೈಸೂರು ಸರ್ಕಾರದ ಓರಿಯೆಂಟಲ್ ಲೈಬ್ರರಿಯ ಪ್ರತಿಗಳು, ಇವುಗಳಲ್ಲಿ ಒಂದು ಓಲೆಯ ಪ್ರತಿ, ಮತ್ತೊಂದು ಕಾಗದದ ಪ್ರತಿ. ಮೈಸೂರಿನ ಶ್ರೀ. ಬೊಮ್ಮರಸ ಪಂಡಿತರು ಕಳುಹಿಸಿಕೊಟ್ಟ ನಾಲ್ಕನೆಯದು ಕಾಗದದ ಪ್ರತಿ. ಉತ್ತರದೇಶದ *ಆರಾ ಎಂಬ ಸ್ಥಳದಲ್ಲಿರುವ ಜೈನ ಲೈಬ್ರರಿಯ ಗ್ರಂಥವು ದೊರಕಲಿಲ್ಲ. ಈಗ ದೊರಕಿರುವ ಎಲ್ಲಾ ಹಸ್ತಲಿಖಿತ ಪ್ರತಿಗಳೂ ಅಸಮಗ್ರಗಳು, ಅಲ್ಲಲ್ಲಿ ಗ್ರಂಥಪಾತಗಳುಂಟು, ಅಶುದ್ಧತೆಯೂ ಹೆಚ್ಚಾಗಿದೆ. ಅಧಿಕಾರ (ಅಧ್ಯಾಯ) ಕ್ರಮವೂ ಅಸ್ತವ್ಯಸ್ತಗಳಾಗಿವೆ. ಎರಡು ಪ್ರತಿಗಳಲ್ಲಿ ಟೀಕೆಯುಂಟು. ಟೀಕೆಯನ್ನೂ ವಾಚಕರ ಸೌಕರ್ಯಕ್ಕಾಗಿ ಮುದ್ರಿಸಿದೆ. ಟೀಕೆಯಲ್ಲಿ ಹಳಗನ್ನಡ ಭಾಷಾತತ್ವವನ್ನರಿಯದ ಟೀಕಾಕಾರನು ಕೆಲವೆಡೆಗಳಲ್ಲಿ ಪ್ರಮಾದಪಟ್ಟಿರುವನು. ಅದನ್ನು ಟಿಪ್ಪಣಿಯಲ್ಲಿ ಒಂದೆರಡು ಸ್ಥಳಗಳಲ್ಲಿ ಸೂಚಿಸಿರುವುದಲ್ಲದೆ, ಪಾಠಾಂತರಗಳನ್ನು ರೇಖೆಗಳ ಕೆಳಗೆ ಸಣ್ಣಕ್ಷರದಲ್ಲಿ ಕೊಟ್ಟಿದೆ. ಒಂದೆರಡು ಅಕ್ಷರಗಳ ಮಾರ್ಪಾಡಿನ ಪಾಠಾಂತರಗಳನ್ನು ಗ್ರಂಥ ಶರೀರದಲ್ಲೇ ( ) ದುಂಡು ಕಂಸದಲ್ಲಿಯೂ, ನಾವು ಸ್ವಂತವಾಗಿ ಪೂರ್ಣಮಾಡಿದ ಭಾಗವನ್ನು [ ] ಚೌಕ ಕಂಸದಲ್ಲಿಯೂ ತೋರಿಸಿದೆ. ಅಲ್ಪಸ್ವಲ್ಪ ಲಘು ಟಿಪ್ಪಣವನ್ನೂ ಅತ್ಯಾವಶ್ಯಕವಾದೆಡೆಗಳಲ್ಲಿ ಸೇರಿಸಿದೆ. ಕೊನೆಯಲ್ಲಿ ಗ್ರಂಥಕರ್ತನು ಈ ಗ್ರಂಥದಲ್ಲಿ ಉಪಯೋಗಿಸಿರುವ ವೃತ್ತಕಂದ ಜಾತಿಗಳನ್ನೂ ಅವುಗಳ ಸಂಖ್ಯೆಯನ್ನೂ ತೋರಿಸುವ ಪರಿಶಿಷ್ಟವೊಂದು, ಗ್ರಂಥಸ್ಥ ಪದ್ಯಗಳ ಅಕಾರಾದ್ಯಕ್ಷರಾನುಕ್ರಮಣಿಕೆಯನ್ನುಳ್ಳ ಪರಿಶಿಷ್ಟವೊಂದು, ಇವೆರಡು ಪರಿಶಿಷ್ಟಗಳನ್ನೂ ಕೊಟ್ಟಿದೆ.

## ಮಾತೃಕಾಪ್ರತಿಗಳ ಸ್ವರೂಪಾದಿಗಳು

(೧) ಶ್ರೀಮಾನ್ ಲೋಕನಾಥ ಶಾಸ್ತ್ರಿಗಳವರ ಪ್ರತಿ †ಓಲೆಯ ಪ್ರತಿ—ಇದರಲ್ಲಿ ೧೮೪ ಪತ್ರಗಳಿವೆ, ಆದಿಯ ೧೨ ಓಲೆಗಳಲ್ಲಿ ಜ್ಯೋತಿಷ ಶಕುನ ಇವುಗಳಿಗೆ ಸಂಬಂಧಿಸಿದ ಕೆಲವು ವಿಷಯಗಳನ್ನೂ ಕೆಲವು ಚಾಟು ಪದ್ಯಗಳನ್ನೂ ಬರೆದಿದೆ. ಇವುಗಳಲ್ಲಿ ಕೆಲವು ಕನ್ನಡ ಪದ್ಯಗಳೂ ಉಂಟು. ಪ್ರಾಯಶಃ ಇವು ಈ ಗ್ರಂಥಕರ್ತೃ ಕೃತವೋ ಅನ್ಯಕೃತವೋ ನಿರ್ಧರಿಸಲು ಆಧಾರವಿಲ್ಲ. ಈ ಗ್ರಂಥದಲ್ಲಿ ಜ್ಯೋತಿಷ ಭಾಗದಲ್ಲಿ ಹೇಳದಿರುವ ಕೆಲವು ವಿಷಯಗಳನ್ನೊಳಗೊಂಡಿರುವ ಕನ್ನಡ ಪದ್ಯಗಳು ಈ ಓಲೆಗಳಲ್ಲಿವೆಯಾದುದರಿಂದ ಈ ಭಾಗವನ್ನೂ ಪರಿಶಿಷ್ಟ ಇರಲ್ಲಿ ಕೊಟ್ಟಿದೆ.

---

*ಈ ಲೈಬ್ರರಿಯಲ್ಲಿರುವ ಪ್ರತಿಗಳಿಗೆ ಪ್ರತಿಯೊಂದು ಅಧಿಕಾರವನ್ನೂ ಬೇರೆ ಬೇರೆ ಗ್ರಂಥಗಳೆಂದು ಭಾವಿಸಿ, ಬೇರೆ ಬೇರೆ ಸಂಖ್ಯೆಯನ್ನು ಕೊಟ್ಟಿದೆ—

ಚಾವುಂಡರಾಯ ರಚಿತ (ಕನ್ನಡ):

ನಂ. ೯೮೦ — ಸೂಪಶಾಸ್ತ್ರ. ೫೪೮ — ವಿಷಚಿಕಿತ್ಸಾ. ೫೪೩ — ಬಾಲವೈದ್ಯ.
೨೮೧, ೨೮೨ — ಜ್ಯೋತಿಷ, ೨೮೩ — ಪಂಚಾಂಗ. ೩೬೭ — ನರಚಿಕಿತ್ಸಾ.

ವೃಕ್ಷಾಯುರ್ವೇದ, ಪರಿಮಳಗಂಧಿ, ಶಕುನ, ವಾಸ್ತು, ಜಲಾರ್ಗಳ—ಈ ಭಾಗಗಳು ಈ ಲೈಬ್ರರಿಯಲ್ಲಿ ಇಲ್ಲವೆಂದು ತೋರುವುದು.

†ಶ್ರೀಮತು ಶಾಲಿವಾಹನ ೧೮೫೪ನೆ ಅಂಗಿರಸ ವೃಶ್ಚಿಕ ೧೬ನೆ ಪೌರ್ಣಮಿ ಶುಕ್ರವಾರದಲ್ಲಿ ಬರೆದುದು.

ಈ ಓಲೆಗಳಲ್ಲಿ ನಾಲ್ಕಾರು ಯಂತ್ರಗಳೂ ಇರುವುವು. ಈ ಹನ್ನೆರಡು ಓಲೆಗಳಾದ ಬಳಿಕ ಪ್ರಕೃತ ಗ್ರಂಥವು ಆರಬ್ಧವಾಗಿದೆ.

ಒಂದನೆಯ ಓಲೆಯಲ್ಲಿ– "ನಮಸ್ಸಿದ್ಧೇಭ್ಯಃ, ಅವಿಘ್ನಮಸ್ತು, ಸ್ಥಾವರ ಜಂಗಮ" ಎಂದು, ಉದಕಾರ್ಗಳವು ಆರಂಭವಾಗಿ ೯ ಪತ್ರಗಳಲ್ಲಿ ಮುಗಿದಿವೆ.* ಬಳಿಕ ಗಜ, ಅಶ್ವ, ಗೋ, ಅಜಶ್ವಾ, ಅಸ್ತ್ರಲಕ್ಷಣಗಳು ೧೫ನೆ ಪತ್ರದಲ್ಲಿ ಅಪೂರ್ಣವಾಗಿ *ಕೊನೆಗೊಂಡಿದೆ. ೧೫ನೆಯ ಪತ್ರದಲ್ಲಿ ಶಕುನಾಧಿಕಾರವು ಆರಂಭವಾಗಿ ೩೧ನೆಯ ಪತ್ರದ ಆದಿಯಲ್ಲಿ– ಶಕುನ ವರ್ಣನಂ ದ್ವಾದಶಾಶ್ವಾಸಂ ಸಮಾಪ್ತಂ ಮಂಗಳ ಮಹಾಶ್ರೀಶ್ರೀ – ಎಂದು ಗ್ರಂಥ ಸಮಾಪ್ತಿಯನ್ನು ಸೂಚಿಸಿ, ಪತ್ರದ ಕೊನೆಯವರೆಗೆ ಕೆಲವು ನೀತಿ ಶ್ಲೋಕಗಳನ್ನು ಬರೆದಿದೆ. ಮತ್ತೆ ಈ ಪತ್ರದ ಹಿಂದೆ ವಿಷತತ್ತ್ವವು ಆರಂಭವಾಗಿ ಪತ್ರ ೪೨ನೆಯ ಆದಿಯಲ್ಲಿ– ವಿಷಪ್ರಕರಣ-ವರ್ಣನಂ ದಶಮಾಶ್ವಾಸಂ – ಎಂದು ಮುಗಿಸಿ, "ತಡೆದಿರದೆ" ಎಂದು ವೈದ್ಯವು ಆರಂಭವಾಗಿ ೬೨ನೆಯ ಓಲೆಯಲ್ಲಿ– ಇಂತು ಬಾಲವೈದ್ಯಂ ಸಮಾಪ್ತಂ – ಎಂದು ಮುಗಿಸಿ, ಮತ್ತೆ "ಶ್ರೀಪತಿಯಂ" ಎಂದು ಗ್ರಂಥಾದಿಯ ಕಂದವನ್ನಾರಂಭಿಸಿ, ಪಂಚಾಂಗಫಲವರ್ಣನ ನವಪಟಲಗಳನ್ನು ಹೇಳಿ, ಕೆಲವು ಚಾಟು ಪದ್ಯಗಳನ್ನು ಬರೆದು, ಅಶ್ವಿನ್ಯಾದಿ ನಕ್ಷತ್ರಪಾದಗಳಿಂದ ರಾಶಿಗಳಾಗುವ ಕ್ರಮವನ್ನು ಹೇಳಿ, ೧೧೦ನೆ ಓಲೆಯ ಪತ್ರದಲ್ಲಿ ವಾಸ್ತುಶಾಸ್ತ್ರವನ್ನಾರಂಭಿಸಿರುವನು. ೧೨೭ನೆಯ ಓಲೆಯಲ್ಲಿ ಗೃಹಶಾಸ್ತ್ರದ ಸಂಸ್ಕೃತ ಶ್ಲೋಕ, ಟೀಕೆಗಳನ್ನು ಬರೆದು ಬಳಿಕ ಉತ್ಪಾತಾಧ್ಯಾಯವನ್ನು ಆರಂಭಿಸಿ, ೧೫೪ರಲ್ಲಿ ಅಪೂರ್ಣವಾಗಿ "ಅಂಗವಂಗಕಳಿಂಗ" ಎಂಬ ೭೯ನೆಯ ಪದ್ಯದ "ಸಿಂಧುದೇಶ, ತಿಗುಳ"† ಎಂಬಲ್ಲಿಗೆ ನಿಲ್ಲಿಸಿ, ಬಳಿಕ ೧೫೫ರಲ್ಲಿ ವೈದ್ಯ ವಿಷಯವನ್ನಾರಂಭಿಸಿ, ೧೬೮ನೆಯ ಪತ್ರದಲ್ಲಿ– ಗಜವೈದ್ಯಂ ಸಮಾಪ್ತಂ – ಎಂದು ಉಪಸಂಹರಿಸಿರುವನು. ಬಳಿಕ ಪರಿಮಳಗಂಧಿ ಪ್ರಕರಣವನ್ನಾರಂಭಿಸಿ, ೧೮೪ನೆ ಓಲೆಯ ಪತ್ರದ ಹಿಂದೆ ಆಶ್ವಾಸಾಂತ್ಯ ಗದ್ಯವಿಲ್ಲದೆ "ಪರಿಮಳದ ಪ್ರಯೋಗದ ಪವ ಸಮಾಪ್ತಂ ||ಲ||ಲ||ಲ|| ೦—೦—" ಎಂದು ಮುಗಿಸಿ, ಮುಂದೆ—

ಶ್ರೀಪಾರ್ಶ್ವನಾಥಾಯ ನಮೋಸ್ತು ಗುರುಭ್ಯೋ ನಮಃ ಶ್ರೀಮಲ್ಲಲಿತವರ್ಣಿನೇ ನಮಃ ಶ್ರೀಮತು ಶಾಲಿವಾಹನ ಶಕ ವರ್ಷ ೧೫೫೪ನೆಯ ಅಂಗೀರಸ ಸಂವತ್ಸರದ ವೃಶ್ಚಿಕಮಾಸ ೧೬ನೆ ಪೌರ್ಣಮಿಯೂ ಶುಕ್ರವಾರದಲ್ಲಿ ಜೋಇಸರ ಮಗ ಅಪ್ಪಯ್ಯನು ಅಭ್ಯಾಸನಿಮಿತ್ತವಾಗಿ ಬರದ ಜನೋಪಕಾರದ ಪುಸ್ತಕಕ್ಕೆ ಮ(ಂಗ)ಲಮಸ್ತು ಭದ್ರಂ ಭೂಯಾತ್ ಶ್ರೀ ಶ್ರೀ ಶ್ರೀ ಶ್ರೀ.

ಭಗ್ನಪೃಷ್ಠಕಟಿಗ್ರೀವಾ(ವಂ) ಬದ್ಧದೃಷ್ಟಿ ರ(ಅ)ಧೋಮುಖಂ |
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪ್ರತಿಪಾಲಯೇತ್ ||
ತಪ್ಪುಳ್ಳೊಡೆ ತಿದ್ದಿಕೊಂಬುದುತ್ತಮ ಪುರುಷರು ||ಲ||ಲ||ಲ||ಲ||ಲ||

*ಗದ್ಯ – ಇದು...... ಹರವರ ಪ್ರಸಾದೋತ್ಪನ್ನ ವಿದ್ವದ್ವಿಳಾಸಂ ಶ್ರೀಮತ್ತವಿಳಾಸ ತನೂಜಂ........ ಪಂಚಮಾಶ್ವಾಸಂ—ಎಂಬ ಪಾಠವಿದೆ.

†೬೨ನೆಯ ಪದ್ಯದ ಟೀಕೆಯು "ಮಲಯಾಳದೇಶ, ಸಿಂಧುದೇಶ ತಿಗುಳ" ಎಂಬಲ್ಲಿಗೆ ೧೫೪ನೆಯ ಓಲೆಯು ಮುಗಿದು, ಮತ್ತೆ ೧೫೫ರಲ್ಲಿ "ನಮಸ್ಸಿದ್ಧೇಭ್ಯಃ, ಶುಭಮಸ್ತು, ಗೋವೈದ್ಯಮಂ ಪೇಳ್ವೆಂ" ಎಂದು ಗೋವೈದ್ಯವನ್ನು ಆರಂಭಿಸಿ, ಇಲ್ಲಿಂದ ಮುಂದೆ ಪುಟ ಸಂಖ್ಯೆಯ ಪಕ್ಕದಲ್ಲಿ 'ಕ ಖ' ಎಂಬ ಅಕ್ಷರಗಳನ್ನು ಬರೆದು, ೧೭೮ನೆಯ ಓಲೆಯಲ್ಲಿ 'ಪ' ಎಂಬ ಅಕ್ಷರಕ್ಕೆ ನಿಲ್ಲಿಸಿರುವನು. ಆದರೆ ಈ ಪ್ರತಿಯ ಆದಿಯಲ್ಲಿರುವ ಸಂಖ್ಯೆಯಿಲ್ಲದ ಒಂದು ಓಲೆಯಲ್ಲಿ ಇಲ್ಲಿಯ 'ತಿಗುಳ' ಶಬ್ದದ ಮುಂದಿರಬೇಕಾದ "ದೇಶ, ಈ ದೇಶಂಗಳನೂ ಕೇಡನೆಯ್ದುವವು" ಎಂಬ ಟೀಕೆಯ ಅವಶಿಷ್ಟಭಾಗವೂ, ಅದರ ಮುಂದಣ ಕಂದವೂ, ಪೃಥ್ವೀವೃತ್ತದ "ಸಮಸ್ತರೋಗದಿ ನಿಳಾತಳಂ" ಎನ್ನುವವರೆಗಣ ಪದ್ಯಭಾಗವೂ ಬರೆಯಲ್ಪಟ್ಟು, ಓಲೆಯ ಕೊನೆಯ ಒಂದೆರಡು ಪಙ್ತ್ತಿಗಳಿಗೆ ಅವಕಾಶವಿರುವಾಗಲೇ ನಿಂತುಹೋಗಿದೆ.



ಎಂದು ಮುಗಿದಿದೆ. ಒಟ್ಟಿನಲ್ಲಿ ಈ ಗ್ರಂಥದಲ್ಲಿರುವ ೧೦ ಅಧಿಕಾರಗಳೂ ವ್ಯುತ್ಕ್ರಮವಾಗಿವೆ. ಸೂಪಶಾಸ್ತ್ರ ವೃಕ್ಷಾಯುರ್ವೇದಗಳು ಇಲ್ಲ.

(೨) ಮೈಸೂರು ದೇಶದ ರಾಜಕೀಯ ಪ್ರಾಚೀನ ಪುಸ್ತಕ ಭಂಡಾರದಲ್ಲಿರುವ (ಮೈಸೂರು ಗವರ್ನಮೆಂಟ್ ಓರಿಯೆಂಟಲ್ ಲೈಬ್ರರಿಯು) ಬಿ. 441, ಸಂಖ್ಯೆಯ(ನಂಬರ್) *ಕಾಗದದ ಪ್ರತಿ— ಈ ಪ್ರತಿಯು ಶಾಲಿವಾಹನ ಶಕಬ್ದ ೧೫೫೬ನೆಯ ಭಾವ ಸಂವತ್ಸರ ಕಾರ್ತಿಕ ಶುದ್ಧ ಗುರುವಾರದಲ್ಲಿ (ಕ್ರಿ.ಶ. 1634) ಬರೆಯಲ್ಪಟ್ಟುದು. ಇದರಲ್ಲಿ ೧೬೫ ಪುಟಗಳಿವೆ. ಕ್ರಮವಾಗಿ ಗ್ರಂಥವು ಆರಂಭವಾಗಿ ಪಂಚಾಂಗಫಲ (ಪು. ೯), ನವಪಟಲ (೨೫), ವಾಸ್ತುಶಾಸ್ತ್ರ (೩೭), ಗೃಹವಾಸ್ತು (೩೭), ಉತ್ಪಾತಶಾಂತಿ (೬೫), ಉದಕಾರ್ಗಳ (೭೨), ವೃಕ್ಷಾಯುರ್ವೇದ (೮೬), ಸುಗಂಧವಾದ (೧೦೨), ಸೂಪಶಾಸ್ತ್ರ (೧೧೫), ಪುರುಷವೈದ್ಯಾದಿ ಗಜವೈದ್ಯದೊಡನೆ (೧೬೫)— ೧೬೫ನೆಯ ಪುಟದಲ್ಲಿ ಮುಗಿದಿದೆ. ಇದರಲ್ಲಿ ಒಂಬತ್ತು ಅಧಿಕಾರಗಳು ಇವೆ. ವಿಷಾಧಿಕಾರ, ಶಕುನಾಧಿಕಾರ, ಸರ್ವಲಕ್ಷಣಾಧಿಕಾರಗಳು ಇಲ್ಲ.

(೩) ಇದೇ ಲೈಬ್ರರಿಯಲ್ಲಿರುವ ಓಲೆಯ ಪ್ರತಿ—ಇದರಲ್ಲಿ ೭೩ ಓಲೆಯ ಪತ್ರಗಳಿವೆ. ಗ್ರಂಥವು ಕ್ರಮವಾಗಿ ಆರಂಭವಾಗಿ ನವಪಟಲಂ (ಓ. ೯), ವಾಸ್ತು (೧೯), ಉತ್ಪಾತಶಾಂತಿ (೩೭), ಉದಕಾರ್ಗಳ (೪೫), ವೃಕ್ಷಾಯುರ್ವೇದ (೫೫), ಸುಗಂಧವಾದ (೬೩), ಸೂಪಶಾಸ್ತ್ರ (೭೩)— ೭೩ನೆಯ ಓಲೆಯಲ್ಲಿ ಸೂಪಶಾಸ್ತ್ರದ ಪರಿಸಮಾಪ್ತಿಯೊಡನೆ ಗ್ರಂಥವು ಅಸಮಗ್ರವಾಗಿದೆ. ಇದರಲ್ಲಿ ಎಂಟು ಅಧಿಕಾರಗಳು ಇದ್ದಂತಾಯಿತು. ವೈದ್ಯ, ವಿಷವೈದ್ಯ, ಸರ್ವಲಕ್ಷಣ, ಶಕುನ- ಈ ನಾಲ್ಕು ಅಧಿಕಾರಗಳಿಲ್ಲ.

(೪) ಮೈಸೂರು ಕಥ್ಯವಾಡಿಪುರಂ ಅಗ್ರಹಾರದಲ್ಲಿರುವ ಶ್ರೀಮಾನ್ ಬೊಮ್ಮರಸ ಪಂಡಿತರು ಕಳುಹಿಸಿಕೊಟ್ಟ ಪ್ರತಿ—ಇದು ಕಾಗದದ ಪ್ರತಿ. ಇದರಲ್ಲಿ ಗೋವೈದ್ಯದಿಂದಾರಂಭವಾಗಿ ಗಜವೈದ್ಯ, ಪರಿಮಳಗಂಧ, ಉದಕಾರ್ಗಳ, ಸರ್ವಲಕ್ಷಣ ಪರಿಜ್ಞಾನ, ವಿಷಪ್ರಕರಣ, ನರಾದಿವೈದ್ಯ ಪ್ರಕರಣದಲ್ಲಿ ಬಾಲವೈದ್ಯಂ ಸಮಾಪ್ತಂ – ಎಂದು ಗ್ರಂಥವು ಉಪಸಂಹರಿಸಲ್ಪಟ್ಟಿದೆ. ಇದರಲ್ಲಿ ಐದು ಅಧಿಕಾರಗಳು ಮಾತ್ರ ಇವೆ.

ಈ ನಾಲ್ಕು ಪುಸ್ತಕಗಳ ಸಹಾಯದಿಂದ ಸರಿಯಾದ ಪಾಠಗಳನ್ನು ಊಹಿಸಿ ಮುದ್ರಿಸಿ, ಇತರ ಪಾಠಗಳನ್ನು ಅಲ್ಲಲ್ಲಿ ಕೊಟ್ಟಿದೆ. ಹೀಗೆ ಪ್ರತಿಗಳನ್ನು ಒದಗಿಸಿಕೊಟ್ಟು ಉಪಕರಿಸಿರುವ ಶ್ರೀಮಾನ್ ಲೋಕನಾಥ ಶಾಸ್ತ್ರಿಗಳಿಗೂ, ಮೈಸೂರು ಗವರ್ನಮೆಂಟ್ ಲೈಬ್ರರಿ ಕ್ಯೂರೇಟರ್ ಶ್ರೀಮಾನ್ ಹೆಚ್. ರಂಗಸ್ವಾಮಯ್ಯಂಗಾರ್ ಎಂ.ಎ, ಅವರಿಗೂ, ಶ್ರೀಮಾನ್ ಬೊಮ್ಮರಸ ಪಂಡಿತರಿಗೂ ಸಂಪಾದಕನ ಕೃತಜ್ಞತಾ ಸೂಚಕವಾದ ಅನಂತಾನಂತ ವಂದನೆಗಳು.

## ಗ್ರಂಥ ಮತ್ತು ಗ್ರಂಥಕರ್ತೃವಿನ ವಿಚಾರ

ಈ ಗ್ರಂಥದ ಹೆಸರು ಲೋಕೋಪಕಾರವೆಂದು. ಮನುಷ್ಯನಿಗೆ ಜೀವಿತ ಕಾಲದಲ್ಲಿ ಅವಶ್ಯವಾಗಿರುವ ವಿದ್ಯೆಗಳೆಲ್ಲಾ ಇದರಲ್ಲಿ ಅಡಗಿರುವುದರಿಂದ, ಈ ಹೆಸರು ಗ್ರಂಥಕ್ಕೆ ಸಂಪೂರ್ಣವಾಗಿ ಅನ್ವರ್ಥವಾಗಿದೆಯೆಂದು, ಗ್ರಂಥಕರ್ತೃವೇ—

*ಕನಕಗಿರಿ ಕಲ್ಮಠದ ತಾಳೆಯ ಪ್ರತಿಯ ನಕಲು – ಇದರ ಮಾತೃಕೆಯಾದ ಓಲೆಯ ಪ್ರತಿಯು ಶಾಲಿವಾಹನ ಶಕಾಬ್ದ ೧೫೫೬ನೆಯ ಭಾವಸಂವತ್ಸರ ಕಾರ್ತಿಕ ಶುದ್ಧ ಗುರುವಾರದಲ್ಲಿ ಬರೆದುದು.

ಮೇದಿನಿಯುಪಕಾರಂ ಕಲಿ |
ಪೋದುಂಗಳಿನಿತೊಳವವಿಲ್ಲ ನೆಲೆಸಿರ್ದ ಬುಧೋ ॥
ಪಾದೇಯಮಾದ ದೂಸಜು |
ನಾಮಮೋ ಲೋಕೋಪಕಾರಮೆಂಬನ್ವರ್ಥಂ ॥

ಎಂಬ ಪೀಠಿಕೆಯ ೩೩ನೆಯ ಪದ್ಯದಲ್ಲಿ ಹೇಳಿಕೊಂಡಿರುವನು. ಒಂದೆರಡು ಹಸ್ತಲಿಖಿತ ಪ್ರತಿಗಳ ಅಧಿಕಾರಾಂತ್ಯ ಗದ್ಯದಲ್ಲಿ "ಜನೋಪಕಾರ" ಎಂದು ಲೋಕ ಶಬ್ದ ಪರ್ಯಾಯವಾದ ಜನ ಶಬ್ದವೂ ಬರೆಯಲ್ಪಟ್ಟಿರುವುದು. "ಲೋಕಸ್ತು ಭುವನೇ ಜನೇ" ಎಂಬ ಅಮರಸಿಂಹನ ನಾಮಲಿಂಗಾನುಶಾಸನದ ನಿಘಂಟುವಿನ ಆಧಾರದಿಂದ ಲೋಕ ಶಬ್ದಕ್ಕೆ ಹದಿನಾಲ್ಕು ಲೋಕಗಳೆಂದೂ, ಜನಗಳೆಂದೂ ಎರಡು ಅರ್ಥಗಳೂ ಉಂಟು. ಪ್ರಕೃತ ಗ್ರಂಥದಲ್ಲಿ ಹೇಳಿರುವ ವಿಷಯಗಳೆಲ್ಲವೂ ಜನಗಳಿಗೆ ಮಾತ್ರವೇ ಸಂಬಂಧಿಸಿರುವುದರಿಂದ ಇಲ್ಲಿ ಲೋಕ ಶಬ್ದಕ್ಕೆ ಜನ ಎಂಬರ್ಥವನ್ನು ಸ್ವೀಕರಿಸುವುದರಿಂದ, ಜನಗಳಿಗೆ ಉಪಕಾರವನ್ನು ಮಾಡುವುದು ಎಂಬ ಈ ಗ್ರಂಥದ ಹೆಸರಿನ ಶಬ್ದಾರ್ಥವು. ಜನಗಳಿಗೆ ತುಂಬಾ ಪ್ರಯೋಜನಕಾರಿಗಳಾಗಿರುವ ವಾಸ್ತು, ವೈದ್ಯ ಮೊದಲಾದ ಹಲವು ವಿಷಯಗಳು ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿರುವುದರಿಂದ ಕೇವಲ ನಾಮ (ಶಬ್ದ) ಮಾತ್ರದಿಂದಲ್ಲದೆ, ಅರ್ಥದಿಂದಲೂ ಕೂಡಿರುವುದರಿಂದ ಗ್ರಂಥಕರ್ತೃವು ಹೇಳಿರುವ ಅನ್ವರ್ಥವೆಂಬುದು ಈ ಗ್ರಂಥಕ್ಕೆ ಪಾರಮಾರ್ಥಿ(ತಾತ್ವಿ)ಕವಾಗಿಯೇ ಇರುವುದು.

ಈ ಭೂಮಂಡಲದಲ್ಲಿ ಜನ್ಮಿಸಿದ ಸಮಸ್ತ ಪ್ರಾಣಿಗಳಿಗೂ "ಸುಖವು ಬೇಕು" "ದುಃಖವು ಬೇಡ" ಎಂಬ ಬಲವತ್ತರವಾದ ಅಭಿನಿವೇಶನವು ಹುಟ್ಟುಗುಣವಾಗಿರುವುದು. ಅದರಲ್ಲಿಯೂ *ಜ್ಞಾನವೆಂಬ ಅಮೋಘ ವಸ್ತುವನ್ನೂ, ಸೂಕ್ಷ್ಮತಮಗಳಾದ ಇಂದ್ರಿಯಗಳ ಪಾಟವವನ್ನೂ ಪಡೆದಿರುವ ಮನುಷ್ಯನ ವಿಷಯದಲ್ಲಿ ಮತ್ತೆ ಹೇಳಬೇಕಾದುದೇ ಇಲ್ಲ. ಈ ಹುಟ್ಟು ಗುಣಕ್ಕೆ ತಕ್ಕಂತೆ ಎಲ್ಲಾ ಪ್ರಾಣಿಗಳಿಗೂ ಸುಖ ಸಾಧನಗಳ ವಿಷಯದಲ್ಲಿ ಪ್ರವೃತ್ತಿಯೂ, ದುಃಖ ಸಾಧನ ವಿಷಯದಲ್ಲಿ ನಿವೃತ್ತಿಯೂ ಸಹಜವಾಗಿಯೇ ಹುಟ್ಟುವುದು ಎಂಬುದರಲ್ಲಿ ಅತಿಶಯವೇನೂ ಇಲ್ಲ. ಈ ಸುಖ ದುಃಖಗಳು ಲೌಕಿಕಗಳೆಂದೂ ಅಲೌಕಿಕಗಳೆಂದೂ ಎರಡು ವಿಧವು. ಈ ಲೋಕದಲ್ಲಿ ಮನುಷ್ಯನು ಅನುಭವಿಸುವ ಸುಖ ದುಃಖಗಳು ಲೌಕಿಕಗಳು, ಸತ್ತಮೇಲೆ ಈತನ ಪುಣ್ಯಪಾಪಗಳಿಗನುಗುಣವಾಗಿ ದೊರಕುವ ಸ್ವರ್ಗನರಕಗಳಲ್ಲಿಯ ಸುಖದುಃಖಾನುಭವಗಳೂ ಮತ್ತು ಮೋಕ್ಷಾನುಭವವೂ ಅಲೌಕಿಕಗಳು. ಹೀಗೆ ಸುಖವು ಬೇಕು – ದುಃಖವು ಬೇಡ ಎಂದು ಆಸೆಪಟ್ಟಮಾತ್ರಕ್ಕೆ ಸುಖವು ಬರುವುದಿಲ್ಲ. ಹಾಗೆಯೇ ದುಃಖವು ಬೇಡವೆಂದರೆ ಅದು ಬರದೇ ಇರುವುದಿಲ್ಲ. ಆದುದರಿಂದ ಪ್ರತಿಯೊಬ್ಬ ಮನುಷ್ಯನಿಗೂ ಸುಖ – ದುಃಖಗಳ ಸ್ವರೂಪ, ಅವುಗಳ ಸಾಧನ, ಆ ಸಾಧನಗಳ ಸಂಪಾದನೋಪಾಯ, ಇವುಗಳ ತಿಳುವಳಿಕೆಯು ಅತ್ಯಾವಶ್ಯಕವು. ಇವುಗಳಲ್ಲಿ ಅಲೌಕಿಕ ವಿಷಯಗಳ ತಿಳುವಳಿಕೆಗೆ †ವಿದ್ಯೆ(ಜ್ಞಾನ)ವೆಂದೂ, ಲೌಕಿಕ ವಿಷಯದ ತಿಳುವಳಿಕೆಗೆ ವಿಜ್ಞಾನವೆಂ(ಕಲೆಯೆಂ)ದೂ

* ಆಹಾರನಿದ್ರಾಭಯಮೈಥುನಾನಿ ಸಮಾನಮೇತತ್ ಪಶುಭಿರ್ನರಾಣಾಂ ।
ಜ್ಞಾನಂ ನರಾಣಾಮಧಿಕೋ ವಿಶೇಷೋ ಜ್ಞಾನೇನ ಹೀನಾಃ ಪಶುಭಿಸ್ಸಮಾನಾಃ ॥
—ಎಂಬ ಹಿರಿಯರುಕ್ತಿಯು ಈ ವಿಷಯವನ್ನು ಸ್ಪಷ್ಟಗೊಳಿಸುವುದು.

† ಸಾಮಾನ್ಯವಾಗಿ ತಿಳಿವಿಗೆ ಸಂಬಂಧ (ಜ್ಞಾನಕ್ಕೆ) ಪಟ್ಟುದನ್ನು ವಿದ್ಯೆಯೆಂದೂ (ವಿದ್ಯೆಯೆಂಬುದು ವಿದ, ಜ್ಞಾನೇ, ಜ್ಞಾನಾರ್ಥಕವಿದ ಧಾತು ನಿಷ್ಪನ್ನವಾದುದು), ಕೈಗಾರಿಕೆಗೆ ಸಂಬಂಧಪಟ್ಟ ತಿಳಿವನ್ನು ಕಲೆಯೆಂದೂ ವ್ಯವಹರಿಸುವುದು ಉಂಟು.



(ಕಲೆಗಳನ್ನು ವಿದ್ಯೆಯೆಂದೂ ವ್ಯವಹರಿಸುವುದೂ ಉಂಟು) ಹೆಸರು. ಈ ಕಲೆಗಳು ಅರುವತ್ತನಾಲ್ಕೆಂದು (೬೪) ಪರಿಗಣಿತವಾಗಿವೆ. ..ಸಂಸ್ಕೃತದಲ್ಲಿ ಅಲೌಕಿಕ ವಿಷಯಗಳನ್ನು ಎಂದರೆ ಮೋಕ್ಷ ಸ್ವರ್ಗನರಕಗಳ ಸ್ವರೂಪಾದಿಗಳನ್ನು ತಿಳಿಯಲು ವೇದವೇದಾಂಗ ಧರ್ಮಶಾಸ್ತ್ರ ಪುರಾಣೇತಿಹಾಸಗಳು ಏರ್ಪಟ್ಟಿರುವುವು. ಹಾಗೆಯೇ ಲೌಕಿಕ ವಿಷಯಗಳನ್ನು ಎಂದರೆ ಮನುಷ್ಯನು ಈ ಲೋಕದಲ್ಲಿ ಸುಖವಾಗಿ ಜೀವನವೃತ್ತಿಯನ್ನು ನಡೆಸಿಕೊಂಡು ಬರಲು ತಿಳಿದುಕೊಳ್ಳಬೇಕಾಗಿರುವ ವಿಷಯಗಳನ್ನು ತಿಳಿಸುವ ಕಲೆಗಳಿಗೆ ಪ್ರತಿಯೊಂದಕ್ಕೂ ಒಂದೊಂದು ಶಾಸ್ತ್ರಗಳೇ ಏರ್ಪಟ್ಟಿರುವುವು. ಪ್ರಕೃತದಲ್ಲಿ ಈ ಗ್ರಂಥಕರ್ತೃವು ಈ ಜ್ಞಾನ ವಿಜ್ಞಾನಗಳಲ್ಲಿ ವಿಜ್ಞಾನಕ್ಕೆ ಸಂಬಂಧಪಟ್ಟ ಜ್ಯೋತಿಶ್ಶಾಸ್ತ್ರ, ವಾಸ್ತುಶಾಸ್ತ್ರ, ಜಲಾರ್ಗಳ, ಸೂಪಶಾಸ್ತ್ರ, ವೈದ್ಯಶಾಸ್ತ್ರ – ಮೊದಲಾದ ಮನುಷ್ಯನಿಗೆ ಉಪಯೋಗಕರವೂ, ಸುಖಸಾಧನವೂ ಆದ ಹಲವು ವಿಷಯಗಳನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಿರುವನು. ಇಲ್ಲಿ ಹೇಳಿರುವ ಉತ್ಪಾತ, ಶಕುನ ವಿಷಯಗಳು *ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದುವು.

## ಗ್ರಂಥಸ್ವರೂಪ ಮತ್ತು ಪ್ರತಿಪಾದ್ಯ ವಿಷಯ ವಿವರಣ

ಈ ಗ್ರಂಥವು †ಪದ್ಯರೂಪದಲ್ಲಿದೆ. ಹನ್ನೆರಡು ಅಧಿಕಾರಗಳಾಗಿ ವಿಭಾಗಿಸಲ್ಪಟ್ಟಿವೆ. ಇದು ಶಾಸ್ತ್ರ ಗ್ರಂಥ. ಶಾಸನಾತ್, ಶಾಸ್ತ್ರಂ – ಮನುಷ್ಯನ ಕರ್ತವ್ಯಗಳಲ್ಲಿ ಯಾವುದಾದರೊಂದು ವಿಷಯವನ್ನು ಹಿಡಿದು, ನಿಶ್ಚಯಿಸ್ಯವಾಗಿರುವ ಅದರ ಸ್ವರೂಪ, ಗುಣ ಉಪಯೋಗಾದಿಗಳನ್ನು ವಿವರಿಸಿ ಶಿಕ್ಷಿಸುವ ಗ್ರಂಥಕ್ಕೆ ಶಾಸ್ತ್ರವೆಂದು ವ್ಯವಹಾರವು. ಈ ಬಗೆಯ ಶಾಸ್ತ್ರ ಗ್ರಂಥಗಳಲ್ಲಿ ಕಾವ್ಯ, ಜೀವಾತುಗಳಾದ ರಸಗುಣಾಲಂಕಾರ ರೀತಿ ವೃತ್ತಿಗಳಿಗೆ ಎಡೆಯಿಲ್ಲ. ಆದರೂ ಕವಿಯು ತನ್ನ ಕಾವ್ಯವಿಳಾಸ ಎಂಬ ಬಿರುದನ್ನು ಸಾರ್ಥಕಪಡಿಸಲು ಕಂದಗಳೇ ಹೆಚ್ಚಾಗಿರುವ ಈ ಗ್ರಂಥದಲ್ಲಿ ‡ಹಲವು ಜಾತಿಯ ವೃತ್ತಗಳನ್ನೂ ಪ್ರಯೋಗಿಸಿರುವನಲ್ಲದೆ, ಅಲ್ಲಲ್ಲಿ ಕೆಲವು §ಅಲಂಕಾರಗಳನ್ನೂ ಕಾವ್ಯಶೈಲಿಯ $ಪ್ರೌಢ ವಾಕ್ಯಗಳನ್ನೂ ಪ್ರಯೋಗಿಸಿರುವನು. ಮತ್ತು ಸೂಪಶಾಸ್ತ್ರದಲ್ಲಿ 'ಶಿಖರಿಣಿ' ಎಂಬ ಭೋಜ್ಯ ಪದಾರ್ಥವನ್ನು ತಯಾರಿಸುವ ಪ್ರಕಾರವನ್ನು ಶಿಖರಿಣಿ ವೃತ್ತದಲ್ಲಿಯೂ

*ಜ್ಯೋತಿಶ್ಶಾಸ್ತ್ರವು ಅಲೌಕಿಕಗಳಾದ ಸ್ವರ್ಗ-ನರಕ ಮೋಕ್ಷಗಳ ಸ್ವರೂಪವನ್ನು ವಿವರಿಸುವ ವೇದಗಳಿಗೆ ಅಂಗವಾಗಿದ್ದರೂ, ಮನುಷ್ಯನ ಜೀವನದಲ್ಲಿ ಉಪಕರಿಸುವ ಹಲವು ಅಲೌಕಿಕ ವಿಷಯಗಳನ್ನೂ ಒಳಗೊಂಡಿರುವುದು. ಈ ಗ್ರಂಥದಲ್ಲಿ ಮನುಷ್ಯನಿಗೆ ಅವಶ್ಯಕವಾಗಿರುವ ವಿಷಯಗಳನ್ನು ಮಾತ್ರ ವಿವರಿಸಿದೆ.

† ಒಂದೆರಡು ಅಧ್ಯಾಯಗಳಲ್ಲಿ ಒಂದೆರಡು ವಾಕ್ಯಗಳಿದ್ದರೂ, ಅವನ್ನು ಗದ್ಯವನ್ನಾಗಿ ಗಣಿಸಿಲ್ಲ.

‡ ಕನ್ನಡದಲ್ಲಿ ಪ್ರಸಿದ್ಧವಾಗಿರುವ ಕಂದ ಮತ್ತು ಉತ್ಪಲಮಾಲಾದಿ ಆರು ವೃತ್ತಗಳಲ್ಲದೆ, ಸ್ರಗ್ವಿಣಿ, ಮಲ್ಲಿಕಾಮಾಲೆ, ಮಾಲಿನಿ, ದ್ರುತವಿಲಂಬಿತ, ತರಳ ಮೊದಲಾದ 17 ಜಾತಿ ವೃತ್ತಗಳನ್ನು ಪ್ರಯೋಗಿಸಿರುವನು, ಇದರ ವಿವರವನ್ನು ಪರಿಶಿಷ್ಟ ೧ರಲ್ಲಿ ನೋಡಬಹುದು.

§ಮುದ್ರಾಲಂಕಾರ—ಹಿಮಾಂ । ಶುವಿಂದಂ ಮೇಘಂಗೆಯ್ದು ಶಿಖರಿಣಿಯಕ್ಕುಂ ಪೆಸರೊಳಂ॥ (೮–೫೪)
ಚತುರಿಂನಾಂಟೆ—ಶ್ರೀಶಿಷ್ಟಕಲ್ಪದ್ರುಮಂ ॥ (೧೨–೬೫)
ಉಪಮಾಲಂಕಾರಗಳು—ಮಹೋ । ದ್ಯೋಗಿಗೆದಜ್ಜಿ ಪಿಂಗುವವೋಲ್ । (೯–೩೭)
ಘನಘಟೆಯನುಗ್ರವಾತಾಹತಿವೋಲ್ ॥ (೯–೬೨)
ಯಮಕಾಲಂಕಾರ—ಶಂಕರಭಟ್ಟ… ಶಂಕರಪದ… ಜನತಾ ॥ ಶಂಕರ… ವಿಶದಯ । ಶಂಕರನಿಳಿಗೆ (೧–೭)

$ ಕಜ್ಜಾಣದರುಮರುಂಧತಿಯನಾದೊಡಂ ನೆಜ್ಜಿ ಕಾಣ್ಬರ್ ॥
ಜಾಣಾರಮಲ್ಲನಂ ಗೆಲ್ಲಮಲ್ಲನಂ ಗೆಲಲಾರ್ಕುಂ ॥

ಅಂತ್ಯಾಧಿಕಾರದಲ್ಲಿ ಉಪಶ್ರುತಿಯ ಫಲವನ್ನು "ಮಂಗಳ"* ಶಬ್ದದಿಂದ ಮುಗಿಸಿ, ಮುದ್ರಾಲಂಕಾರವನ್ನು ಸೂಚಿಸಿರುವುದರಿಂದ ತನ್ನ ಛಂದಶ್ಶಾಸ್ತ್ರಾಲಂಕಾರಶಾಸ್ತ್ರಗಳ ಪಾಂಡಿತ್ಯ ಪ್ರಕರ್ಷವನ್ನೂ ತಕ್ಕಷ್ಟು ತೋರಿಸಿಕೊಂಡಿರುವನು.

ಮೊದಲನೆಯ ಅಧಿಕಾರ—ಒಟ್ಟಿನಲ್ಲಿ ಮನುಷ್ಯನಿಗೆ ಬೇಕಾಗಿರುವ ಸುಖಸಾಧನಗಳಲ್ಲಿ ಪ್ರತ್ಯಹವೂ ಅತ್ಯಾವಶ್ಯಕಗಳಾಗಿರುವ ವಸತಿ, ಆಹಾರ, ಆರೋಗ್ಯ, ಅಲಂಕಾರ ಇವುಗಳ ವಿಷಯವು ಈ ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ. (ಮೊದಲನೆಯ ಅಧ್ಯಾಯದಲ್ಲಿ) ಮನುಷ್ಯನು ತನ್ನ ಸುಖ ಸಾಧನಕ್ಕಾಗಿ ಮಾಡಲಾರಂಭಿಸಿದ ಕೆಲಸವನ್ನು ಫಲಪ್ರಾಪ್ತಿವರೆಗೂ ಅಡ್ಡಿಯಿಲ್ಲದೆ ಮುಗಿಸಬೇಕಾ ಗಿರುವುದರಿಂದ ಇದಕ್ಕೆ ಅತ್ಯಾವಶ್ಯಕವಾಗಿ ತಿಳಿಯಬೇಕಾಗಿರುವ ತಿಥಿ ವಾರ ನಕ್ಷತ್ರಯೋಗಕರಣ ಗಳೆಂಬ ದಿನ ಪಂಚಾಂಗ ಶುದ್ಧಿಯನ್ನು ಪಂಚಾಂಗಫಲನಿರ್ಣಯವೆಂಬ ಮೊತ್ತಮೊದಲನೆಯ ಅಧಿಕಾರದಲ್ಲಿ ವಿವರಿಸಿರುವನು. ಇದರಲ್ಲಿ ಹೇಳಿರುವ ವಿಷಯಗಳೆಲ್ಲವೂ ಸಂಸ್ಕೃತ ಜ್ಯೋತಿ ಶ್ಶಾಸ್ತ್ರವನ್ನು ಅನುಸರಿಸಿವೆ.

ಈ ಅಧಿಕಾರದ ಆದಿಯಲ್ಲಿ—ಕವಿಯು ಮಂಗಳಪದ್ಯಗಳಲ್ಲಿ ತ್ರಿಮೂರ್ತಿಸ್ತುತಿ, ಗಣಪತಿ, ಸರಸ್ವತಿ, ಪುರಾತನ ಕವಿಗಳು ಇವರನ್ನು ಸ್ತುತಿಸಿ, ಬಳಿಕ ತನ್ನ ವಂಶಚರಿತ್ರೆ, ತನ್ನ ತಂದೆಯ ಮತ್ತು ತನ್ನ ಪ್ರಶಸ್ತಿ, ಗ್ರಂಥದ ಹೆಸರು, ಗ್ರಂಥ ಪ್ರಶಸ್ತಿ, ಪ್ರತಿಪಾದ್ಯ ವಿಷಯ ಇವುಗಳನ್ನು ಹೇಳಿ, ಗ್ರಂಥವನ್ನಾರಂಭಿಸಿ "ನಾನಾವಿಧ ಕಾರ್ಯಂಗಳೊಳ್ ನಾಡೊಡವಿದುವೆ ಮುಖ್ಯ"ವೆಂದು ಪಂಚಾಂಗಫಲವರ್ಣನವನ್ನು ತಿಳಿಸಿರುವನು. ಈ ಅಧಿಕಾರದಲ್ಲಿ ತಿಥಿಗಳ ಹೆಸರು, ಅಧಿದೇವತೆ ಗಳು, ಕಾರ್ಯಸಾಧಕಗಳಾದ ಸಿದ್ಧಿ ತಿಥಿಗಳು, ಕಾರ್ಯಸಿದ್ಧಿಯಾಗದ ವಾರಗಳು, ಆಯಾ ವಾರಗಳಲ್ಲಿ ಮಾಡತಕ್ಕ ಕಾರ್ಯಗಳು, ನಕ್ಷತ್ರಾಧಿ ದೇವತೆಗಳು, ಪಾರ್ಶ್ವಮುಖ, ಊರ್ಧ್ವಮುಖ, ಅಧೋ ಮುಖ, ನಕ್ಷತ್ರಗಳು, ಆಯಾ ನಕ್ಷತ್ರಗಳಲ್ಲಿ ಮಾಡಬೇಕಾದ ಕೆಲಸಗಳು, ಉಗ್ರ, ಚರ, ದಾರುಣ ಶೀಘ್ರ, ಸಾಧಾರಣ ಎಂಬ ನಕ್ಷತ್ರಗಳು, ಅವುಗಳಲ್ಲಿ ಮಾಡತಕ್ಕ ಕಾರ್ಯಗಳು, ಹೊಸ ವಸ್ತ್ರಾಭರಣಗಳನ್ನು ಧರಿಸುವುದಕ್ಕೂ, ವಿದ್ಯಾಭ್ಯಾಸಕ್ಕೂ ವ್ರತಾದಿಗಳೂ ತಕ್ಕ ನಕ್ಷತ್ರ ಗಳು, ಗಂಡಾಂತನಕ್ಷತ್ರಸಾದಂಗಳು, ವಾರ ನಕ್ಷತ್ರಗಳ ಸಂಯೋಗದಿಂದಾಗುವ ಉತ್ಪಾತಾದಿ ಯೋಗಗಳು, ಪರಿಘಯೋಗ, ಕಂಪನಾದಿ ಯೋಗಗಳು, ಸಿದ್ಧದಿನ, ತ್ರಿಪುಷ್ಕರಯೋಗ, ರೋಗಿಗೆ ಅಶುಭದಿನಗಳು, ಶುಭಾಶುಭಯೋಗ, (ವಿಷ್ಕಂಭಾದಿ ಯೋಗಗಳು ೨೭), ಕರಣಗಳಲ್ಲಿ ವಿಷ್ಟಿಸಂಯೋಗಫಲ (ಕರಣಗಳು, ಬವಾದಿ ೧೧), ಗುಳಿಕನುದಯವನ್ನು ಹೇಳಿ, ಒಟ್ಟಿನಲ್ಲಿ ಶುಭ ಕಾರ್ಯವನ್ನು ಮಾಡಲಾಗದ ದಿನವನ್ನೂ, ಸೂರ್ಯಾದಿ ನವಗ್ರಹಗಳು ಯಾವ ಯಾವ ರಾಶಿ ಗಳಲ್ಲಿದ್ದರೆ ಶುಭವನ್ನು ಕೊಡುವುವು ಎಂಬುದನ್ನೂ ಹೇಳಿ ಅಧಿಕಾರವನ್ನು ಉಪಸಂಹರಿಸಿರುವನು.

ಎರಡನೆಯ ಅಧಿಕಾರ—ಭರತಭೂಮಿಯಲ್ಲಿ ಅನಾದಿಯಾಗಿ ನಡೆದು ಬಂದಿರುವ ವರ್ಣಾ ಶ್ರಮ ಧರ್ಮಗಳಿಗೆ ಸಂಬಂಧಪಟ್ಟ ವಿವಾಹಾದಿ ಷೋಡಶಕರ್ಮಗಳನ್ನು ನಡೆಸುವುದಕ್ಕೆ ಶುಭಕರ ಗಳಾದ ತಿಥಿ ಲಗ್ನಾದಿಗಳನ್ನು ಈ ಅಧಿಕಾರದಲ್ಲಿ ವಿವರಿಸಿರುವನು.

ಈ ಅಧಿಕಾರದಲ್ಲಿ ಹೇಳಿರುವ ವಿಷಯಗಳಿಗೆ ಪಟಲಗಳೆಂದು ಹೆಸರಿಟ್ಟು, ನವಪಟಲಗಳೆಂದು ಒಂಭತ್ತು ವಿಷಯಗಳನ್ನು ಹೇಳಿರುವನು. ಗ್ರಂಥಕರ್ತೃವು ಒಂಭತ್ತು ಪಟಲವೆಂದು ಹೇಳಿ, ಮತ್ತೆ

*ಮಂಗಳಾದೀನಿ ಮಂಗಳಮಧ್ಯಾನಿ ಮಂಗಳಾಂತಾನಿ ಕಾವ್ಯಾನಿ ಪ್ರಥಂತೆ—ಎಂಬ ಶಾಸ್ತ್ರೋಕ್ತಿಯಂತೆ.



ಬೀಜಾವಾಪವನ್ನೂ ಅದಕ್ಕೆ ಸಂಬಂಧಿಸಿದ ರಾಹುಚಕ್ರವನ್ನೂ ಮತ್ತು ಗಮನಾಗಮನ ಪ್ರಶ್ನೆ, ದೇವತಾಪ್ರತಿಷ್ಠಾದಿಗಳನ್ನೂ ಹೇಳಿರುವುದರಿಂದ, ಆರಂಭದ ವಿವಾಹಪಟಲ ಮೊದಲುಗೊಂಡು ವರ್ಣಾಶ್ರಮ ಧರ್ಮಕ್ಕೆ ಸಂಬಂಧಿಸಿದ ಕರ್ಮಗಳ ವಿಷಯವನ್ನು ಹೇಳುವ ವಿವಾಹಾದಿಗಳಲ್ಲಿ ಪುಂಸವನ ಸೀಮಂತಪಟಲಗಳೆರಡನ್ನೂ ಒಂದಾಗಿ ಗ್ರಹಿಸಿ, ಬೀಜಾವಾಪ ಪಟಲವನ್ನು ಒಂಭತ್ತನೆಯದಾಗಿ ವಿಂಗಡಿಸಿದೆ. ಆದರೆ ನವಪಟಲದಲ್ಲಿ ಪುಂಸವನ ಸೀಮಂತಗಳನ್ನು ಬೇರ್ಪಡಿಸಿ, ನವ ಪಟಲವನ್ನು ವಿಂಗಡಿಸಿ ಬಳಿಕ ಬೀಜಾವಾಪಾದಿ ಮುಂದೆ ಹೇಳಿರುವ ವಿಷಯಗಳು ಅಧಿಕನೆಂದಾ ದರೂ ಹೇಳಬಹುದು. ಅಥವಾ ಗ್ರಂಥದಲ್ಲಿರುವಂತೆ ಬೀಜಾವಾಪ ಪಟಲವನ್ನು ಬೀಜಾವಾಪಾದಿ ಪಟಲವೆಂದು ಪರಿಗಣಿಸಿಕೊಂಡು ಗಮನಾಗಮನ ಪ್ರಶ್ನೆ ಮೊದಲಾದುವನ್ನೂ ಸೇರಿಸಿಕೊಂಡು ಈ ಪಟಲ ವಿಭಾಗವನ್ನು ಸರಿಪಡಿಸಿಕೊಳ್ಳಬಹುದು. ನಮಗೆ ದೊರೆತಿರುವ ಯಾವುದೊಂದು ಪ್ರತಿ ಯಲ್ಲೂ ಈ ಪಟಲವಿಭಾಗವನ್ನು ಬರೆದಿಲ್ಲ, ಗ್ರಂಥಕರ್ತೃವು ಈ ಪಟಲವಿಭಾಗವನ್ನು ಹೇಳಿರಬಹುದು. ಗ್ರಂಥ ಲೇಖಕರು ಈ ಪಟಲವಿಭಾಗವನ್ನು ಬರೆಯದಿರುವುದು ಪ್ರಾಮಾದಿಕವಾಗಿರಬಹುದು.

ಈ ಎರಡನೆಯ ಅಧಿಕಾರದಲ್ಲಿ—ಮನುಷ್ಯನು ಸಂಘಜೀವಿ, ವ್ಯಕ್ತಿಜೀವಿಯಲ್ಲ ಆದುದರಿಂದ ಪ್ರತಿಯೊಬ್ಬ ಪುರುಷನೂ ತಕ್ಕ ಕನ್ಯೆಯನ್ನು ಮದುವೆಯಾಗಿ, ಒಂದು ಮನೆಯಲ್ಲಿ ವಾಸ ಮಾಡುವವ ದಾದರೊಂದು ಸ್ವಜಾತ್ಯುಚಿತ ಜೀವನವೃತ್ತಿಯನ್ನವಲಂಬಿಸಿ ಸುಖದಾಂಪತ್ಯವನ್ನನುಭವಿಸುವುದೇ ಸಂಸಾರಸುಖವೆಂಬುದು. ಈ ಸಂಸಾರಸುಖಕ್ಕೆ ಮೂಲವಾದ ವಿವಾಹ ಕರ್ಮದ ವಿಷಯದಲ್ಲಿ ವಿವಾಹ, ಪ್ರಶ್ನಲಗ್ನಫಲ, ವಧೂವರರಿಗೆ ಕಂಟಕಪ್ರದಗುವ ಸಂದರ್ಭ ಇವನ್ನು ವಿವರಿಸಿ, ಮದುವೆಗೆ ಶುಭದಿನಗಳನ್ನು ಹೇಳಿ, ವಧೂವರರಿಗೆ ಮೈತ್ರಿಯನ್ನು ಹುಟ್ಟಿಸುವುದಕ್ಕೆ ಬೇಕಾಗಿರುವ ರಾಶಿಕೂಟ (೧) ಮೊದಲಾದ ೪ ಮುಖ್ಯಕೂಟಗಳನ್ನು ವಿವರಿಸಿ, ವಿವಾಹಕ್ಕೆ ತಕ್ಕ ನಕ್ಷತ್ರ ಲಗ್ನಗಳನ್ನು ವಿವರಿಸಿ, ಒಲ್ಲದ (ಪರಸ್ಪರ ಪ್ರೀತಿಸದ) ವಧೂವರರ ಕೂಟಕ್ಕೆ ತಕ್ಕ ದಿನವನ್ನು ಹೇಳಿ, ವಿವಾಹ ಪಟಲವನ್ನುಪಸಂಹರಿಸಿರುವನು. ಬಳಿಕ ಸತ್ಸಂತಾನವನ್ನು ಪಡೆಯುವುದಕ್ಕೆ ಆವಶ್ಯಕ ವಾಗಿರುವ ವಧುವಿನ ಋತುಕಾಲದ ಶುಭಾಶುಭಗಳನ್ನು ತಿಳಿಸುವ ರಜಸ್ವಲಾ ಪಟಲವನ್ನೂ, ಬಳಿಕ ಗರ್ಭಧರಿಸಿದ ಬಳಿಕ ನಡೆಸತಕ್ಕ ಸೀಮಂತಪುಂಸವನಪಟಲಗಳನ್ನೂ, ಬಳಿಕ *ಹುಟ್ಟಿದ ಮಗುವಿಗೆ ಆಹಾರವನ್ನು ಕೊಡಲಾರಂಭಿಸುವ ಶುಭದಿನಗಳನ್ನು ತಿಳಿಸುವ ಅನ್ನಪ್ರಾಶನ ಪಟಲ, ಚೌಲಕರ್ಮವನ್ನೂ ಅದಕ್ಕೆ ಶುಭದಿನಗಳನ್ನೂ ತಿಳಿಸುವ ಚೌಲಕರ್ಮಪಟಲ, ವಿದ್ಯಾಭ್ಯಾಸವನ್ನಾ ರಂಭಿಸಲು ಶುಭದಿನಗಳನ್ನು ವಿವರಿಸುವ ಉಪನಯನ ಪಟಲ ಇವನ್ನೂ, ವಿದ್ಯಾಭ್ಯಾಸವನ್ನು ಮುಗಿಸುವ (ಬ್ರಹ್ಮಚರ್ಯ ವ್ರತವನ್ನು ಮುಗಿಸಲು) ತಕ್ಕ ದಿನಾದಿಗಳನ್ನು ತಿಳಿಸುವ ಸಮಾ ವರ್ತನ ಪಟಲವನ್ನೂ, ಯತಿಗಾಗಲಿ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಗೃಹಸ್ಥನಿ ಗಾಗಲಿ ಆವಶ್ಯಕವಾಗಿರುವ ಶುಭದಿನಾದಿಗಳನ್ನು ತಿಳಿಸುವ ವನಪ್ರವೇಶ ಪಟಲವನ್ನೂ ಹೇಳಿ, ಬಳಿಕ ಮನುಷ್ಯನ ಆಹಾರಕ್ಕೆ ಬೇಕಾದ ಧಾನ್ಯಾದಿಗಳನ್ನು ಬೆಳೆಯುವುದಕ್ಕೆ ಮೂಲವಾದ ಬೀಜ ಬಿತ್ತುವುದಕ್ಕೆ ಶುಭದಿನಾದಿಗಳನ್ನೂ, ಬೆಳೆಯ ವೃದ್ಧಿ, ಹ್ರಾಸ ಕೇಡುಗಳನ್ನು ಸೂಚಿಸುವ ರಾಹು ಚಕ್ರ ಕ್ರಮವನ್ನೂ ಬೀಜಾವಾಪ ಪಟಲದಲ್ಲಿ ಹೇಳಿ, ಸುಖಸಾಧನ ಸಂಪಾದನೆಗಾಗಿ ಅಥವಾ ತನ್ನ ಕಾರ್ಯಸಾಧನೆಗಾಗಿ ಪರದೇಶಕ್ಕೆ ಪ್ರಯಾಣ ಹೊರಡಲು ತಕ್ಕ ಶುಭದಿನಗಳನ್ನೂ, ಪರದೇಶಕ್ಕೆ

*ಜಾತಕರ್ಮ, ನಾಮಕರಣ ಕರ್ಮಗಳ ವಿಷಯವನ್ನು ಹೇಳಿಲ್ಲ. ಇವು ಅತ್ಯಾವಶ್ಯಕಗಳಲ್ಲವೆಂದು ಗ್ರಂಥ ಕರ್ತೃವೇ ಬಿಟ್ಟಿರುವನೊ ಅಥವಾ ಹಸ್ತಲಿಖಿತ ಪ್ರತಿಗಳಲ್ಲಿ ಲೇಖಕರು ಪ್ರಮಾದದಿಂದ ಬಿಟ್ಟಿರುವರೋ ನಿರ್ಧರಿಸಲು ಆಧಾರವಿಲ್ಲ.

ಪ್ರಯಾಣ ಮಾಡಿರುವವರು ಬರುವ ದಿನಗಳನ್ನೂ, ಜೋಯಿಸರನ್ನು ಪ್ರಶ್ನಿಸಿ ತಿಳಿವ ಗಮನಾಗಮ ಪ್ರಶ್ನೆಯೆಂಬ ಪ್ರಕರಣವನ್ನೂ, ಕೊನೆಯಲ್ಲಿ ದೇವಸ್ಥಾನಗಳಲ್ಲಿ ದೇವತಾಬಿಂಬಗಳ ಪ್ರತಿಷ್ಠೆಗೆ ಶುಭದಿನಾದಿಗಳನ್ನು ವಿವರಿಸುವ ದೇವತಾಪ್ರತಿಷ್ಠಾದಿ ಪ್ರಕರಣವನ್ನೂ ಹೇಳಿ ಅಧಿಕಾರವನ್ನು ಉಪಸಂಹರಿಸಿರುವನು.

ಮೂರನೆಯ ಅಧಿಕಾರ—ಇದರಲ್ಲಿ ಮನುಷ್ಯನಿಗೆ ಬೇಕಾಗಿರುವ ಎಲ್ಲಾ ಸುಖಸಾಧನಗಳಲ್ಲಿ ಬಹು ಮುಖ್ಯವಾದುದು ವಾಸಕ್ಕೆ ಬೇಕಾದ ಉತ್ತಮವಾದ ಮನೆ. ಆದುದರಿಂದ ಮನೆಯನ್ನು ಕಟ್ಟಲಾರಂಭಿಸುವ ಶುಭತಿಥಿ ನಕ್ಷತ್ರಾದಿಗಳು, ಮನೆಗೆ ಹಾಕುವ ಮರಗಳನ್ನು ಕಡಿಯಲು ಶುಭಾಶುಭ ದಿನಗಳು, ಮನೆಗೆ ಉಪಯೋಗಿಸುವ ಮರಗಳ ಜಾತಿ, ಸ್ವರೂಪ ಮೊದಲಾದುವು. ಇದ್ದ ಮನೆಯನ್ನು ಹೆಚ್ಚಿಸುವುದಕ್ಕೆ ತಕ್ಕ ದಿಕ್ಕು, ಮನೆಯನ್ನು ಕಟ್ಟುವ ನೆಲದಲ್ಲಿ ಮೂಳೆ ಮೊದಲಾದ ಅಶುಭ ವಸ್ತುಗಳಿಲ್ಲದಂತೆ ನೆಲವನ್ನು ಶೋಧಿಸುವುದು, ಶಂಕುಸ್ಥಾಪನೆ ಮಾಡಿ, ಮನೆಯಲ್ಲಿ ಸ್ನಾನ ಅಡುಗೆ ಮೊದಲಾದ ಕಾರ್ಯಗಳಿಗೆ ಬೇಕಾಗಿರುವ ಕೋಣೆಗಳನ್ನು ನಿರ್ಮಿಸುವ ದಿಕ್ಕುಗಳು, ಮನೆಯನ್ನು ಕಟ್ಟಲು ಬೇಕಾಗಿರುವ ಸ್ಥಳದ (ವಾಸ್ತು) ಉದ್ದ ಅಗಲಗಳ ಪ್ರಮಾಣದಲ್ಲಿ ಶುಭಾಶುಭ ಪ್ರಮಾಣವನ್ನು ತಿಳಿಸುವ, ವಾಸ್ತುವಿನ ಮತ್ತು ಆಯದ ವಿಚಾರ, ಕಂಭವನ್ನು ನಿಲ್ಲಿಸುವ ಪ್ರಮಾಣ ಮತ್ತು ದಿಕ್ಕುಗಳು, ಶುಭದಿನಗಳು, ಆಯ್ಕೂಲನ್ನು ರಚಿಸಿ ಬ್ರಾಹ್ಮಣಾದಿ ಚಾತುರ್ವರ್ಣ್ಯದವರಿಗೆ ತಕ್ಕ ಅಂಗುಲ ಪ್ರಮಾಣವನ್ನು ತಿಳಿಸುವ ಅಯ್ಕೂಲ್ ಪ್ರಕರಣ, ಬಾಗಿಲ್ವಾಡವನ್ನು ನಿಲ್ಲಿಸುವುದಕ್ಕೆ ತಕ್ಕ ದಿಕ್ಕು, ಶುಭದಿನಗಳು ಇವನ್ನು ವಿವರಿಸಿ ಅಧ್ಯಾಯವನ್ನು ಉಪಸಂಹರಿಸಿರುವನು.

ಮುಂದೆ ಮನೆಗಳ ವಿಷಯವನ್ನು ತಿಳಿಸುವ ಕೆಲವು ಸಂಸ್ಕೃತ ಶ್ಲೋಕಗಳನ್ನೂ, ಅವುಗಳ ಟೀಕೆಯನ್ನೂ ಬರೆದು, ಅಷ್ಟವಫಲ, ಸೂರ್ಯ ಚಂದ್ರಫಲ, ಧ್ವಜಾದಿ ೮ ಆಯಗಳಲ್ಲಿ ಮಾಡ ತಕ್ಕ ಮನೆಗಳ ಸ್ವರೂಪ ಇವನ್ನು ತಿಳಿಸುವ ವಚನಗಳೂ ಇವೆ. ಈ ಭಾಗವು ಗ್ರಂಥಕರ್ತೃವಿನದೋ, ಬರೆಯುವರು (ಲೇಖಕರು) ಇವನ್ನು ಈ ಗ್ರಂಥಾವಯವದಲ್ಲಿ ಸೇರಿಸಿರುವರೋ ಎಂಬುದನ್ನು ನಿರ್ಧರಿಸಲು ಶಕ್ಯವಿಲ್ಲ. ಉಪಯುಕ್ತವಾದ ಕೆಲವು ವಿಷಯಗಳಿರುವುದರಿಂದ ಅದನ್ನು ಈ ಅಧಿಕಾರದ ಕೊನೆಯಲ್ಲಿ ಸೇರಿಸಿದೆ.

ಈ ವಾಸ್ತು ವಿಷಯವನ್ನು ಸಂಸ್ಕೃತ ವಾಸ್ತುಗ್ರಂಥಗಳ ಆಧಾರದಿಂದಲೇ ಬರೆದಿರಬಹುದು. ಯಾವ ಗ್ರಂಥನೆಂದು ತಿಳಿಯಲು ಆಧಾರವಿಲ್ಲ.

ನಾಲ್ಕನೆಯ ಉತ್ಪಾತಾಧ್ಯಾಯ—ದೇಶಕ್ಕೆ ಎಂದರೆ ದೇಶದಲ್ಲಿ ವಾಸಮಾಡುವ ಸಮಸ್ತ ಪ್ರಾಣಿಗಳಿಗೆ ಕೇಡನ್ನು ಸೂಚಿಸುವ ಪ್ರಕೃತಿಯ ಸಹಜ ಸ್ಥಿತಿಗೆ ವಿರುದ್ಧಗಳಾದ ವಿಕಾರಗಳನ್ನು ದಿವ್ಯ, ಅಂಬರ, ಭೌಮಗಳೆಂದು ಮೂರು ತೆರನಾಗಿ ವಿಂಗಡಿಸಿರುವನು. ಆಕಾಶದಲ್ಲಿರುವ ತಾರೆಗಳ ಮತ್ತು ಗ್ರಹಗಳಲ್ಲಿ ತೋರುವ ವಿಕಾರವನ್ನು ದಿವ್ಯವೆಂದೂ (ದಿವ್ಯ—ದೇವತೆಗೆ ಸಂಬಂಧಿಸಿದ), ಆಕಾಶದಲ್ಲಿ ತೋರುವ ಸುಟ್ಟುರಿಗಾಳಿ, ಬಿಳಿಸಿಡಿಲ್, ಕಾಮನಬಿಲ್ಲು ಮೊದಲಾದ ವಿಕಾರಗಳನ್ನು ಅಂಬರವೆಂದೂ, ಭೂಮಿಯಲ್ಲಿರುವ ಸ್ಥಾವರ ಜಂಗಮಾತ್ಮಕ ವಸ್ತುಗಳಲ್ಲಿ ತೋರುವ ವಿಕಾರಗಳನ್ನು ಭೌಮಗಳೆಂದೂ ವಿಂಗಡಿಸಿರುವನು. ಈ ಅಧ್ಯಾಯದ ವಿಷಯಗಳನ್ನು ಗಾರ್ಗ್ಯಾಚಾರ್ಯ, ಮಾಂಡಾ (ಮಂಡಾ—ಮಾಡಾ) ಚಾರ್ಯ ಇವರ ಮತದಿಂದ ಹೇಳುವೆನೆಂದು ಗ್ರಂಥಕರ್ತೃವು ಅಲ್ಲಲ್ಲಿ ಹೇಳಿರುವನು. ಹೀಗೆ ಅನಿಷ್ಟಸೂಚಕವಾದ ಉತ್ಪಾತಗಳಿಗೆ ಶಾಂತಿಯನ್ನು ದೇಶಕ್ಕೆ ಅಧಿಪತಿ ಯಾದ ರಾಜನು ಮಾಡಬೇಕೆಂದು ಆಯಾ ಉತ್ಪಾತಗಳಿಗೆ ತಕ್ಕ ಶಾಂತಿಗಳ ಪ್ರಕಾರವನ್ನೂ ಅಲ್ಲಲ್ಲಿ ಹೇಳಿರುವನು.



ಈ ಮೂರು ಬಗೆಯ ಉತ್ಪಾತಗಳಲ್ಲಿ ಭೌಮನಾಥನ ವಿಕಾರಗಳಿಂದಾದ ಉತ್ಪಾತದ ಕೇಡು ದೇವತಾಪೂಜಾವಿಧಾನಗಳಿಂದ ಶಾಂತವಾಗುವುದೆಂದೂ, ದಿವ್ಯೋತ್ಪಾತಕ್ಕೆ ಮಾತ್ರ ವಿಶೇಷವಾಗಿ ಕನಕಾನ್ನ ಗೋಕುಲಹೇಮ ದಾನಗಳನ್ನು ಕೊಟ್ಟು, ಈಶಾನ್ಯಭಾಗದಲ್ಲಿ ಹೋಮ ಮಾಡಿ ಅಂಬು ಗಜಿಯಬೇಕೆಂದೂ ಹೇಳಿರುವನು. ಅಂಬುಗಜಿವುದು ಎಂಬ ಶಾಂತಿಕಾರ್ಯವು ಇಂತಹುದೇ ಎಂದು ಸ್ಪಷ್ಟವಾಗಿ ಗ್ರಂಥದಿಂದಲೂ ಟೀಕೆಯಿಂದಲೂ ತಿಳಿದುಬರುವುದಿಲ್ಲ. ಆದರೆ ಜೈನಮತದ ಪುರಾಣ ಗ್ರಂಥವಾದ ನೇಮಿನಾಥ ಚರಿತ್ರದಲ್ಲಿ—(ಕರ್ಣಪಾರ್ಯನ ಕನ್ನಡ ನೇಮಿನಾಥ ಪುರಾಣದಲ್ಲಿ) "ವಸುದೇವನು ತನ್ನ ಪತ್ನಿ ದೇವಕಿಯಲ್ಲಿ ಹುಟ್ಟಿದ ಕೃಷ್ಣನನ್ನು ಕಂಸನ ಭಯದಿಂದ ನಂದಗೋಕುಲದಲ್ಲಿ ನಂದನ ಹೆಂಡತಿ ಯಶೋದೆಯು ಅದೇ ಕಾಲದಲ್ಲಿ ಹಡೆದಿದ್ದ ಹೆಣ್ಣುಮಗುವಿಗೆ ಮಾರ್ಪಡಿಸಿಕೊಂಡು ಬರಲು ಕೃಷ್ಣನು ನಂದಗೋಕುಲದಲ್ಲಿ ಬಳೆಯುತ್ತಿದ್ದನು. ಆ ಕಾಲದಲ್ಲಿ ಕಂಸನ ನಗರದಲ್ಲಿ ರಕ್ತವರ್ಷ, ವಿಕಾರವಾದ ನರಿಗಳ ಕೂಗು, ಹಗಲುಲ್ಕಾಪಾತ, ನೆಲಗುಡುಗು ಮುಂತಾದ ಉತ್ಪಾತಗಳು ತೋರಲು ಪುರೋಹಿತನು ಈ ಉತ್ಪಾತಗಳಿಂದ ಕಂಸನ ವೈರಿಯು ಎಲ್ಲಿಯೋ ಹುಟ್ಟಿ ಬಳೆಯುತ್ತಿರುವನೆಂದು ತಿಳಿಸಿದನು. ಆಗ ಕಂಸನು ತನ್ನ ವೈರಿಯನ್ನು ಕಂಡುಹಿಡಿದು ಕೊಲ್ಲಲು ವಿದ್ಯಾದೇವತೆಗಳನ್ನು ಕಳುಹಿಸಿದನು. ಅವು ನಂದಗೋಕುಲಕ್ಕೆ ಬಂದು ಮಗುವಾಗಿದ್ದ ಶ್ರೀಕೃಷ್ಣನನ್ನು ಹಲವು ಬಗೆಯಲ್ಲಿ ಕೊಲ್ಲಲು ಪ್ರಯತ್ನಿಸಿ ವಿಫಲಗಳಾಗಿಹೋದುವು. ಪೂತನಿ, ಶಕಟಾಸುರ, ವೃಷಭಾಸುರ ಈ ರೂಪದಲ್ಲಿ ಬಂದ ವಿದ್ಯಾದೇವತೆಗಳೆಲ್ಲವನ್ನೂ ಶ್ರೀಕೃಷ್ಣನು ಭಂಗಪಡಿಸಲು, ಶ್ರೀಕೃಷ್ಣನ ಅಮಾನುಷ ಶಕ್ತಿಯು ಎಲ್ಲೆಲ್ಲಿಯೂ ಹರಡಿತು. ವಸುದೇವ ದೇವಕಿಯರು ಈ ವೃತ್ತಾಂತವನ್ನು ಕೇಳಿ, ತಮ್ಮ ಮಗನ ಪರಾಕ್ರಮಕ್ಕೆ ತುಂಬಾ ಸಂತೋಷಗೊಂಡು ನಂದಗೋಕುಲಕ್ಕೆ ಹೋಗಿ ಶ್ರೀಕೃಷ್ಣನನ್ನು ನೋಡಿಕೊಂಡು ಬರಬೇಕೆಂದು ನಿಶ್ಚಯಿಸಿ, ತಮ್ಮ ದಂಡಿನೊಡನೆ ನಂದಗೋಕುಲದ ಕೃಷ್ಣಯಕ್ಷಿಯ ದೇವಸ್ಥಾನಕ್ಕೆ ಬಂದಿಳಿದು, ಅಲ್ಲಿಗೆ ನಂದಗೋಪನನ್ನು ಕರೆಸಿ—'ನಾಳೆ ನಿನ್ನ ಗೋಬೃಂದಮನಿಲ್ಲಿತಂದು ಮುದದಿಂ*ದಜಬಂ ಕರೆ' ಎಂದು ಹೇಳಲು, ಆತನು ಹಾಗೆಯೇ ಮಾಡುವೆನೆಂದು ಹೇಳಿ ಹೋಗಿ, ಮೂರನೆಯ ದಿನ 'ಸಮಸ್ತ ಗೋಕುಳ ಸಮೇತಂ ಗೋಪನಿಕರಮಂ ತಕ್ಕುಟುಂಬಿನೀಸಹಿತಂನೆರಪಿಕೊಂಡು ನಂದಂ ಸ್ವಕೀಯದಾರಕೋಪೇತನಾಗಿ ಬಂದಾ ಯಕ್ಷಿಯ ಸಮಕ್ಷದೊಳಜಬುಗಜಿದರ್ಚಿಸಿರ್ದಂ, ಇರೆ' ಎಂದು ಹೇಳಿ, ಮುಂದೆ 'ಇದು ತಾಂ ಗೋಮುಖಿಯೆಂಬ ನೋಂಪಿ' ಎಂದು ಇದನ್ನೇ ಗೋಮುಖಿ ವ್ರತವೆ"ಂದು ಹೇಳಿದೆ. †ಜೈನರ ಸಂಪ್ರದಾಯದ ಈ ಅಜಂಬುಗಜಿವ ವ್ರತವು ವೈದಿಕ ಮತದವನಾದ ಈ ಗ್ರಂಥಕರ್ತೃವು (ಚಾವುಂಡರಾಯನು) ಹೇಳಿರುವುದು ವಿಚಾರಣೀಯವಾಗಿರುವುದು. ವೈದಿಕ ಸಂಪ್ರದಾಯದಲ್ಲಿ ಈ ವ್ರತದ ವಿಚಾರವು ಯಾವ ಗ್ರಂಥದಲ್ಲೂ ಹೇಳಿರುವಂತೆ ನಮಗೆ ತಿಳಿದುಬರುವುದಿಲ್ಲ.

ಬ್ರಹ್ಮ, ಗುಹ, ದಿಕ್ಪಾಲ, ಉರಗ, ಗಣಪ, ಹರಿ, ‡ಯಕ್ಷ, ಶುಕ್ರ, ಗುರು, ಶನಿ ಗ್ರಹಗಳೆಂಬ ದೇವತಾ ಪ್ರತಿಮೆಗಳ ಚಲನೆ, ಕುಸಿಯುವಿಕೆ ಮೊದಲಾದ ವಿಕಾರಗಳಿಂದಲೂ, ಕಂಬುಗೋಡೆ ಭಂಡಿಯು ಮುರಿದುಹೋಗುವುದು, ಸಿಲ್ಲುವುದು ಮೊದಲಾದ ವಿಕಾರಗಳಿಂದಲೂ ತೋರುವ ಉತ್ಪಾತವು ರಾಜನ ಅಂತಃಪುರ, ರಾಜಕುಮಾರರು, ರಾಜಪುರೋಹಿತ, ರಾಜವಾಹನಗಳು, ದಂಡ

*ಅಜಬು ಎಂಬುದು ಅಜಂಬು ಎಂದು ಸಬಿಂದುಕವಾಗಿಯೂ ಇರುವುದು.

†ಜೈನ ಸಂಪ್ರದಾಯದಲ್ಲಿ—ಬೆಂಕಿಯಿಂದ ಸುಡುವುದು ಮೊದಲಾದ ಮರಣೋತ್ಪಾದಕ ಹಿಂಸಾಕಾರ್ಯಗಳಿಗೆ ಉಪಸರ್ಗವೆಂದು ವ್ಯವಹಾರವು, ಆ ಶಬ್ದವನ್ನು ಈತನು (ಅ. ೧೨, ಪ. ೩೩) ಪದ್ಯದಲ್ಲಿ ಪ್ರಯೋಗಿಸಿರುವನು.

‡ಜೈನ ಸಂಪ್ರದಾಯದಲ್ಲಿ ಯಕ್ಷಯಕ್ಷಿಯರ ದೇವತಾ ಪ್ರತಿಮೆಗಳು ವಾಡಿಕೆಯಾಗಿವೆ.

ನಾಯಕ (ಸೇನಾಪತಿ), ಪರಿಜನ, ರಾಜಧಾನಿ ಇವುಗಳ ಕೇಡನ್ನು ಸೂಚಿಸುವುದರಿಂದ, ರಾಜನು ಏಳು ದಿನಗಳವರೆಗೂ ದೇವತಾಪ್ರತಿಮೆಗಳಿಗೆ ವಿಶೇಷ ಪೂಜೆಯನ್ನು ಮಾಡಿ, ಮಧುಪರ್ಕಸ್ಥಾಲೀಪಾಕ ಹೋಮಗಳನ್ನು ಮಾಡಬೇಕೆಂದು ಹೇಳಿ, ಬಳಿಕ ಹಗಲಲ್ಲಿ ಕತ್ತಲೆ, ಭೂವ್ಯಾಕಾಶಗಳನ್ನು ವ್ಯಾಪಿಸಿಕೊಂಡು ಧೂಳಿಯೇಳುವಿಕೆ, ಉರಿಯಿಲ್ಲದ ಹೊಗೆ, ಹಗಲು ನಕ್ಷತ್ರೋದಯ, ರಾತ್ರಿಯಲ್ಲಿ ಮೇಘವ್ಯಾಪನೆಯಿಂದ ನಕ್ಷತ್ರಗಳ ಅದರ್ಶನ, ಹಿರಣ್ಯಫಲ ಪುಷ್ಪಧಾನ್ಯ ವೃಷ್ಟಿ, ಕೆಂಡದ ಮತ್ತು ರಕ್ತದ ಮಳೆ, ಮೇಘವಿಲ್ಲದ ಮಳೆ, ಇವುಗಳಿಂದ ಚಕ್ರವರ್ತಿಮರಣ, ಮುಖ್ಯಮಂತ್ರಿಮರಣ, ದೊಡ್ಡಯುದ್ಧಗಳು ಸಂಭವಿಸುವುವು, ಸೂರ್ಯನಿದ್ದ ಕಡೆ ನೆಟಿಲು ಬೀಳುವಿಕೆ, ಸೂರ್ಯನಿದ್ದರೂ ನೆಟಿಲು ಕಾಣದಿರುವಿಕೆ, ಶೀತೋಷ್ಣಗಳ ವಿಪರ್ಯಾಸ, ರಾತ್ರಿ ಕಾಮನಬಿಲ್ಲು ತೋರುವಿಕೆ, ಇದ್ದಕ್ಕಿದ್ದಹಾಗೆ ವಿವಿಧಗೀತಾದ್ಯೋದ್ಯ ಧ್ವನಿಶ್ರವಣ, ವಾದ್ಯಗಳು ಬಾರಿಸಲ್ಪಡದೆಯೇ ಶಬ್ದಮಾಡುವಿಕೆ – ಇವುಗಳಿಂದಲೂ ರಾಜನಿಗೆ ಮರಣ, ಜನಗಳಿಗೆ ರೋಗಾದಿಗಳಿಂದ ಸಾವು ಸಂಭವಿಸುವುದು. ಈ ಬಗೆಯ ವಾಯುವಿಕಾರೋತ್ಪಾತಕ್ಕೆ ವಾಯುದೇವನನ್ನು ಪೂಜಿಸಿ, ವಾಯುಮಂತ್ರದಿಂದ ಜಪಹೋಮಾದಿಗಳನ್ನು ಮಾಡಿ, ವಿಪ್ರಸಂತರ್ಪಣೆ, ಅಧಿಕವಾದ ದಾನ ಇವನ್ನು ಮಾಡಬೇಕು. ಉಲ್ಕಾಶನಿ ವಿದ್ಯುತ್ತಾರಾವಿಷ್ಣುವೆಂಬ ಐದು ಹೆಸರಿನ ಉಲ್ಕಾಪಾತ, ಶ್ವೇತಾದಿ ನಾಲ್ಕು ವರ್ಣದ ಉಲ್ಕಾಪಾತ, ನೆಲಗುಡುಗು ಇವಾದರೆ ನರೇಂದ್ರ ಹಾನಿ, ಶತ್ರುನೃಪಾಕ್ರಮಣ, ದುರ್ಭಿಕ್ಷಾದಿಗಳು ಆಗುವುದೆಂದು, ಮಂದಾಚಾರ್ಯ (ಮಾಡಾಚಾರ್ಯ, ಚೌಡಾಚಾರ್ಯ) ಮತವೆಂದು ಹೇಳಿ, ಹಲವು ಬಗೆಯ ಕಾಮನಬಿಲ್ಲಿನ ತೋರಿಕೆಯನ್ನು ಹೇಳಿ, ಕೆಲವರಿಂದ ಶುಭವನ್ನೂ ಕೆಲವರಿಂದ ಅಶುಭವನ್ನೂ ಹೇಳಿ, ಅನ್ಯಗ್ರಂಥವೆಂದು ಜ್ಯೇಷ್ಠಾಷಾಢ ಶ್ರಾವಣಗಳಲ್ಲಿ ಇಂದ್ರಬಿಲ್ಲು ತೋರಿದರೆ ಮೂರು ತಿಂಗಳಿಗೆ ಬರಬರುವುದು ಎಂದು ಹೇಳಿ, ಬಳಿಕ ಬಗೆಬಗೆಯ ಸೂರ್ಯ ಚಂದ್ರರ ಪರಿವೇಷದ ಶುಭಾಶುಭಗಳನ್ನು ಹೇಳಿ, ಪ್ರತಿಸೂರ್ಯೋದಯದ ಶುಭಾಶುಭ ಫಲ, ಮರಸರ್ಪವು ಮೂಡಲ್ಮೊದಲಾದ ದಿಕ್ಕುಗಳಲ್ಲಿ ತೋರುವುದರ ಫಲಾಫಲಗಳನ್ನೂ, ಗಂಧರ್ವಪುರದ ಫಲಾಫಲಗಳನ್ನೂ ಹೇಳಿ, ಈ ಅಗ್ನಿವಿಕಾರೋತ್ಪಾತಗಳಿಗೆ ಚಂದ್ರಾದಿತ್ಯೇಂದ್ರರನ್ನು ಪೂಜಿಸಿ, ವಿಪ್ರರಿಗೆ ದಾನ ಮಾಡಬೇಕೆಂದು ಹೇಳಿರುವನು. ಮತ್ತೆ ದೇಶದಲ್ಲಿ ಬೆಂಕಿ ಇದ್ದಕ್ಕಿದ್ದಹಾಗೆ ಆರುವುದು, ಪುಳ್ಳಿಯಿಲ್ಲದೆ ಉರಿ ಉರಿಯುವುದು, ಕತ್ತಿ ಮೊದಲಾದುವು ಇದ್ದಕ್ಕಿದ್ದಹಾಗೆ ಒರೆಯಿಂದ ಕೆಳಗೆ ಬಿದ್ದು ಧ್ವನಿಮಾಡುವುದು, ಮನೆಯ ತೋರಣ ಮೊದಲಾದುವು ಉರಿಯುವುದು, ಬರಸಿಡಿಲ್ ಬೀಳುವುದು, ಮಲಗುವೆಡೆಯಲ್ಲಿ ಕಿಚ್ಚಿಲ್ಲದೆ ಹೊಗೆ, ತಲೆಯಿಂದ ಕೆಂಡ ಹೊರಡುವಂತೆ ತೋರುವುದು– ಇಂತಹ ಅಗ್ನಿವಿಕಾರದ ಉತ್ಪಾತಕಕ್ಕೆ ರಾಜರು ಪಾಲ್ಮರಗಳ ಸಮಿತ್ತುಗಳಿಂದ ಹೋಮಮಾಡಿಸಿ ಬ್ರಾಹ್ಮಣರಿಗೆ ಸುವರ್ಣದಾನಾದಿಗಳನ್ನು ಮಾಡಬೇಕು.

ಯಾವಾಗಲೂ ಬತ್ತದಿರುವ ಕೆರೆ, ಮಡು ಮೊದಲಾದುವು ಬತ್ತುವುದು, ನದಿ ನೀರು ಮೇಲ್ಗಡೆಗೆ ಏರುವುದು, ಕೆರೆಗಳಲ್ಲಿ ನೆಣನೆತ್ತರ್ ಮದ್ಯ ತೈಲ ಮೊದಲಾದುವುಗಳಂತೆ ನೀರು ಹರಿಯುವುದು, ನೀರಿನಲ್ಲಿ ಉರಿ ತೋರುವುದು ಮೊದಲಾದ ನೀರಿನ ವಿಕಾರದ ಉತ್ಪಾತಗಳಿಗೆ ಜಲಾಧಿಪತಿ ವರುಣನನ್ನು ಪೂಜಿಸಿ, ಜಪ ಹೋಮಾದಿಗಳನ್ನು ಮಾಡಿಸಬೇಕು.

ಗಾಳಿ ಮೊದಲಾದ ಕಾರಣವಿಲ್ಲದೆ ಮರದ ಕೊಂಬೆ ಮುರಿಯುವುದು, ಮರಗಳಿಂದ ರಕ್ತಸುರಿವುದು, ಉರಿ ಹೊಗೆಗಳು ಮರದಿಂದ ಹೊರಟಂತೆ ಕಾಣುವುದು, ಮರಗಳು ಅಕಾಲದಲ್ಲಿ ಪುಷ್ಪಿಸಿ ಫಲಿಸುವುದು, ಪೂರ್ಣವಾಗಿ ಒಣಗಿಹೋಗಿದ್ದ ಮರ ಚಿಗುರುವುದು, ರೋಗವಿಲ್ಲದ ಮರ ಒಣಗುವುದು, ಮರದಿಂದ ಎಣ್ಣೆಯು ಸೋರುವುದು ಇತ್ಯಾದಿ ವೃಕ್ಷ (ಪೃಥ್ವೀ) ವಿಕೃತೋತ್ಪಾತಗಳಿಂದ



ರಾಜಮರಣ, ಧನಧಾನ್ಯ ಕ್ಷಯ, ಬರ, ಯುದ್ಧಭಯಗಳಾಗುವುವು, ಹಾಗೆಯೇ ಎಳೆಯ ಗಿಡದಲ್ಲಿ ಹೂಬಿಟ್ಟರೆ ಮಕ್ಕಳ ಕ್ಷಯ.

ಜವೆ, ಜೋಳ ಮೊದಲಾದ ಸಸ್ಯಗಳಲ್ಲಿ ಅವಳಿ ತೆನೆ ಬಿಡುವುದು, ಕಮಲಾದಿಗಳು ಅವಳಿ ಪುಷ್ಪ ಬಿಡುವುದು, ಬೆಳೆಯು ಅತ್ಯದ್ಭುತವಾಗಿ ಬೆಳೆಯುವುದು, ರಸಾವಳಿಗಳಲ್ಲಿ ರುಚಿಯಿಲ್ಲದಿರುವುದು, ಎಳ್ಳಿನಲ್ಲಿ ಎಣ್ಣೆಯಿಲ್ಲದಿರುವುದು, ಎರಡರಷ್ಟು ಎಣ್ಣೆ ಬರುವುದು ಇತ್ಯಾದಿ ಸಸ್ಯೋತ್ಪಾತಗಳಿಂದ ದೇಶಕ್ಕೆ ಮಹಾ ಭಯವೊದಗುವುದು. ಈ ವೃಕ್ಷ ಸಸ್ಯೋತ್ಪಾತಗಳಿಗೆ ಆ ವಿಕೃತ ಮರ ಸಸ್ಯಗಳನ್ನು ಊರ ಹೊರಗೆ ನಟ್ಟು ಪೂಜಿಸಿ, ಹೋಮಾದಿಗಳನ್ನು ಮಾಡಿ, ಚಿನ್ನದ ದಾನವನ್ನು ರಾಜನು ಮಾಡಬೇಕು. ಮತ್ತು ಧ್ವಜಾದಿಗಳು ಆಕಸ್ಮಿಕವಾಗಿ ಮುರಿದು ಬೀಳುವುದು, ಉಳುವಾಗ ಎತ್ತು ನೇಗಿಲುಗಳು ಆಕಸ್ಮಿಕವಾಗಿ ನಿಲ್ಲುವುದು, ಮನೆಯ ಮೆಟ್ಟಿಲುಗಳಲ್ಲಿ ವಿಕಾರವಾಗುವುದು, ಇವುಗಳಿಂದ ಆಯುಧಪ್ರಹಾರ ಭಯವುಂಟು.

ಪಕ್ಷಿ ಮೃಗಗಳು ಎರಡು ಸಂಜೆಗಳಲ್ಲೂ ವಿಕಾರವಾಗಿ ಕೂಗುವುದು, ಪಕ್ಷಿಗಳು ಆಕಾಶದಲ್ಲಿ ಪ್ರತಿಲೋಮವಾಗಿ ಹಾರಾಡುವುದು, ಊರ ಮೃಗ ಪಕ್ಷಿಗಳು ಕಾಡಿನಲ್ಲೂ, ಕಾಡಿನ ಮೃಗ ಪಕ್ಷಿಗಳು ಊರಲ್ಲೂ ಸಂಚರಿಸುವುದು, ಪಿಂಗಲಿ, ಪೋದಗೆ, ಪಾರಿವಾಳ, ಬಕ, ಗಿಡುಗ, ಗೂಗೆ ಮೊದಲಾದುವು ರಾಜಾಂಗಣದಲ್ಲಿ ಸಂಚರಿಸುವುದು, ಮನೆಬಾಗಿಲ ತೋರಣದಲ್ಲಿ ಪಕ್ಷಿಗಳು ಗೂಡು ಕಟ್ಟುವುದು, ಮನೆಯಲ್ಲಿ ಪುತ್ತು ಹುಟ್ಟುವುದು, ಜೇನು ಗೂಡಿಕ್ಕುವುದು ಇವುಗಳಿಂದ ರಾಜನಿಗೂ, ಮನೆಯ ಯಜಮಾನನಿಗೂ ಕೇಡು. ನಾಯಿ ಶವಾವಯವ ಶಲ್ಯಾದಿಗಳನ್ನು ಎಳೆದು ತರುವುದು, ಪಶುವು ಬಾಣವನ್ನೆಳೆದು ತರುವುದು ಇತ್ಯಾದಿ ಮೃಗಪಕ್ಷ್ಯುತ್ಪಾತಗಳಿಗೆ ವಿಪ್ರಸಂತರ್ಪಣೆ, ಹೋಮ, ಮಹೀದಾನ ಇವನ್ನು ಅರಸನು ಮಾಡಬೇಕು.

ಹೀಗೆಯೇ ಹೀನಾಧಿಕಾಂಗದ ಮಕ್ಕಳನ್ನೂ, ಎರಡು ಮೂರು ನಾಲ್ಕು ಮಕ್ಕಳನ್ನು ಹೆರುವುದು ಇವುಗಳಿಂದ ತತ್ಕುಲಕ್ಷಯವಾಗುವುದು. ಮತ್ತು ಗೋಮಹಿಷ್ಯಾದಿಗಳಲ್ಲಿ ಅವಳಿ ಕರುಗಳು ಹುಟ್ಟಿದರೆ, ಅಂತಹ ಗೋಮಹಿಷ್ಯಾದಿಗಳನ್ನು ರಾಜನು ಶತ್ರುರಾಜರ ದೇಶಕ್ಕೆ ಅಟ್ಟಬೇಕು. ಮಾಂಸಾಹಾರಿಗಳಲ್ಲ (ಪಾವಿಲಿಬೆಕ್ಕು, ವಿಸಾಸ್) ದ ಪ್ರಾಣಿಗಳು ಮಾಂಸವನ್ನು ತಿಂದರೆ, ನಾನಾಜಾತಿ ಜೀವಿಗಳು ಪರಯೋನಿಗಳಲ್ಲಿ ನೆರೆದರೆ, ಜೀವಧನ ಯಾವಾಗಲು ಕಾಲ್ಗಳನ್ನು ಬಡಿಯುವುದು, ಗೊಡ್ಡುಹಸು ಹಾಲ್ಕರೆಯುವುದು, ಹಸು ಇದ್ದಕ್ಕಿದ್ದಹಾಗೆ ಬಡವಾಗುವುದು, ಆನೆಯ ದಂತ ಕೊಂಬು ಮುರಿವುದು, ಭೂಮಿ ಬಿರಿಯುವುದು, ಭೂಕಂಪ ಮೊದಲಾದ ಉತ್ಪಾತಗಳಿಗೆ ಕೋಟಿ ಹೋಮಶಾಂತಿಯನ್ನು ರಾಜನು ಮಾಡಬೇಕು.

ಪರಿವೇಷಾದ್ಯುತ್ಪಾತಗಳಿಗೆ ಚೈತ್ರ ವೈಶಾಖ ಮಾಸಗಳಲ್ಲಿ ದೋಷವಿಲ್ಲ. [illegible]ನಾದಿಗಳಿಗೆ ಗ್ರೀಷ್ಮ (ಜೇಷ್ಠಾಷಾಢ) ದಲ್ಲಿ ದೋಷವಿಲ್ಲ. ಮಳೆಗಾಲದ (ವರ್ಷರ್ತು) ಲ್ಲಿ [illegible] ಬಿಲ್ಲು ಮೊದಲಾದುವಕ್ಕೆ ದೋಷವಿಲ್ಲ. ಶರತ್ಕಾಲದಲ್ಲಿ ಗಂಧರ್ವ ನಗರಾದಿ ಅನಿಲ ವಿಕಾರಗಳಿಗೆ ದೋಷವಿಲ್ಲ. (ಇದು ನಂದನ ಮತ – ಇಲ್ಲಿ ನಂದ ಎಂದು ಹಿಂದಿನ ಪಾಠವಿರಬಹುದೇ?) ಶಿಶಿರರ್ತುವಿನಲ್ಲಿ ಹೇಮಂತದಲ್ಲಿ ಮೃಗಪಕ್ಷಿ ವಿಕಾರಗಳಿಗೆ ದೋಷವಿಲ್ಲ. (ಇದು ಗಾರ್ಗ್ಯಮತ.) ಪವನಜನಿತ ವಿಕಾರಾದಿಗಳಿಗೆ ದೋಷವಿಲ್ಲ – ಎಂದು ಹೇಳಿ, ಕೊನೆಯಲ್ಲಿ—ಪವನ, ದಹನ, ವಾಸವ, ವಾರುಣ ಎಂಬ ನಾಲ್ಕು ಮಂಡಲಗಳ ನಕ್ಷತ್ರ ವಿಭಾಗ, ಅವುಗಳ ಉದಯ, ಅವುಗಳ ಫಲ, ಪರಸ್ಪರ ದೋಷಪರಿಹಾರ, ಇವುಗಳ ಫಲಾವಧಿತಿಂಗಳು ಇವನ್ನು ಹೇಳಿ, ಅಧಿಕಾರವನ್ನು ಉಪಸಂಹರಿಸಿರುವನು.

ಐದನೆಯ ಉದಕಾರ್ಗಳದಲ್ಲಿ—ಸ್ಥಾವರ ಜಂಗಮಾತ್ಮಕ ಪ್ರಾಣಿಗಳ ಜೀವನಕ್ಕೆ ಜೀವನವು (ನೀರು) ಅತ್ಯಾವಶ್ಯಕವಾದುದರಿಂದ ನೆಲವನ್ನು ತೋಡಿ ಭಾವಿಗಳನ್ನು ಮಾಡಿಕೊಳ್ಳಲು ನೀರು ದೊರಕುವ ಸ್ಥಳ ಎಷ್ಟು ಪ್ರಮಾಣದ ಕೆಳಗೆ ದೊರಕುವುದು, ದೊರಕುವ ನೀರಿನ ರುಚಿಯೆಂತ ಹುದು, ಭಾವಿ ತೋಡುವಾಗ ಕೆಳಗಡೆ ಅರೆಯಬಂಡೆ ಅಡ್ಡವಾಗಲು ಅದನ್ನು ಪುಡಿಮಾಡುವುದು, ಕಲ್ಲನ್ನು ಸೀಳುವ ಉಳಿಗಳನ್ನು ವಜ್ರದಂತೆ (ಉಕ್ಕಿನ ಶಕ್ತಿ) ಘಟ್ಟಿ ಮಾಡುವ ಕ್ರಮ – ಇವನ್ನು ಹೇಳಿರುವನು. ಆದಿಯಲ್ಲಿ ಭಾವಿ ತೋಡಲು ಅನುರಾಧೆ ಮೊದಲಾದ ನಕ್ಷತ್ರಗಳು ಶುಭಗಳು, ಭಾವಿಗಳನ್ನು ಊರಿನ ಆಗ್ನೇಯ ವಾಯವ್ಯ ದಿಕ್ಕುಗಳನ್ನು ಬಿಟ್ಟು ಉಳಿದ ದಿಕ್ಕುಗಳಲ್ಲಿ ತೋಡಬೇಕು, ಮರಗಳು ಚಿಗುರಿ ಸೊಂಪಾಗಿ ಬೆಳದಿರುವ ಸ್ಥಳದಲ್ಲಿ ನೀರು ದೊರಕುವುದು, ಒಣಗಿ ಕೊಟ್ಟರು ಬಿದ್ದಿರುವ ಮರಗಳಿರುವ ಸ್ಥಳದಲ್ಲಿ ನೀರು ಬರದು, ಸುತ್ತಲೂ ಹುಲ್ಲಿಲ್ಲದ ಬಯಲಿನಲ್ಲಿ ಹುಲ್ಲು ಬೆಳೆದಿರುವ ಸ್ಥಳ, ಪುಲ್ಲು ಬೆಳೆದಿರುವ ಬಯಲಲ್ಲಿ ಹುಲ್ಲು ಬೆಳೆಯದಿರುವ ಸ್ಥಳ– ಈ ಸ್ಥಳಗಳಲ್ಲಿ ನಿಧಿಯೂ ನೀರೂ ಸಿಕ್ಕುವುದು. ಮತ್ತು ಹುಲಿಗಿಲು ಮರಗಳು ಬೆಳೆದಿರುವ ಸ್ಥಳದಲ್ಲಿಯೂ ಕೆಂಪು ಚಿಗುರುಗಳು ಮರಗಳಲ್ಲಿ ತೋರುವ ಸ್ಥಳದಲ್ಲಿಯೂ ನೀರು ಸಿಕ್ಕುವುದು. ನೆಲದಲ್ಲಿ ತೋಡುವಾಗ ಸಿಕ್ಕುವ ಕಲ್ಲು, ವೈಡೂರ್ಯ, ಅತ್ತಿಯ ಹಣ್ಣು, ತುಪ್ಪ, ಪಾದರಸ, ಅಭ್ರಕ (ಕಾಗೆ ಬಂಗಾರ), ಪಾರಿವಾಳಪಕ್ಷಿ, ಕಾಡಿಗೆ ಈ ಬಣ್ಣಗಳಾಗಿದ್ದರೆ ಅಲ್ಲಿ ನೀರು ಸಿಕ್ಕು ವುದು. ಕಪ್ಪು ಮೊದಲಾದ ಬಣ್ಣಗಳಿರುವ ಮಣ್ಣಿರುವ ನೆಲದಲ್ಲಿ ಒಗಚು ಮೊದಲಾದ ರುಚಿಯ ನೀರು ದೊರಕುವುದು – ಎಂದು ಹೇಳಿ, ಮುಂದೆ ಒಂದು ಸ್ಥಳದಲ್ಲಿ ಬೆಳೆದಿರುವ ಮರಗಿಡುಗಳ ಜಾತಿ ವಿಶೇಷ, ಬೆಳೆದಿರುವ ಸ್ವರೂಪ, ಹುತ್ತಿರುವುದು, ಹಲ್ಲುಹಸಲೆಗಳಿರುವುದು – ಇವುಗಳಪ್ರಕಾ ರಾನುಗುಣವಾಗಿ ಆ ಸ್ಥಳಕ್ಕೆ ಇಷ್ಟಿಷ್ಟು ಹಸ್ತ ಪ್ರಮಾಣ ದೂರದಲ್ಲಿ, ಒಂದು ಪುರುಷಪ್ರಮಾಣ ಮೊದಲಾಗಿ ಆರು ಪುರುಷ, ಇಪ್ಪತ್ತೊಂದು ಪುರುಷ ಪ್ರಮಾಣ, ಹದಿನೈದು ಪುರುಷ ಪ್ರಮಾಣ ಗಳಲ್ಲಿ ನೀರು ಸಿಕ್ಕುವುದೆಂದೂ, ಹಾಗೆ ತೋಡುವಾಗ ಒಳಗೆ ಹಲವು ಬಗೆಯ ಮಣ್ಣುಗಳೂ, ಹಲ್ಲಿ, ಕಪ್ಪೆ, ಹಾವು ಮೊದಲಾದ ಪ್ರಾಣಿಗಳು ಸಿಕ್ಕುವುವೆಂದೂ ಹೇಳಿ, ಕೊನೆಯಲ್ಲಿ ಮೇಲೆ ಹೇಳಿದ ಪ್ರಕಾರಗಳಲ್ಲಿ ಹಸ್ತಪ್ರಮಾಣ ಹೇಳದಿದ್ದ ಸ್ಥಳದಲ್ಲಿ ಐಯ್ದು ಹಸ್ತಪ್ರಮಾಣ ದೂರವನ್ನು ಸ್ವೀಕರಿಸಬೇಕು ಎಂದು ಹೇಳಿ, ನೆಲದಲ್ಲಿ ತೋಡುವಾಗ ಸಿಕ್ಕುವ ಅರೆಯಬಂಡೆಯನ್ನು ಪುಡಿ ಮಾಡುವ ಕ್ರಮ, ಕಲ್ಲುಳಿಗಳ ಬಾಯ್ಗೆ ನೀರೂಟವನ್ನು ಕೊಟ್ಟು, ಉಕ್ಕಿನಶಕ್ತಿ (ವಜ್ರದ ಶಕ್ತಿ) ಬರುವಂತೆ ಮಾಡುವ ಕ್ರಮ – ಇವನ್ನು ಹೇಳಿ, ಅಧಿಕಾರವನ್ನುಪಸಂಹರಿಸಿರುವನು. ಈ ಪ್ರಕರಣದಲ್ಲಿ ಹೇಳಿರುವ ಈ ಕೊನೆಯ ಎರಡು ವಿಷಯಗಳೂ ಬಹು ಮುಖ್ಯಗಳೂ, ತುಂಬಾ ಸುಖಕರಗಳೂ, ತುಂಬಾ ಪ್ರಯೋಜನಕಾರಿಗಳೂ ಆಗಿರುವುವು.

ಆರನೆಯ ವೃಕ್ಷಾಯುರ್ವೇದ ಪ್ರಕರಣದಲ್ಲಿ—ಮನುಷ್ಯನ ಆಹಾರಕ್ಕೂ, ಅಲಂಕಾರಕ್ಕೂ ಅತ್ಯಾವಶ್ಯಕವಾದ ಫಲಪುಷ್ಪವೃಕ್ಷ ಲತೆಗಳನ್ನು ಬೆಳಸುವ ಕ್ರಮ, ಮತ್ತು ಹೆಚ್ಚು ಫಲ ಬಿಡುವಂತೆ ಮಾಡುವ ಕ್ರಮ ಇವನ್ನು ಈ ಅಧಿಕಾರದಲ್ಲಿ ಹೇಳಿರುವನು. ಆದಿಯಲ್ಲಿ ಶ್ರವಣಾದಿ ನಕ್ಷತ್ರಗಳು ಧಾನ್ಯ, ಬೀಜ ಬಿತ್ತಲು ಶುಭಗಳೆಂದೂ, ಬಿತ್ತುವುದಕ್ಕೆ ಮೊದಲು ನೆಲವನ್ನು ಶೋಧಿಸಿ ಹದಮಾಡಿ ಗೊಬ್ಬರ ಹಾಕಬೇಕು, ಮರಗಳನ್ನು ಬಿತ್ತುವಾಗ ಅಥವಾ ನಾಟುವಾಗ ತೆಗೆವ ಗುಳಿಗಳ ಅಂತರ, ಆ ಗುಳಿಗಳಲ್ಲಿ ಐಯ್ದು ತೆರದ ಮಣ್ಣುಗಳನ್ನೂ ಗೊಬ್ಬರವನ್ನೂ ಹಾಕಬೇಕು. ತಾನಾಗಿಯೇ ಮರದಿಂದ ಬಿದ್ದ ಹಣ್ಣಿನ ಬೀಜವನ್ನು ಸಗಣಿಯನ್ನು ಬಳಿದು, ಐದು ದಿವಸ ಒಣಗಿಸಿ, ಬಳಿಕ ಏಳು ದಿವಸ ಹಾಲಿನಲ್ಲಿ ನನೆಸಿ, ಒಣಗಿಸಿ, ವಾಯುವಿಳಂಗ ಧೂಪವನ್ನು ಕೊಟ್ಟು, ಶುಭದಿನದಲ್ಲಿ



ಗುಳಿಗಳಲ್ಲಿ ಬಿತ್ತಬೇಕು. ಅದಕ್ಕೆ ತಕ್ಕ ಕಾಲದಲ್ಲಿ ನೀರನ್ನು ಎತ್ತಿ ಸುರಿಯಬೇಕು. ಹೀಗೆ ಬಿತ್ತಿ ಗಿಡಗಳಿಗೆ ಆಲಿಕಲ್ಲು, ಸಿಡಿಲು, ಮಂಜು ಇವುಗಳ ಬಾಧೆಯಿಲ್ಲದಂತೆ ಮಾಡಲು ಹೊಸದನ್ನು ಬೂದಿ ಇವನ್ನು ಹಾಕಬೇಕು. ಗಿಡಗಳು ಸೊಂಪಾಗಿ ಬೆಳೆದು ಹುಲುಸಾಗಿ ಫಲಬಿಡಲು ಮತ್ಸ್ಯ ವಿಷ ಸರ್ಪಾದ್ಯ ತದಳೀಪತ್ರಗಳ ಧೂಪ ಕೊಡಬೇಕು. ಇಂಗು ಬಜೆ ಮೊದಲಾದ ಪದಾರ್ಥ ಗಳನ್ನು ಅರೆದು ಗಿಡಗಳಿಗೆ ಬಳಿದರೆ ಹುಳುಗಳು ಸಾಯುವುವು. ವಿಳಂಗಾದಿಗಳನ್ನು ಧೂಪಿಸಿದ ಗಿಡಗಳು ರೋಗಕ್ಕೆ ಗುರಿಯಾಗದೆ ಬೆಳೆಯುವುವು. ಗಿಡುಮರಗಳ ಹೂಡಿ ಮುರಿಯುವುದು, ಮುರುಟಿಕೊಳ್ಳುವುದು, ನಜುಕಿಹೋಗುವುದು ಮೊದಲಾದ ರೋಗಗಳ ನಿವಾರಣಕ್ಕೆ ಆ ರೋಗ ವಿರುವ ಸ್ಥಳವನ್ನು ಕತ್ತರಿಸಿ ತೆಗೆದು, ಬಿಸಿಯ ತುಪ್ಪ, ವಿಳಂಗ, ಕರಿಯಮಣ್ಣು ಇವನ್ನು ತುಂಬಿ ಬಳಿಯಬೇಕು. ಸಪ್ಪಸಿಗೆ ಕಷಾಯದ ನೀರನ್ನು ಬೇರಿನಲ್ಲಿ ಎರೆದು ಅಜಮಾಂಸದ ರಸವನ್ನು ತಳಿ ದರೆ ಮರಗಿಡಗಳು ಸುಣ್ಣವನ್ನು ಪಡೆವುವು. ಜವೆ, ಹೆಸರು ಮೊದಲಾದುವನ್ನು ಹಾಲಲ್ಲಿ ಬೇಯಿಸಿ ಮರದಬುಡದಲ್ಲಿ ತಳಿದರೆ ಎಲ್ಲಾ ಋತುಗಳಲ್ಲಿಯೂ ಅವು ಫಲಪುಷ್ಪಗಳಿಂದ ರಂಜಿಸುವುವು. ಚಿಗುರು ಬಿಟ್ಟಿದ್ದ ಮರಗಳನ್ನು ಹೇಮಂತದಲ್ಲಿಯೂ, ಫಲಪುಷ್ಪಗಳಿಂದ ಕೂಡಿದ ಮರಗಳನ್ನು ವರ್ಷಾಕಾಲ ದಲ್ಲಿಯೂ, ಬೀಜಬಿತ್ತಿರ್ದ ಮರಗಳನ್ನು ಬೇರ್ಮೊಡನೆ ಕಿತ್ತು ಶಿಶಿರರ್ತುವಿನಲ್ಲಿಯೂ ನಾಟಬೇಕು. ಹೀಗೆ ನಾಟುವಾಗ ನಾಟುವ ಸಸಿಗಳನ್ನು ಪೂಜಿಸಿ, ಕಿತ್ತು, ವಾದ್ಯ ಮೊದಲಾದ ವೈಭವದಿಂದ ತೆಗೆದುಕೊಂಡು ಹೋಗಿ ಬಿತ್ತ(ನಾಟ)ಬೇಕು. ಪುಲ್ಲೆ ಹಂದಿಗಳ, ನೆಣದ ಜಲ, ಮಧುಘೃತ ಇವನ್ನು ಎರೆದರೆ ಮರಗಿಡುಗಳು ಸದ್ಯಃ ಫಲಬಿಡುವುವು. ದಾಡಿಮ, ಪಲಸು, ಮಾದರಿ, ನೇರಳೆ ಮೊದ ಲಾದ ಪನ್ನೆರಗಳ ಕೊಂಬುಗಳನ್ನು ಕಡಿದು ನಡಬೇಕು – ಎಂದು ಹೇಳಿ, ಇನ್ನು ಮುಂದೆ ಮರ ಗಿಡಗಳಿಗೆ ಸಂಸ್ಕಾರಮಾಡುವುದರಿಂದ ಫಲ ಬಿಡುವುವರಲ್ಲಿ ಕೆಲವು ಆಶ್ಚರ್ಯಕರವಾದ ವಿಷಯ ಗಳನ್ನು ಹೇಳುವನು—ಇವು ಕಾರ್ಯತಃ ಫಲಕಾರಿಯಾದರೆ, ಇದೊಂದು ಅದ್ಭುತವೂ ತುಂಬಾ ಪ್ರಯೋಜನಕಾರಿಯೂ ಆಗಿರುವುದು. ಆದರೆ ನಾವು ಪ್ರತ್ಯಕ್ಷವಾಗಿ ಹುಳಿಮಾವಿನ ಗಿಡಗಳಿಗೆ ಕಸಿಮಾಡಿ, ದಪ್ಪನಾಗಿಯೂ ಬೇರೆಬೇರೆ ತೆರದ ರುಚಿ, ವಾಸನೆಗಳುಳ್ಳದಾಗಿಯೂ ಇರುವ ಹಣ್ಣು ಬಿಡುವ ಕಸಿಗಿಡಗಳನ್ನು ಮಾಡುವ ರೀತಿಯನ್ನು ನೋಡಿರುವುದರಿಂದ ಇದೂ ಫಲಕಾರಿಯಾಗ ಬಹುದೆಂದು ತೋರುವುದು.

ಒಂದು ಮರದಕೊಂಬೆಯನ್ನಾಗಲಿ ಬೀಜವನ್ನಾಗಲಿ ಸಮನಾಗಿ ಸೀಳಿ, ಸೇರಿಸಿ ಕಟ್ಟಿ, ತುಪ್ಪ, ಜೇನು ಇವನ್ನು ಚೆನ್ನಾಗಿ ಬಳಿದು ನೆಟ್ಟರೆ, ಒಂದೇ ಬುಡದ ಮರದಲ್ಲಿ ಎರಡು ಬಗೆಯ ಹಣ್ಣುಗಳು ಬಿಡುವುವು. ಕಮಲ, ಕುಮುದ ಮೊದಲಾದ ಜಲ ಪುಷ್ಪಲತೆಗಳ ಗಡ್ಡೆಗಳನ್ನು ಕತ್ತ ರಿಸಿ ಸೇರಿಸಿ, ಆಜ್ಯಮಧುಗಳನ್ನು ತೊಡೆದು, ಹರಿಣಾಮಿಷಜಲವನ್ನು ಬುಡಕ್ಕೆ ತಳಿದರೆ, ಒಂದೇ ಬಳ್ಳಿಯಲ್ಲಿ ಕಮಲ ಕುಮುದನೀಲೋತ್ಪಲ ಪುಷ್ಪಗಳು ಬಿಡುವುವು – ಎಂದು ಹೇಳಿ, ಬಳಿಕ ಮಾವಿನಮರವು ಇಮ್ಮಾವಿನ ಮರವಾಗುವ ಸಂಸ್ಕಾರ, ಬಾಳೆಯು ದಪ್ಪನಾದ ಪಣ್ಗೊನೆಯನ್ನು ಬಿಡುವ ಸಂಸ್ಕಾರ, ಬಾಳೆಯಹಣ್ಣು ದಾಳಿಂಬದಹಣ್ಣಿನಂತಾಗುವ ಸಂಸ್ಕಾರ, ಹಲಸಿನ ಮರ ಬುಡದಿಂದ ತುದಿಯವರೆಗೂ ಹಣ್ಣು ಬಿಡುವ ಸಂಸ್ಕಾರ, ತೆಂಗು ತುಂಬಾ ಫಲ ಬಿಡುವಂತೆ ಮಾಡುವ ಸಂಸ್ಕಾರ, ಆಳಿ (ಕಿತ್ತಳೆ–ಹೇರಳೆ) ಯು ಹೆಚ್ಚು ಫಲ ಬಿಡುವಂತೆ ಮಾಡುವುದು. ಮಾದಲದ ಗಿಡ, ದಾಳಿಂಬದ ಗಿಡ ಇವುಗಳಲ್ಲಿ ಚೆನ್ನಾಗಿ ದಪ್ಪನಾದ ಹೆಚ್ಚು ಕಾಯಿಗಳನ್ನು ಬಿಡಿಸುವ ಸಂಸ್ಕಾರ ಇವನ್ನು ಹೇಳಿ, ಹುಣಿಸೆಬೀಜಗಳನ್ನು ಅಗೆಹಾಕಿ (ಒಟ್ಟೆಲ್ ಹಾಕಿ) ಕಿತ್ತು ನಾಟುವಾಗ ಮಾಡುವ ಸಂಸ್ಕಾರ, ಎಲಚಿಮರ, ಬೇವಿನಮರಗಳಲ್ಲಿ ದೊಡ್ಡದಾದ ಫಲ ಬಿಡುವಂತೆ

ಮಾಡುವ ಸಂಸ್ಕಾರ, ನೆಲ್ಲಿಯ ಮರಕ್ಕೆ ಮಾಡುವ ಸಂಸ್ಕಾರ – ಇವನ್ನು ಹೇಳಿ, ಮರ ಗಿಡುಗಳ ಬುಡದಲ್ಲಿ ಮಧುಕ, ಮಧುಕಪುಷ್ಪ, ಮಧುಶರ್ಕರೆ ಕೋಷ್ಠಗಳನ್ನು ಹೂಳುವುದರಿಂದ ಅವುಗಳಲ್ಲಿ ಬಿಡುವ ಫಲಗಳಲ್ಲಿ ಬೀಜಗಳೇ ಇರುವುದಿಲ್ಲ. ಒಂದು ಮರದ ಒಂದೇ ಕೊಂಬೆಯಲ್ಲಿ ಯಾವಾಗಲೂ ಫಲ ಬಿಡುವಂತೆ ಮಾಡಲು, ಆಡಿನ ತೊಗಲು, ಕರಿಯಬಣ್ಣದೆತ್ತಿನಸಗಂಗೆದೋವಲ ತೊಗಲು ಇವನ್ನು ಆ ಕೊಂಬೆಗೆ ಏಳು ಸುತ್ತು ಸುತ್ತಬೇಕು–ಎಂದು ಹೇಳಿ, *ಸಂಸ್ಕೃತ ಕಾವ್ಯಾದಿಗಳಲ್ಲಿ ಪ್ರಸಿದ್ಧವಾಗಿ ಹೇಳಿರುವ- ಅಶೋಕವಕುಳ, ಪುನ್ನಾಗಚಂಪಕ, ಕೇತಕ ಮೊದಲಾದ ಮರಗಳಿಗೆ ಮಾಡುವ ಸ್ತ್ರೀಯರ ಪಾದಪ್ರಹಾರ, ಮದ್ಯವನ್ನು ಮುಕ್ಕಳಿಸುವಿಕೆ ಮೊದಲಾದ ದೋಹದಗಳನ್ನು ಹೇಳಿ, ಮತ್ತೆ ಕೆಲವು ಸಂಸ್ಕೃತಿಗಳನ್ನೂ ಹೇಳಿರುವನು (ದೋಹದವೆಂದರೆ ಮರಗಿಡುಗಳಲ್ಲಿ ಅಕಾಲದಲ್ಲಿ ಫಲಪುಷ್ಪಗಳು ಉಂಟಾಗುವಂತೆ ಮಾಡುವ ಕಾರ್ಯ).

ಬಟಿಕ, ಮಲ್ಲಿಗೆ, ಜಾಜಿ ಮೊದಲಾದ ಹೂ ಬಳ್ಳಿಗಳು ಹೆಚ್ಚು ಹೂ ಬಿಡುವ ಸಂಸ್ಕಾರ, ದಾಸವಾಳದ ಕೆಂಪು ಹೂ ಬಿಳಿಯ ಹೂವಾಗುವುದು, ಮಲ್ಲಿಗೆ ಮತ್ತು ಜಾಜಿ ಬಳ್ಳಿಗಳಲ್ಲಿ ಒಂದರ ಹೂವಿನ ವಾಸನೆ ಮತ್ತೊಂದಕ್ಕೆ ಬರುವಂತೆ ಮಾಡುವುದು, ಕೆಟ್ಟವಾಸನೆಯ ಹೂಗಳಲ್ಲಿ ಸುವಾಸನೆ ಹುಟ್ಟಿಸುವುದು, ದ್ರಾಕ್ಷಿಬಳ್ಳಿ ಹೆಚ್ಚು ಫಲ ಬಿಡುವಂತೆ ಮಾಡುವುದು, ಅವುಡಲದ ಗಿಡದಲ್ಲಿ ಹಾಗಲಕಾಯನ್ನು ಬಿಡಿಸುವ ಸಂಸ್ಕಾರ, ಕುಂಬಳದ ಬಳ್ಳಿಯಲ್ಲಿ ಬದನೆಯಕಾಯನ್ನು ಬಿಡಿಸುವ ಕುಂಬಳದ ಹಣ್ಣಿಗೆ ಮಾಡುವ ಸಂಸ್ಕಾರ, ಬಳ್ಳಿಯನ್ನು ಏಳು ಸ್ಥಳಗಳಲ್ಲಿ ಹೂಳಿ, ಬೇರು ಬಿಟ್ಟ ಬಳ್ಳಿಯ ಮೊದಲ ಮೊದಲ ಭಾಗಗಳನ್ನು ಕುಯ್ದು ಹಾಕಿದರೆ, ಏಳನೆಯ ಬಳ್ಳಿಯಲ್ಲಿ ಬಿಡುವ ಕಾಯಲ್ಲಿ ಬೀಜಗಳಿಲ್ಲದಿರುವಿಕೆ, ಒಂದು ಬಳ್ಳಿಯಲ್ಲಿ ಲೋಕವೆಲ್ಲಾ ತಣಿಯುವಂತೆ ಫಲ ಬಿಡಿಸುವುದು, ಬಳ್ಳಿಗಳು ಯಾವ ಕಾಲದಲ್ಲೂ ಫಲ ಬಿಡುವಂತೆ ಮಾಡುವುದು – ಈ ಸಂಸ್ಕೃತಿ ಕ್ರಮ ಹೇಳಿ, ಅಧಿಕಾರವನ್ನುಪಸಂಹರಿಸಿರುವನು.

ಇನ್ನು ಏಳನೆಯ ಗಂಧಯುಕ್ತಿಕ್ರಮ (ಸುಗಂಧವಾದ) ವೆಂಬ ಅಧಿಕಾರದಲ್ಲಿ—ಮನುಷ್ಯನ ಆರೋಗ್ಯಕ್ಕೂ, ಉಲ್ಲಾಸಕ್ಕೂ ವಿರೋಧಿಯಾದ ದುರ್ಗಂಧವನ್ನು ಹೋಗಲಾಡಿಸುವ ಮತ್ತು ಸುಗಂಧವನ್ನುಂಟುಮಾಡುವ ವಸ್ತುಗಳನ್ನು ತಯಾರಿಸುವ ಕ್ರಮವನ್ನು ಹೇಳಿರುವನು.

ಆದಿಯಲ್ಲಿ ಸಹಜವಾಗಿರುವ ವಕುಳ, ಪಾದರಿ, ಕದಂಬ ಈ ಹೂಗಳ ವಾಸನೆಯನ್ನು ಮಲಯಜಕೋಷ್ಠ ಮೊದಲಾದ ಸುಗಂಧ ದ್ರವ್ಯಗಳಿಂದ ಉತ್ಪತ್ತಿ ಮಾಡುವುದು, ಹಲ್ಲನ್ನು ಸುಲಿಯಲು ತಕ್ಕ ಚೂರ್ಣ, ಬಾಯಿ ಮುಕ್ಕಳಿಸುವ ಸುಗಂಧಜಲ, ಮುಖವಾಸನೆಗೆ ತಕ್ಕ ಕೈರಗುಟಿಗೆಯನ್ನು ಮಾಡುವ ಕ್ರಮ, ಬಗೆಬಗೆಯ ಪರಿಮಳ ತೈಲವನ್ನು ಮಾಡುವ ಕ್ರಮ, ತೈಲಗಳಲ್ಲಿ ಕಾಳಿಕೆ ಹೋಗಿ ಕನಕಚ್ಛವಿಯುಂಟಾಗುವ ಕ್ರಮ, ಚಂಪಕ, ಪಾಟಳ, ಜಾಜಿ, ಮಲ್ಲಿಗೆ ಪರಿಪರಿಯ ಪುಷ್ಪಗಳು, ಮೃಗಮದ, ಕರ್ಪೂರ, ಸುಗಂಧಾಮಳಕ ಈ ತೈಲಗಳನ್ನು ಮಾಡುವ ಕ್ರಮ, ದೇಹಧೂಪ ವಸ್ತ್ರಧೂಪದ್ರವ್ಯಗಳನ್ನು ತಯಾರಿಸುವ ಕ್ರಮ, ಬಗೆಬಗೆಯ ಧೂಪವರ್ತಿ (ಊದುಬತ್ತಿ) ಗಳನ್ನುಮಾಡುವ ಕ್ರಮ, ದಶಾಂಗಧೂಪ, ಪಂಚಾಂಗಧೂಪ, ದೇವತಾಪ್ರೀತಿಕರಧೂಪ, ಆಮೋದಗಂಧಿಧೂಪ, ತಿಗುಣೆ, ಸೊಳ್ಳೆ ಮೊದಲಾದ ಕಚ್ಚುವ ಕ್ರಿಮಿಗಳನ್ನು ನಿವಾರಿಸುವ ಧೂಪ, ಇವನ್ನು ಮಾಡುವ ಕ್ರಮವನ್ನು ಹೇಳಿ, ಸುಗಂಧದ್ರವ್ಯಗಳ ಮಿಶ್ರದಿಂದ ತನಗೆ ಬೇಕಾದ ವಕುಳ, ಸಂಪಗೆ, ಕೇದಗೆ, ಗೊಜ್ಜುಗೆ, ಮಲ್ಲಿಗೆ ಈ ವಾಸನೆಯನ್ನು ಪಡೆವ ಕ್ರಮ, ಹೂವುಗಳ ದ್ರವವನ್ನು ಸಂಗ್ರ

* ಈ ದೋಹದ ಕ್ರಮವು ತಮಿಳಿನ ಕಾವ್ಯಗಳಲ್ಲಿಯೂ ಹೇಳಲ್ಪಟ್ಟಿದೆ.



ಹಿಸುವ ಕ್ರಮ, ಕಸ್ತೂರಿ ವಾಸನೆಯನ್ನು ಪಡೆವ ಕ್ರಮ – ಇವನ್ನು ಹೇಳಿ, ಪರಿಪರಿಯ ಸುಗಂಧದ ಸಾಬೂನುಗಳ ತಯಾರಿಕೆಯ ಕ್ರಮ (ಉದಯಭಾಸ್ಕರ–ಮಹಿಷೀದಳ ಮೊದಲಾದ ಸಾಬೂನುಗಳು), ಹೂಗಳಿಗೆ ಸುವಾಸನೆ ಹೆಚ್ಚುವ ಧೂಪ ಕ್ರಮ – ಇವನ್ನು ಹೇಳಿ, ಕೃತ್ರಿಮ ಕುಂಕುಮಕೇಸರಿ, ಕೃತ್ರಿಮ ಕಸ್ತೂರಿ, ಕೃತ್ರಿಮ ಪಚ್ಚಕರ್ಪೂರ, ಕೃತ್ರಿಮದ ಇಂಗು – ಇವುಗಳನ್ನು ತಯಾರಿಸುವ ಕ್ರಮವನ್ನು ಹೇಳಿ, ಅಧಿಕಾರವನ್ನು ಉಪಸಂಹರಿಸಿರುವನು. ಇಲ್ಲಿ ಹೇಳಿರುವ ಧೂಪ, ಸಾಬೂನು ಇವುಗಳನ್ನು ಮಾಡುವ ಕ್ರಮಕ್ಕೆ ಸಂಸ್ಕೃತ ಗ್ರಂಥಗಳ ಆಧಾರವಿರಬಹುದೆಂದು ಊಹಿಸಲು ಅವಕಾಶವಿದೆ. ಅರಗಣಿಲೆಗುಗ್ಗುಳಂ (ಪದ್ಯ ೬೦) ಎಂಬ ಕಂದದಲ್ಲಿ ಹೇಳಿರುವ ಸುಗಂಧ ವಸ್ತುಗಳಲ್ಲಿ ಒಂದೆರಡು ವಸ್ತುಗಳ ಮಾರ್ಪಾಡಿನಿಂದ ಸಂಸ್ಕೃತ ನೈಷಧಕಾವ್ಯದ (ಸರ್ಗ [illegible], ಪ. [illegible]) ವ್ಯಾಖ್ಯಾನದಲ್ಲಿ—"ಪುರಸಜಾರ್ಭಯಾಲಾಕ್ಷಾ" ಎಂಬ ಕಾಮಕರ ಧೂಪವಾಗುವುದೆಂದು ಹೇಳಿರುವುದನ್ನು ಗಮನಿಸುವುದು.

ಬಳಿಕ ಎಂಟನೆಯ ಸೂಪಶಾಸ್ತ್ರಾಧಿಕಾರದಲ್ಲಿ—ಮನುಷ್ಯನಿಗೆ "ಶರೀರಮಾದ್ಯಂ ಖಲು ಧರ್ಮ (ಜೀವ) ಸಾಧನಂ" ಎಂಬಂತೆ ಶರೀರಪೋಷಣೆಗೆ ಬೇಕಾದ ಆರೋಗ್ಯವೂ, ಸತ್ವಕಾರಿಯೂ, ಪೋಷಕವೂ, ಸುಗಂಧಿಯೂ ಆದ ಅನ್ನ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ ವಸ್ತುಗಳನ್ನು ತಯಾರಿಸಿಕೊಳ್ಳುವ ಕ್ರಮವನ್ನು ವಿವರಿಸಿರುವನು.

ಇದರ ಆದಿಯಲ್ಲಿ ಅರೆಬೇಯದೆ, ಕಳಿಯಾಗದೆ ಹದನಾಗಿರುವಂತೆ ಅಕ್ಕಿಯನ್ನು ಬೇಯಿಸಿ ಅನ್ನ ಮಾಡುವ ಕ್ರಮವನ್ನಾರಂಭಿಸಿ, ಅನ್ನವನ್ನು ಕೆಲವು ದಿನಗಳವರೆಗೂ ಕೆಡದಂತಿಡುವ ಕ್ರಮ, ತುಂಬಾ ದಿವಸ ಹಸಿವಾಗದಂತಿರುವುದಕ್ಕೆ ತಕ್ಕ ಅನ್ನವನ್ನು ಮಾಡುವ ಕ್ರಮ, ಸತ್ವಕಾರಿಯಾದ ಆಹಾರವನ್ನು ಮಾಡುವ ಕ್ರಮ, ಘೃತಪೂರಿತ, ಹೂರಿಗೆ, ಹಾಲವುಗು, ಕ್ಷೀರದುಂಡೆ, ಇಡ್ಡಲಿಗೆ, ಲಡ್ಡುಗೆ, ಖಂಡಲಡ್ಡುಗೆ, ಮಿನಸುರಿಯ ಭಕ್ಷ್ಯ, ಸಂಡಗೆಗಳು – ಇವನ್ನು ಮಾಡುವ ಕ್ರಮವನ್ನು ಹೇಳಿ, ಬಾಡನ್ನಡುವ ಕ್ರಮವನ್ನೂ, ಹಾಗಲಕಾಯಿ, ಬೇವಿನಕಾಯಿ, ತೊಟ್ಟೆಯುಲಿ, ಪಡವಲಕಾಯಿ ಮೊದಲಾದ ಕಾಯ್ಗಳಲ್ಲಿರುವ ಕಹಿ (ವಿಷ) ಯನ್ನು ಹೋಗಲಾಡಿಸಿ, ಅವನ್ನು ತಿನ್ನಲು ಸ್ವಾದುವಾಗುವಂತೆ ಮಾಡುವ ಕ್ರಮ, ಮದಹುಟ್ಟಿಸುವ ಉಮ್ಮತ್ತದಕಾಯಿ ಮೊದಲಾದುವುದ ದೋಷವನ್ನು ಹೋಗಲಾಡಿಸಿ, ಆಹಾರಕ್ಕೆ ಸ್ವಾದುವಾಗುವಂತೆ ಮಾಡುವ ಕ್ರಮ–ಇವನ್ನು ಹೇಳಿ, ಬಳಿಕ ಹಣ್ಣುಗಳ ರಸವನ್ನು ಬೇರೆಯಾಗಿ ತೆಗೆವ ಕ್ರಮವನ್ನಾರಂಭಿಸಿ, ಮಾವಿನಹಣ್ಣು, ಮಾದಲದಹಣ್ಣು, ಅಣನೇರಿಲಹಣ್ಣು, ಹಲಸಿನ ತೊಳೆಗಳು, ಬಾಳೆಯಕಾಯಿ ಮತ್ತು ಹಣ್ಣುಗಳು ಇವುಗಳ ರಸವನ್ನು ದ್ರವಿಯಿಸುವ ಕ್ರಮವನ್ನು ಹೇಳಿ, ಸಕ್ಕರೆ ಮಾಡುವುದು, ಸುವಾಸನೆ ತುಪ್ಪ ಮಾಡುವುದು, ಸುವಾಸನೆ ಬೆಣ್ಣೆ ಮಾಡುವುದು, ಗಟ್ಟಿಹಾಲನ್ನು ಮಾಡುವುದು, ಕೃತ್ರಿಮ ಹಾಲನ್ನು ತಯಾರಿಸುವುದು (ಕಂಡೆನ್ಸ್ ಮಿಲ್ಕ್), ಸುವಾಸನೆ ಮೊಸರು ಮಾಡುವುದು. ಗಟ್ಟಿಮೊಸರು ಮಾಡುವುದು, ಕೃತ್ರಿಮ ಮೊಸರನ್ನು ತಯಾರಿಸುವುದು, ಒಳ್ಳೆಯ ಸುವಾಸನೆ ಮಜ್ಜಿಗೆಯನ್ನು ತಯಾರಿಸುವುದು ಈ ಕ್ರಮಗಳನ್ನು ಹೇಳಿ, ಶಿಖರಿಣಿ ಎಂಬ ಚೋಷ್ಯವಸ್ತುವನ್ನು ಮಾಡುವ ಕ್ರಮವನ್ನು ಹೇಳಿರುವನು. ಶಿಖರಿಣಿಯೆಂಬ ವಸ್ತುವನ್ನು ತಯಾರಿಸುವ ಕ್ರಮವನ್ನು ಹೇಳುವ ಪದ್ಯವನ್ನು ಶಿಖರಿಣೀ ವೃತ್ತದಲ್ಲಿ ಹೇಳಿರುವುದು ಗ್ರಂಥಕರ್ತೃವಿನ ಕವಿತಾಚಾತುರ್ಯವನ್ನು (ಪ್ರೌಢಿಮೆಯನ್ನು) ಸ್ಪಷ್ಟಗೊಳಿಸುವುದು.

ಬಳಿಕ ಅಂಬಿಲಪಳಿದ್ಯವನ್ನು ಹೇಳಿ, ಅಮೃತೋಪಮವಾದ ಪಾನೀಯವನ್ನು ತಯಾರಿಸುವ ಕ್ರಮವನ್ನು ಹೇಳಿ, ಅಧಿಕಾರವನ್ನು ಉಪಸಂಹರಿಸಿರುವನು.

ಇನ್ನು ಒಂಭತ್ತನೆಯ ಅಧಿಕಾರದಲ್ಲಿ—ಈ ಅಧಿಕಾರವು ಎಲ್ಲಾ ಅಧಿಕಾರಗಳಿಗಿಂತಲೂ ದೊಡ್ಡದು. ಇದರಲ್ಲಿ ನರವೈದ್ಯ (ಪುರುಷರ ರೋಗಗಳಿಗೆ ತಕ್ಕ ಔಷಧ ಚಿಕಿತ್ಸೆ), ಸ್ತ್ರೀವೈದ್ಯ (ಸ್ತ್ರೀಯರಿಗೆ ಮಾತ್ರವೇ ಉಪಯೋಗವಾಗತಕ್ಕದು), ಬಾಲವೈದ್ಯ, ಗೋವೈದ್ಯ, ಅಶ್ವವೈದ್ಯ, ಗಜವೈದ್ಯಗಳನ್ನು ಹೇಳಿರುವನು.

ಈ ಅಧಿಕಾರದಲ್ಲಿ—ಸಕಲ ಪ್ರಾಣಿಗಳ ಜೀವಾಪಹಾರಕವಾದ ರೋಗಗಳ ನಿವಾರಣೋಪಾಯಗಳ ಔಷಧಗಳ ವಿವರವನ್ನು ಹೇಳಿರುವುದು. ಆದಿಯಲ್ಲಿ ಅಖಿಲ ಜೀವರಕ್ಷಕವಾಗಿರುವ ವೈದ್ಯ ವಿಚಾರವನ್ನು ಹೇಳುವೆನೆಂದು ಗ್ರಂಥಕರ್ತೃವು ಪ್ರತಿಜ್ಞೆಮಾಡಿ, ವೈದ್ಯವಿಷಯವನ್ನು, ನರವೈದ್ಯ, ಸ್ತ್ರೀವೈದ್ಯ, ಬಾಲವೈದ್ಯ, ಗೋವೈದ್ಯ, ಅಶ್ವವೈದ್ಯ, ಗಜವೈದ್ಯ ಎಂದು ವಿಭಾಗ ಮಾಡಿಕೊಂಡು ನರ (ಪುರುಷ) ವೈದ್ಯದಲ್ಲಿ ಪಾದದಿಂದ ನಾಭಿವರೆಗೂ, ನಾಭಿಯಿಂದ ಎದೆಯವರೆಗೂ, ಎದೆಯಿಂದ ತಲೆಯವರೆಗೂ ಕ್ರಮವಾಗಿ ವಾತಪಿತ್ತ ಶ್ಲೇಷ್ಮಗಳ ಸ್ಥಾನವೆಂದೂ, ಈ ವಾತಪಿತ್ತ ಶ್ಲೇಷ್ಮಗಳಲ್ಲಿ ಒಂದೊಂದರ ಉದ್ರೇಕ (ಪ್ರಕೋಪ–ಉಲ್ಬಣ–ಹೆಚ್ಚಿಗೆ) ದಿಂದ ಕ್ರಮವಾಗಿ ಶೂಲೆ, ಉರಿ, ತಿಮಿರ ಗಳು ಹುಟ್ಟುವುವೆಂದೂ, ಇವುಗಳ ಉದ್ರೇಕಕ್ಕೆ ಕಾರಣಗಳಾದ, ಋತುಗಳನ್ನೂ, ಪರಿಹಾರ ಕ್ರಮ ಗಳನ್ನೂ ಹೇಳಿ, ಪ್ರತಿದಿನವೂ ಪುಷ್ಟಿವರ್ಧನವೂ, ರೋಗನಿವಾರಕವೂ ಆದ ಸಿತಘೃತಮಿಶ್ರಿತವು ಪ್ಪಂಗುರುಂ ಸೂಸಲು ಇವನ್ನು ಪ್ರತಿದಿನವೂ ಪ್ರಾತಃಕಾಲ ಸೇವಿಸಬೇಕೆಂದು ಹೇಳಿ, ಬಳಿಕ ಕ್ರಮವಾಗಿ ಶೂಲೆ, ಪಿತ್ತಶಾಂತಿ, ಕಾಮಾಲೆರೋಗ, ಕಫದೋಷ (ವಾತಪಿತ್ತಕಫ), ಮುಖರೋಗ, ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ, ಸನ್ನಿಪಾತಜ್ವರ, ಅಜೀರ್ಣಶ್ವಾಸ, ವಿಷಮಜ್ವರ, ಸೂಲ್ ಜ್ವರ, ಸ್ಫೋಟಕ (ಸಿಡುಬು), ಸೀವಳಿಗೆ (ಶೀತಾಳೆ ಸಿಡುಬು), ಬಾಯಾಜಿಕೆ, ಪಗಲನಿದ್ರೆ, ಪಲ್ದಿಂಬುದು, ವಮನ, ಛರ್ದಿ, ವಿರೇಚನ, ಕೆಯ್ಮಸಕ, ಕ್ಷಯರೋಗ, ಗಳಗಂಡಕ್ಷಯವಾತ ರೋಗಗಳಿಗೆ ಔಷಧಗಳನ್ನು ಹೇಳಿ, ಆಯುಷ್ಯವರ್ಧನ, ಬುದ್ಧಿವರ್ಧನಗಳಿಗೆ ಸೇವಿಸುವ ಔಷಧಿ ಗಳನ್ನು ಹೇಳಿ, ನರೆತೆರೆಗಳು ಹೋಗುವುದು, ವೀರ್ಯವರ್ಧನ, ನರೆತೆರೆಗಳು ಬಾರದಿರುವುದು, ಪಜೀನಲೆ ನಿಜೀದಲೆಯಪ್ಪುದು, ಮಡೆಜಡೆ, ಸೊಂಡು, ತೇವುಳು, ಮಂಡೆಯಪುಳು, ಸೀನ್ ಪೇನ್ಗಳ ನಿವಾರಣೆ, ತರ್ದು (ದುಂದುರು), ತಲೆಬೇನೆ, ಅರೆದಲೆಬೇನೆ, ಕಿವಿಯ ಶೂಲೆ, ಕಿವಿಯ ಪುಣ್, ಕರ್ಣವರ್ಧನ (ಕಿವಿಯನ್ನು ಬಳೆಸುವುದು), ಕಣ್ಣಬೇನೆ, ಕಣ್ಣತಿಮಿರರೋಗ, ಇರುಳ್ಗಣ್, ನಿಲವುಗಣ್, ಕಣ್ಣಪಟಲ, ಕುಸುಮಗ್ರಂಥಿ, ಕಣ್ಣಪೂ, ಮೂಗಿನರುಸೆ, ತುಟಿಯಪುಣ್, ಬಾಯ್ಕ ವಚ, ಹುಳಿವಾಸನೆತೇಗು, ಪಲ್ಲನೋವು, ಪಲ್ಲ ಪುಳುಗಳ್, ಜಂಗಮವಿಷ, ಅರೆದಲೆಬೇನೆ, ಪಲ್ಲ ಪುಳುಗಳು, ಬಂಗು, ಮೊಡವಿ, ಮುಖಕಾಂತಿಯಪ್ಪುದು, ನೆಗಡಿ, ಊರ್ಧ್ವಶ್ವಾಸ (ಉಬ್ಬಸ), ಕೆಮ್ಮು, ಖಾಸ, ಕೆಟ್ಟದನಿ, ಗಂಡಶೂಲೆ, ಕಿಱುನಾಲಗೆ (ಉಪಜಿಹ್ವಿಕೆ), ಮಾನಸ್ತಂಭರೋಗ, ಚಿಬ್ಬು, ತರ್ದು, ಕಜ್ಜಿವಿಸರ್ಪಗಳು (ವಿಸಬ), ರಕ್ತಮಂಡಲ, ಬಿಳಿಯ ತೊನ್ನು, ಕುಷ್ಠರೋಗ, (ಪದಿನೆಂಟುತೆಱದ ಕುಷ್ಠರೋಗ), ತುಱಿಕೆಱಂಕುಗಳು, ಕ್ರಿಮಿ (ಜಂತುಹುಳು), ಜಲಗರ, ಅತಿಸಾರ, ನೆತ್ತರಪೊಡೆ (ನುಣ್ಪುನೆತ್ತರು), ದೀಪನ, ವಿಷೂಚಿ, ಗುಲ್ಮರೋಗ, ಅಷ್ಠೀಲಾದಿ ರೋಗ, ಉದರರೋಗ, ಮೆಯ್ಯಗಂಟುಗಳು, ಬಾಹು, ಅಸ್ಥಿವೃದ್ಧಿ, ನರವುಲಿ, ಮುಱಿದ ಕೆಯ್, ಕಿದ್ದೆಸೆಯಬೇನೆ, ಮೂತ್ರಕೃಚ್ಛ್ರ, ಪಾಸಾಣರೋಗ, ಪ್ರಮೇಹ, ಲಿಂಗರೋಗ, ವೃಷಣದ ಬಾಹು, ಬಿಳಿಯರೋಗ, ಅರಿಸಿಮೊಳೆ, ಅಧೋವಾಯೂದ್ರೇಕ, ಪುತ್ತುಂಗಾಲ್ (ಆನೆಕಾಲು), ಕಾಲಬೀಡೆ, ಗೇಱುಪುಣ್, ಶಸ್ತ್ರಾದಿಗಳು ತಾಗಿದ ವ್ರಣ, ನಾಳಿಪುಣ್, ದೇಹದೊಳಗೆ ಬಾಣವು ಮುರಿದಿರುವುದು, ಅಂಬುಪುಣ್ಣು, ಬೆಂದಪುಣ್ಣು, ಭಗಂಧರ, ಕುಱು, ಊತಿರೋಗ, ಕಂಚಿಕೆ – ಇವುಗಳಿಗೆ ತಕ್ಕ



ಔಷಧಗಳನ್ನು ಹೇಳಿ, ಅನ್ಯಗ್ರಂಥವೆಂದು–ಬಿಡಲು ಬಾರದ್ದರಿಂದ ಅದಕ್ಕೆ ಔಷಧ ಪದ್ಯಗಳನ್ನು ಹೇಳಿ (ಪದ್ಯವನ್ನು ಇದೊಂದರಲ್ಲಿ ಮಾತ್ರ ಹೇಳಿರುವನು), ಮುಳ್ಳು ಸಿಪ್ಪುರು ನಾಟಿಕೊಂಡಿರುವುದು, ಉಗುರುಸುತ್ತು ಇವುಗಳಿಗೆ ಔಷಧಗಳನ್ನು ಹೇಳಿ, ನರವೈದ್ಯವನ್ನುಪಸಂಹರಿಸಿ, ಸ್ತ್ರೀವೈದ್ಯವನ್ನಾ ರಂಭಿಸಿ, ಸ್ತನವೃದ್ಧಿ, ಭಗದುರ್ಗಂಧಹರಣ, ಮೆಯ್ನೆರಿವುದು, ರಕ್ತಗುಲ್ಮ, ಗರ್ಭಿಣಿಯಾಗುವುದು, ಗರ್ಭನಿಲ್ವುದು, ಗರ್ಭವಾಗದಿರುವುದು, ಮೊಲೆಯಧಾರಾಗರ್ಳ, ಸ್ತನ್ಯವೃದ್ಧಿ – ಇವುಗಳಿಗೆ ಔಷಧ ವನ್ನು ಹೇಳಿ, ಈ ಪ್ರಕರಣವನ್ನುಪಸಂಹರಿಸಿ, ಬಾಲವೈದ್ಯವನ್ನಾರಂಭಿಸಿ, ಮಕ್ಕಳ ಸರ್ವದೋಷಾಪಹರಣ, ಗ್ರಹಾದಿಗಳ ಆಕ್ರಮಣವಾಗದಿರುವಿಕೆ, ಹಲ್ಲುಗಳು ಹುಟ್ಟುವುದು, ಬಾಳಕಾತಿಸಾರ, ಬಾಲಕರೆಣೆರೋಗ ಇವಕ್ಕೆ ಔಷಧಗಳನ್ನು ಹೇಳಿ, ಪ್ರಕರಣವನ್ನುಪಸಂಹರಿಸಿ, ಗೋವೈದ್ಯವನ್ನಾ ರಂಭಿಸಿ, ಪಸುಗಳು ತೆನೆಯಾಗುವುದು, ಬಸಿರಕಱು ಪೊಱಮಡುವುದು, ಮಾಸನಿಕ್ಕುವುದು, ಕಱು ಪಿಂತೆ ಪೋಪುದು, ಕಱುಗೊಳ್ವುದು, ಆಗಮಹಸು ಸಾಧುವಪ್ಪುದು, ಮುಖರೋಗ, ಕೆಮ್ಮು, ಕಣ್ಣಪೂ, ಬಾಹುಗಳು, ಶೂಲೆ, ಜ್ವರ, ನರದುರೋಗ, ತಿರುಗುತ್ತ, ಮೊಲ್ಕುಸಿಲ್ಕುವುದು, ಕುಂದುರೋಗ, ಪಲ್ಕುಱು, ಕೊಱಗುಕುಱು, ನಾಳಿಪುಣ್, ಕೊಂಬಿನಪುಳು, ಬಡವಪ್ಪುದು. ಸರ್ವರೋಗ – ಇವಕ್ಕೆ ಔಷಧಗಳನ್ನು ಹೇಳಿ, ಪ್ರಕರಣವನ್ನುಪಸಂಹರಿಸಿ, ಅಶ್ವವೈದ್ಯವನ್ನಾರಂಭಿಸಿ ಅಶ್ವಗಳ ದೀಪನ, ಕಫವಾತಪಿತ್ತ ಪ್ರಕೋಪ, ಸಂಬರೋಗ, ಕಫೋದ್ರೇಕ, ಖಾಸ, ಶೂಲೆ, ಹೊಟ್ಟೆಯುಬ್ಬರ, ಕ್ರಿಮಿ (ಜಂತು), ಅತಿಸಾರ, ಮೂತ್ರಕೃಚ್ಛ್ರ, ಜ್ವರ, ನಾನಾರೋಗ, ಬಾಹು, ತುಱಿಗಜ್ಜಿ, ವ್ರಣ ಇವುಗಳಿಗೆ ಔಷಧವನ್ನು ಹೇಳಿ, ಪ್ರಕರಣವನ್ನುಪಸಂಹರಿಸಿ. ಎರಡು ಪದ್ಯಗಳಲ್ಲಿ ಆನೆಯ ಸಕಲರೋಗಕ್ಕೆ ಔಷಧವೊಂದನ್ನು ಹೇಳಿ, ಈ ವೈದ್ಯಾಧಿಕಾರವನ್ನು ಪಸಂಹರಿಸಿರುವನು.

ಇನ್ನು ಹತ್ತನೆಯ ವಿಷತತ್ತ್ವಾಧಿಕಾರದಲ್ಲಿ—ಹಾವು ಕಚ್ಚಲು ಕಾರಣ, ಅಸಾಧ್ಯವಿಷಮುಳ್ಳ ಹಾವುಗಳ ಲಕ್ಷಣ, ಸರ್ಪದಷ್ಟವಾದ ಮನುಷ್ಯಾವಯವಗಳಲ್ಲಿ ಅಸಾಧ್ಯಂಗಳಾದವಯವಗಳು, ವೈದ್ಯನನ್ನು ಕರೆಯಲು ಬಂದ ದೂತಲಕ್ಷಣದ ಫಲಾಫಲಗಳು, ಆ ಕಾಲದಲ್ಲಿ ಮೂಗಿನಿಂದ ಹೋಗುವ ಸೂರ್ಯಚಂದ್ರ ಸ್ವರಗಳ ಲಕ್ಷಣದ ಶುಭಾಶುಭಗಳು, ದಷ್ಟನಾದವನು ಸಾಯುವನೆಂಬುದಕ್ಕೆ ಚಿಹ್ನೆ, ವಿಷಾಪಹಾರಕ ಮಂತ್ರ (ಇಲ್ಲಿ ಮತ್ತು ಶಕುನಾಧ್ಯಾಯದಲ್ಲಿ ಮಾತ್ರ ಮಂತ್ರಗಳನ್ನು ಹೇಳಿರುವನು), ವಿಷಾಪಹಾರಕ ಔಷಧ, ಸರ್ಪೋಚ್ಚಾಟನ ಯಂತ್ರ, ಹಾವು ಕಚ್ಚಿದರೂ ವರ್ಷ ಪರ್ಯಂತ ವಿಷವ್ಯಾಪನೆಯಾಗದಿರಲು ಸೇವಿಸುವ ಔಷಧ, ಕೊಳಿವಾವಿನ ವಿಷ (ಮಂಡಲದಹಾವು). ತೇಳ ಉತ್ಪತ್ತಿ ಮತ್ತು ಅವುಗಳ ವಿಷನಿವಾರಣೌಷಧ, ವಿಷಾನ್ಯಸಂಕ್ರಮಣಕ್ರಮ, ಕೊಡವಣ, ಕಾಡನೊಣ, ಕಡುಂದುಱು, ಹಲ್ಲಿ ಇವುಗಳು ಕಚ್ಚಿದ ವಿಷಕ್ಕೆ ಔಷಧ, ಸಕಲ ವಿಷಾಪಹಾರಕ ಔಷಧ, ಇಲಿಯ ವಿಷ, ಪೆಂಕುಳಿ (ಹುಚ್ಚು) ನಾಯಿ ವಿಷ, ಕರಡಿ ಮೊದಲಾದ ಪ್ರಾಣಿಗಳು ಕಚ್ಚಿದ ವಿಷ, ಸಕಲ ವಿಷವ್ರಣ, ಸಮಸ್ತ ಕೀಟವಿಷ, ಕೇರಪುಣ್ಣು ವಿಷ, ಉಮ್ಮತ್ತ (ಮದ್ದುಗುಣಿಕೆ), ಗಣಲಿಗೆ, ಹಾರಕ, ತಂಬುಲದ ಸೊರ್ಕು, ವಿಷಮುಂ ಮೆಯ್ದೊಡಂ ವ್ಯಾಪಿಸದಿರ್ಪುದು. ಸಕಲವಿಷ – ಇವಕ್ಕೆ ಔಷಧವನ್ನು ಹೇಳಿ, ಸರ್ವಗ್ರಹೋಚ್ಚಾಟನ ಧೂಪ, ಸರ್ವಗ್ರಹ ನಿವಾರಕ ಸಸ್ಯಗಳನ್ನು ಹೇಳಿ, ಆನೆಯ ಶಕ್ತಿವರ್ಧನ, ಮದದಾನೆಯ ಸ್ತಂಭನ, ಮನುಷ್ಯನ ಶಕ್ತಿವರ್ಧನ– ಇವುಗಳಿಗೆ ಸೇವಿಸುವ ಔಷಧವನ್ನು ಹೇಳಿ, ಅಧಿಕಾರವನ್ನುಪಸಂಹರಿಸಿರುವನು.

ಹನ್ನೊಂದನೆಯ ಅಧಿಕಾರದಲ್ಲಿ—ಸ್ತ್ರೀಪುರುಷರು ಮತ್ತು ಮನುಷ್ಯನು ಉಪಯೋಗಿಸುವ ಕುದುರೆ, ನಾಯಿ, ಆನೆ, ಕೋಳಿ ಮೊದಲಾದುವುಗಳ ಲಕ್ಷಣವನ್ನು ಹೇಳಿರುವನು.

ಗಳೇಳುವುದರ ಶುಭಾಶುಭಗಳನ್ನೂ ಹೇಳಿ, ಬಳಿಕ ಸಾಮಾನ್ಯವಾಗಿ ಕಬುಮನೆಯನೇಳುವುದು, ಮನೆಯಲ್ಲಿ ಹುತ್ತು ಹುಟ್ಟುವುದು, ಕಾದವಾರಿವಾಳ ಮನೆಯನ್ನು ಹೊಗುವುದು, ಜೇನು ಕಟ್ಟುವುದು, ಹಾವು ಹೊಕ್ಕು ಹೋಗುವುದು ಇವುಗಳಿಂದ ಆ ಮನೆಗೆ ಕೇಡು ಬರುವುದು, ಆ ಭಾಗವನ್ನು ಮುರಿದು ಹೊಸದಾಗಿ ಕಟ್ಟಬೇಕು ಎಂದು ಹೇಳಿ, ಮತ್ತೆ ಇದಿರಾಗಿ ಮೊಸರು, ಹಾಲು, ತುಪ್ಪ ಮೊದಲಾದುವು ಬಂದರೆ ಒಳ್ಳೆಯದೆಂದು ಹೇಳಿರುವನು.

ಬಳಿಕ ಓಸರಿಯನ್ನು ಕೇಳುವುದು (ಉಪಶ್ರುತಿ) ಎಂಬ ಶಕುನವನ್ನು ವಿಸ್ತರಿಸುವನು— ಒಬ್ಬ ಮನುಷ್ಯನು ತಾನು ಮಾಡಲಾರಂಭಿಸಿದ ಕಾರ್ಯದಿಂದ ಶುಭವುಂಟಾಗುವುದೋ ಅಥವಾ ಅಶುಭವುಂಟಾಗುವುದೋ ಎಂಬುದನ್ನು ತಿಳಿಯಲು ಸೂರ್ಯೋದಯಕ್ಕೆ ಮುಂಚೆ ಅಕ್ಷತೆಯನ್ನು ತೆಗೆದುಕೊಂಡು ಯಾವುದಾದರೊಂದು ಬೀದಿಯ ಗೃಹಸ್ಥನ ಮನೆಯ ಮೇಲೆ ತಳಿದು ನಿರೀಕ್ಷಿಸುತ್ತಿರಲು, ಆ ಕಾಲದಕ್ಕೆ ಆ ಮನೆಯವರ ಗೃಹಕೃತ್ಯ ಸಂಬಂಧವಾದ ಸಂಭಾಷಣೆಗಳಲ್ಲಿ ವಿಷಯಗಳ ಶುಭಪ್ರಸ್ತಾವವು ನಡೆಯುತ್ತಿದ್ದರೆ ಶುಭವೆಂದೂ, ಕಲಹ ಮೊದಲಾದ ಕೆಟ್ಟ ಪ್ರಸ್ತಾವವು ನಡೆಯುತ್ತಿದ್ದರೆ ಅಶುಭವೆಂದೂ ತಿಳಿದುಕೊಳ್ಳುವ ಕ್ರಮಕ್ಕೆ ಓಸರಿ ಕೇಳ್ವುದು ಎಂದು ವ್ಯವಹಾರವು. ಪ್ರಾಯಶಃ ಈ ಓಸರಿ ಶಬ್ದವು, ಅಪಸರ (ಓಸರ) ಎಂಬ ಸಂಸ್ಕೃತ ಶಬ್ದದ ತದ್ಭವವಾಗಿರಬಹುದು. ಒಂದು ಪಕ್ಕದಲ್ಲಿ ನಿಂತುಕೊಳ್ಳುವಿಕೆ ಎಂದು ಶಬ್ದಾರ್ಥವು.

ಕೊನೆಯದಾಗಿ ಈ ಗ್ರಂಥದಲ್ಲಿ ಹೇಳಿರುವ *ಪಂಚಾಂಗನಿರ್ಣಯ ಮೊದಲಾದ ಹನ್ನೆರಡು ವಿಷಯಗಳ ಕ್ರಮವನ್ನೂ, ಗ್ರಂಥದ ಹೆಸರು ಮತ್ತು ಪ್ರಶಸ್ತಿ, ಪ್ರಯೋಜನಾಧಿಕ್ಯ, ತನ್ನ ಕವಿತಾ ಪ್ರಶಸ್ತಿ ಇವನ್ನು ಹೇಳಿ, ತನಗೆ ಸರ್ವಾಧಿಕಾರವಿತ್ತ †ಜಯಸಿಂಹ (ಚಾಳುಕ್ಯ ಚಕ್ರವರ್ತಿ), ಚಕ್ರವರ್ತಿಯನ್ನು ಸ್ತುತಿಸಿ, ಗ್ರಂಥದ ಕಾಲವನ್ನು ಹೇಳಿ, ಮಂಗಳ ಪದ್ಯದೊಡನೆ ಗ್ರಂಥವನ್ನುಪಸಂಹರಿಸಿರುವನು.

## ಗ್ರಂಥಕರ್ತೃವಿನ ವಿಚಾರ

ಈ ಲೋಕೋಪಕಾರ ಗ್ರಂಥವನ್ನು ರಚಿಸಿದ ಕವಿಗೆ ‡"ಚಾವುಂಡರಾಯ"ನೆಂದು ಹೆಸರು. ಇದನ್ನು ಕವಿಯೇ ಈ ಗ್ರಂಥದ ಪೀಠಿಕಾಪ್ರಕರಣ ಪದ್ಯದಲ್ಲೂ, ಅಧಿಕಾರಾಂತ್ಯ ಗದ್ಯಗಳಲ್ಲೂ, ಅಧಿಕಾರದ ಆದಿಪದ್ಯದಲ್ಲೂ ಹೇಳಿಕೊಂಡಿರುವನು. ಪೀಠಿಕಾಪ್ರಕರಣ ಮತ್ತು ಉಪಸಂಹಾರ ಸ್ಥಳಗಳಲ್ಲಿ

---

* ಈ ವಿಷಯಗಳನ್ನೊಳಗೊಂಡಿರುವ ಪದ್ಯಗಳು ಗ್ರಂಥದ ಆದಿಯಲ್ಲೂ, ಕೆಲವು ಪ್ರತಿಗಳಲ್ಲಿದ್ದುದರಿಂದ ಎರಡು ಕಡೆಯೂ ಮುದ್ರಿಸಿದೆ.

† ಪೀಠಿಕೆಯ ೧೩–೧೪ನೆಯ ಪದ್ಯಗಳಲ್ಲೂ ಈ ಕೊನೆಯಧ್ಯಾಯದ ೬೪ನೆಯ ಪದ್ಯದಲ್ಲೂ "ಜಯಸಿಂಹ" ಎಂದು ಹೇಳಿ, ಈ ಕೊನೆಯ ೬೭ನೆಯ ಪದ್ಯದಲ್ಲಿ "ಜಯಕೇಶಿ" ಎಂದು ಹೇಳಿರುವುದು ಪ್ರತಿಕಾರರ ಪ್ರಮಾದವಿರಬಹುದು. ಒಂದೇ ಗ್ರಂಥದಲ್ಲಿ ಒಂದೇ ಪ್ರಕರಣದಲ್ಲಿ ಇಬ್ಬರು ಒಡೆಯರನ್ನು ಪ್ರಶಂಸಿಸುವುದು ಸಮಂಜಸವಲ್ಲ.

‡ ಕ್ರಿ. ಶ. 978ರಲ್ಲಿ ಜೀವಿಸಿದ್ದ ಚಾವುಂಡರಾಯ ಕವಿಯು ಇವನಿಗಿಂತ ಭಿನ್ನನು. ಆತನು ಜೈನಮತೀಯನು, ರಕ್ಕಸಗಂಗನೆಂಬ ಬಿರುದುಳ್ಳ ರಾಚಮಲ್ಲನೆಂಬ ಗಂಗರಾಜನಲ್ಲಿ ಮಂತ್ರಿಯಾಗಿಯೂ, ದಂಡನಾಯಕನಾಗಿಯೂ ಇದ್ದವನು. ತ್ರಿಷಷ್ಟಿಶಲಾಕಾಪುರುಷ ಪುರಾಣ (ಚಾವುಂಡರಾಯ ಪುರಾಣ) ವೆಂಬ ಕನ್ನಡ ಭಾಷೆಯ ಮೊತ್ತಮೊದಲಿನ ಗದ್ಯಗ್ರಂಥವನ್ನು ಬರೆದಿರುವನು. ಮೈಸೂರು ಸೀಮೆಯ ಜೈನರ ಮುಖ್ಯ ಯಾತ್ರಾಸ್ಥಳವಾದ ಶ್ರವಣಬೆಳ್ಗೊಳ ಎಂಬ ನಗರದಲ್ಲಿ ೬೦ ಅಡಿ ಎತ್ತರವಿರುವ ಗೊಮ್ಮಟೇಶ್ವರ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿದವನು. (ಕವಿ I, ಪುಟ 46)



ಶೋಧಕನ ವಿಷಯಗಳಿಂದ ಈ ಕವಿಯ ವಿಷಯದಲ್ಲಿ ಈ ಸಂಗತಿಗಳು ತಿಳಿದುಬರುವುವು.* ಕವಿಯ **ಮತ**—ಮಂಗಳ ಪದ್ಯಗಳಲ್ಲಿ ತ್ರಿಮೂರ್ತಿಗಳನ್ನೂ ಗಣಪತಿಯನ್ನೂ ಸರಸ್ವತಿಯನ್ನೂ ಸ್ತುತಿಸಿ, ಶ್ರುತಿಪುರಾಣ ಶಾಸ್ತ್ರವಿದರಾದ ಪುರಾತನ ಕವಿಗಳನ್ನು ಸ್ತುತಿಸಿರುವುದರಿಂದಲೂ, ಆಶ್ವಾಸಾಂತ್ಯ ಗದ್ಯಗಳಲ್ಲಿ "ಹರವರಪ್ರಸಾದೋತ್ಪನ್ನವಾಗ್ವಿಳಾಸಂ" ಎಂದು ಹೇಳಿಕೊಂಡಿರುವುದರಿಂದಲೂ, ಈತನು ವೈದಿಕಮತದ ಅದ್ವೈತಿಗಳ ಪಂಗಡಕ್ಕೆ ಸೇರಿದ ಬ್ರಾಹ್ಮಣವರ್ಣದವನೆಂದು ತಿಳಿದುಬರುವುದು. **ವಂಶಚರಿತ**—ಮುದುಗಲ್ಲೆಂಬ ಸ್ಥಳದಲ್ಲಿ ಸರಸಿಜಗರ್ಭವಂಶ್ಯರಲ್ಲಿ (ಬ್ರಾಹ್ಮಣರಲ್ಲಿ) ಶ್ರೀಸ್ವವಾದ

---

* ಕವಿಚರಿತ್ರಕಾರರಾದ ರಾವ್‌ಬಹದೂರ್ ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿಚರಿತ್ರೆಯ ಪ್ರಥಮ ಸಂಪುಟದಲ್ಲಿ ಇವನ ವಿಚಾರದಲ್ಲಿ ಈ ಕೆಳಗೆ ಕಂಡವಿಷಯಗಳು ತಿಳಿದುಬರುವುವು—

ಚಾವುಂಡರಾಯ ಸು. 1150 (ಕವಿ I, ಪು 63)

ಈತನು ಲೋಕೋಪಕಾರವೆಂಬ ಗ್ರಂಥವನ್ನು ಬರೆದಿದ್ದಾನೆ. ಆಶ್ವಾಸಗಳ ಕೊನೆಯ ಗದ್ಯಗಳಲ್ಲಿ "ಶ್ರೀಮತ್ಕವಿಳಾಸತನೂಜಂ" ಎಂದಿದೆ. ಇಲ್ಲಿ "ಕವಿತಾವಿಳಾಸ" ಎಂಬುದಕ್ಕೆ ಪ್ರತಿಯಾಗಿ "ಕವಿಳಾಸ" ಎಂದು ತಪ್ಪು ಬಿದ್ದಿರಬಹುದು. ಕವಿತಾವಿಳಾಸನೆಂಬ ಬಿರುದುಳ್ಳ ಒಬ್ಬ ಕವಿಯು ಸು. 1100 ರಲ್ಲಿ ಇದ್ದನು. ಈ ಚಾವುಂಡರಾಯನು ಅವನ ಮಗನಾಗಿದ್ದರೆ ಸು. 1150 ರಲ್ಲಿ ಇದ್ದಿರಬಹುದು. "ಹರಪ್ರಸಾದೋತ್ಪನ್ನವಾಗ್ವಿಳಾಸಂ" ಎಂಬುದರಿಂದ ಬ್ರಾಹ್ಮಣ ಕವಿಯೆಂದು ತೋರುತ್ತದೆ. ಕೆಲವು ಪದ್ಯದ ಕೊನೆಯಲ್ಲಿ "ಜಯಬಂಧುನಂದನ", "ಅಚಲಿತವಚನ", "ಶಿಷ್ಟಕಲ್ಪದ್ರುಮ", "ಬುಧೈಕಾಶ್ರಯ", ಎಂಬ ಅಂಕಿತಗಳು ದೊರೆಯುತ್ತವೆ, ಇವುಗಳಲ್ಲಿ "ಜಯಬಂಧುನಂದನ" ಎಂಬ ಅಂಕಿತವಿರುವ ಪದ್ಯಗಳು ಈ ಗ್ರಂಥದ ಪದ್ಯಗಳಾಗಿರಬಹುದು. ಉಳಿದುವು ಇವನ ಬಿರುದುಗಳಾಗಿರಬಹುದೋ ಏನೋ ತಿಳಿಯದು.

ಈ "ಕವಿಳಾಸ" ಎಂಬುದು "ಕಲಾವಿಲಾಸ" ಎಂಬುದಕ್ಕೆ ಪ್ರತಿಯಾಗಿ ಬಿದ್ದಿದ್ದ ಪಕ್ಷದಲ್ಲಿ ಈ ಚಾವುಂಡರಾಯನು ಕಲಾವಿಲಾಸನ ಮಗನೆಂದು ತಿಳಿಯಬೇಕಾಗುತ್ತದೆ. "ಅಭಿನವವಾದಿ ವಿದ್ಯಾನಂದನ" (1533) ಕಾವ್ಯಸಾರದ ಅಂತ್ಯಭಾಗದ ಪದ್ಯಗಳಿಂದ ತಿಳಿದುಬರುತ್ತದೆ. ಆ ಕಲಾವಿಲಾಸನ ಕಾಲವಾಗಲಿ ಗ್ರಂಥವಾಗಲಿ ಗೊತ್ತಿಲ್ಲ.

ಲೋಕೋಪಕಾರ (ಇದಕ್ಕೆ ಕನ್ನಡ ವ್ಯಾಖ್ಯಾನವೂ ಒಂದಿದೆ)

ಇದರ ಸಮಗ್ರಪ್ರತಿ ದೊರೆಯಲಿಲ್ಲ. 5–6ನೆಯ ಆಶ್ವಾಸಗಳು ಮಾತ್ರ ದೊರೆತಿವೆ, ಇವುಗಳಲ್ಲಿ 5ನೆಯ ಆಶ್ವಾಸದಲ್ಲಿ ಉದಕಾರ್ಗಳ ವರ್ಣನವೂ 6ನೆಯ ಆಶ್ವಾಸದಲ್ಲಿ ಸ್ತ್ರೀ ಪುರುಷರ ಸಾಮುದ್ರಿಕವೂ ಇವೆ. ಗ್ರಂಥದ ಈ ಭಾಗವು ಕಂದ ವೃತ್ತರೂಪವಾಗಿದೆ. ಆಶ್ವಾಸಗಳ ಕೊನೆಯಲ್ಲಿ—"ಇದು......ಲೋಕೋಪಕಾರದೊಳ್" ಎಂದು ಬರೆದು, ಉದಕಾರ್ಗಳದಿಂದ "ತುಱುಗಿತಳಿರ್ತು" (ಪ. ೪) "ಪುಲ್ಲಿಲ್ಲದ" (ಪ. ೫) ಎಂಬೆರಡು ಪದ್ಯಗಳನ್ನೂ ಸಾಮುದ್ರಿಕದಿಂದ "ಬೆವರದೆ ಬೆಚ್ಚನಾಗಿ" ಎಂಬ ಪದ್ಯವನ್ನೂ ಉದಾಹರಿಸಿರುವರು. ಆದರೆ ಶ್ರೀಮಾನ್ ಲೋಕನಾಥ ಶಾಸ್ತ್ರಿಗಳ ಓಲೆ ಪ್ರತಿಯಲ್ಲಿಯೂ ಉದಕಾರ್ಗಳವೇ ಆರಂಭವಾಗಿದೆ. ಅಧಿಕಾರಾಂತ್ಯದಲ್ಲಿ—"ಹರವರಪ್ರಸಾದೋತ್ಪನ್ನವಿದ್ವದ್ವಿಲಾಸಂ, ಶ್ರೀಮತ್ಕವಿಳಾಸತನೂಜಂ ಶ್ರೀಮ" ಎಂಬ ಪಾಠವೇ ಇದೆ— ಶ್ರೀಮಾನ್ ನರಸಿಂಹಾಚಾರ್ಯರಿಗೆ ದೊರಕಿದ್ದ ಪ್ರತಿಯು ಈ ಪ್ರತಿಯ ಪುತ್ರಿಕೆಯಾಗಿರಬಹುದು.

ಕವಿಚರಿತ್ರಕಾರರು ತಮಗೆ ದೊರಕಿರುವ ಉದಕಾರ್ಗಳಾಧಿಕಾರದ ಕೊನೆಯ ಗದ್ಯದ ಆಧಾರದಿಂದ— ಕವಿಯ ಹೆಸರು, ಮತ, ತಂದೆಯ ಹೆಸರು ಇವನ್ನೂ; ತಂದೆಯಾದ ಕವಿತಾವಿಳಾಸನ ಕಾಲವನ್ನು ದುರ್ಗಸಿಂಹನ (ಈ ಕವಿಯನ್ನು ಸ್ತುತಿಸಿರುವವನು) ಕಾಲದ ಆಧಾರದಿಂದ 1100 ಎಂದು ಊಹಿಸಿ, ಅವನ ಮಗನಾದ ಈ ಚಾವುಂಡರಾಯನ 1150 ಎಂದು ಕಾಲವನ್ನೂ ಊಹಿಸಿರುವರು. ಆದರೆ ಇವರು ದುರ್ಗಸಿಂಹನಿಗೆ ಕೊಟ್ಟಿರುವ ಕಾಲವೇ ನೂರು ವರ್ಷ ಹೆಚ್ಚಾಗಿರುವುದರಿಂದ ಕವಿತಾವಿಳಾಸನ ಕಾಲವೂ ನೂರು ವರ್ಷ ಹೆಚ್ಚಾಗಿದೆ. ದುರ್ಗಸಿಂಹನ ಕಾಲವನ್ನು ಆತನು ತನ್ನ ಪೋಷಕನೆಂದು ಹೊಗಳಿರುವ ಜಗದೇಕಮಲ್ಲ ಜಯಸಿಂಹನ ಕಾಲದ (ಶಾಸನಗಳ) ಆಧಾರದಿಂದ 1020–1245 ಎಂದು ನಾವು ನಿರ್ಧರವಾಗಿ ತಿಳಿಯಬಹುದಾದುದರಿಂದ, ಆತನಿಂದ ಹೊಗಳಲ್ಪಟ್ಟ ಕವಿತಾವಿಳಾಸನ ಕಾಲವನ್ನು ಸು. 1000 ಎಂದು ಹೇಳುವುದಾದರೆ, ಈ ಕವಿತಾವಿಳಾಸನ ಮಗನಾದ ಚಾವುಂಡರಾಯನು ತನ್ನ ಗ್ರಂಥ ಪರಿಸಮಾಪ್ತಿ ಕಾಲವು 1025 ಎಂದು ಗ್ರಂಥದಲ್ಲಿ ಹೇಳಿರುವುದು ಸಮಂಜಸವಾಗುವುದು.

ಆದಿಯಲ್ಲಿ ದೇಹಲಕ್ಷಣದಲ್ಲಿ (ಪಾದದಿಂದ ತೊಡೆಯವರೆಗೆ) ಸೊಂಟ (ಕಟಿ), ಲಿಂಗ, ಮೂತ್ರಶುಕ್ಲಗಳು, ಪೊರ್ಕುಳ್, ವಳಿ, ರೋಮರಾಜಿ, ಕುಚ, ಗಡ್ಡ, ಹೃದಯ, ಜತ್ರುಗಳು, ಹಿಂಬಾಗದ ಬೆನ್ನಮೂಳೆ, ಹೆಗಲು (ಮುಯ್ಪು), ಕಕ್ಷ, ಅಂಗೆಯ್ – ಇವುಗಳ ಲಕ್ಷಣಗಳಿಂದ ಉತ್ತಮ ಪುರುಷ, ಐಶ್ವರ್ಯವಂತ - ಎಂಬುದನ್ನು ತಿಳಿವ ಪ್ರಕಾರವನ್ನು ಹೇಳಿ, ಬಳಿಕ ಅಂಗೆಯ್ ಅಂಗಾಲುಗಳಲ್ಲಿನ ಚಕ್ರ, ವಜ್ರ, ಧ್ವಜ ಮೊದಲಾದ ಚಿಹ್ನಗಳು, ಅವುಗಳ ಸ್ಥಾನ ವಿಶೇಷದಿಂದ ಫಲ, ಅಂಗೆಯ್ಯ ರೇಖೆಗಳಿಂದ ಆಯುಷ್ಯಪ್ರಮಾಣ, ಮಕ್ಕಳು, ಹೆಂಡಿತಿಯರ ಸಂಖ್ಯೆ ಇವನ್ನು ತಿಳಿಸುವ ಕ್ರಮವನ್ನು ಹೇಳಿ, ಗಲ್ಲ, ಕಣ್ಣು, ಮೂಗು, ಹುಬ್ಬು, ಕಿವಿ, ಹಣೆ ಇವುಗಳ ಲಕ್ಷಣದಿಂದ ಶುಭಾಶುಭ ಫಲಗಳನ್ನು ಹೇಳಿ, ಹಣೆಯ ರೇಖೆಗಳ ಸಂಖ್ಯೆಯಿಂದ ಆಯುಃಪ್ರಮಾಣವನ್ನು ತಿಳಿಯುವುದು, ರಾಜ ಮೊದಲಾದವರ ತಲೆಯ ಲಕ್ಷಣ, ಧನವಂತ, ಅರಸ, ಬಡವ, ಶಿಷ್ಟ ಮೊದಲಾದವರ ಆವರ್ತ (ಕೂದಲ ಸುಳಿ) ರೋಮಲಕ್ಷಣ, ಅಲ್ಪಾಯುಷ್ಯನ ಲಕ್ಷಣ, ದೇಹಗಳ ಪ್ರಮಾಣದಿಂದ (ಎತ್ತರ-ಕುಳ್ಳು) ಉತ್ತಮ ಮಧ್ಯಮದ ಪುರುಷ ಸ್ವರೂಪ, ಸ್ವರ (ಧ್ವನಿ) ಲಕ್ಷಣ, ವರ್ಣಲಕ್ಷಣ, ಮೆಯ್ಕಟ್ಟಿನ ಲಕ್ಷಣ, ತಿರ್ಯಕ್ಸತ್ವಾದಿ ಸತ್ವಲಕ್ಷಣ, ತ್ವಕ್ಕಿನ ಲಕ್ಷಣದಿಂದ ಸೂಚಿತವಾಗುವ ಲಕ್ಷಣಗಳು, ತ್ವಙ್ಮಾಂಸ ಮೊದಲಾದ ಸಪ್ತಧಾತುಗಳ ಸಾರ ಲಕ್ಷಣದಿಂದ ಮನುಷ್ಯನ ಗುಣಗಳು, ಗಮನ (ಗತಿ) ಲಕ್ಷಣ, ಪೃಥಿವ್ಯಾದಿ ಪಂಚಭೂತ ಚ್ಛಾಯೆಯುಳ್ಳವನ ಲಕ್ಷಣ, ದೇಹದ ಅಂಗುಲ ಪ್ರಮಾಣದಿಂದ ಉತ್ತಮಾಧಮ ಮಧ್ಯಮ ಪುರುಷ ಲಕ್ಷಣ, ದೇಹದ ಭಾರಲಕ್ಷಣ, ಅವಯವದ ಸಮುದಾಯದ ಗುಣಗಳು, ಉತ್ತರೋತ್ತರವಾಗಿ ಉತ್ತಮವಾದ ಅವಯವಗಳು (ತನು ಮೊದಲನೆಯದು, ಅದಕ್ಕಿಂತ ಮುಖ, ಅದಕ್ಕಿಂತ ಮೂಗು ಈ ಕ್ರಮದಲ್ಲಿ), ಪೂಜ್ಯಪುರುಷ, ನಿಧಿಪುರುಷ ಇವರ ಲಕ್ಷಣ, ದೇಹವಿಭಾಗದಿಂದ ದಶಕ್ಷೇತ್ರಗಳ ನಿರ್ಣಯ, ಆ ಕ್ಷೇತ್ರಗಳ ಸ್ವರೂಪದಿಂದ ಉಂಟಾಗುವ ಶುಭಾಶುಭಗಳನ್ನು ಹೇಳಿ, ಪುರುಷ ಲಕ್ಷಣ ಪ್ರಕರಣವನ್ನುಪಸಂಹರಿಸಿ, ಸ್ತ್ರೀಲಕ್ಷಣವನ್ನಾರಂಭಿಸಿ, ಉತ್ತಮಕನ್ಯೆ, ಜಾರೆ, ಪಾಪಿಷ್ಠೆ, ದುರ್ಭಗೆ, ಅಮಂಗಳೆ, ವಿಧವೆ, ತಾಟಕೆ (ದುಷ್ಟೆ-ರಾಕ್ಷಸ ಧರ್ಮವುಳ್ಳವಳು), ನಿರ್ಭಾಗ್ಯೆ, ದುಃಖಿತೆ, ಕಷ್ಟೆ, ಚರಿತ್ರವಿಹೀನೆ (ವ್ಯಭಿಚಾರಿಣಿ), ಯೋಗಿನಿ – ಇವರ ಲಕ್ಷಣಗಳನ್ನು ಹೇಳಿ, ಮುಖ್ಯವಾಗಿ ಸ್ತ್ರೀಯರ್ಗೆ ಕಾಲಲ್ಲಿಯೂ, ಕಟಿ (ಸೊಂಟ) ಯಲ್ಲಿಯೂ, ಪುರುಷರ್ಗೆ ಶಿರಸ್ಸು ಮುಖಗಳಲ್ಲಿಯೂ ಉತ್ತಮ ಲಕ್ಷಣವಿದ್ದರೆ ಶುಭವು, ವರಾಂಗರಸನಾವೃಷಣೇಕ್ಷಣಶುಕ್ಲಗಳ ಸತ್ವಗಳು ಆಭ್ಯಂತರಲಕ್ಷಣಗಳೆಂದೂ, ತಲೆಗಾತ್ರಾದಿಗಳ ಸ್ಫುರಣ, ನರವುಲಿ, ಮಚ್ಚೆ, ಚರ್ಮಕಿಳು – ಇವು ಎಡದಲ್ಲಿ ಸ್ತ್ರೀಯರಿಗೂ, ಬಲದಲ್ಲಿ ಪುರುಷರಿಗೂ ಇದ್ದರೆ ಶುಭವೆಂದು ಹೇಳಿ, ಸ್ತ್ರೀ ಲಕ್ಷಣವನ್ನುಪಸಂಹರಿಸಿ, ಗಜಲಕ್ಷಣವನ್ನಾರಂಭಿಸಿ, ಪೂಜ್ಯಗಜದ ಅವಯವ ಲಕ್ಷಣವನ್ನೂ, ಕೊನೆಯಲ್ಲಿ ನಿಂದಿತ ಗಜಲಕ್ಷಣವನ್ನೂ ಹೇಳಿ, ಪ್ರಕರಣವನ್ನುಪಸಂಹರಿಸಿ, ಅಶ್ವಲಕ್ಷಣವನ್ನಾರಂಭಿಸುವನು, ಇದರಲ್ಲಿ ಕುದುರೆಗಳ ಅಂಗ ಆವರ್ತಾದಿ ಅಷ್ಟಾಂಗ ವಿಭಾಗಗಳನ್ನು ಹೇಳಿ, ಪ್ರತಿಯೊಂದು ಅಂಗಗಳ ಲಕ್ಷಣದಿಂದ ಶುಭಾಶುಭಗಳನ್ನು ಹೇಳಿ, ಪ್ರಕರಣವನ್ನುಪಸಂಹರಿಸಿ, ಗೋಲಕ್ಷಣವನ್ನಾರಂಭಿಸಿ, ಒಡೆಯನಿಗೆ ಶುಭವನ್ನು ಕೊಡುವ ಎತ್ತಿನ ಲಕ್ಷಣ, ವ್ಯತ್ಯಸ್ತಸ್ವರೂಪದ ಎತ್ತಿನ ಲಕ್ಷಣ (ಇದರಲ್ಲಿಯೇ ಹಸುವಿನ ಲಕ್ಷಣವೂ ಅಡಗಿರುವುದು), ದುರ್ಲಕ್ಷಣದ ಜೀವದನಗಳನ್ನು ಒಡೆಯನು ತ್ಯಾಗಮಾಡಬೇಕೆಂದು ಹೇಳಿ; ಪ್ರಕರಣವನ್ನುಪಸಂಹರಿಸಿ; ಬಳಿಕ ಆಡು, ಕೋಳಿ, ನಾಯಿ ಇವುಗಳ ಶುಭಾಶುಭ ಲಕ್ಷಣವನ್ನು ಹೇಳಿ, ಶುಭವನ್ನು ಬಯಸುವ ಮನುಷ್ಯನು ಒಂದು ಕುಜಿ, ಎರಡೆಮ್ಮೆ, ಮೂಱು ಪಶು, ಎಂಟು ಕುದುರೆ, ಆಱು ನಾಯ್, ಏಳಾನೆ – ಇವನ್ನು ಆಳಕೂಡದೆಂದು ಹೇಳಿ, ಮನುಷ್ಯ ಮತ್ತು ಆನೆಗಳಿಗೆ ೧೨೦ ವರುಷ ೫ ಇರುಳು



ಆಯುಃಪ್ರಮಾಣ, ಕುದುರೆಗೆ ಮೂವತ್ತೆರಡು ವರ್ಷ, ಪಲ್ಲಕ್ಕಿ, ಕರಭ ಇವಕ್ಕೆ ಇಪ್ಪತ್ತೈದು ವರುಷ, ಮಹಿಷ, ಎತ್ತು ಇವುಗಳಿಗೆ ಹತ್ತೊಂಬತ್ತು ವರ್ಷ, ನಾಯ್ಗೆ ಹನ್ನೆರಡು ವರ್ಷ, ಆಡು, ಕುರಿಗಳ್ಗೆ ಹದಿನಾರು ವರ್ಷ ಆಯುಃ ಪರಿಮಾಣಾವಧಿಯನ್ನು ಹೇಳಿ, ಬಳಿಕ ಶಸ್ತ್ರಲಕ್ಷಣವನ್ನಾರಂಭಿಸಿ, ಕೆಯ್ದುಗಳ ವಾಸನೆಯ ಶುಭಾಶುಭಗಳು, ಹಿಡಿಯಲಾಗದ ಕೆಯ್ದುಗಳ ಲಕ್ಷಣ, ಅಧಿಪತಿಗೆ ಮರಣವನ್ನುಂಟುಮಾಡುವ ಕೆಯ್ದಿನ ಲಕ್ಷಣ, ಆಯುಧಗಳ ಪರಿಮಾಣ (ಅಳತೆ) ದಿಂದ ಉಂಟಾಗುವ ಶುಭಾಶುಭಗಳನ್ನು ಹೇಳಿ, ಅಧಿಕಾರವನ್ನುಪಸಂಹರಿಸಿರುವನು. ಈ ಅಧಿಕಾರದ ೧೧೩ನೆಯ ಪದ್ಯದ ಒಂದು ಪಾದವೂ, ೧೧೪ನೆಯ ಪದ್ಯವೂ ಪ್ರತಿಗಳಲ್ಲಿ ಗಳಿತವಾಗಿವೆ.

ಇನ್ನು ಹನ್ನೆರಡನೆಯ ಶಕುನಾದಿ ಪ್ರಕರಣವನ್ನು ಹೇಳುವ ಅಧ್ಯಾಯದಲ್ಲಿ—ಮನುಷ್ಯನು ಯಾವುದಾದರೊಂದು ಕೆಲಸ ಮಾಡಲು ಹೊರಟಾಗ, ಅವನ ಇದಿರು ಸುತ್ತುಮುತ್ತುಗಳಲ್ಲಿ ಆಗುವ ಕಾರ್ಯಗಳು ಶುಭಾಶುಭಗಳನ್ನು ಸೂಚಿಸುವುವು, ಈ ಬಗೆಯಲ್ಲಿ ಶುಭಾಶುಭಗಳನ್ನು ಸೂಚಿಸುವ ಕಾರ್ಯಗಳಿಗೆ ಶಕುನಗಳೆಂದು ಹೆಸರು, ಶಕುನದಲ್ಲಿ ಶುಭಶಕುನಗಳು, ದುಶ್ಶಕುನಗಳು ಎಂಬ ಎರಡು ವಿಧವು–ಎಂದು ಹೇಳಿ, ಈ ಶಕುನಗಳ ಸ್ವರೂಪವನ್ನೂ ಅವುಗಳು ಸೂಚಿಸುವ ಶುಭಾಶುಭ ಫಲಗಳನ್ನೂ ಈ ಅಧಿಕಾರದಲ್ಲಿ ಹೇಳಿರುವನು.

ಆದಿಯಲ್ಲಿ ಸೈನ್ಯವು ನಡೆವಾಗ ಆದ ಶಕುನಗಳ ಫಲವು ಸೈನ್ಯದ ಮುಖ್ಯನಿಗೂ, ಒಬ್ಬನೂ ಜತೆಯಲ್ಲಿಲ್ಲದಿರುವಾಗ ಒಬ್ಬನಿಗೂ ಉಂಟಾಗುವುದು. ಕಾಡಿನ ಮೃಗಪಕ್ಷಿಗಳು ಊರಲ್ಲೂ, ಊರಿನ ಮೃಗಪಕ್ಷಿಗಳು ಕಾಡಿನಲ್ಲೂ ತಿರ್ದಿ, ಹಗಲು ಸಂಚರಿಸುವುವು ರಾತ್ರಿಯಲ್ಲಿಯೂ, ರಾತ್ರಿ ಬಾರಿಸುವುವು ಹಗಲಲ್ಲೂ ತಿರ್ದಿದರೆ ಆ ಶಕುನವು ಸ್ವೀಕಾರ್ಯವಲ್ಲ, ಊರಲ್ಲಿ ಕೆಲಸಕ್ಕೆ ಹೋಗುವವನಿಗೆ ಶಕುನಫಲವು ಅರೆಜಾವದವರೆಗೂ, ಊರಿಗೆ ಹೋಗುವವನಿಗೆ ಆ ದಿವಸ ರಾತ್ರಿ ಮಾತ್ರವೂ, ಒಕ್ಕಲು ಹೋಗುವವನಿಗೆ ಒಂದು ತಿಂಗಳವರೆಗೂ ಸಂಭವಿಸುವುದು, ಶಕುನ ತಿರ್ದಿದ ಮೂರನೆಯ ದಿನ ಅದರ ಫಲವಿಲ್ಲ. ಕೆಲಸಕ್ಕೆ ಪ್ರಯಾಣ ಮಾಡಿದವನ ಇದಿರಲ್ಲಿ ಕಳಸ, ಕನ್ನಡಿ ಮೊದಲಾದ ವಸ್ತುಗಳು ಬಂದರೆ ಒಳ್ಳೆಯದು, ಬಱುಗೊಡ, ಎಣ್ಣೆ ಮೊದಲಾದುವು ಬಂದರೆ ಪೊಲ್ಲದು, ಸೂರ್ಯನಿರುವ ಸ್ಥಾನದಿಂದ ಎಂಟು ಸ್ಥಾನಕ್ಕೆ ಭೂತಿ, ಹೊಗೆ ಮೊದಲಾದ ಎಂಟು ಸಂಜ್ಞೆಗಳನ್ನು ಹೇಳಿ, ಇವೇ ಶಾಂತದೀಪ್ತಸ್ಥಾನಗಳೆಂದು ಅರಿಯಬೇಕು ಎಂದು ಹೇಳಿ, ಬಳಿಕ ಬೆಕ್ಕು, ಮೃಗಪಕ್ಷಿಗಳು, ಕಾಗೆ ಇವುಗಳು ಇದಿರಾಗಿ ಬರುವುದು, ಎಡದಿಂದ ಬಲಕ್ಕೆ ಹೋಗುವುದು, ಎರೆಯಂ ಕರ್ಚಿಕೊಂಡು ಬರುವುದು ಮೊದಲಾದುವುಗಳ ಶುಭಾಶುಭಗಳನ್ನೂ ಹೇಳಿ, ಆನೆ, ಕುದುರೆ ಇವುಗಳ ಸ್ಥಿತಿಗಳ ಶುಭಾಶುಭಗಳನ್ನೂ, ನಾಯಿಯ ಸ್ಥಿತಿಯ ಶುಭಾಶುಭಗಳನ್ನು ಹೇಳಿ, ಮತ್ತೆ ಪಿಂಗಲಿಯ ಶಕುನ, *ವಾಯಸ(ಕಬ್ಬಿಲೆ)ಯ ಸ್ಥಿತಿಗಳ ಶುಭಾಶುಭಗಳನ್ನೂ ಹೇಳಿರುವನು. †ಈ ವಾಯಸ ಶಕುನದಲ್ಲಿ ಕಾಗೆಗಳ ಸ್ವರ ಸಂಖ್ಯೆಯನ್ನೂ ಅದಿರುವ ದಿಕ್ಕಿನ ಸಂಖ್ಯೆಯನ್ನೂ ಸೇರಿಸಿ ಎಂಟರಿಂದ ಭಾಗಿಸಿ, ಉಳಿಯುವ ಶೇಷ ಒಂದು ಮೊದಲಾದುವಕ್ಕೆ ಫಲವನ್ನು ಹೇಳುವ ೨ ಸಂಸ್ಕೃತ ಶ್ಲೋಕಗಳು ಕಂಡುಬರುವುವು, ಇವಕ್ಕೆ ಟೀಕೆಯೂ ಇರುವುದು.

ಬಳಿಕ ಹಲ್ಲಿಯು ಲೊಚಗುಟ್ಟುವುದು ಮೊದಲಾದ ಶುಭಾಶುಭಗಳನ್ನೂ, ಮನೆಯಲ್ಲಿ ಕೆಂಪು ಇರುವೆಗಳು ಏಳುವುದರ ದಿಕ್ಕು, ಸ್ಥಳಗಳನ್ನನುಸರಿಸಿ ಶುಭಾಶುಭಗಳನ್ನೂ, ಮನೆಯಲ್ಲಿ ಅಗ್ನಿ

*ಇಲ್ಲಿ ಕಾಗೆಗೆ ಕಬ್ಬಿಲೆ ಎಂಬ ದೇಶ್ಯ ಶಬ್ದವನ್ನು ಪ್ರಯೋಗಿಸಿರುವನು, ಮತ್ತಾವ ಕಾವ್ಯದಲ್ಲಾಗಲಿ ವ್ಯವಹಾರದಲ್ಲಾಗಲಿ ಈ ಶಬ್ದವಿಲ್ಲ.

†ಇದು ಗ್ರಂಥಕರ್ತೃವಿನದೋ ಅಲ್ಲವೋ ಎಂದು ನಿರ್ಧರಿಸಲು ಶಕ್ಯವಿಲ್ಲ.

ಕಾಶ್ಯಪಗೋತ್ರದಲ್ಲಿ ಹುಟ್ಟಿದವನೂ, ಕನ್ನಡಿಗರಲ್ಲಿ ಪ್ರಸಿದ್ಧವಾದ ಚಾತುರಕುಲದಲ್ಲಿ ಪ್ರಸಿದ್ಧನೂ, ಸರ್ವಶಾಸ್ತ್ರ ಕುಶಲನೂ, ಸತ್ಪುರುಷರಲ್ಲಿ ಶ್ರೇಷ್ಠನೂ ಆದ ಪಂಗೌಂಡ ಭಟ್ಟನೆಂಬ ಪಂಡಿತನಿದ್ದನು, ಕಾಶ್ಯಪಗೋತ್ರಪವಿತ್ರನಾದ ಚಾತುರಾನ್ವಯದ ಈತನು ಅಪರಿಮಿತ ದಾನಿ, ಚಾಲುಕ್ಯರಾಜರ ಪೋಷ್ಯವರ್ಗಕ್ಕೆ ಸೇರಿದವನು, ಶಂಕರಭಟ್ಟರ ಮಗನು, ಶಂಕರನ ಪಾದಪದ್ಮಾರಾಧಕನು, ಶುಭ್ರವಾದ ಕೀರ್ತಿಯುಳ್ಳವನು, ಆಡಿದ ಭಾಷೆಗೆ ತಪ್ಪುವವನಲ್ಲವು, ಕವಿಕಲ್ಪವೃಕ್ಷನೆನಿಸಿದ ಈತನು ಹಲವು ಕೆರೆಗಳನ್ನು ನಿರ್ಮಾಣ ಮಾಡಿಸಿ, ತುಂಬಾ ಯಶಸ್ಸನ್ನು ಗಳಿಸಿದನು. ಈತನು ಸಾಹಿತ್ಯದಲ್ಲಿ ಸಂಪೂರ್ಣ ಕುಶಲನು, ವಿದ್ವಜ್ಜನ ರತ್ನವೆನಿಸಿ ವಿದ್ವತ್ಪಕ್ಷಪಾತಿಯೂ ಆಗಿದ್ದನು. ಈತನು ಮಸೃಣಪದರಚನೆಯಿಂದಲೂ, ರಸಪರಿಪೂರ್ಣತೆಯಿಂದಲೂ, ಅತಿಶಯೋಕ್ತಿಯಿಂದಲೂ, ಅರ್ಥಪ್ರಸಾರ(ದ)ದಿಂದಲೂ ಕೂಡಿರುವಂತೆ ರಚಿಸಿದ *ಕಾವ್ಯಗಳಿಂದ ಲೋಕದಲ್ಲಿ ಕವಿತಾವಿಳಾಸನೆಂಬ ಬಿರುದನ್ನು ಗಳಿಸಿದ್ದನು, ಯಾವಾಗಲೂ ಒಳ್ಪು, ಶೌಚ, ಅಸ್ಖಲಿತವಾಕ್ಯತೆ, ವದಾನ್ಯತೆ, ಅನಿಂದ್ಯವಾದ ನಡೆವಳಿಕೆ, ಕ್ಷಮಾಗುಣ, ಚಿರಂತನರ ಮಾರ್ಗವನ್ನು ಬಿಡದಿರುವಿಕೆ (ಶಿಷ್ಟಾಚಾರ ನಿಷ್ಠೆ), ಚತುರಕುಲೀನತೆ – ಈ ಗುಣಗಳಿಂದ ಈ ಭಟ್ಟ ಪಾರ್ಯನ ಹೋಲಿಕೆಗೆ ಬರುವವರೇ ಇಲ್ಲ. ಇವನ ಹೆಂಡಿತಿ ಸಾಧ್ವೀಮಣಿಯಾದ ಮಲ್ಲಿಕಬ್ಬೆ, ಇವರ ಸುಪುತ್ರನೆನಿಸಿದ ದ್ವಿಜವಂಶೋತ್ತಮನಾದ ಚಾವುಂಡರಾಯನೇ ಈ ಗ್ರಂಥಕರ್ತನು.

ಈ ಚಾವುಂಡರಾಯನ ಗುಣಾತಿಶಯಗಳನ್ನು ಕಂಡು, ಚಾಳುಕ್ಯ ಚಕ್ರವರ್ತಿಯಾದ ವಿಕ್ರಮಸಿಂಹನೆನಿಸಿದ್ದ ಜಯಸಿಂಹಚಕ್ರಿಯು ದಯೆಯಿಂದ ತನ್ನಲ್ಲಿ ಸರ್ವಾಧಿಕಾರವನ್ನು ಕೊಡಲು, ಈತನು ಈ ಭೂಮಿಯಲ್ಲಿ ಉನ್ನತಿಕೆವಡೆದು ಧನ್ಯನಾದನು. ಈ ಚಕ್ರವರ್ತಿಯು ಈ ಕವಿಗೆ ಸರ್ವಾಧಿಕಾರವನ್ನು ಕೊಟ್ಟುದುಮಾತ್ರವಲ್ಲದೆ, "ಮಹಾಬಳಿ" ಎಂಬ ಗ್ರಾಮವನ್ನೂ ಉಂಬಳಿಯಾಗಿ ಕೊಟ್ಟನು. ಈ ಚಾವುಂಡರಾಯನು ತುಂಬಾ ವಿನಯಶಾಲಿ, ದಯಾವಂತ, ಸತ್ಯಸಂಧ, ಧರ್ಮಮೂರ್ತಿ, ಮಾಂತನದದೆಜಿವೆಟ್ಟು ಆಜೀವಿನಕಣಿಯೆನಿಸಿ ಭೂಮಿಯಲ್ಲಿ ಅಚಳಿತವಚನನೆಂಬ ಬಿರುದನ್ನು ತಳೆದಿದ್ದನು. ಇವನಿಗೆ †ಅಚಳಿತವಚನ, ಶಿಷ್ಟಕಲ್ಪದ್ರುಮ, ಕಾವ್ಯವಿಳಾಸಂ, ವಾಗ್ವಧೂಮಂಡನತಿಲಕ, ಧರ್ಮಧರ್ಮಾತ್ಮಜ, ದಾನವಿನೋದ, ವಿಕ್ರಮಲೋತ್ತಮ, ಬುಧಬಂಧು ಮೊದಲಾದ ಬಿರುದುಗಳಿದ್ದುವು. ಈತನು ಹಾಕಿಸಿದ ತೋಪುಗಳೂ, ಕಟ್ಟಿಸಿದ ದೇವಸ್ಥಾನಗಳೂ, ತೋಡಿಸಿದ ಕೆರೆಕಟ್ಟೆ ಭಾವಿಗಳೂ ಅಸಂಖ್ಯಾತವಾಗಿದ್ದುದರಿಂದ ಧರ್ಮಧರ್ಮಾತ್ಮಜನೆಂಬ ಬಿರುದನ್ನು ಸಾರ್ಥಕಗೊಳಿಸಿದ್ದನು, ಮತ್ತು ತನ್ನ ದೇಹವನ್ನು ಚಾರುಚರಿತ್ರದಲ್ಲೂ, ಧನ

*ಇವನ ಕಾವ್ಯಗಳೊಂದೂ ದೊರಕಿಲ್ಲ. ಕರ್ಣಾಟಕ ಪಂಚತಂತ್ರವನ್ನು ಬರೆದ ದುರ್ಗಸಿಂಹನೂ ಕೂಡ ಆ ಗ್ರಂಥದ ಪೀಠಿಕೆಯಲ್ಲಿ ಕವಿತಾವಿಲಾಸನೆಂಬ ಕವಿಯನ್ನು—

ಅನತಿಶಯನೀತಿಮಾರ್ಗನ।  
ನನೂನ ಕವಿತಾವಿಲಾಸನಂ ಭೂತಳದೊಳ್॥  
ಮನುಗಂ ವ್ಯಾಸಂಗಂ ಮಿಗಿ।  
ಲೆನಿಸಿದ ಕವಿತಾವಿಳಾಸನಂ ಪೊಗಳದರಾರ್॥

ಎಂಬ ಕಂದದಲ್ಲಿ ಹೊಗಳಿ, ಇವನನ್ನು ಮನುಗೂ ವ್ಯಾಸಮಹರ್ಷಿಗೂ ಮಿಗಿಲಾದವನೆಂದೂ, ಇವನ ಕವಿತಾವಿಳಾಸವು ಅತಿಶಯವಾಗಿತ್ತೆಂದೂ, ಅತಿಶಯನೀತಿಮಾರ್ಗನೆಂದೂ ತುಂಬಾ ಶ್ಲಾಘಿಸಿದರೂ ಇವನ ಕಾವ್ಯಗಳೊಂದರ ಹೆಸರನ್ನೂ ಹೇಳಿಲ್ಲ, ಇದಕ್ಕೆ ಕಾರಣವು ತಿಳಿಯದು. ಪ್ರಾಯಶಃ ಅವನ ಕಾವ್ಯಗಳು ಹಲವಾರು ಇದ್ದುದರಿಂದ ಹೇಳಲು ಶಕ್ಯವಿಲ್ಲದೆ ಬಿಟ್ಟಿರಬಹುದು.

†ಈ ಬಿರುದುಗಳನ್ನು ತನ್ನ ಗ್ರಂಥದ ಹಲವೆಡೆಗಳಲ್ಲಿ ಪ್ರಯೋಗಿಸಿರುವನು. ಇದನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.



ವನ್ನು *ಇಷ್ಟಾಪೂರ್ತದಲ್ಲಿಯೂ, ಸತ್ಯವನ್ನು ನುಡಿಯಲ್ಲಿಯೂ, ಸಾಹಸವನ್ನು ಸಿಡಿಲಶರ ಚಿತ್ತದಲ್ಲಿಯೂ, ಭಕ್ತಿಯನ್ನು ತಂದೆಯಲ್ಲಿಯೂ, ಮೃಡ (ಈಶ್ವರ) ನನ್ನು ನಿಶ್ಚಳಚಿತ್ತದಲ್ಲಿಯೂ, ವ್ಯಸನವನ್ನು ಸದ್ವರ್ಮದಲ್ಲಿಯೂ ಸಲ್ಲಿಸಿದ ಇವನಂತೆ ಲೋಕದಲ್ಲಿ ಪುಣ್ಯಮಾಡಿದವರು ಯಾರಿರುವರು? ಲೋಕಪ್ರಸಿದ್ಧನಾದ, ವಿಮಲಕೀರ್ತಿವಂತನಾದ ಈತನು ಬುಧಕಲ್ಪವೃಕ್ಷ, ಸುಜನಾಗ್ರಣಿ, ಕಾವ್ಯವಿಳಾಸ, ಪಂಡಿತ ವನಜವನಜಮಾರ್ತಂಡ ಎಂದು ಎಲ್ಲರಿಂದಲೂ ಬಹುಮಾನಿತನಾಗಿದ್ದನು. ಕವಿತಾವಿಳಾಸನ ಮಗನಾದ ಈತನಿಗೆ ಕಾವ್ಯವಿಳಾಸವೆಂಬ ಬಿರುದು ಒಪ್ಪತಕ್ಕುದಾಗಿಯೇ ಇತ್ತು. ಉದಾರಚರಿತನಾದ ಈ ಚಾವುಂಡರಾಯನನ್ನು ತಂದೆಯನ್ನು ಅಜ್ಞಾತ್ರಿದಂತೆ ಇರುವನೆಂದು ಜನಗಳು ಹೊಗಳುತ್ತಿದ್ದರು. ಚದುರು, ವಿವೇಕ, ಸತ್ಯ, ಸೌಂದರತೆ, ಸ್ಥೈರ್ಯ, ದೃಢಜ್ಞಾನ, ಪೆಂಪು, ಉದಾರತ್ವ ಈ ಗುಣಗಳು ಶ್ರೀಶಿಷ್ಟಕಲ್ಪದ್ರುಮನಲ್ಲಿ ನೆಲಸಿದ್ದುವು. ಈತನಿಂದ ರಚಿತವಾಗಿರುವ ಲೋಕೋಪಕಾರ ಗ್ರಂಥವು ಈ ಮೇದಿನಿಯ ಜನರಿಗೆ ಹಲವು ಬಗೆಯಲ್ಲಿ ಉಪಕಾರವಾಗಿರುವುದರಿಂದ ಅನ್ವರ್ಥವನ್ನು ಪಡೆದಿದೆ. ಹಲವು ಲೌಕಿಕಶಾಸ್ತ್ರಗಳನ್ನೊಳಗೊಂಡಿರುವ ಈ ಲೋಕೋಪಕಾರವು ಜಗತ್ತಿಲಕವೆನಿಸಿ, †ರಾಜಪೂಜಿತವೂ ಆಗಿರುವುದು. ಕೇವಲ ಛಂದಸ್ಸನ್ನು ಮಾತ್ರ ಪದಗಳಿಂದ ತುಂಬಿರುವ ಕಾವ್ಯಗಳಿಂದ ಏನು ಪ್ರಯೋಜನ? ಈ ಲೋಕೋಪಕಾರದ ಪ್ರತಿಯೊಂದು ಛಂದಸ್ಸಿ (ಪದ್ಯದ) ನಲ್ಲಿಯೂ ಶಾಸ್ತ್ರಕವಿತ್ವದ ಬೆಡಗು ಶೋಭಿಸುತ್ತಿರುವುದೆಂದು ಸಹೃದಯರೆಲ್ಲರೂ ಶ್ಲಾಘಿಸುವಷ್ಟುಮಟ್ಟಿಗೆ ಉಪಮಾಕೀರ್ತವೂ, ರಸೋಪೇತವೂ ಆಗಿರುವುದೆಂದು ಗ್ರಂಥಪ್ರಶಸ್ತಿಯನ್ನು ಹೇಳಿ, ಗ್ರಂಥದಲ್ಲಿ ಪ್ರತಿಪಾದ್ಯ ವಿಷಯ ವಿಭಾಗವನ್ನು ಹೇಳಿ, ಗ್ರಂಥದ ಕೊನೆಯಲ್ಲಿಯೂ ಇದೇ ವಿಷಯವನ್ನು ಮತ್ತೆ ಹೇಳಿರುವನು.

## ಕವಿಯ ಕಾಲ

ಇದು " ಮುನಿವೇದಾಂಕ "‡

........................

ಎಂಬ ಪದ್ಯದಲ್ಲಿ ಗ್ರಂಥದ ಕಾಲವನ್ನು ಗ್ರಂಥಕರ್ತೃವೇ ಹೇಳಿರುವುದರಿಂದ ಇದರ ಕಾಲನಿರ್ಣಯಕ್ಕೆ ಮತ್ತಾವ ಪ್ರಮಾಣವೂ ಆವಶ್ಯಕವಿಲ್ಲ. ಮುನಿ–೭, ವೇದ–೪, ಅಂಕ–೯, "ಅಂಕಾನಾಂ

*ಇಷ್ಟ–ಯಜ್ಞಗಳು, ಪೂರ್ತ–ಕೆರೆ ಬಾವಿ ಮೊದಲಾದುವನ್ನು ತೋಡಿಸುವುದು.

†ಈ ಗ್ರಂಥದಲ್ಲಿ ರಾಜರಿಗೆ ಮಾತ್ರವೇ ಸಂಬಂಧಿಸಿದ ಹಲವು ವಿಷಯಗಳನ್ನು ಹೇಳಿರುವನು. ಸೈನ್ಯಾಂಗವಾದ ಆನೆ, ಕುದುರೆಯ ಲಕ್ಷಣರೋಗನಿವಾರಣಗಳನ್ನೂ, ಗೋಭೂಕನಕಾದಿ ಹಲವು ದಾನಧರ್ಮ ಮುಖ್ಯಗಳನ್ನೂ ಹೇಳಿರುವುದರಿಂದ ಕವಿಯು ಸಾಮಾನ್ಯಜನರಿಗೆ ಮಾತ್ರವೇ ಅಲ್ಲದೆ ರಾಜರಿಗೂ ಈ ಗ್ರಂಥವು ಉಪಕಾರವಾಗಿರುವುದು ಎಂಬುದನ್ನು ಈ ರಾಜಪೂಜಿತ ಪದದಿಂದ ಸೂಚಿಸಿರುವನು.

‡ಈ ಲೋಕೋಪಕಾರ ಗ್ರಂಥ ವಿಷಯದಲ್ಲಿ ಪ್ರಬುದ್ಧಕರ್ಣಾಟಕದ ಸಂಪುಟದಲ್ಲಿ ಒಂದು ಉಪನ್ಯಾಸವನ್ನು ಬರೆದಿರುವ ಶ್ರೀಮಾನ್ ಅನಂತರಂಗಾಚಾರ್ಯ, ಎಂ.ಎ., ಅವರು "ಮುನಿನೇಪಾಂತ" ಎಂದು ಮುದ್ರಿಸಿ, ಅಂತ ಶಬ್ದಕ್ಕೆ ಒಂಭತ್ತು ಎಂದು ನಿರ್ದೇಶಿಸಿರುವರು. ಸಂಖ್ಯೆಯಲ್ಲಿ ಕೊನೆಯದು ಎಂಬುದು ಅವರ ಭಾವವಿರಬಹುದು. ಕೊನೆಯದು ಹತ್ತಾಗುವುದೇ ಹೊರತು, ಒಂಭತ್ತಾಗುವುದಿಲ್ಲ. ಅಂಕ ಶಬ್ದಕ್ಕೆ ಒಂಭತ್ತು ಎಂಬ ಸಂಖ್ಯಾಸೂಚಕತ್ವವಿದೆಯೆಂದು – ಸಂಖ್ಯಾರತ್ನಕೋಶದಲ್ಲಿ ಹೇಳಿದೆ—"ಅಂಕ-ಏಕತ್ವಬೋಧಕತ್ವಂ ಚೈವ... ನವತ್ವಬೋಧಕಶ್ಚೇತಿ ನವಧಾಪರಿಕೀರ್ತಿತಃ" (ಸೂರ್ಯಸಿದ್ಧಾಂತೇ) (ಸಂಖ್ಯಾರತ್ನಕೋಶಂ, ನಂ. A. 477, ಮೈಸೂರು ಸರ್ಕಾರಿ ಲೈಬ್ರರಿ ಪ್ರತಿ). ಅಂಕದ ಎಣಿಕೆಯ ಗುರ್ತು ೯ ಮಾತ್ರವಿದೆ, ಮುಂದೆ ಹತ್ತಕ್ಕೆ ಚಿಹ್ನೆಯಿಲ್ಲ, ಆದುದರಿಂದ ಅಂಕ ಎಂಬುದರಿಂದ ಒಂಭತ್ತು ಸೂಚಿತವಾಗುವುದೆನ್ನುವುದರಲ್ಲಿ ಔಚಿತ್ಯವುಂಟು. ಈ ಕವಿಯೇ ಈ ಗ್ರಂಥದಲ್ಲಿ (ಸ. ೭) ರಲ್ಲಿ "ತತ್ಕೋಲಮನಂಕ ಮೃಗಾಂಕ ವಹ್ನಿ" ಎಂಬಲ್ಲಿ ಅಂಕ ಶಬ್ದವನ್ನು (ಒಂಬತ್ತುಭಾಗೆ) ಒಂಬತ್ತು ಎಂಬ ಸಂಖ್ಯಾವಾಚಕವಾಗಿ ಪ್ರಯೋಗಿಸಿರುವನು.

ವಾಮತೋ ಗತಿಃ" ಎಂಬ ನ್ಯಾಯದಂತೆ ಈ ಅಂಕೆಗಳನ್ನು ವಿಲೋಮವಾಗಿ ಸೇರಿಸಿದರೆ ೯೪೭ ಶಕ ವರ್ಷದ (947 + 78 = 1025 ಕ್ರಿ.ಶ.) ಕ್ರೋಧನ ಸಂವತ್ಸರ ಮಾರ್ಗಶಿರ ಮಾಸದ ಸಿತಪಕ್ಷದ ಬಿದಿಗೆ ಗುರುವಾರ ಪುಷ್ಯನಕ್ಷತ್ರದಲ್ಲಿ ಈ ಗ್ರಂಥವು ಮುಗಿಯಿತೆಂದು ಹೇಳುವುದರಿಂದ ಈ ಕವಿಯ ಕಾಲವು ಶಕ 947, ಕ್ರಿ.ಶ. 1025 ಎಂದು ನಿರ್ಧರವಾಗಿ ಹೇಳಬಹುದು. ಇದನ್ನು ಈ ಕವಿಗೆ ಪೋಷಕನಾದ ಚಾಳುಕ್ಯ ಜಯಸಿಂಹನ *ಶಾಸನಗಳ ಆಧಾರದಿಂದ ತಿಳಿದುಬರುವ (1020-1045) ಎಂಬಕಾಲವೂ ಸಮರ್ಥಿಸುವುದರಿಂದ ಕವಿಯ ಕಾಲವು ಕ್ರಿ. ಶ. 1025 ಎಂಬ ವಿಚಾರದಲ್ಲಿ ಯಾವ ಸಂಶಯವೂ ಇಲ್ಲ.

ಶಿಕಾರಿಪುರದ ೧೫೧ನೆ ಶಾಸನದಲ್ಲಿ ಒಬ್ಬ (ಶ. 151 = ಕ್ರಿ.ಶ. 1047) ಚಾವುಂಡರಾಯ ಮಂಡಳಿಕನ ಪ್ರಶಸ್ತಿಯಿದೆ. ಈತನು ಚಾಳುಕ್ಯಾಭರಣಂ †ತ್ರಿಭುವನ ಮಲ್ಲದೇವನ ಪೋಷ್ಯ ವರ್ಗಕ್ಕೆ ಸೇರಿದವನು. ಸರಸಿಜೋದ್ಭವ ವಂಶದ ವತ್ಸಗೋತ್ರದ ಕಮ್ಮೆಕುಲದವನು. ತ್ರಿಭುವನ ಮಲ್ಲನ ಸರ್ವದೇವ ದಂಡಾಧಿಪನ ಮಗ ಚಾವುಂಡರಾಯ (ಹೆಂಡಿತಿ ಕೆಳೆಯಬ್ಬೆ), ಅವನ ಮಗ ನಾಗವರ್ಮ್ಮ (ಹೆಂಡಿತಿ ನಾಗಿಯಕ್ಕ), ಅವನ ಮಕ್ಕಳು ನಾಗವರ್ಮ ಮತ್ತು ಚಾವುಂಡರಾಯ. ಕವಿಯ ಸಮಕಾಲಿಕನಾದ ಈ ಚಾವುಂಡರಾಯನು ಸರಸಿಜಗರ್ಭ ವಂಶ್ಯದ ಕಾಶ್ಯಪಗೋತ್ರದ ಕನ್ನಡಿಗನಾದ ಚಾತುರಕುಲದ ಪಂಗೌಂಡಭಟ್ಟನ ಮಗನಾದ ಈ ಕವಿಗಿಂತ ಭಿನ್ನನು.

ಈ ಅತ್ಯುತ್ತಮವಾದ ಗ್ರಂಥದ ಮುದ್ರಣಕ್ಕೆ ಉದಾರಭಾವದಿಂದ ದ್ರವ್ಯಸಹಾಯ ಮಾಡಿದ ಮದ್ರಾಸ್ ಗವರ್ನಮೆಂಟಿಗೂ, ಇದನ್ನು ಮುದ್ರಿಸಲು ಪ್ರೋತ್ಸಾಹವಿತ್ತ ಮದ್ರಾಸ್ ಗವರ್ನಮೆಂಟ್ ಓರಿಯೆಂಟಲ್ ಲೈಬ್ರರಿ ಕ್ಯೂರೇಟರಿಗೂ ನನ್ನ ಕೃತಜ್ಞತೆಯನ್ನು ಸೂಚಿಸಿ ಪ್ರಕೃತೋಪನ್ಯಾಸವನ್ನು ಕೊನೆಮುಟ್ಟಿಸಿರುವೆನು.

ಸಂಪಾದಕ,

**ಹೆಚ್. ಶೇಷಯ್ಯಂಗಾರ್,**

ರಿಟೈರ್ಡ್ ಕನ್ನಡ ಲೆಕ್ಚರರ್, ರಿಸರ್ಚ್ ಇನ್ಸ್ಟಿಟ್ಯೂಟ್,

ಮದ್ರಾಸ್ ಯೂನಿವರ್ಸಿಟಿ.



*ಶಿಕಾರಿಪುರ 177 (ಶ. 950 – ಕ್ರಿ.ಶ. 1028).

†ಈತನೇ ಶಿಕಾರಿಪುರದ 151 (ಶಕ 969 – ಕ್ರಿ.ಶ. 1047) ಶಾಸನದಲ್ಲೂ, 150ನೆಯ (ಶ. 968 – ಕ್ರಿ.ಶ. 1056) ವೀರಗಲ್ಲಿನಲ್ಲೂ ಹಲವು ಬಿರುದುಗಳಿಂದ—"...ಜಗದೇಕದಾನಿ ಶ್ರೀಮನ್ಮಹಾಮಂಡಳೇಶ್ವರಂ ಬನವಾಸೆ ಪನ್ನಿಚ್ಛಾಸಿರಮುಂ ಹೈವೆಯುಯ್ಯೂಜುಮುಂ ಪಶ್ಚಿಮ ಸಮುದ್ರಪರ್ಯಂತವಾಳುತ್ತಿರೆ" – ಎಂದು ಹೊಗಳಲ್ಪಟ್ಟಿರುವನು.

# ವಿಷಯ ಸೂಚಿ

## ಸಪ್ತಮಾಧಿಕಾರಂ

೭. ಗಂಧಯುಕ್ತಿಕ್ರಮಂ—

(ಪರಿಮಳಗಂಧವಿಧಿ)



## ಅಷ್ಟಮಾಧಿಕಾರಂ

೮. ಸೂಪಶಾಸ್ತ್ರಂ—







## ನವಮಾಧಿಕಾರಂ

೯. ನರಾದಿವೈದ್ಯಪ್ರಕರಣಂ—

(೧. ನರವೈದ್ಯಂ)

## ದಶಮಾಧಿಕಾರಂ

---

# ಶುದ್ಧಿಪತ್ರಿಕೆ

| ಪುಟ | ಪಂಙ್ತಿ | ಅಶುದ್ಧ | ಶುದ್ಧ |
|---|---|---|---|
| 3 | 19 | ತ್ರಮನೆಗೆ | ತ್ತುಮನೆನೆ |
| 7 | 1 | ಪಾಶ್ವ | ಪಾರ್ಶ್ವ |
| 20 | 1 | ಕುದುರಿ | ಕುದಿರೆ |
| 56 | 6 | ಪುಟ್ಟರಿ | ಪುಟ್ಟೆರಿ |
| ,, | 10 | ಷಾಡೊಳೆಂ | ಷಾಢದೊಳೆಂ |
| 68 | 7 | ಪೆಸರ್ವಮಕ್ಕು | ಪೆರ್ವಸಮಕ್ಕು |
| 71 | 28 | ಗಣರ್ | ಗಾಣರ್ |
| 72 | 7 | ಜ್ವರಂ | ಜ್ವರಮುಂ |
| ,, | 8 | ಪಾವನ | ಪಾವಕ |
| 97 | 4 | ಪದ್ಯ ಸಂಖ್ಯೆ ೪೨ | ೪೩ ಎಂದಿರಬೇಕು — ಇಲ್ಲಿಂದ ಮುಂದೆ ಅಧಿಕಾರ್ಯಾಂತದ ವರೆಗೂ ಒಂದೊಂದು ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬೇಕು. |
| 98 | 4 | ಯಲರಲ್ಹಾದ | ಯಲರಾಹ್ಲಾದ |
| 99 | 2 | ಊದೊಡ | ಊದೊಡ |
| 110 | 6 | ಮಯುರುಹಂ | ಮಲಯರುಹಂ |
| 117 | 7 | ಪೂತಿಕರುಷ | ಪೂತಿಕರಜ |
| 131 | 14 | ಕಲದೊಳ | ಕಲನೊಳ |
| 151 | 15 | ಆಉನೇಉ | ಉನ್ನೇಉ |
| 176 | 4 | ಜ್ವರಮುಸ್ತ್ರ | ಜ್ವರಶಸ್ತ್ರ |
| ,, | 7 | ಬೋಟಿಕೋತ್ತ್ರರಸಂ ‖ ಸೆಗುಡಿತೆಯಾಡಿನ | *ಬೋಟಿಕೋತ್ತರ ಸೇ ‖ ಗುಡಿತೆಯನಾಡಿನ |
| ,, | 13 | ಸಂದುಗಗುಳುಳಿದೊಡೆ | ಸಂದುಗಳುಳಿದೊಡೆ |
| 179 | 9 | ತಿಂನೆ | ತಿಂಗೆ |
| 180 | 10 | ಅರಿಸನ | ಅರಿಸಿನ |
| 184 | 19 | ಪದ್ಯ ಸಂಖ್ಯೆ ೧೭೮ | ೧೯೮ ಎಂದಿರಬೇಕು — ಇಲ್ಲಿಂದ ಮುಂದೆ ಅಧಿಕಾರಾಂತ್ಯದ ವರೆಗೂ ಇಪ್ಪತ್ತಿಪ್ಪತ್ತು ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬೇಕು. |
| 187 | 6 | ದಕ್ಕಾಲಿ | ದರ್ಕಾಲಿ |
| 207 | 4 | ಪದ್ಯ ಸಂಖ್ಯೆ ೨೫ | ಪದ್ಯ ಸಂಖ್ಯೆ ೨೪ |

*ಇಲ್ಲಿ ಪ್ರಾಸವು ಕೆಟ್ಟಿರುವುದರಿಂದ ಪಾಠವನ್ನು ಈ ರೀತಿ ಮಾರ್ಪಡಿಸಿಕೊಳ್ಳಬೇಕು.

| ಪುಟ | ಪಂಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 216 | 20 | ತ್ರಂಗೋದ | ತ್ತುಂಗೋದ |
| 217 | 11 | ಮುಯ್ಯ್ಯಂ | ಮುಯ್ಯುಂ |
| 230 | 12 | ತದ್ಗಂದ | ತದ್ಗಂಧ |
| 240 | 3 | ಮುಳುರ್ಕು | ಮುಳುರ್ಕೆ |
| 241 | 16 | ದನ್ನಿಚ್ಛಾಯೆ | ದಗ್ನಿಚ್ಛಾಯೆ |
| 242 | 1 | ಶೊಟಗಾ | ಕೊಟಗಾ |
| 243 | 12 | ಹಂಡಾ | ಹುಂಡಾ |
| ,, | 15 | ಭಾಗ | ಛಾಗ |
| 244 | 18 | ಗೊಳ್ವಂ | ಗೊಳ್ಪಂ |
| 250 | 5 | ತಿರ್ದಲಿಕೆ | ತಿರ್ದಲ್ಕೆ |
| 252 | 17 | ದಸುಂಬಂ | ಪಸುಂಬಂ |
| 253 | 2 | ಪೂದಗೆ | ಪೋದಗೆ |
| 260 | 6 | ವರ್ಟಿಲ | ವರ್ಟಲಿ |

---



॥ ಶ್ರೀಃ ॥

# ಲೋಕೋಪಕಾರಂ

(ಚಾವುಂಡರಾಯ ವಿರಚಿತಂ)

---

## ಪ್ರಥಮಾಧಿಕಾರಂ

### ೧. ಪಂಚಾಂಗಫಲವರ್ಣನಂ

#### ಪೀಠಿಕೆ

ಕಂ॥[1]ಶ್ರೀಪತಿಯುಂ ಸಕಲವಚ |
ಶ್ರೀಪತಿಯುಮುಮಾಪತಿಯುಮೆಮಗಮಾದರದಿಂ ||
ಶ್ರೀಪದಮಂ ಸಕಳವಚ |
ಶ್ರೀಪದಮಂ ಪರಮಪದಮ[2]ನೀಗಭಿವಂದ್ಯರ್ ॥ ೧ ॥

*ನತಭುವನತ್ರಯನೀಶ್ವರ |
ಸುತನವಿರಳದಾನನಧಿಕಸಿದ್ಧಿನಿಧಾನಂ ||
ಧೃತಪರಶು ಗಣಪನಸ್ಮ |
[3]ತ್ಕೃತಿಯಂ ಕೆಯ್ಕೊಂಡು ಮಾಳ್ಕೆ ನಿರ್ವಿಘ್ನತೆಯಂ ॥ ೨ ॥

ಸುಕವಿಸ್ತುತೆ ಲೌಕಿಕವೈ |
ದಿಕ ವಿವಿಧಾನೇಕಶಾಸ್ತ್ರಸನ್ಮೂರ್ತಿ ಜಗ ||
ತ್ಪ್ರಕಟಿತಸತ್ಕೀರ್ತಿ ಗುಣಾ |
ಧಿಕೆ [4]ವಾಗ್ವಧು ನೆಲಸುಗೆಮ್ಮ ಮುಖಸರಸಿಜದೊಳ್ ॥ ೩ ॥

ಅನುಪಮಗುಣಿಗಳ್ [5]ವಿದ್ವ |
ಜ್ಜನರ್ ಶ್ರುತಿಪುರಾಣಶಾಸ್ತ್ರವಿದ[6]ರೆನಿಪ ಪುರಾ ||
ತನ ಕವಿಗಳ ಕಾವ್ಯನಿಬಂ |
ಧನದೋಜೆ [ಯ ನಿಖಿಳ] ಸಾರಮೆಸೆದಿರೆ ಧರೆಯೊಳ್ ॥ ೪ ॥

---

1 ಶ್ರೀಪತಿಯು ಮುಮಾಪತಿ ವಾ। ಣೀಪತಿಯುರ್ (ರು) ಮೂವರೊಲಿದು ನಮಗಾದರದಿಂ ॥ ಚಾಪಳಮೆನಿಸುವ (ಮ) ಮತಿಗಳ। ಶ್ರೀಪದಮಂ ಪರಮಪದಮನೀಗಭಿವಂದ್ಯರ್ ॥ ೧ ॥ (ಪಾಠಾಂ) —ಈ ಕಂದವು ಇಷ್ಟು ಮಾರ್ಪಟ್ಟಿರುವುದಕ್ಕೆ ಕಾರಣವು ತಿಳಿಯುವುದಿಲ್ಲ. ಈ ಪಾಠದಲ್ಲಿ ಹೊಸಗನ್ನಡ ಪ್ರಯೋಗಗಳೂ, ಅನನ್ವಿತತ್ವವೂ ಉಂಟು. ಪ್ರಾಯಶಃ ಈ ಪದ್ಯವು ಓಲೆಯ ಪ್ರತಿಗಳಲ್ಲಿ ತ್ರುಟಿತವಾಗಿದ್ದು ಲೇಖಕರಿಂದ ವಿರಚಿತವಾಗಿ ಸೇರಿಸಲ್ಪಟ್ಟಿರಬಹುದು. 2 ನೆಮಗಭಿವಂದ್ಯಂ. 3 ನ್ನ. 4 ವಾಗ್ಸಂಪಂ. 5 ಜ್ಞನಪಾರಾ. 6 ನೆನಿಪ ಪುರಾತನ ನೂತನ ...ದೋಜೆ ಸಾರ.

* ೨ನೆಯ ಪದ್ಯವು ಒಂದು ಪ್ರತಿಯಲ್ಲಿಲ್ಲ.

ಚಂ|| ಸರಸಿಜಗರ್ಭ[1]ವಂಶ್ಯರೊಳಗಗ್ಗಳಕಾಶ್ಯಪಗೋತ್ರದೊಳ್ ಸದಾ |
ಚರಿತರೆನಿಪ್ಪ ಕನ್ನಡಿಗರೊಳ್ ಕುಲನಾಮದಿನೊಪ್ಪುವೆತ್ತ ಚಾ ||
ತುರದೊಳತಿಪ್ರಸಿದ್ಧನೆನೆ ಸಂದನನಿಂದ್ಯಗುಣಾನ್ವಿತಂ ಸದಾ |
ವರನೆನೆ ಸರ್ವಶಾಸ್ತ್ರಕುಶಲಂ ಮುದುಗಲ್ಲೊಳುದಾತ್ತಕೀರ್ತಿಯಿಂ || ೫ ||*

ಕಂ|| ಅಪರಿಮಿತದಾನಿ ಚಾಳು |
ಕ್ಯಪಾಳಿತಂ ಚಾತುರಾನ್ವಯಂ ಕಾಶ್ಯಪಗೋ ||
ತ್ರಪವಿತ್ರಂ ಪಂಗೌಂಡ ಭ |
ಟಪಾರ್ಯ[2] [ನೊಪ್ಪದಿನೆಸೆಪ್ಪ] ನಷ್ಟೈಶ್ವರ್ಯಂ || ೬ ||

ಶಂಕರಭಟ್ಟತನೂಜಂ |
ಶಂಕರಪದಪದ್ಮಮಧುಕರಂ ಬುಧಜನತಾ ||
ಶಂಕರನೆನಿಸಿದ ವಿಶದಯ |
ಶಂ ಕರಮಿಳೆಗೆಸೆಯೆ ನೆಗಟ್ದನಚಳಿತವಚನಂ || ೭ ||

ತೆವಱೆಲ್ಲಂ ಮಾಣಿಕಮಾ |
ದುವು ಕುಟಿಗಳ್ ಬಹುತಟಾಕಮಾದುವು ಜಗದೊಳ್ ||
ಕವಿಕಲ್ಪವೃಕ್ಷವಿಭುವಿಂ |
ದವೆಂದೊಡುೞಿ ಧರ್ಮದಳವನೇವಣ್ಣಿಪುದೋ || ೮ ||

ಎನೆ ನೆಗಟ್ದ ವಿಪ್ರಮುಖ್ಯನ |
ತನಯಂ ಸಾಹಿತ್ಯಸರ್ವಕುಶಲಂ ವಿದ್ವ ||
ಜ್ಜನರತ್ನನಿಧಿ[3]ಕವಿದ್ಯಾ |
ಜನದೊಳಗಭಿಮಾನಿ ದಾನಿ ಮನುಮುನಿಜನಚರಿತಂ || ೯ ||

ಮಸೃಣಪದರಚನೆಯಿಂ ನವ |
ರಸಪರಿಪೂರ್ಣತೆಯಿನತಿಶಯೋಕ್ತಿಯಿನರ್ಥ ||
ಪ್ರಸರತೆಯಿಂ ಜಗಮಂ ಮಱು |
ದ್ರಿಸಿದುವು ಕವಿತಾವಿಳಾಸ ವಿರಚಿತಕೃತಿಗಳ್ || ೧೦ ||

ಉ|| ಸಂತತಮೊಳ್ಪು ಶೌಚಗುಣಮಸ್ಖಲಿತಂ ನುಡಿ [4]ನನ್ನಿ ದಾನಮು |
ಶ್ರಾಂತಮನಿಂದ್ಯಮಾತ್ಮಚರಿತಂ ಕ್ಷಮೆ ಭೂರಿ ದಗುಂತಿ ಪೆಂಪು ಚೈ ||
ರಂತನಮಾರ್ಗದೋಜೆ ಚತುರಾನ್ವಿತಮೆಂಬ ನೆಗೞ್ತೆಯಿಂದಿಳಾ |
ವಂತರೊಳಾರುಮೇಂ ದೊರೆಗೆವರ್ಪರೆ ಪೋಲಿಸೆ ಭಟ್ಟಪಾರ್ಯನೊಳ್ || ೧೧ ||

1 ವಂಶಗರ್ಭ, ವಂಶಜಾತ. 2 ನಷ್ಟೈಶ್ವರ್ಯಂಗಮೈಶ್ವರ್ಯಮಂ. 3 ಕವಿದ್ಯಾ, ರತ್ನನಿಧಿಕವಿತಾ. 4 ಭೂರಿ.

* ಈ ೫ನೆಯ ಪದ್ಯವು ಒಂದು ಪ್ರತಿಯಲ್ಲಿಲ್ಲ.



ಕಂ|| ಎನೆ ನೆಗಟ್ದ ಭಟ್ಟಪಂಗಂ |
ವಿನುತಗು[1]ಣಾಯುಕ್ತೆ ಮಲ್ಲಿಕಬ್ಬೆಗಮಾದಂ ||
ತನಯಂ ದ್ವಿಜವಂಶೋತ್ತಮ |
ನೆನಿಸಿದ ಚಾವುಂಡರಾಯನೂರ್ಜಿತತೇಜಂ || ೧೨ ||

*ಮ|| ಸಮದಾರಾತಿನರೇಂದ್ರಗಂಧಗಜಕುಂಭಾಸ್ಫಾಳನಾಭೀಳವಿ |
ಕ್ರಮಸಿಂಹಂ ಜಯಸಿಂಹ ಚಕ್ರಿ ದಯೆಯಿಂ ಕೈಯ್ಕೊಂಡು ಸರ್ವಾಧಿಕಾ ||
ರಮನಿತ್ತಲ್ಕಱೊಳೆಯ್ದೆ ಮಚ್ಚಿ ಪೊರೆದಂ ತಾನೆಂದೊಡಾರಯ್ದು ನೋ |
ಡೆ ಮಹೀಭಾಗದೊಳುನ್ನತಿಕ್ಕೆವಡೆದಂ ಚಾವುಂಡನೇಂ ಧನ್ಯನೋ || ೧೩ ||

ಕಂ|| ಸಕಳೋರ್ವೀಪತಿ ಚಾಳು |
ಕ್ಯಕುಳಾಂಬರತಿಗ್ಮರೋಚಿ ಜಯಸಿಂಹಂ ಕೂ ||
ರ್ತು ಕುಡೆ ಮಹಾಬಳಿಯ ಗ್ರಾ |
ಹಕತನಮಂ ಪಡೆದನಭಿನುತಂ ಚಾವುಂಡಂ || ೧೪ ||

ವಿನಯದ ಕಣಿ ದಯೆಯ ತವ |
ರ್ಮನೆ ಸತ್ಯದ ಬಿಟ್ಟು ಧರ್ಮದೊಂದಾಣ್ಮನೆ ಮಾಂ ||
ತನದೆಱೆವೆಟ್ಟುಱಿವಿನ ಕಣಿ |
ಯೆನೆ ಪೆಂಪಂ ತಳೆದನಿಳೆಯೊಳಚಳಿತವಚನಂ || ೧೫ ||

ಮ|| ಸ್ರ|| ಅವನೀಚಕ್ರಂ ಪೊಗಳ್ವಂತೊಂಡಚಳಿತವಚನಂ ಶಿಷ್ಟಕಲ್ಪದ್ರುಮಂ ಕಾ |
ವ್ಯವಿಳಾಸಂ ವಾಗ್ವಧೂಮಂಡನಮುಖತಿಲಕಂ ಧರ್ಮಧರ್ಮಾತ್ಮಜಂ ದಾ ||
ನವಿನೋದಂ ವಿಪ್ರಲೋಕೋತ್ತಮನೆನೆ ನೆಗಟ್ದಂ ಹಾರ[ನೀಹಾರ] ದುಗ್ಧಾ |
ರ್ಣವಪೂರ್ಣೇಂದುಪ್ರಭಾಭಾಸುರವಿಶದಯಶೋ[2]ವ್ಯಾಪ್ತಿ ಚಾವುಂಡರಾಯಂ || ೧೬ ||

ಕಂ|| ಅಸವಳ[3] [ಮಾರಾಮಂ] ಮಾ |
ಡಿಸಿದ ಸಮುತ್ತುಂಗದೇವತಾಭವನಂ ಕ ||
ಟ್ಟಿಸಿದ ಕೆಱೆವಾವಿಗಳ್ ರಂ |
ಜಿಸಿದುವು ಜಗದೊಳಗೆ ಧರ್ಮಧರ್ಮಾತ್ಮಜನಾ || ೧೭ ||

ಮ|| ಒಡಲಂ ಚಾರುಚರಿತ್ರದೊಳ್ ಧನಮನಿಷ್ಟಾಪೂರ್ತದೊಳ್ ಸತ್ಯಮಂ |
ನುಡಿಯೊಳ್ ಸಾಹಸಮಂ ನಿಜೇಶಹಿತದೊಳ್ ಸದ್ಭಕ್ತಿಯಂ ತಂದೆಯೊಳ್ ||
ಮೃಡನಂ ನಿಶ್ಚಳಚಿತ್ತದೊಳ್ ಬೆಸನಮಂ ಸದ್ಧರ್ಮದೊಳ್ ತಾಳ್ದಿದಂ |
ಗಡಮೆಂದಂದು ಜಗಕ್ಕೆ ನೋಂತವರದಾರ್ ಚಾವುಂಡರಾಯಂಬರಂ || ೧೮ ||

ಕಂ|| ಭುವನವಿನೂತಂ ಬುಧಕ |
ಲ್ಪವೃಕ್ಷನವದಾತಕೀರ್ತಿ ಸುಜನಾಗ್ರಣಿ ಕಾ ||
ವ್ಯವಿಳಾಸಂ ಪಂಡಿತನಿವ |
ಹವನಜ ಮಾರ್ತಂಡನಭಿನುತಂ ಚಾವುಂಡಂ || ೧೯ ||

1 ಣಾಯುಕ್ತೆ. 2 ವ್ಯಾಪಿ, ವ್ಯಾಪ್ತಿ. 3 ಸುತ್ತೆತ್ತಂ?

* ಈ ೧೩ ರಿಂದ ೧೯ರ ವರೆಗಣ ಪದ್ಯಗಳು ಒಂದು ಪ್ರತಿಯಲ್ಲಿ ಗ್ರಂಥಾಂತ್ಯದಲ್ಲಿವೆ.

ಕಂ|| ಕವಿತಾವಿಳಾಸತನಯಂ |
ಕವಿ ಕಾವ್ಯವಿಳಾಸನೆಂಬುದಿದು ತಕ್ಕುದು ಸ ||
ತ್ಕವಿತಾ ಗುಣದೊಳ್ ಭಟ್ಟಂ |
ಗೆ ವುಟ್ಟ ಚಾವುಂಡನೋಜನೆಂಬುದಿದು ಚೋದ್ಯಂ || ೨೦ ||

ಉ|| ಪಂಡಿತಪುಂಡರೀಕವನಚಂಡಕರಂ ಧೃತಸದ್ಗುಣಾವನೀ |
ಮಂಡನನಿಂದುನಿರ್ಮಳಯಶೋಲಲಿತಂ ಪುರುಷಾರ್ಥಮಾಲತೀ ||
ಮಂಡನನತ್ಯುದಾರಚರಿತಂ ನೆಗಟ್ದಂ ಜಗತೀತಳಕ್ಕೆ ಚಾ |
ವುಂಡನುದಾರಶೀಲನಿಧಿ ತಂದೆಯನಚ್ಚಿನೊಳೊತ್ತಿದಂದದಿಂ || ೨೧ ||

ಮ|| ಚದುರಿಂ ನಾಂಟೆ ವಿವೇಕದಿಂ ನಡಪಿ ಬಿಣ್ಪಿಂ ಕೂಡೆ ಬೇರೂಱೆ ಸ |
ತ್ಯದೊಳತ್ಯುನ್ನತಮಾಗಿ ಸೌಂದರತೆಯಿಂ ಕಣ್ಗೊಪ್ಪಿ ಸ್ವೈಪಿಂ ಕವ ||
ಲ್ತು ದೃಢಜ್ಞಾನದಿನೆಯ್ದೆ ಪಲ್ಲವಿಸಿ ಪೆಂಪಿಂ ಪೂತುದಾರತ್ವಸಂ |
ಪದದಿಂದಂ ಫಲಮಾಯ್ತು ಸರ್ವಜನಕಂ ಶ್ರೀಶಿಷ್ಟಕಲ್ಪದ್ರುಮಂ || ೨೨ ||

ಕಂ|| ಮೇದಿನಿಯುಪಕಾರಂ ಕಳಿ |
ಪೋದುಂಗಳೆನಿತೊಳವವಿಲ್ಲಿ ನೆಲಸಿರ್ದು ಬುಧೋ ||
ಪಾದೇಯಮಾದ ದೂಸಱ |
ನಾದುದೊ ಲೋಕೋಪಕಾರಮೇನನ್ವರ್ಥಂ || ೨೩ ||

ಮ|| ಪಲವುಂ ಲೌಕಿಕಶಾಸ್ತ್ರಮುಳ್ಳುದಱನೀ ಲೋಕೋಪಕಾರಂ ಜಗ |
ತ್ತಿಲಕಂ ರಾಜಸಮಾಜಪೂಜಿತಮಿದಂ ತಾತ್ಪರ್ಯದಿಂದಂ ಸ್ವಗೋ ||
ತ್ರಲಲಾಮಂ ಕವಿತಾವಿಳಾಸತನುಜಾತಂ ಪೇೞ್ದನೆಂದಂದು ಕೇ |
ವಲಮಲ್ತಲ್ತಿದು "ಪೊನ್ಗೆ ಕಂಪು ದೊರೆಕೊಂಡಂ"ತಾದುದೇಂ ಸಾರಮೋ || ೨೪ ||

ಛಂದಃ ಪೂರಣ[1]ಮಾತ್ರದೋದುಗಳೊಳೀ ಲೋಕೋಪಕಾರಂ ಪ್ರತಿ |
ಚ್ಛಂದಂ ಶಾಸ್ತ್ರಕವಿತ್ವದೋಜೆಗೆ ಮತಂ [2]ತದ್ಜ್ಞರ್ ಮನಂಗೊಳ್ವರೆಂ ||
ದೆಂದುಂ ಕಾವ್ಯಕವಿತ್ವಮೆಂತುಮುಪಮಾತೀತಂ ರಸೋಪೇತಮೆಂ |
ದೆಂದುಂ ಕಾವ್ಯವಿಳಾಸವಾಗ್ವಿಭವಮಂ ಬಣ್ಣಿಪ್ಪನೇವಣ್ಣಿಪಂ || ೨೫ ||

ಪಿರಿಯಕ್ಕರಂ|| ತರದಿಂ ಪಂಚಾಂಗನಿರ್ಣಯಂ ನವಪಟಲಸ್ಥಿತಿ ವಾಸ್ತು ವುತ್ಪಾತಶಾಂತಿ |
ವರಜಲಾರ್ಗಳಂ ವೃಕ್ಷಾಯು[3]ರ್ವೇದಂ ಸುಗಂಧಯುಕ್ತಿಕ್ರಮಂ ಸೂಪಶಾಸ್ತ್ರಂ ||
ನರಗಜಾಶ್ವ ಗೋವೈದ್ಯಮುಂ ವಿಷತತ್ವಂ ಲಕ್ಷಣಂ ಶಕುನಮೆಂಬಧಿಕಾರಂಗಳ್ |
ಧರೆಯೆ ಬಣ್ಣಿಸೆ ಲೋಕೋಪಕಾರಮಂ ಕಾವ್ಯವಿಳಾಸನಿಂಬಾಗಿ ಪೇೞ್ದಂ || ೨೬ ||

(ಇಂತು ಪೀಠಿಕೆ)

---

1 [ದತ್ತಣಿಂ ಬಗೆವೊಡೀ]. 2 ತತ್ತ್ವಜ್ಞ. 3 ವೇದೋಕ್ತಗಂಧ.



ಗ್ರಂಥಾರಂಭಂ

ಕಂ|| *ನಾನಾವಿಧಕಾರ್ಯಂಗಳೊ |
ಳೇನಾದೊಡಮಿಂದುವೆ ಮುಖ್ಯಮಾಗಿರ್ಪುದಱಂ ||
ದಾನವವಿನೂತಂ ಜ್ಯೋತಿ |
ರ್ಜ್ಞಾನವಿಧಾನಮನೆ ಮೊದಲೊಳಭಿವರ್ಣಿಸುವೆಂ || ೧ ||

(ತಿಥಿಗಳ ಸಂಜ್ಞಾನಾಮಂಗಳ್)

ಕಂ|| ಅಭಿಧಾನಕ್ರಮದಿಂ ನಂ |
ದೆ ಭದ್ರೆ ಜಯೆ ರಿಕ್ತೆ ಪೂರ್ಣೆಯೆನಿತುಂ [1]ಪ್ರತಿಪ ||
ತ್ಪ್ರಭೃತಿದಿನಂಗಳು ಮವಱೊಳ್ |
ಶುಭಾಶುಭಂಗಳುಮನೆಯ್ದೆ ಪೆಸರ್ಗನುನಯದಿಂ || ೨ ||

(ಸಿದ್ಧದಿನಂಗಳ್)

ಚಂ|| ಸಿತನಿರೆ ನಂದೆಯೊಳ್ [2]ಶಶಿಯುಮಿಂದುಜನುಂ ನಿಲೆ ಭದ್ರೆಯೊಳ್ ಮಹೀ |
[3]ಸುತನಿರೆ [4]ತಜ್ಜಯಾಹ್ವಯದೊಳರ್ಕಸುತಂ ನಿಲೆ ರಿಕ್ತೆಯೊಳ್ ಬೃಹ ||
ಸ್ಪತಿಯಿರೆ ಪೂರ್ಣೆಯೊಳ್ ವಿನುತಸಿದ್ಧದಿನಂಗಳಿವಕ್ಕುಮಂದು ವಿ |
ಶ್ರುತಶುಭಕಾರ್ಯಮಂ ನೆಗಱೆ ಸಿದ್ಧಿಕರಂ ಜಯಬಂಧುನಂದನಾ || ೩ ||

(ದಗ್ಧವಾರಂಗಳ್)

ಉ|| ದ್ವಾದಶಿಯೊಳ್ ದಿನಾಧಿಪತಿ ಪಂಚಮಿಯೊಳ್ ಮಹಿಜಂ ಶಶಾಂಕನೇ |
ಕಾದಶಿಯೊಳ್ ಬುಧಂ ತದಿಗೆಯೊಳ್ ಶನಿ ನೌಮಿಯೊಳಿಂದ್ರಮಂತ್ರಿ ಷ ||
ಷ್ಠೀದಿನದೊಳ್ [5]ಭೃಗುಪ್ರಭವನಷ್ಟಮಿಯೊಳ್ ನಿಲೆ ದಗ್ಧವಾರಮಂ |
ತಾದಿನದೊಳ್ ಸಮಸ್ತ ಶುಭಕಾರ್ಯಮ[6]ನೊಂದುಮ ಮಾಡಲಾಗದೈ || ೪ ||

---

ಟೀ|| ನಂದೆ, ಭದ್ರೆ, ಜಯೆ, ರಿಕ್ತೆ, ಪೂರ್ಣೆ—ಎಂಬಿವು ಕ್ರಮದಿಂ ಪಾಡ್ಯಂಮೊದಲಾದ ದಿನಂಗಳ ಪೆಸರ್. ಪಾಡ್ಯಕ್ಕೆ ನಂದೆಯೆಂದುಂ, ದ್ವಿತೀಯೆಗೆ ಭದ್ರೆಯೆಂದುಂ, ತೃತೀಯೆಗೆ ಜಯೆಯೆಂದುಂ, ಚತುರ್ಥಿಗೆ ರಿಕ್ತೆಯೆಂದುಂ, ಪಂಚಮಿಗೆ ಪೂರ್ಣೆಯೆಂದುಂ ಪೆಸರ್. ಇಂತು ಷಷ್ಠಿಗೆ ನಂದೆಯೆಂದುಂ, ಇವು ಮೊದಲಾಗೆ ತಿಳಿದುಕೊಳ್ವುದು—೨.

ಟೀ|| ನಂದೆಯಲ್ಲಿ ಶುಕ್ರನುಂ, ಭದ್ರೆಯಲ್ಲಿ ಚಂದ್ರನುಂ ಬುಧನುಂ, ಜಯೆಯೊಳ್ ಕುಜನುಂ, ರಿಕ್ತೆಯಲ್ಲಿ ಶನಿಯುಂ, ಪೂರ್ಣೆಯಲ್ಲಿ ಬೃಹಸ್ಪತಿಯುಂ ಇರ್ದೊಡೆ ಸಿದ್ಧದಿನಮೆಂಬ ಪೆಸರ್. ಈ ಸಿದ್ಧದಿನಂಗಳಲ್ಲಿ ಎಲ್ಲಾ ಶುಭ ಕಾರ್ಯಂಗಳಂ ಮಾಡಲ್ ಸಿದ್ಧಿಯಪ್ಪುದು—೩.

ಟೀ|| ದ್ವಾದಶಿಯಲ್ಲಿ ಸೂರ್ಯನುಂ, ಪಂಚಮಿಯಲ್ಲಿ ಕುಜನುಂ, ಏಕಾದಶಿಯಲ್ಲಿ ಚಂದ್ರನುಂ, ತದಿಗೆಯಲ್ಲಿ ಬುಧನುಂ, ನೌಮಿಯಲ್ಲಿ ಶನಿಯುಂ, ಷಷ್ಠಿಯಲ್ಲಿ ಗುರುವುಂ, ಅಷ್ಟಮಿಯಲ್ಲಿ ಶುಕ್ರನುಂ ಇರ್ದೊಡೆ ದಗ್ಧವಾರಮೆಂದು ಪೆಸರ್, ಆ ದಿನಗಳಲ್ಲಿ ಅವುದೊಂದು ಶುಭ ಕಾರ್ಯಮನಾದೊಡಂ ಮಾಡಲಾಗದು—೪.

---

1 ಜಗದೊಳ್. 2 ಶನಿಯು. 3 ಸೂತ. 4 ತೀಜೆಯಾಹ್ವದೊಳಗರ್ಕ. 5 ಗುರುಪ್ರಭವನಿಂದಿರಲಿಂತಿವು. 6 ನೊಂದನು.

* ಇದು ಕೆಲವು ಪ್ರತಿಗಳಲ್ಲಿಲ್ಲ (ಖ).

(ರವ್ಯಾದಿವಾರಂಗಳಲ್ಲಿ ಮಾಳ್ಪ ಕಾರ್ಯಂಗಳ್)

ಮ||ಸ್ರ||*ಅಭಿಷೇಕಂ ವೈದ್ಯವಿದ್ಯಂ ಕೃಷಿ ರವಿದಿನದೊಳ್ ಭೂಷಣಾಲೇಪ[1]ವಾಸಾ |
ದ್ಯಭಿಯೋಗಂ ಸೋಮನೊಳ್ ದಾರುಣದಹನವಿಧಾನಂ ಧರಾಪುತ್ರನೊಳ್ ಸಂ ||
ದಭಿವಾಹಾ[2]ರೋಹಯೋಗಂ ಬುಧನೊಳಖಿಳವಿದ್ಯಾಗಮಂ [ಮಂ] ತ್ರಿಯೊಳ್ ವಾ |
ಕ್ಪ್ರಭವಾದ್ಯಂ ಶುಕ್ರನೊಳ್ ಸ್ಥಾವರಮೆನಿತನಿತಂ ಮಂದನೊಳ್ ಮಾಡೆ ಪೂಜ್ಯಂ || ೫ ||

(ನಕ್ಷತ್ರಾಧಿದೇವತೆಗಳ್)

[3]ಪಿರಿಯಕ್ಕರಂ|| ತರದಿನಶ್ವಿ[4] ಯಮಂ ಶಿಖಿ ಕಮಳಜಂ ಶೀತಕರಂ ರುದ್ರ [5]ನದಿತಿಜೀವ |
ನುರಗಂ ಪಿತೃಭಗವಾನರ್ಯಮಂ ದಿವಸಕರಂ ತ್ವಷ್ಟೃ ಸಮೀರನಿಂದ್ರಾಗ್ನಿ[6] ಮೈತ್ರಂ ||
ಸುರಗಣಾಧಿಪಂ ನಿಋತಿ ಜಳಂ ವಿಶ್ವದೇವನಜಂ ವಾರಿಜಾಕ್ಷಂ ವಸು |
ಶರಧಿಪನಜಪಾದನಹಿರ್ಬುಧ್ನ್ಯಂ ಪೌಷ್ಣ[7]ನೆಂದಿರ್ಪತ್ತೆಂಟುಂ ತಾರೆಗಧೀಶ್ವರರ್ || ೬ ||

---

ಟೀ|| ಭಾನುವಾರದಲ್ಲಿ ಅಭಿಷೇಕವಂ ವೈದ್ಯಕಾರ್ಯಮಂ ಕೃಷಿಕರ್ಮಮಂ ಮಾಳ್ಪುದು, ಸೋಮವಾರದಲ್ಲಿ ಭೂಷಣಧಾರಣವಂ ಗಂಧಾದ್ಯಾಲೇಪನಕಾರ್ಯಮಂ, ವಸ್ತ್ರಧಾರಣವಂ ಮಾಳ್ಪುದು, ಕುಜವಾರದಲ್ಲಿ ಕ್ರೂರವಾದ ದಹನಾದಿ ಕಾರ್ಯಂಗಳಂ ಮಾಳ್ಪುದು, ಬುಧವಾರದಲ್ಲಿ ವಾಹನಾದಿಗಳ ಆರೋಹಮಂ, ಅಯೋಗಬಂಧನಮಂ ಮಾಳ್ಪುದು, ಗುರುವಾರದಲ್ಲಿ ವಿದ್ಯಾಭ್ಯಾಸ ಕಾರ್ಯಮಂ ಮಾಳ್ಪುದು, ಶುಕ್ರವಾರದಲ್ಲಿ ವಾಕ್ಪ್ರಭವವೇ ಮೊದಲಾದ ಕಾರ್ಯಮಂ ಮಾಳ್ಪುದು, ಶನಿವಾರದಲ್ಲಿ ಎಲ್ಲಾ ಸ್ಥಾವರ ವಸ್ತುಗಳ್ಗೆ ಸಂಬಂಧಿಸಿದ ಕಾರ್ಯಮಂ ಮಾಳ್ಪುದು—೫.

ಟೀ|| ಅಶ್ವಿನಿ ಮೊದಲಾಗೆ ಅಭಿಜಿತ್ತು ಸಹಿತವಾಗಿ ಇರ್ಪತ್ತೆಂಟುನಕ್ಷತ್ರಂಗಳ್ಗೆ ಅಧಿದೇವತೆಗಳ್†— ಅಶ್ವಿನಿಗೆ – ಅಶ್ವಿನೀ ದೇವರ್ಕಳ್ ಭರಣಿಗೆ – ಯಮಂ ಕೃತ್ತಿಕೆಗೆ – ಅಗ್ನಿ ರೋಹಿಣಿಗೆ – ಬ್ರಹ್ಮ(ದೇವಂ) ಮೃಗಶಿರೆಗೆ – ಚಂದ್ರಂ ಆರ್ದ್ರೆಗೆ – ರುದ್ರಂ ಪುನರ್ವಸುಗೆ – ಅದಿತಿದೇವತೆ ಪುಷ್ಯಕ್ಕೆ – ಬೃಹಸ್ಪತಿ ಆಶ್ಲೇಷೆಗೆ – ಸರ್ಪಂ ಮಖೆ(ಗೆ)ಗೆ – ಪಿತೃಗಳ್ ಪುಬ್ಬೆಗೆ – ಭಗವಾ (ದೇವತೆ) ಉತ್ತರೆಗೆ – ಆರ್ಯಮಂ ಹಸ್ತಕ್ಕೆ – ಆದಿತ್ಯಂ ಚಿತ್ತೆಗೆ – ತ್ವಷ್ಟೃ(ದೇವತೆ) ಸ್ವಾತಿಗೆ – ವಾಯು ವಿಶಾಖೆಗೆ – ಇಂದ್ರಾಗ್ನಿಗಳ್ ಅನೂರಾಧೆಗೆ – ಮೈತ್ರಂ (ದೇವತೆ) ಜ್ಯೇಷ್ಠೆಗೆ – ಇಂದ್ರಂ ಮೂಲಕ್ಕೆ – ನಿಋತಿದೇವತೆ ಪೂರ್ವಾಷಾಢಕ್ಕೆ – [8]ಜಲ (ದೇವತೆ) ಉತ್ತರಾಷಾಢಕ್ಕೆ – ವಿಶ್ವೇದೇವರ್ ಅಭಿಜಿತ್ತುಗೆ – ಅಜಂ ಶ್ರವಣಕ್ಕೆ – ವಿಷ್ಣು ಧನಿಷ್ಠೆಗೆ – ಅಷ್ಟವಸುಗಳ್ [9]ಶತತಾರೆಗೆ – ವರುಣಂ ಪೂರ್ವಾಭಾದ್ರೆಗೆ – ಅಜಪಾತ್ (ದೇವತೆ) ಉತ್ತರಾಭಾದ್ರೆಗೆ – ಅಹಿರ್ಬುಧ್ನ್ಯ (ದೇವತೆ) ರೇವತಿಗೆ – ಪೌಷ್ಣದೇವತೆ. ಈ ಮರ್ಯಾದೆಯೊಳೆ ಇರ್ಪತ್ತೆಂಟು ನಕ್ಷತ್ರಂಗಳ್ಗೆ ಇರ್ಪತ್ತೆಂಟು ಅಧಿದೇವತೆಗಳ್—೬.

---

1 ವಾಹಾ. 2 ಹಾರೋಗ. 3 ಅರಿದಳರತರದಿ (ಅಕ್ಕರ ಎಂಬುದು ಅಶುದ್ಧವಾಗಿರಬಹುದು). 4 ದಿಂದಶ್ವಿ. 5 ನದಿತಿ । ಗುರುಸರ್ಪ ಭಗವ. 6 ಗ್ನಿಸುರಗ. 7 ಪೌಷನೆಂದಿರ್ಪತ್ತೆಂ. 8 ಉದಕ. 9 ವಿಶಾಖೆಗೆ.

* ಈ ಪದ್ಯವು ಕೆಲವು ಪ್ರತಿಗಳಲ್ಲಿಲ್ಲ (ಕ).

† ಟೀಕು ಒಂದು ಪ್ರತಿಯಲ್ಲಿ ಇಲ್ಲಿಂದಿದೆ.



(ಪಾರ್ಶ್ವಮುಖಾದಿ ನಕ್ಷತ್ರಂಗಳ್)

ಮ||ಸ್ರ|| ಹಿಮಕೃಚ್ಚಿತ್ರಾಶ್ವಿ ಮೈತ್ರಾದಿತಿ ದಿನಪತಿ ಪೌಷ್ಣಾನಿಲಜ್ಯೇಷ್ಠೆಗಳ್ ಪಾ |
ರ್ಶ್ವಮುಖಂಗಳ್ ವಾರ್ಧಿಮೂಋುತ್ತರೆ ಗುರುವಸು ಕೃಷ್ಣಂ ಹರಂ ಧಾತ್ರನೆಂಮೂ ||
ರ್ಧ್ವಮುಖಂಗಳ್ ಸಂದ ಪೂರ್ವತ್ರಿತಯಮನಲಮಿಂದ್ರಾಗ್ನಿ ಕೀನಾಶನಾಶ್ಲೇ |
ಷ ಮಖಾಖ್ಯಂ ಮೂಲಮೆಂದಿಂತಿವು ಬಗೆವೊಡಧೋವಕ್ತ್ರ [1]ಋಕ್ಷಂಗಳಕ್ಕುಂ || ೭ ||

(ಊರ್ಧ್ವಮುಖಾದಿ ನಕ್ಷತ್ರಂಗಳೊಳ್ ಮಾಳ್ಪ ಕಾರ್ಯಂಗಳ್)

*ಕಂ|| ಊರೇಱಲ್ ಮನೆಯಂ ಪುಗಲ್ [2]ಮುದಿಲನಿಕ್ಕಲ್ ಬಿತ್ತಲಿಂಬಾಗಿಡ |
ಲ್ಕಾರಾಮಂಗಳ[3]ನಪ್ಪುವೂರ್ಧ್ವಮುಖದೊಳ್ [4]ತೋಟ್ಗಾಗಲೆಟ್ಟಂ ಕೊಳ ||
ಲ್ಕಾರಂಭಂಗೆಯಲಂತೆ ಮೆಯ್ನೆಱೆಯಲುಂ [5]ತಿರ್ಯಙ್ಮುಖಾಖ್ಯಂಗಳೊಳ್ |
ಸಾರಕ್ಷೇತ್ರತಟಾಕಕೂಪಖನನಕ್ಕೊಳ್ಳಿತ್ತಧೋವಕ್ತ್ರದೊಳ್ || ೮ ||

(ಉಗ್ರಾದಿ ನಕ್ಷತ್ರಂಗಳ್)

ಮ||ಸ್ರ|| ಪಿತೃ ಪೂಋುಂಪೂರ್ವೆ [6]ವೈವಸ್ವತಮಿನಿತುಮುಗ್ರಂ ಧನಿಷ್ಠಾಬ್ಧಿ ಕೃಷ್ಣಾ |
ದಿತಿವಾತಂಗಳ್ ಚಲಂ ವಾಸವ ನಿಋತಿ ಹರಾಶ್ಲೇಷೆಗಳ್ ದಾರುಣಂ ರೇ ||
ವತಿ ಚಿತ್ರಂ ಮೈತ್ರ ಶೀತದ್ಯುತಿ ಮೃದು ರವಿ [7]ಪುಷ್ಯಾಶ್ವಿ ತಾರಾತಿಶೀಘ್ರಂ |
ಚತುರಾಸ್ಯಾದ್ಯುತ್ತರಾ[8]ದಿತ್ರಯಮಜಗೆ ವಿಶಾಖಾಗ್ನಿ ಸಾಧಾರಣಾಖ್ಯಂ || ೯ ||

---

ಟೀ|| ಮೃಗಶಿರೆ ಚಿತ್ರೆ ಅಶ್ವಿನಿ ಅನೂರಾಧೆ ಪುನರ್ವಸು ಹಸ್ತಂ ರೇವತಿ ಸ್ವಾತಿ ಜ್ಯೇಷ್ಠೆ—ಈ (೯) ಒಂಬತ್ತುಂ ನಕ್ಷತ್ರಂಗಳ್ ಎಡ (ಪಾರ್ಶ್ವ) ಮುಖಂಗಳಾಗಿರ್ಪುವು. ಶತ ವಿಶಾಖೆ ಉತ್ತರೆ ಉತ್ತರಾಷಾಢೆ ಉತ್ತರಾಭಾದ್ರೆ ಪುಷ್ಯಂ ಧನಿಷ್ಠೆ ಶ್ರವಣಂ ಆರ್ದ್ರೆ ರೋಹಿಣಿ— ಈ (೯) ಒಂಬತ್ತುಂ ನಕ್ಷತ್ರಂಗಳ್ ಮೇಲ್ಮುಖಂಗಳಾಗಿರ್ಪುವು. ಪುಬ್ಬೆ ಪೂರ್ವಾಷಾಢೆ ಪೂರ್ವಾಭಾದ್ರೆ ಕೃತ್ತಿಗೆ ವಿಶಾಖೆ ಭರಣಿ ಆಶ್ಲೇಷೆ ಮಖೆ ಮೂಲಂ—ಈ (೯) ಒಂಬತ್ತುಂ ನಕ್ಷತ್ರಂಗಳ್ ಅಧೋಮುಖಂಗಳಾಗಿರ್ಪುವು—೭.

ಟೀ|| ಬೇಱೂರ್ಗೆ ಒಕ್ಕಲ್ ಪೋಗಲ್, ಪೊಸಮನೆಯಂ ಪುಗಲ್, ಗೋಡೆಯನಿಕ್ಕಲ್, ಬೀಜಂಗಳಂ ಬಿತ್ತಲ್, ತೋಪನಿಡಲ್, ಊರ್ಧ್ವಮುಖಂಗಳಪ್ಪ ನಕ್ಷತ್ರಂಗಳೊಳ್ಳಿದುವು. ಆಳ್ಗಳಂ ನಿಯೋಜಿಸಲ್, ಎಟ್ಟಂ ಕೊಳಲ್, ಆರಂಬಂಗೆಯಲ್, ಸ್ತ್ರೀಯಂ ಮೆಯ್ನೆಱೆಯಲ್, ತಿರ್ಯಙ್ಮುಖಂಗಳಪ್ಪ ನಕ್ಷತ್ರಂಗಳೊಳ್ಳಿದುವು. ಗಱ್ದೆಯಂ ಮಾಡಲ್, ಕೆಱೆಕೊಳಬಾವಿಗಳ ನಗುೞಿಸಲ್ ಅಧೋವಕ್ತ್ರ ನಕ್ಷತ್ರಂಗಳೊಳ್ಳಿದುವು. ಈ ಮರ್ಯಾದೆಯಲ್ಲಿ ಮೇಲೆ ಪೇೞ್ದ ಕಾರ್ಯಂಗಳಂ ಮಾಡಿದೊಡೆ ಶುಭಮಪ್ಪುದು—೮.

†ಟೀ|| ಮಖೆ ಪುಬ್ಬೆ ಪೂರ್ವಾಷಾಢೆ ಪೂರ್ವಾಭಾದ್ರೆ ಭರಣಿ—ಈ (೫) ಅಯ್ದುಂ ಉಗ್ರನಕ್ಷತ್ರಂಗಳ್, ಧನಿಷ್ಠೆ [10]ಶತವಿಶಾಖೆ ಶ್ರವಣಂ ಪುನರ್ವಸು ಸ್ವಾತಿ—ಈ (೫) ಅಯ್ದುಂ

---

1 ರಿಕ್ಷಂ. 2 ಮುಗಿಲ. 3 ವಪ್ಪುದೂ. 4 ಕೊಳಾಳೆವೆತ್ತಂ ಕೊಳ. 5 ತತ್ತಿರ್ಯಙ್ಮುಖಂಗಳೆವಳ್. 6 ಯಮಾಖ್ಯಮಿನಿತುಗ್ರಂ ಧನಿ. 7 ಮಧ್ಯಾಶ್ವಿ. 8 ದಿತ್ರಿಣಿ ಭಮ [ದಿಸ್ಥಿರಮಜಗೆ]. 9 ಗಿಪವು. 10 ಶತತಾರೆ.

*ಇದಕ್ಕೆ ಸಮಾನಾರ್ಥಕ ಕಂದವೊಂದು ಕಾವ್ಯಾವಲೋಕನದಲ್ಲಿದೆ—
ಊರೇಱಲ್ ಮನೆಮಾಡ । ಲ್ಕಾರಂಭಂಗೆಯ್ಯಲೆಟ್ಟುಗೊಳಲಾಳ ॥
ಲ್ಕಾರಾಮಮಿಡಲ್ಕೆಂದುಂ । ದಾರುಣತಾರೆಗಳನುೞಿಯೆ ಪೆಱವಱೊಳುಚಿತಂ ॥

†ಇದಕ್ಕೆ ಟೀಕೆಯಿಲ್ಲ.

(ಉಗ್ರಾದಿ ನಕ್ಷತ್ರಂಗಳಲ್ಲಿ ಮಾಳ್ಪ ಕಾರ್ಯಂಗಳ್)

ಮ|| ಬವರಂ ವಂಚನೆ [1]ಯೋಜಂ ವಹ್ನಿ ವಿಷಕರ್ಮಾದ್ಯಂಗಳುಗ್ರಂಗಳೊಳ್ |
ಪ್ರವರಾರೋಹಣವಾದಿಯಾದ ಚಳಕರ್ಮಂಗಳ್ ಚಲಾಖ್ಯಂಗಳೊಳ್ ||
ವಿವಿಧೋಪದ್ರವಭೇದ ಬಂಧವಧಮಾತೀಕ್ಷ್ಣಂಗಳೊಳ್ ಮಂತ್ರ [2]ಗೀ |
ತ ವಿಭೂಷಾವಳಿ ಮಂಗಳಂ ಮೃದುಗಳೊಳ್ ಮಾಳ್ಪಂದು ಸಿದ್ಧಿಪ್ರದಂ || ೧೦ ||

ಮ||[3]ಪಯಣಂ ಭೂಷಣಮೌಷಧಂ ರತಿಸುಖಂ ವಿದ್ಯಾಗಮಂ ವಿಕ್ರಯಂ |
ಕ್ರಯ[4]ಮಶ್ವೇಭದ ಶಿಕ್ಷೆ ಶಿಲ್ಪಮಿನಿತುಂ ಕ್ಷಿಪ್ರಂಗಳೊಳ್ ಶಾಂತಿಕ ||
ಕ್ರಿಯೆ ರಾಜಾಭಿಷವಂ ಪ್ರತಿಷ್ಠೆ ತರುಸಂದೋಹಪ್ರದಂ ಪ್ರಷ್ಠ ತಾ |
ರೆಗಳಂತಾ ಮೃದುತೀಕ್ಷ್ಣಕಾರ್ಯಮನಿತುಂ ಸಾಧಾರಣಾಖ್ಯಂಗಳೊಳ್ || ೧೧ ||

---

ಚಲನಕ್ಷತ್ರಂಗಳ್, ಜ್ಯೇಷ್ಠೆ ಮೂಲಂ ಆರ್ದ್ರೆ ಆಶ್ಲೇಷೆ— ಈ (೪) ನಾಲ್ಕುಂ [5]ತೀಕ್ಷ್ಣತಾರೆಗಳ್, ರೇವತಿ ಚಿತ್ತೆ ಅನೂರಾಧೆ ಮೃಗಶಿರೆ—ಈ (೪) ನಾಲ್ಕುಂ ಮೃದುನಕ್ಷತ್ರಂಗಳ್, ಹಸ್ತಂ ಪುಷ್ಯಂ ಅಶ್ವಿನಿ—ಇವು (೩) ಮೂರುಂ ಶೀಘ್ರನಕ್ಷತ್ರಂಗಳ್, ರೋಹಿಣಿ ಅಭಿಜಿತು ಉತ್ತರೆ ಉತ್ತರಾಷಾಢೆ ಉತ್ತರಾಭಾದ್ರೆ—ಈ (೫) ಅಯ್ದುಂ ಸ್ಥಿರನಕ್ಷತ್ರಂಗಳ್, ವಿಶಾಖೆ ಕೃತ್ತಿಗೆ—ಈ (೨) ಎರಡುಂ ಸಾಧಾರಣಂಗಳ್—೯.

ಟೀ|| ಕಾಳೆಗಂ [6]ವಂಚಿಸುಹ ಅಂಕಂ ಅಗ್ನಿಕರ್ಮ ವಿಷಕರ್ಮ ಮೊದಲಾದ ಉಗ್ರಕರ್ಮಂಗಳಂ ಉಗ್ರನಕ್ಷತ್ರಂಗಳಲ್ಲಿ [7]ಮಾಳ್ಪುದು. ಆನೆ ಕುದುರೆ ಮೊದಲಾದ ವಾಹನಂ[8]ಗಳ ನೇರುವೊಡೆ, ಚಲಕರ್ಮಂಗಳಂ ಮಾಡುವೊಡೆ, ಚಲನಕ್ಷತ್ರಂಗಳಲ್ಲಿ ಮಾಳ್ಪುದು. ನಾನಾಕಾರದ ಉಪದ್ರವಂ ಮಿತ್ರಭೇದಂ ಕೊಲೆ ಬಂಧನಂಗಳಂ ಮಾಡುವೊಡೆ ತೀಕ್ಷ್ಣನಕ್ಷತ್ರಂಗಳಲ್ಲಿ ಮಾಳ್ಪುದು. ಮಂ[9]ತ್ರಾಲೋಚನೆ ನೀತ್ಯಭ್ಯಾಸಂಗಳಂ ಮಾಡುಹ, ಅಲಂಕಾರಮನಿಕ್ಕಿ ಕೊಳುಹ, ಗೀತಾಭ್ಯಾಸಮಾಡುಹ ಇವು ಮೊದಲಾದ ಶುಭಕರ್ಮಂಗಳಂ ಮೃದುನಕ್ಷತ್ರಂಗಳಲ್ಲಿ ಮಾಳ್ಪುದು. ಇಂತು ಮಾಡಿದೊಡೆ ಸಿದ್ಧಿಸುವುದು—೧೦.

ಟೀ|| ಪಯಣಂ, ಅಲಂಕಾರಂ, ಔಷಧಿಯಂಕೊಳುಹ, ಸ್ತ್ರೀಸಂಭೋಗಂ, ವಿದ್ಯಾಭ್ಯಾಸಂ, ಕ್ರಯವಿಕ್ರಯಂ, ಆನೆಕುದುರೆಗಳ ಶಿಕ್ಷೆ, ಚಿತ್ರಂ ಶಿಲ್ಪಂ ಇವು[5]ಮೊದಲಾದ ಕಾರ್ಯಂಗಳಂ ಕ್ಷಿಪ್ರತಾರೆಯಲ್ಲಿ ಮಾಳ್ಪುದು, ಶಾಂತಿಕರ್ಮಂ, ರಾಜಾಭಿಷೇಕಂ, ದೇವತಾ[10]ಪ್ರತಿಷ್ಠೆ ಮೊದಲಾದ ಪ್ರತಿಷ್ಠೆಗಳ್ ಮರಂಗಳಂ ಬಿತ್ತುಹ ಇಂಥಹವಂ ಸ್ಥಿರನಕ್ಷತ್ರಂಗಳಲ್ಲಿ ಮಾಳ್ಪುದು, ಮೃದುಕಾರ್ಯ ತೀಕ್ಷ್ಣಕಾರ್ಯಂಗಳಂ ಮಾಡುವೊಡೆ ಸಾಧಾರಣ ತಾರೆಗಳಲ್ಲಿ ಮಾಡುವುದು—೧೧.

---

1 ಯಂಕ. 2 ಲೋಕ ವಿಭೂತಾವಳಿ. 3 ಪಯಣಾಲಂಕಾರಾಷಧಂ, ಪಯಣಾಲಂಕರಣೌಷಧಂ, ಪಯಣಾಲಂಕೃತಿಯೌಷಧಂ. 4 ಮಶ್ವಾಶ್ವಿಭ ಸಿಕ್ಷೆ ಚಿತ್ರವರ ಶಿಲ್ಪಂ ಕ್ಷಿಪ್ರದೊಳ್ ಶಾಂತಿತತ್ಕ್ರಿಯೆ ರಾಜ್ಯಾಭಿಷೆಕಂಸಮಂ ಸುರಪ್ರತಿಷ್ಠಾಚಾರ್ಯ ಸನ್ಮಂಗಳಂ ಪ್ರಿಯಸಂದರ್ಶನಕಾರ್ಯ ಮಿಂತಿವಿನಿತುಂ ಸಾಧಾ; ಮಶ್ವೇಭಸಿಕ್ಕೆ ಶಿಲ್ಪ...... 5 ತೀಕ್ಷ್ಣನಕ್ಷತ್ರಂಗಳ್. 6 ವಂಚನೆ. 7 ಮಾಡುವುದು. 8 ಗಳಂ ಮಾಡುವರೆ; ನೇರುವುದು ಮೊದಲಾದ ಚಲಕರ್ಮಂಗಳಂ. 9 ತ್ರಂಗಳಂ ನೀತ್ಯಭ್ಯಾಸಮಂ ಮಾಡುವ ಅಲಂಕಾರ ಮೊದಲಾದ ಶುಭಕರ್ಮಂಗಳಂ—ಮಂತ್ರಂಗಳಂ ಹೇಳಿಸಿಕೊಳುಹ ಅಲಂಕಾರವನಿಕ್ಕಿಕೊಳುಹ. 10 ಪ್ರತಿಷ್ಠೆ ಮಂಗಳಪ್ರದ ಮುಂತಾದುವಂ ಸ್ಥಿರನಕ್ಷತ್ರದಲ್ಲು ಮಾಳ್ಪುದು.



(ಪೊಸತನುಡುವ ನಕ್ಷತ್ರಂಗಳ್)

ಕಂ||[1]ಅನಿಮಿಷಗುರು ಮೂರುತ್ತರೆ |
ಧನಿಷ್ಠೆ ಹಸ್ತಾದಿಪಂಚಕಂ ರೇವತಿ ಯ ||
ಶ್ವಿನಿ ರೋಹಿಣಿ ಯದಿತಿ ಯೆನಿ |
ಪ್ಪಿನಿತುಂ ನಕ್ಷತ್ರಮುತ್ತಮಂ ಪೊಸತನುಡಲ್ || ೧೨ ||

(ವಿದ್ಯಾಭ್ಯಾಸಕ್ಕುಚಿತಮಪ್ಪ ನಕ್ಷತ್ರಂಗಳ್)

ಮೃಗಶೀರ್ಷಂ ಮೂರುಂ ಪೂ |
ರ್ವೆಗಳಶ್ವಿನಿಯಾರ್ದ್ರೆ ಚಿತ್ರೆ ಮೂಲಂ ರೇವತಿ ||
ಯಾಗುರುವೀ ಪತ್ತುಂ ತಾ |
ರೆಗಳೊಳ್ ಮಾಡುವುದು ಸಕಲವಿದ್ಯಾಗಮಮಂ || ೧೩ ||

(ವ್ರತಾದಿಗಳ್ಗುಚಿತಮಪ್ಪ ನಕ್ಷತ್ರಂಗಳ್)

ಸಿತ ಬುಧ ಗುರು ದಿನದೊಳ್ ರೇ |
ವತಿ ಪುಷ್ಯಂ ಸ್ವಾತಿ ಮೃಗಶಿರಂ [2]ಮೈತ್ರನಹ ||
ಸ್ವತಿ [ಚಿತ್ರೆ] ಯೆಂಬಿವಿನಿತುಂ |
ವ್ರತದೀಕ್ಷಾ ಮೇಖಳಾದಿ ಕಾರ್ಯಕ್ಕುಚಿತಂ || ೧೪ ||

(ಗಂಡಾಂತ ನಕ್ಷತ್ರಪಾದಂಗಳ್)

ಸಮನಿಸುಗುಮಶ್ವಿನೀ ಮೂ |
ಲ ಮಘಾನಕ್ಷತ್ರದಾದಿಪದದೊಳ್ ರೇವ ||
ತ್ಯಮರೇಂದ್ರಾಶ್ಲೇಷಗಳಂ[3] |
ತಿಮಪಾದದೊಳಶುಭದಾಯಕಂ ಗಂಡಾಂತಂ || ೧೫ ||

---

ಟೀ|| ಪುಷ್ಯಂ, ಉತ್ತರೆ, ಉತ್ತರಾಭಾದ್ರೆ, ಉತ್ತರಾಷಾಢೆ, ಧನಿಷ್ಠೆ, ಹಸ್ತಂ, ಚಿತ್ತೆ, ಸ್ವಾತಿ, ಶತವಿಶಾಖೆ, ಅನುರಾಧೆ, ರೇವತಿ, ಅಶ್ವಿನಿ, ರೋಹಿಣಿ, ಪುನರ್ವಸು—ಈ ನಕ್ಷತ್ರಂಗಳ್ ಪೊಸ ವಸ್ತ್ರಮನುಡಲ್ ಒಳ್ಳಿದುವು—೧೨.

ಟೀ|| ಮೃಗಶಿರೆ, ಪೂರ್ವೆ, ಪೂರ್ವಾಷಾಢೆ, ಪೂರ್ವಾಭಾದ್ರೆ, ಅಶ್ವಿನಿ, ಆರ್ದ್ರೆ, ಚಿತ್ರೆ, ಮೂಲಂ, ರೇವತಿ, ಪುಷ್ಯಂ—ಈ ಪತ್ತುಂ ನಕ್ಷತ್ರಂಗಳ್ ವಿದ್ಯಾಭ್ಯಾಸಮಂ ಗೆಯ್ಯಲೊಳ್ಳಿದುವು—೧೩.

ಟೀ|| ಶುಕ್ರ ಬುಧ ಗುರುವಾರಂಗಳಲ್ಲಿ ರೇವತಿ ಪುಷ್ಯಂ ಸ್ವಾತಿ ಮೃಗಶಿರೆ ಅನೂರಾಧೆ ಚಿತ್ರೆ ಯೀ ತಾರೆಗಳ್ ಕೂಡೆ ಉಪನಯನಮಂ ಮಾಡಲ್ ಲೇಸು—೧೪.

ಟೀ|| ಜನನ ಕಾಲಕ್ಕೆ ಅಶ್ವಿನಿ ಮಘೆ ಮೂಲ ಈ ಮೂರುಂ ನಕ್ಷತ್ರಂಗಳ ಮೊದಲ ಪಾದಂಗಳೊಳಂ, ರೇವತಿ ಜ್ಯೇಷ್ಠೆ ಅಶ್ಲೇಷೆ ಈ ೩ ನಕ್ಷತ್ರಂಗಳ ಕಡೆಯಪಾದಂಗಗಳೊಳಂ ಜನನಮಾದೊಡೆ ಅಶುಭಂಗಳ್, ಗಂಡಾಂತರಂ[4]ಗಳು ಮಪ್ಪುವು—೧೫.

---

1 ಅನುಪಮಗುರು. 2 ಮೈತ್ರ ಚಿತ್ರೆಯಸಂಗತಮಾಗಿರೆಯನಿತುಂವ್ರತ, ಸ್ವತಿಯೆಂಬಿನಿತುಂ ಕೂಡಿ?. 3 ಳಂತ್ಯಪಾದ. 4 ಗಳಹವು.

(ಉತ್ಪಾತಾದಿ ಯೋಗಂಗಳ್)

ಕಂ|| ರವಿವಾರವಮಾದಿಯಾಗಿ[1] |
ಯ್ದೆ ವಿಶಾಖ ಪ್ರಮುಖ ತಾರೆಗಳ್ ನಾಲ್ಕುಂ ಸಂ ||
ಭವಿಸಿದೊಡುತ್ಪಾತಂ ಮೃ |
ತ್ಯು [2]ವಧೆಯುಮಮೃತಾಖ್ಯವೆಂಬಿವಕ್ಕುಂ ಯೋಗಂ || ೧೬ ||

(ಪರಿಘಯೋಗಂ)

ತರಳಂ|| ಬರೆದು ಸಪ್ತಶಲಾಕೆಗಳಂ ಪೂರ್ವಾಶೆಯೊಳಂ ನಿಲೆ ದಕ್ಷಿಣೋ |
ತ್ತರದೊಳಂ ಬರೆದೀಶನ ಕೋಣಿಂದಂ ಬರೆ ಕೃತ್ತಿಕೆಯಾದಿ ಯಾ ||
ಗಿರಿಸಿ ತಾರೆಯ ನಿಂ[3]ದುವ [ರಿಕ್ಷಂ] ಗೂಡಿರೆ ತಾನಶುಭಪ್ರದಂ |
ಪರಿಘಮೆಂದಱಿಗಂತವಱೊಳ್ ತಾನಳಿ ದಿಗ್ಗತರೇಖೆಯುಂ || ೧೭ ||

---

ಟೀ|| ಆದಿತ್ಯವಾರದಲ್ಲಿ [4]ವಿಶಾಖ ಮೊದಲಾದ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಸೋಮವಾರದಲ್ಲಿ ಪೂರ್ವಾಷಾಢೆ ಉತ್ತರಾಷಾಢೆ ಅಭಿಜಿತ್ತು ಶ್ರವಣಂ—ಈ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಮಂಗಳವಾರದಲ್ಲಿ ಧನಿಷ್ಠೆ ಮೊದಲಾದ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಬುಧವಾರದಲ್ಲಿ ರೇವತಿ ಮೊದಲಾದ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಗುರುವಾರದಲ್ಲಿ ರೋಹಿಣಿ ಮೊದಲಾಗಿ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಶುಕ್ರವಾರದಲ್ಲಿ ಪುಷ್ಯಂ ಮೊದಲಾಗಿ ನಾಲ್ಕುಂ ನಕ್ಷತ್ರಂಗಳ್ ಕೂಡುಹ, ಶನಿವಾರದಲ್ಲಿ ಉತ್ತರಾನಕ್ಷತ್ರ ಮೊದಲಾಗಿ ನಾಲ್ಕುಂ ನಕ್ಷತ್ರಂಗಳ್ ಕೂಡುಹ—ಈ ಹೇಳಿದ ಆದಿತ್ಯವಾರ ಮೊದಲಾದ ಏಳು ವಾರಂಗಳಲ್ಲಿಯುಂ ವಿಶಾಖಾದಿಯಾದ ನಾಲ್ಕುಂ ನಾಲ್ಕುಂ ನಕ್ಷತ್ರಂಗಳ್ ಕೂಡಿದೊಡೆ ಅವಱ ಫಲಂ ಕ್ರಮದಿಂದೆ [5]ಮೊದಲನೆಯದು ಹಾನಿಯೋಗಂ, ಎರಡನೆಯದು ಮೃತ್ಯುಯೋಗಂ ಮೂಱನೆಯದು ವಧೆಯೋಗಂ, ನಾಲ್ಕನೆಯದು ಅಮೃತಯೋಗಂ, ಈ ಮರ್ಯಾದೆಯಿಂ ತಱುವಾಯಿಂಗೊಂಡು ಯೋಗಫಲಮನಱಿವುದು—೧೬.

ಟೀ|| ಮೂಡಲ್ ತೆಂಕಲ್ ಪಡವಲ್ ಬಡಗಲ್—ಈ ನಾಲ್ಕು ದಿಕ್ಕಿನಲ್ಲಿಯುಂ ಏೞೇೞು ಮನೆಗಳಂ ಬರೆಯುವುದು, ಅಲ್ಲಿ ಮೂಡಣ ಈಶಾನ್ಯದಿಕ್ಕು ಮೊದಲಾದಿ ಕೃತ್ತಿಕಾದಿ ಏೞುಂನಕ್ಷತ್ರಂಗಳಂ ಬರೆಯುವುದು, ಆಗ್ನೇಯದಿಕ್ಕು ಮೊದಲಾಗಿ ತೆಂಕಲು ಮಘೆಯಾದಿ ಏೞುಂನಕ್ಷತ್ರಂಗಳಂ ಬರೆಯುವುದು, [6]ನೈಋತ್ಯದಿಕ್ಕು ಮೊದಲಾಗಿ ಅನೂರಾಧೆಯಾದಿಯಾಗಿ ಏೞುಂ ನಕ್ಷತ್ರಂಗಳಂ ಬರೆಯುವುದು; [7]ವಾಯುವ್ಯದಿಕ್ಕು ಮೊದಲಾಗಿ ಬಡಗಲ್ ಧನಿಷ್ಠೆ ಮೊದಲಾಗಿ ಏೞುಂನಕ್ಷತ್ರಂಗಳಂ ಬರೆಯುವುದು. ಹೀಗೆ ಇಪ್ಪತ್ತೆಂಟು (೨೮) ನಕ್ಷತ್ರಂಗಳೊಳ್ ಚಂದ್ರನಿರ್ದ ನಕ್ಷತ್ರಕ್ಕೆ [8]ಇದಿರಾಗಿರ್ದ ನಕ್ಷತ್ರಂಗಳಲ್ಲಿ ಪಾಪಗ್ರಹಂಗಳಿರ್ದೊಡೆ ಆ ನಕ್ಷತ್ರಂಗಳಲ್ಲಿ ಶುಭಕಾರ್ಯಂಗಳಂ ಮಾಡಲಾಗದು. ವಿದಿಕ್ಕುಗಳಲ್ಲಿರ್ದ ನಕ್ಷತ್ರಂಗಳಂ ನೋಡುವುದು. ಇದು ಪರಿಘವೆನಿಸಿಕೊಳ್ವುದು—೧೭.

1 ಗಿರ್ದ್ದು. 2 ವಧಮುಮ. 3 ನಿಂತೊಡಗೂಡಿರೆ ತಾ. 4 ವಿಶಾಖಾದಿಯಾಗಿ ನಾಲ್ಕು ನಕ್ಷತ್ರಂಗಳ್ ಕೂಡಿರುತ್ತಿಹ. 5 ಮೊದಲನಕ್ಷತ್ರ ಹಾನಿಯೋಗ. 6 ನೈಋತ್ಯದಿಂ ಪಡವಲಿಗೆ. 7 ವಾಯವ್ಯದಿಂ ಬಡಗಲಿಗೆ. 8 ನಕ್ಷತ್ರಕ್ಕೆ ಪಾಪಗ್ರಹಂಗಳಿದ್ದರೆ ಶುಭಾಶುಭ.





(ಕಂಪನಾದಿ ಯೋಗಂಗಳ್)

ಕಂ||* ಇನನಿರ್ದ [1]ತಾರೆಗೇೞ್ ಚಂ |
ದ್ರ[2]ನಿರಲ್ ಕಂಪನಮಮೋಘೆ ತಾನಿಪ್ಪತ್ತೊಂ ||
ದನೆಯದು ಪತ್ತಱೊಳುಳ್ಕೆ ಪದಿನ |
ಯ್ದನೆಯದು ತಾಂ ಬ್ರಹ್ಮದಂಡವೆಂಬುದದಕ್ಕುಂ || ೧೮ ||

(ಕಂಪಾದಿಗಳಲ್ಲಿ ತ್ಯಾಜ್ಯಗಳಿಗೆಗಳ್)

ಮೊದಲೇೞುಗಳಿಗೆಯಂ ಕಂ |
ಪದೊಳಾಱಂ ಬ್ರಹ್ಮದಂಡದೊಳ್ ಪತ್ತಂ ಮೋ ||
ಘದೊಳೇರಾಱಂ ಕಳೆಗು |
ಳ್ಕದೊಳಲ್ಲಿಂದತ್ತಲಾದ ಗಳಿಗೆಗಳುಚಿತಂ || ೧೯ ||

(ಸಿದ್ಧದಿನಂ)

ಶನಿ ರೋಹಿಣಿಯೊಳ್ ಕುಜನ |
ಶ್ವಿನಿಯೊಳ್ ಗುರು ಪುಷ್ಯದೊಳ್ ಸಿತಂ ರೇವತಿಯೊಳ್ ||
ದಿನಪಂ ಹಸ್ತದೊಳಿಂದುಜ |
ನನುರಾಧೆಯೊಳಿಂದು ಮೃಗದೊಳಿರೆ ಸಿದ್ಧದಿನಂ || ೨೦

---

ಟೀ|| [3]ಆದಿತ್ಯನಿರ್ದ ನಕ್ಷತ್ರಕ್ಕೆ ಏೞನೆಯ (೭) [4]ನಕ್ಷತ್ರದಲ್ಲಿ ಚಂದ್ರನಿರ್ದೊಡೆ ಅದು ಕಂಪವೆನಿಸಿಕೊಳ್ವುದು. ಇಪ್ಪತ್ತೊಂದನೆಯ (೨೧) [5]ತಾರೆಯಲ್ಲಿ ಚಂದ್ರನಿರ್ದೊಡೆ ಮೋಘೆಯೆನಿಸಿಕೊಳ್ವುದು. ಪತ್ತನೆಯ (೧೦) ತಾರೆಯಲ್ಲಿ ಚಂದ್ರನಿರ್ದೊಡೆ ಉಳ್ಕೆಯೆನಿಸಿಕೊಳ್ವುದು. ಹದಿನಯ್ದನೆಯ (೧೫) ತಾರೆಯಲ್ಲಿ ಚಂದ್ರನಿರ್ದೊಡೆ ಬ್ರಹ್ಮದಂಡವೆನಿಸಿಕೊಳ್ವುದು—೧೮.

ಟೀ|| ಕಂಪವಾದ ನಕ್ಷತ್ರಕ್ಕೆ ಮೊದಲು ಏೞು (೭) ಗಳಿಗೆಗಳಂ ಬಿಡುವುದು. ಮೋಘೆಯೆಂಬ ತಾರೆಗೆ (ನಕ್ಷತ್ರಕ್ಕೆ) ಮೊದಲು ಇಪ್ಪತ್ತೊಂದು (೨೧) ಗಳಿಗೆಗಳಂ ಬಿಡುವುದು. ಉಳ್ಕೆ[6]ಯೆಂಬ ತಾರೆಗೆ ಮೊದಲ ಹತ್ತು (೧೦) ಗಳಿಗೆಗಳಂ ಬಿಡುವುದು. ಬ್ರಹ್ಮದಂಡಕ್ಕೆ ಮೊದಲ ಹನ್ನೆರಡು (೧೨) ಗಳಿಗೆಯುಂ ಬಿಡುವುದು. ಅಲ್ಲಿಂದ [7]ಮೇಲಾದ ಗಳಿಗೆಗಳ್ ಶುಭಪ್ರದಂಗಳಕ್ಕುಂ—೧೯.

ಟೀ|| ಈ ವಾರ ನಕ್ಷತ್ರಂಗಳ್ ಕೂಡಿದೊಡೆ ಅಮೃತಸಿದ್ಧಿಯೋಗಂ, ಎಲ್ಲಾ ಶುಭಕಾರ್ಯಂಗಳ್ಗಂ ಲೇಸು—೨೦.

1 ತಾರೆಗಳ್. 2 ನಿರಲ್ಕಂ ಕಂಪನಮ. 3 ಸೂರ್ಯ. 4 ತಾರೆಯ. 5 ನಕ್ಷತ್ರದ. 6 ವೆಂಬುದಕ್ಕೆ. 7 ಮೊದಲಾದ.

* ಇನತಾರೆಗೆ ಕಂಪನ ಮದೇ। ೞನೆಯದಮೋಘಾಖ್ಯ ಮಿರ್ಪತೊಂದನೆಯದುಂಪ॥
ತ್ತನೆಯದುಮುಳ್ಕಂ ಪದಿನೆ। ಯ್ದನೆಯದು ತಾಂ ಬ್ರಹ್ಮದಂಡಮೆಂಬುದೆನಿಕ್ಕುಂ॥
—ಮೇಲಣ ಕಂದಕ್ಕೆ ಪ್ರತಿಯಾಗಿ ಈ ಕಂದವು ಒಂದು ಪ್ರತಿಯಲ್ಲಿದೆ. ಇದರಲ್ಲಿ ಛಂಧೋದೋಷವಿರುವುದು.

(ತ್ರಿಪುಷ್ಕರಯೋಗಂ)

ಕಂ|| ಆರಯ್ಯೆ ಬಿದಿಗೆ ಸಪ್ತಮಿ |
ಬಾರಸಿಯೆಂಬಿವಱೊಳರ್ಕಸುತ ಕುಜದಿನಕೃ ||
ದ್ವಾರಂಗಳುಂ ತ್ರಿಪಾದದ |
ತಾರೆಗಳುಂ ಕೂಡೆ ತಾಂ ತ್ರಿಪುಷ್ಕರಯೋಗಂ || ೨೧ ||

(ರೋಗಿಗೆ ಶುಭಮಲ್ಲದ ದಿನಂಗಳ್)

ಶತಭಿಷೆ ಪವನಂ ಪೂರ್ವ |
ತ್ರಿತಯಂ ಫಣಿ ಭರಣಿ ಶಕ್ರಮೆಂಬ[1]ವು ಷಷ್ಠೀ ||
ತ್ರಿತಯಂ [2]ರಿಕ್ತೆ ಶನಿ ರವಿ ಭೂ |
ಸುತ ದಿನವಾಗೆ ರೋಗವಾದಂ ಬರ್ದಕಂ || ೨೨ ||

(ಶುಭಾಶುಭ ಯೋಗಂಗಳ್)

ಅತಿಗಂಡಂ ವ್ಯಾಘಾತಂ |
ವ್ಯತಿಪಾತಂ ವಜ್ರಗಂಡ ವಿಷ್ಕಂಭಂ ವೈ ||
ಧೃತಿ ಶೂಲ ಪರಿಘಮಿಂತೊಂ |
ಬತುಯೋಗಗಳಶುಭಮುೞಿದಯೋಗಂ ಶುಭದಂ || ೨೩ ||

ಮ|| ಪರಿಹಾರ್ಯಂ ದಿನದೊಳ್ ಸಮಸ್ತಶುಭಕಾರ್ಯಕ್ಕಂ ವ್ಯತೀಪಾತಮಾ |
ಪರಿಘಂ ವೈಧೃತಿ ಯಾಱಱೊಳ್ ಗೞಿಗೆಗಳ್ ಗಂಡಾತಿಗಂಡಂಗಳಿಂ ||
ಬೆರಡುಂ ಯೋಗದೊಳೀಶಲೋಚನಮಿವುಂ ವಿಷ್ಕಂಭದೊಳ್ ಶೂಲದೊಳ್ |
ಶರಬಾಣಪ್ರಮಿತಾಂಕಸಂಖ್ಯೆಯೆ ವಲಂ ವ್ಯಾಘಾತವಜ್ರಂಗಳೊಳ್ || ೨೪ ||

---

ಟೀ|| ಬಿದಿಗೆ ಸಪ್ತಮಿ ದ್ವಾದಶಿ—ಇವು ಮೂಱುಂ ತಿಥಿಗಳೊಳ್ ಶನಿವಾರ ಮಂಗಳವಾರ ಆದಿತ್ಯವಾರಂಗಳ್ ಕೂಡಿರುಹ, ಕೃತ್ತಿಗೆ ಪುನರ್ವಸು ಉತ್ತರೆ ಶತವಿಶಾಖೆ ಉತ್ತರಾಷಾಢೆ ಪೂರ್ವಾಭಾದ್ರೆ—ಈ ಆಱುಂ ನಕ್ಷತ್ರಂಗಳ್ ಕೂಡುಹ, ಈ ತಿಥಿವಾರ ನಕ್ಷತ್ರಂಗಳ್ ಕೂಡಿದೊಡೆ ತ್ರಿಪುಷ್ಕರಮೆಂಬ ಯೋಗಮೆನಿಸಿಕೊಳ್ವುದು. ಆ ದಿನಂ ಶುಭ[3]ಕಾರ್ಯಂಗಳ್ಗೆ ಲೇಸು—೨೧.

ಟೀ|| ಶತವಿಶಾಖೆ ಸ್ವಾತಿ ಪುಬ್ಬೆ ಪೂರ್ವಾಷಾಢೆ ಪೂರ್ವಾಭಾದ್ರೆ ಅಶ್ಲೇಷೆ ಭರಣಿ ಜ್ಯೇಷ್ಠೆ—ಈ ನಕ್ಷತ್ರಂಗಳಲ್ಲಿ ಷಷ್ಠಿ ಸಪ್ತಮಿ ಅಷ್ಟಮಿ ಚೌತಿ ನವಮಿ ಚತುರ್ದಶಿ—ಈ ತಿಥಿಗಳಲ್ಲಿ ಶನಿವಾರಂ ಆದಿತ್ಯವಾರಂ ಮಂಗಳವಾರಂ—ಈ ವಾರ ತಿಥಿ ನಕ್ಷತ್ರಂಗಳ್ ಕೂಡಿದಲ್ಲಿ [4]ರೋಗವಾದಾತಂ ಬರ್ದುಕಲರಿಯಂ—೨೨.

ಟೀ|| ಅತಿಗಂಡಂ, ವ್ಯಾಘಾತಂ, ವಜ್ರಂ, ಗಂಡಂ, ವಿಷ್ಕಂಭಂ, ವೈಧೃತಿ, ಶೂಲಂ, ಪರಿಘಂ—ಈ ಒಂಬತುಂ ಯೋಗಂಗಳೊಳ್ಳಿದುವು.- ಉೞಿದುವಶುಭಂಗಳ್—೨೩.

ಟೀ|| ವ್ಯತೀಪಾತಂ ಪರಿಘಂ ವೈಧೃತಿ ಯಿವು ಮೂಱುಂ ಯೋಗಂಗಳಲ್ಲಿ ಶುಭಕರ್ಮಂಗಳಂ ಮಾಡಲಾಗದು. ಗಂಡಯೋಗಂ ಅತಿಗಂಡಯೋಗಂ ಯಿೂ ಎರಡು ಯೋಗಂಗಳಲ್ಲಿ ಮೊದಲ ಆಱುಗೞಿಗೆಗಳ[5] ವರ್ಜಿಸುವುದು. ವಿಷ್ಕಂಭಯೋಗಕ್ಕೆ ಮೊದಲ ಮೂಱುಗೞಿಗೆಗಳಂ

---

1 ವಱೊಳ್. 2 [ಹರಿರಿಕ್ತ ಶನಿ] ಭೂ. 3 ಕರ್ಮಂ. 4 ರೋಗ ಬಿರ್ದಾತಂ ಬದುಕುವುದು ದುರ್ಲಭ. 5 ಕಳೆದರೆ ಅದಱ ದೋಷಪರಿಹಾರಂ.



(ಶುಭಾಶುಭ ಕರಣಂಗಳ್)

ಕಂ|| ಕರಣಂ ಪನ್ನೊಂದು ಚರ |
ಸ್ಥಿರ ಸ್ವರೂಪಂಗಳಲ್ಲಿ ವಿಷ್ಟಿಯದೊಂದುಂ ||
ಪರಿಹಾರ್ಯಮುೞಿದ ಪತ್ತುಂ |
ಕರಣಂ ಶುಭಕರಣಮಕ್ಕುಮಚಳಿತವಚನಾ || ೨೫ ||

(ವಿಷ್ಟಿಸಂಯೋಗಫಲಂ)

ಉ|| ಬೂದಿಯ ಕೃಷ್ಣಸಪ್ತಮಿಯ ಪೂರ್ವವಿಭಾಗದೊಳಿಯ್ದೆ ತತ್ತೃತೀ |
ಯಾದಶಮಿಾದಿನಂಗಳ ಪರತ್ರವಿಭಾಗೆಯೊಳಂತೆ ಜೊನ್ನದೇ ||
ಕಾದಶಿಯೊಳ್ ಚತುರ್ಥಿಯೊಳಿರುಳ್ ಪಗಲಷ್ಟಮಿ ಪೌರ್ಣಮಾಸೆ ಯಿಂ |
ಬೀದಿನದೊಳ್ ಸಮಸ್ತ ಶುಭಕಾರ್ಯ[1]ವಿನಾಶಮೆ ವಿಷ್ಟಿ ಪುಟ್ಟುಗುಂ || ೨೬ ||

ಮ|| ಸ್ರ|| ದಿವಸೇಂದ್ರಂ ನಿಂದು ಪೊಕ್ಕುಂ ಧ್ರುವಕರಣಚತುಷ್ಕಂಗಳೊಳ್ ಮತ್ತಮಾ ಕೌ |
ಲವದೊಳ್ ಕುಳ್ಳಿರ್ದು ನಿಲ್ಕು[3] ಸಲೆ ವಣಿಜೆ ಬವಂ ಬಾಲವಂ ವಿಷ್ಟಿಯೆಂಬಿ ||
ತಿವಱೊಳ್ [2]ಪುಟ್ಟಿರ್ದು ತಾಂ ತೈತುಲೆ ಗರಜೆಗಳೊಳ್ ಸಂಕ್ರಮಿಕ್ಕುಂ ಸಮಂತ |
ರ್ಘವುಮಂತಾ ಮಾಟ್ಕೆಯಿಂ ಪೆರ್ಚುಗು ಮೊದಲದ[3]ನಿಕ್ಕುಂ ಕರಂ ಕುಂದಿ ಬಕ್ಕಂ || ೨೭ ||

---

[4]ವರ್ಜಿಸುವುದು. ಶೂಲಯೋಗಕ್ಕೆ ಮೊದಲ ಅಯ್ದುಗೞಿಗೆಗಳಂ[5]ವರ್ಜಿಸುವುದು. ವಜ್ರಯೋಗಂ ವ್ಯಾಘಾತಯೋಗಂ ಇವೆರಡಕ್ಕೆ (೨) ವೊಂಬತ್ತುಗೞಿಗೆ ಕಳೆದ ಮೇಲೆ ಶುಭಂ. ಹೀಗೆ ನೋಡಿಕೊಳ್ವುದು—೨೪.

ಟೀ|| ಹನ್ನೊಂದು ಕರ[6]ಣಂಗಳೊಳಗೆ ಭದ್ರಾಕರಣವನ್ನು ಬಿಡುವುದು, ಉೞಿದ ಹತ್ತು ಕರಣಂಗಳುಂ ಶುಭಂಗಳಕ್ಕುಂ—೨೫.

ಟೀ|| ಚತುರ್ದಶಿ ಕೃಷ್ಣಪಕ್ಷದ ಸಪ್ತಮಿ ಇವಱ ಮೊದಲ ಭಾಗದಲ್ಲಿ, ತದಿಗೆ ದಶಮಿಯ ದಿನದ ಅಪರಭಾಗೆಯಲ್ಲಿ, ಶುಕ್ಲಪಕ್ಷದ ಏಕಾದಶಿ ಚೌತಿಯೊಳ್ ರಾತ್ರಿಯಲ್ಲಿ, ಅಷ್ಟಮಿ ಹುಣ್ಣಿಮೆಯ ದಿನದ ಹಗಲ್ ಈ ತಿಥಿಗಳಲ್ಲಿ ಹೇಳಿದ ವೇಳೆಗಳಲ್ಲಿ ದ್ವ(ವಿ)ಷ್ಟಿ ಕೂಡುವುದು. ಅಂದು ಮಾಡಿದಂತಹ ಶುಭಕಾರ್ಯಂಗಳ್ ಕಿಡುವುವು—೨೬.

ಟೀ|| ಶಕುನಿ ಚತುಷ್ಪಾತ್ ನಾಗವಾ ಕಿಂಸ್ತುಘ್ನಂ—ಇವು ನಾಲ್ಕುಂ ಕರಣಂಗಳಲ್ಲಿ ಸಂಕ್ರಮವಾದೊಡೆ ಆ ತಿಂಗಳಪರ್ಯಂತಂ ಅರ್ಘಂ ಪೆರ್ಚುವುದು, ಕೌಲವಕರಣದಲ್ಲಿ ಸಂಕ್ರಮವಾದೊಡೆ ಹುಟ್ಟಿದಂಥ ಅರ್ಘವು ಸಮವಾಗಿ ಇರ್ಪುದು. ವಣಿಜೆ ಬವಕರಣ ಬಾಲವ ಕರಣ ಭದ್ರಾಕರಣ—ಈ ನಾಲ್ಕಱಲ್ಲಿ ಸಂಕ್ರಮವಾದೊಡೆ ಅರ್ಘವು [ಕುಂದುವುದು], ತೈತಲೆ ಗರಿಜಾಕರಣಂಗಳಲ್ಲಿ ಸಂಕ್ರಮವಾದೊಡೆ ಅರ್ಘವು ಕುಂದಿಬರ್ಪು(ಹು)ದು—೨೭.

---

1 ವಿನಾಶನ. 2 ಪಟ್ಟಿರ್ದು. 3 ನಿಲ್ಕಂ. 4 ಬಿಟ್ಟರೆ ಲೇಸು. 5 ಬಿಡಬೇಕು. 6 ಐಂಗಳಿಗೆ.

ಕಂ|| ರವಿಜನನುಕ್ರಮದೆ[1] ಗುಣಿಶೇ |
ಷ್ಟವಾರದಿಂ[2] ಮೂಱುಗಟಿಗೆಯುಂ [3]ನಾಲ್ವತ್ತ ||
ಯ್ದು ವಿಗಟಿಗೆಯಿಂದೆ ಗುಣಿಯಿಸೆ |
ಸವನಿಸುಗುಂ ಸಂದ ಗು(ಕು)ಳಿ[4]ಕಸುದಯಂ ನಿರುತಂ || ೨೮ ||

ಅವಯೋಗಂ ಕುಳಿಕನ ಪೊ |
ಱ್ತು ವಿಷ್ಟಿ ನಷ್ಟದಿನ[5]ಮಿಂದು [6]ವೇಧಂ ಗಂಡಾಂ ||
ತವಿವೊಂದಿದಂದು[7] ಶುಭಕಾ |
ರ್ಯವಪ್ಪುವಂ ಮಾಡಲಾಗದೊಂದುಮನೆಂದುಂ || ೨೯ ||

ಮ|| ದಿನಪಂ [8]ಷ್ಟತ್ರಿದಶಂಗಳೊಳ್ ತ್ರಿದಶಷಟ್ಸಪ್ತಾದ್ಯದೊಳ್ ಚಂದ್ರನಾ |
ತನಪುತ್ರಂ ದ್ವಿ[9]ಚತುರ್ಥಮಷ್ಟಮ ದಶಸ್ಥಾನಂಗಳೊಳ್[10] ಮಂತ್ರಿಪಂ ||
ಚನವಾದ್ರಿ[11]ದ್ವಿಕದೊಳ್ ದಶಾದ್ರಿ ಷಡುವರ್ಜಸ್ಥಾನದೊಳ್ ಭಾರ್ಗವಂ |
ಶನಿ [12]ಭೌಮತ್ರಿಕ ಷಷ್ಠದೊಳ್ ಸಕಲ [13]ಮೇಕೋನಾಂತ್ಯದೊಳ್ ಶೋಭನಂ || ೩೦ ||

---

ಟೀ|| ಶನಿವಾರದಿನ ಉದಯ ಮೊದ[14]ಲಾಗಿ ಮೂಱುಗಟಿಗೆಯುಂ ನಾಲ್ವತ್ತಯ್ದು ವಿಗಟಿಗೆಯುಂ ಕುಳಿಕನು, ಆದಿತ್ಯವಾರದಲ್ಲಿ ಉದಯವಾದ ಮೂಱುಜಾವದಿಂದ ಮೇಲೆ ಕುಳಿಕನು, ಸೋಮವಾರ ಉದಯವಾದ ಎರಡುವರೆ ಜಾವದ ಮೇಲೆ ಮೂಱು ಮುಕ್ಕಾಲು ಗಟಿಗೆ ಕುಳಿಕನು, ಮಂಗಳವಾರದಲ್ಲಿ ಉದಯವಾದ ಎರಡು ಜಾವದ ಮೇಲೆ ಮುಕ್ಕಾಲು ಗಟಿಗೆ ಕುಳಿಕನು, ಬುಧವಾರ ಉದಯವಾದ ಒಂದುವರೆ ಜಾವದ ಮೇಲೆ ಮೂಱುಮುಕ್ಕಾಲು ಗಟಿಗೆ ಕುಳಿಕನು, [15]ಗುರುವಾರದಲ್ಲಿ ಉದಯವಾದ ಒಂದು ಜಾವದ ಮೇಲೆ ಮೂಱುಮುಕ್ಕಾಲು ಗಟಿಗೆ ಕುಳಿಕನು, ಶುಕ್ರವಾರ ಉದಯವಾದ ಅರೆ ಜಾವದ ಮೇಲೆ ಮೂಱುಮುಕ್ಕಾಲು ಗಱಿಗೆ ಕುಳಿಕನು—ಈ ಮರ್ಯಾದೆಯಲ್ಲಿ ಶನಿವಾರ ಮೊದ[16]ಲಾದ ಏೞು ವಾರಗಳಲ್ಲಿ ಈ ಪೇೞ್ದ ವೇಳೆ ಕುಳಿಕನ ಹೊತ್ತೆಂದು ಅಱಿವುದು—೨೮.

ಟೀ|| ಅವಯೋಗಂ ಕುಳಿಕನ ಪೊೞ್ತು ವಿಷ್ಟಿ ಅಮಾವಾಸ್ಯೆ ಚಂದ್ರನ ದುಷ್ಟಗ್ರಹದ ವೇಧೆ ಗಂಡಾಂತರಂ ಇವು ಕೂಡಿದ ತಿಥಿವಾರಂಗಳಲ್ಲಿ ಶುಭಕಾರ್ಯಂಗಳಂ ಮಾಡಲಾಗದು—೨೯.

ಟೀ|| ಆದಿತ್ಯನು ತನ್ನ ರಾಶಿಗೆ ೩–೬–೧೦ ರಲ್ಲಿರಲ್ ಶುಭಂ, ಚಂದ್ರಂ ೧–೩–೬–೭–೧೦ ರಲ್ಲಿರಲ್ ಶುಭಂ, ಬುಧಂ ೨–೪–೬–೮–೧೦ ರಲ್ಲಿರಲ್ ಶುಭಂ, ಬೃಹಸ್ಪತಿ ೨–೫–೭–೯

---

1 ದಿಂ. 2 ದಿಂದು. 3 ನಾಲ್ಕುಮಯ್ದು; ನಾಲ್ಕಯ್ದು. 4 ಕನ ಕಾಲಂ. 5 ದಿನಂ ಸಂಕ್ರಾಂತಿಯಿಂ ವೊಂದಿ. 6 ವಧಂ. 7 ದಂದು ಸಮಸ್ತ ಶುಭಕಾರ್ಯಮಪ್ಪವಂ. 8 ಷಟ್ತ್ರಿಂಶದಂಶಂಗಳೊಳ್, ತ್ರಿದಶಂಗಳೊಳ್. 9 ಚತುರ್ಥ ಮಷ್ಟಮ ದಶಮಸ್ಥಾನಂಗಳೊಳಂ ಯಂದ್ವಿನದ್ರಿ. 10 ತ್ರಿದಶಪಂಚನ. 11 ದ್ವಯ ದ್ವಿಚತು; ಪಂಚಾಷ್ಟಮನವಮಾದಿತ್ಯಂಗಳೊಳ್ ಸಕಲಮೇಕೋನಾಂತ್ಯದೊಳ್. 12 ಭೌಮತ್ರಿದಶಾಗ್ನಿಯೊಳ್, ಭೌಮರ್ [ತ್ರಿಷಡಾಯ]. 13 ನವಾದ್ರಿಪಂಚಮದೊಳೇಕದೊಳ್. 14 ಲಾದ ಮೂಱುಮುಕ್ಕಾಲು ಗಟಿಗೆಯುಂ. 15 ಬೃಹಸ್ಪತಿ. 16 ಲಾಗಿ ಹೇಳಿದ ಹೊತ್ತನ್ನು ಕುಳಿಕನ ಹೊತ್ತೆಂದು ಅಱಿವುದು, ಆ ಕುಳಿಕನ ವೇಳೆಯಲ್ಲಿ ವಿಷ್ಟಿ ನಷ್ಟದಿನ, ಅವಯೋಗ ಕುಳಿಕನ ಹೊತ್ತು ವಿಷ್ಟಿ ಅಮಾವಾಸ್ಯೆ—(ಎಂದು [illegible]ನೆಯ ಕಂದದ ಟೀಕೆ ನಿರಂತರವಾಗಿದೆ, ಆ ಕಂದಮಾತ್ರವಿಲ್ಲ).



ರಲ್ಲಿರಲ್ ಶುಭಂ, ಶುಕ್ರಂ *೧–೨–೩–೪–೫–೮–೯–೧೨ ರಲ್ಲಿರಲ್ ಶುಭಂ ಎಂಮೊಡೆ ಅಲ್ಲಿ ವೊಳ್ಳಿಹಂ, ಮುಂದೆ ಶನಿ ಮಂಗಳ ರಾಹು ಕೇತುಗಳ್ ೩–೬ ರಲ್ಲಿರಲ್ ಶುಭಂ. ಎಲ್ಲಾ ಗ್ರಹಂಗಳುಂ (೧೧) ಪನ್ನೊಂದನೆಯ ಸ್ಥಳದಲ್ಲಿ ವೊಳ್ಳಿದುವು, ಈ ವೊಂಬತ್ತುಂ ಗ್ರಹಂಗಳುಂ ಮಿೂ ಪೇೞ್ದ ಸ್ಥಾನಂಗಳಲ್ಲಿ ವೊಳ್ಳಿದುವು—೩೦.

## ಗದ್ಯಂ

ಇದು ಸಮಸ್ತ ಜನವಿನುತ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀಮುಕ್ತ ವಿತಾ ವಿ ಳಾ ಸ ತ ನೂ ಜಂ
ಶ್ರೀಮಚ್ಚಾವುಂಡರಾಯಂ
ವಿರಚಿತಮಪ್ಪ
**ಲೋಕೋಪಕಾರದೊಳ್**
ಪಂಚಾಂಗಫಲವರ್ಣನಂ
[1]ಪ್ರಥಮಾಧಿಕಾರಂ

---

1 ಪ್ರಥಮಾಶ್ವಾಸಂ.

* ಮೂಲದಲ್ಲಿ ದಶಾದ್ರಿ ಷಡುವರ್ಜ ಸ್ಥಾನದೊಳ್ ಭಾರ್ಗವಂ ಎಂದಿರುವುದರಿಂದ ಶುಕ್ರನು ೧೧–೭–೬ ವರ್ಜಗಳಲ್ಲಿ ಶುಭಂ—ಎಂದಿರಬಹುದು.

# ದ್ವಿತೀಯಾಧಿಕಾರಂ

## ೨. ನವಪಟಲಂ

ಕಂ|| ಸಾರಂ ಜೋಯಿಸದೊಳಗೆ ವಿ |
ಚಾರಂ ನವಪಟಲಮೆಂಬುದಂ ಸದ್ವಿದ್ಯಾ ||
ಪಾರಗನಿಷ್ಟವಿಶಿಷ್ಟಾ |
ಚಾರಂ ಪೇೞ್ಗುಂ ಸರಸ್ವತೀಮುಖತಿಲಕಂ || ೧ ||

(೧. ವಿವಾಹಪಟಲಂ)

ಮದು[1]ವೆಗೆ ಸಮಕಟ್ಟಿದ ಲ |
ಗ್ನ[2]ದಂತೆ ವೃಚ್ಛಕನ ಲಗ್ನಮಾದಂದು ಶುಭಾ ||
ಭ್ಯುದಯಂ ಮೇಣ್ ಜಾತಕಲ |
ಗ್ನದ ಫಲಮಂ ಪ್ರಶ್ನಲಗ್ನ[3]ದೊಳ್ ಬಗೆಗಱಿದಂ || ೨ ||

(ವಧೂವರರ್ಗೆ ಕಂಟಕಂ)

ಅಕ್ಕರಂ|| ಇರೆ ನಿಶಾಪತಿ ವೃಚ್ಛಕಲಗ್ನಕ್ಕೆ ಯೆಂಟಱೊಳಾಱಱ [4]ತಾಣದೊಳಂ |
ಮರಣವಬ್ದದಿನಬ್ದ ಚತುಷ್ಕದಿನಕ್ಕೆ ಕನ್ನಿಕೆಗಮಾ ಶನಿಯುಂ ಶುಭೇ ||
ತರದಿನೀಕ್ಷಿಸೆ ಬೇಗದೆ ಸಾವರ್ ದಂಪತಿಗಳಶುಭದೃಷ್ಟಿಯಿಂ |
ಬರಿಸವೆಂದಱಿಗೆ ವಿಮಿಶ್ರಂ ನೋೞ್ಪೊಡೆ [ಮರಣಂ] ನಾಲ್ಕನೆಯಬ್ದದೊಳಂ || ೩ ||

---

ಟೀ|| ಜ್ಯೋತಿಶ್ಶಾಸ್ತ್ರದಲ್ಲಿ ಸಾರವಾಗಿದ್ದಂಥ ವೊಂಬತ್ತು ಪಟಲಂಗಳಂ ಪೇೞ್ವೆಂ—೧.

ಟೀ|| [5]ವಿವಾಹಲಗ್ನಕ್ಕೆ ಹೇೞಾದ ಲಗ್ನವಂ ಬೆಸಗೊಂಬಾತನ ಲಗ್ನಮಂ ಶುಭಗ್ರಹಂಗಳ್ ನಿರೀಕ್ಷಿಸೆ, ಶುಭಗ್ರಹಂಗಳ್ ಉದಯವಾಗುತ್ತಿರೆ ಲೇಸಪ್ಪುದು, ಅವಂ ಹುಟ್ಟಿದ ಲಗ್ನವಂ ಹೇೞುತ್ತಿರಲ್ ಶುಭಾಶುಭ ಫಲಂಗಳನಱಿವುದು—೨.

ಟೀ|| ವಿವಾಹಲಗ್ನಕ್ಕೆ [6]ಮುಹೂರ್ತಮಂ ಬೆಸಗೊಂಡವೇಳೆಯ ಲಗ್ನಕ್ಕೆ ಚಂದ್ರಂ [7]ಎಂಟಱಲ್ಲಿ ಆಱನೆಯ ಸ್ಥಾನದಲ್ಲಿ ಇರ್ದೊಡೆ ಕನ್ನೆ [ಕನ್ನಿಕೆ] ಗೆ (ಒಂದು ವರ್ಷಕ್ಕೆ) ವರಂಗೆ ನಾಲ್ಕು ವರ್ಷಕ್ಕೆ ಕಂಟಕಮಂ [8]ಪೇೞ್ವುದು. ಆ [9]ಚಂದ್ರಂ ಪ್ರಶ್ನಲಗ್ನದಲ್ಲಿಯಿರ್ದೊಡೆ ಅಶುಭಗ್ರಹಂಗಳ್ ನಿರೀಕ್ಷಿಸುತ್ತಿರ್ದೊಡೆ ವರಂಗೆಯುಂ ಕನ್ನಿಕೆಗೆಯುಂ ಶೀಘ್ರದಲ್ಲಿ ಕಂಟಕಮಂ ಪೇೞ್ವುದು. ಅಶುಭ ಗ್ರಹಂಗಳ ದೃಷ್ಟಿಯಿರ್ದೊಡೆ ವರಕನ್ನಿಕೆಗಳಿಗೆ ವೊಂದುವರ್ಷಕ್ಕೆ ಕಂಕಟಮಂ ಪೇೞ್ವುದು. ಆ ಚಂದ್ರಂ ಆ ಲಗ್ನಕ್ಕೆ ಶುಭಾಶುಭಗ್ರಹಂಗಳ ನಿರೀಕ್ಷೆಯಿರ್ದೊಡೆ ನಾಲ್ಕು ವರ್ಷಕ್ಕೆ ಕಂಟಕವಂ ಪೇೞ್ವುದು—೩.

---

1 ನೆಮಕ. 2 ದಂತೆ ಮುತ್ಸವದ. 3 ದೊಳಗೆಗಂವೆಂ; ಪೇೞ್ಗಱಿವೆಂ. 4 ತಾಣವಬ್ದ ಚತುಷ್ಕ ದಿನಕ್ಕು ಕನ್ನಿಕೆಗಾ ಶೋಭೋತ್ಕರೆ ಕರನೀಕ್ಷಿಸೆ. 5 ವಿವಾಹಕ್ಕೆ ಹೇಳಿಲಗ್ನ ಬಾಹಾಗೆ ಬೆಸಗೊಂಬಾತನು ಲಗ್ನಮಂ ಶುಭಗ್ರಹಂಗಳ ನಿರೀಕ್ಷೆ. 6 ಲಗ್ನವ. 7 ಆಱಱಲ್ಲಿ. 8 ಇಲ್ಲಿಂದ ಮುಂದಣ ಟೀಕೆ ಒಂದು ಪ್ರತಿಯಲ್ಲಿಲ್ಲ. 9 ಕನ್ನಿಕೆಗೆ ಆ ಚಂದ್ರನು ಆ ಪ್ರಶ್ನಲಗ್ನದಲ್ಲಿಯಿದ್ದರೆ ಅಶುಭಂ.



ಚಂ|| ಉದಯದೊಳಿಂದು ಪೇೞಱಿದಿಯೊಳ್ ಧರಣೀಸುತನಿರ್ಪೊಡೆಂಟು ವಾ |
ಸದಿನಶುಭಗ್ರಹಂಗಳುದಯಾಸ್ತದೊಳಿರ್ಪೊಡೆ ಸಪ್ತಮಾಬ್ದದೊಳ್ ||
ಮದವಣಿ(ನಿ)ಗಂಗೆ ಸಾವು ದೊರೆಕೊಳ್ಗುಮಹಸ್ಪತಿ ಮೇಣ್ [1]ಮಹೀಜನ |
ಸ್ತದೊಳಿರೆ ಕನ್ನೆ ಸಾಗುಪಿದು ಶೌನಕ ಗಾರ್ಗ್ಯವರಾಹ ಸಮ್ಮತಂ || ೪ ||

ಪಿರಿಯಕ್ಕರಂ|| ಗುರುಸಿತಾಸ್ತಮಯಂ ಗ್ರಹಯುದ್ಧಂ ಸಂಕ್ರಮಣಂ [ರವಿಶಶಿಗಳ] ಪರಿ[2]ವೇಷಂ |
ಮರದಿನಂ ಮಱೆ [3]ಮಧಿಮಾಸಂ ನಷ್ಟದಿನವಾ ಗ್ರಹಣಂ ಪುರಂ ||
ದರಶರಾಸನಮುಂ ಸಕಳೋತ್ಪಾತಂ ದೊರೆಕೊಂಡೊಡಂ ಮೇಣ್ ಕಲಾ |
ಧರನೊ[4]ಳರ್ಕಯಮಾಹಿಸಿತರ್ ಕೂಡಿದೊಡೆ ಮಾಣ್ಗೆ ವೈವಾಹಮಂ || ೫ ||

ಕಂ|| ತ್ರಿದಿನಮಯನಂಗಳೊಳ್ ಸ |
ಪ್ತದಿನಂ ಗ್ರಹಣಂಗಳೊಳ್ ವಿ[illegible]ಸಲೊಂಬ ||
ತ್ತುದಿನಂ ಗ್ರಹಯುದ್ಧದೊಳೊಂ |
ದುದಿನಂ ಸಂಕ್ರಮಣಮಾದೊಡಂ ಶುಭಮಕ್ಕುಂ || ೬ ||

ಉದಯಿಸೆ ಭೃಗು ವಿಪ್ಪತ್ತೊಂ |
ದುದಿನಂ [5]ಪಡುವಲ್ ದಿನತ್ರಯಂ ಶಿಶು ಮೂಡ ||
ಸ್ತದೊಳಿರೆ ಮೂಡಲ್ ಪಂಚದ |
ಶದಿನಂಗಳ್ ಪಡವಲಯ್ದು ದಿವಸಂ ವೃದ್ಧಂ || ೭ ||

---

ಟೀ|| ಶಿ ಪಿಂತಣ ಪ್ರಶ್ನಲಗ್ನದಲ್ಲಿ ಚಂದ್ರಂ ಯಿರಲ್ ಮಂಗಳಂ ಸಪ್ತಮಸ್ಥಾನದಲ್ಲಿ ಯಿರಲ್ ಎಂಟು ತಿಂಗಳಿಂಗೆ ಮದವನಿ(ಣಿ)ಗಂಗೆ ಕಂಟಕಮಂ ಪೇೞ್ವುದು, ಆ ಲಗ್ನಕ್ಕೆ ಆದಿತ್ಯ ಮಂಗಳರ್ಗಳವೊಳಗೆ ಒರ್ವರ್ ಅಸ್ತಂಗತರಾಗಿಯಿರ್ದೊಡೆ ಕನ್ನಿಕೆಗೆ ಕಂಟಕಮಂ ಪೇೞ್ವುದು, ಇದು ಪೂರ್ವದಲ್ಲಿ [6]ಜ್ಯೋತಿಶ್ಶಾಸ್ತ್ರಜ್ಞರ್ ಮುನ್ನಾಚಾರ್ಯರ್ ಶೌನಕಗಾರ್ಗ್ಯವರಾಹರ ಸಮ್ಮತಂ—೪.

ಟೀ|| ವಿವಾಹಕ್ಕೆ ಬೃಹಸ್ಪತಿ ಶುಕ್ರರ್ಕಳ್ ಅಸ್ತಂಗತರಾಗಿರ್ದೊಡೆ, ಗ್ರಹಯುದ್ಧವಾಗಿರ್ದೊಡೆ ಸಂಕ್ರಾನ್ತಿಯದಿನಂ ಸೂರ್ಯಚಂದ್ರರ್ಗೆ ಪರಿವೇಷವಾದೊಡೆ, ಮೞೆಗಾಲದಲ್ಲಿ ಅಧಿಕಮಾಸದಲ್ಲಿ ಅಮಾವಾಸ್ಯೆಯದಿನಂ ಗ್ರಹಣದಲ್ಲಿ ಇಂದ್ರಧನು ಮೂಡಿದೊಡೆ ಉತ್ಪಾತಂಗಳ್ ತೋಱಿದೊಡೆ ಅಲ್ಲಿ ಆದಿತ್ಯ ಶನಿ ರಾಹು ಶುಕ್ರರೊಳಗೆ ಚಂದ್ರಂ ಆವುದೊಂದು ಗ್ರಹದ ಕೂಡೆ ಯಿರ್ದೊಡೆ ವಿವಾಹಮಂ ಮಾಡಲಾಗದು—೫.

ಟೀ|| ಉತ್ತರಾಯಣ ದಕ್ಷಿಣಾಯನಂಗಳಲ್ಲಿ ಮೂಱುದಿನಮಂ ಬಿಡುವುದು, ಗ್ರಹಣಮಾದೊಡೆ ಮೇಲೇೞು ದಿನಂಗಳಂ ಬಿಡುವುದು, ಗ್ರಹಯುದ್ಧಮಾದೊಡೆ ಮೇಲೆ ಪೊಂಬತ್ತು ದಿನಂಗಳಂ ಬಿಡುವುದು, ಸಂಕ್ರಾನ್ತಿಯಾದೊಡೆ ಒಂದು ದಿನಮಂ ಬಿಟ್ಟು ವಿವಾಹಮಂ ಮಾಳ್ಪುದು—೬.

ಟೀ|| ಶುಕ್ರಂ ಉದಯವಾದಲ್ಲಿ ಪಡುವಲ್ ಇರ್ಪತ್ತೊಂದಿನಂ ಮೂಡಲ್ ಮೂಱು ದಿನಂ ಬಾಲಕನಾಗಿರ್ಪಂ, ಅಸ್ತಮಯಮಾದೊಡೆ ಮೂಡಲ್ ಪದಿನಯ್ದುದಿನಂ ಪಡುವಲಯ್ದು ದಿನಂ ವೃದ್ಧನಾಗಿರ್ಪಂ—೭.

---

1 ಮಹೀಜ ನಪ್ಪಸ್ತದೊಳಿರೆ. 2 ವೇಷಮಾಮರ? ವೇಷಮಭೂಮ. 3 ಅಧಿಕಮಾಸ. 4 ಳರ್ಕಮಮಾಹಿತಾರಾ ಕೂಡಿ. 5 ಮೂಡಲ್ ದಿನತ್ರಯಂ ಬಱಿಕ್ಕಂ... ಮೂಡಲ್ ಪಂಚ (ಟೀಕೆಯನ್ನು ನೋಡಿ ಕಂದ ಭಾಗವನ್ನು ಪೂರ್ಣಗೊಳಿಸಿದೆ). 6 ಇದು ಜ್ಯೋತಿಶ್ಶಾಸ್ತ್ರವ ಹೇಳಿಪ ಸಮಸ್ತ ಆಚಾರ್ಯರುಗಳ ಸಮ್ಮತ.

ಕಂ|| *ಬಾಲಸಿತಂ ಪೊಂದಿಸುಗುಂ |
ಬಾಲಿಕೆಯಂ ವೃದ್ಧಶುಕ್ರನಲೆಗುಂ ವರನಂ ||
ಬಾಲಗುರು ವರನ ನಲೆಗುಂ |
ಬಾಲಿಕೆಯಂ ವೃದ್ಧ[1]ಗುರು ಕರಂ ಪೀಡಿಸುಗುಂ || ೮ ||

ಮ|| ಸಮಸಂವತ್ಸರಮಾಗೆ ಕನ್ನೆಗಸಮಾಬ್ದಂಗಳ್ ವರಂಗಾಗೆ ಸಂ |
ದಮರೇಜ್ಯಾರ್ಕಬಲಂಗಳುಂ [2]ತವಗೆ ತಾವಾಗಿರ್ಪಿನಂ ಚೈತ್ರಪು ||
ಷ್ಯಮದಾಷಾಢಚತುಷ್ಕಮಂ ಬಿಸುಟು [3]ಶುಕ್ಲಾದ್ಯಾಹದಿಂ ಕೃಷ್ಣಪಂ |
ಚಮಿಯಂತಾಗೆ ವಿಶುದ್ಧಮಪ್ಪ ದಿನದೊಳ್ ಮಾಳ್ಕುಷ್ಪವೈವಾಹಮಂ || ೯ ||

ಕಂ|| ಖರಕಿರಣವಾರದೊಳ್ ವಾ |
ಸರನಾ[4]ಥೋದಯದೊಳುಗ್ರತಾರೆಗಳೊಳ್ ಕೂ ||
ಡಿರೆ ಚಂದ್ರಮನುಂ ಕನ್ನೆಯ |
[5]ನಿರದೆರೆಯೆ ಕೂಸುಗುಡವರೆಂತಪ್ಪವರ್ಗಳ್ || ೧೦ ||

---

ಟೀ|| ಶುಕ್ರಂ ಬಾಲನಾಗಿರ್ದಲ್ಲಿ ವಿವಾಹಮಂ ಮಾಡಿದೊಡೆ ಕನ್ನಿಕೆಗೆ [6]ಕಂಟಕಮಂ ಪೇೞ್ವುದು, ಆ ಶುಕ್ರನೆ ವೃದ್ಧನಾಗಿ[7]ರ್ದಲ್ಲಿ ಮದುವೆಯಂ ಮಾಡಲ್ ವರಂಗೆ ಬಾಧೆಮಾಡುವಂ ಮತ್ತಂ ಬೃಹಸ್ಪತಿ ಬಾಲನಾಗಿರ್ದಲ್ಲಿ ವಿವಾಹಮಂ ಮಾಡಲ್ [8]ವರಕ್ಕೆ ಕಂಟಕಂ, ಆತನೆ ವೃದ್ಧನಾಗಿರ್ದಲ್ಲಿ ವಿವಾಹವಾದೊಡೆ ಕನ್ನಿಕೆಗೆ ಕಂಟಕಂ—೮.

ಟೀ|| [9]ಕನ್ನೆಗೆ ಸಮವರ್ಷಮಾದೊಡೆ ವರಂಗೆ ವಿಷಮವರ್ಷಮಾದೊಡೆ, ಕನ್ನೆಗೆ ಗುರುಬಲವಿಲ್ಲದಿರ್ದೊಡೆ ವರಂಗೆ ಆದಿತ್ಯನಬಲವಿಲ್ಲದಿರ್ದೊಡೆ ಚೈತ್ರಮಾಸಂ, ಪುಷ್ಯಂ, ಆಷಾಢಂ, ಶ್ರಾವಣಂ, ಭಾದ್ರಪದಂ, ಆಶ್ವಯುಜಂ—ಈ ಮಾಸಂಗಳುಮಂ, †ಶುಕ್ಲಪಕ್ಷದ ಪಂಚಮಿ ಪರ್ಯಂತ ಅಯ್ದುದಿನಮಂ ಬಿಟ್ಟು ಉೞಿದ ಶುಭದಿನಂಗಳ್, ಈ ಶುಭದಿನಂಗಳಲ್ಲಿ ವಿವಾಹಮಂ ಮಾಡುವುದು—೯.

ಟೀ|| ಆದಿತ್ಯವಾರದಲ್ಲಿ ಸೂರ್ಯೋದಯದಲ್ಲಿ ಚಂದ್ರಂ ಉಗ್ರತಾರೆಗಳಂ ಕೂಡಿಕೊಂಡು ಯಿರಲ್ ವಾಗ್ದಾನ ವಿವಾಹಗಳಂ ಮಾಡಲಾಗದು—೧೦.

1 ಶುಕ್ರಕರಪೀಡಿ. 2 ವರೆಗೆ. 3 ಶುಕ್ಲೋದ್ಯಾಹ. 4 ಕರನುದಯದೊಳ್ ದುಷ್ಟ ......ಮೂಡಿದರೆ ಚಂದ್ರನು ಕನ್ನೆಯ ಕೂಡಿರೆ ಕೊಡಗೂಸುಗಳ ಕೂಡುವ. 5 ನೊಡಗೂಡಿರೆ. 6 ಕಂಟಕವು. 7 ದ್ದಲ್ಲಿ ಕನ್ನಿಕೆಯಂ ಬಂಧಿಸುವನು, ವರಂಗೆ ಬಾಧೆಯು. 8 ವರನ ಬಾಧಿಸುವುದು, ಸಿತವೃದ್ಧನಾಗಿದ್ದಲ್ಲಿ ಕನ್ನಿಕೆಯ. 9 ಕನ್ನಿಕೆಗೆ ...ವಾದರೆ.

* ಈ ಕಂದದ ಹಿಂದೆ ಗುರು ಬಾಲ ವೃದ್ಧತ್ವವನ್ನು ಹೇಳುವ ಒಂದು ಕಂದವೂ ಟೀಕೆಯೂ ಇರಬೇಕು.

† ಮೂಲದಲ್ಲಿ- ಶುಕ್ಲಾದ್ಯಾಹದಿಂ ಕೃಷ್ಣಪಂಚಮಿಯಂತಾಗೆ ವಿಶುದ್ಧಮಪ್ಪ ದಿನದೊಳ್—ಎಂದಿರುವುದರಿಂದ, ಶುಕ್ಲಪಕ್ಷದಿಂದ ಬಿಡುವ ಅಯ್ದು ದಿನಗಳು ನಿಷಿದ್ಧದಿನಗಳಲ್ಲವಾದುದರಿಂದಲೂ, ಶುಕ್ಲಪಕ್ಷದ ಆದ್ಯಾಹ (ಪ್ರಥಮೆಯಿಂದ) ದಿಂದ ಕೃಷ್ಣಪಕ್ಷದ ಪಂಚಮಿ ಪರ್ಯಂತ ದಿನಗಳಲ್ಲಿ ಶುಭದಿನವಂ ನೋಡಿ, ಆ ದಿನದಲ್ಲಿ—ಎಂದು ಅರ್ಥ ಹೇಳುವುದುಚಿತವು.



ಕಂ|| ಉಡುಪತಿ [1]ದಾರುಣ ತಾರೆಗ |
ಳೊಡನಿರೆ ಶನಿವಾರದಂದು ಮಂದೋದಯದೊಳ್ ||
[2]ಕೊಡುಗೂಸನೆರೆಯೆ ಮುನಿದರ |
ನೊಡಗೂಡುಗೆ ಕೂಸುಗುಡುವರೊಪ್ಪಿಂ ತಮ್ಮೊಳ್ || ೧೧ ||

(ರಾಶಿಕೂಟಂ ೧)

ದಶಮಚತುರ್ಥತ್ರಿಯೇಕಾ |
ದಶ ಸಮ[3]ಸಪ್ತಕ [ಮಿಂವು ಕರ] ಮುಚಿತಂ ದ್ವಿದ್ವಾರ್ ||
ದಶ ಷಷ್ಠಾಷ್ಟಮ ರಾಶಿಗ |
ಳಶುಭಂ ನವಪಂಚಮಂಗಳವು ಸಾಮಾನ್ಯಂ || ೧೨ ||

(ಗಣಕೂಟಂ ೨)

ಮ|| ಸ್ರ|| ಮೃಗಶೀರ್ಷಂ ಸ್ವಾತಿಪುಷ್ಯಾದಿತಿ ಹರಿ ದಿನಕೃನ್ನೈರೃತ್ರ ಪೌಷ್ಣಾಶ್ವಿಗಳ್ ದೇ |
ವಗಣಂಗಳ್ ಸಂದ ಮೂಱುತ್ತರೆ ಭರಣಿ ಭವಂ ಧಾತೃಪೂರ್ವತ್ರಯಂ ಮ ||
ರ್ತ್ಯಗಣಂ ಜ್ಯೇಷ್ಠಾಬ್ಧಿ ಚಿತ್ರಾನಳ ಪಿತೃವಸು ರಕ್ಷಂ ವಿಶಾಖಾಹಿಗಳ್ ದೈ |
ತ್ಯಗಣಂ ತಂತಮ್ಮೊಳೊಳ್ಳಿತ್ತುೞಿದುವು ನರಸುರರಂ ಮಧ್ಯಮಂ ಕಷ್ಟಮನ್ಯಂ || ೧೩ ||

---

ಟೀ|| ಚಂದ್ರಂ ದಾ(ವಾ)ರುಣ ತಾರೆಗಳಲ್ಲಿ ಯಿರಲ್ ಶನಿವಾರದಲ್ಲಿ ಆ [4]ಶನಿಯುದಯದಲ್ಲಿ ಕನ್ನಿಕೆಯಂ ಬೇಡಿದೊಡೆ ಮುನಿದಿರ್ದವರ ಮುನಿಸು[5]ತಿರ್ದ್ದಿ ಕನ್ನಿಕೆಯಂ ಕುಡುವರ್, ಮುನಿಸುತಿರ್ದ್ದಿ ಸುಖದೊಳಿರ್ಪರ್—೧೧.

ಟೀ|| ದಶಮಚತುರ್ಥಂ ತೃತೀಯೈಕಾದಶಂ ಸಮಸಪ್ತಕಂ—ಈ ಮೂಱು ಕೂಟಂಗಳ್ ಉತ್ತಮಂ. ದ್ವಿದ್ವಾರ್ದಶಕಂ, ಷಷ್ಠಾಷ್ಟಮಂ—ಈ ಎರಡು ಕೂಟಂಗಳುಂ ಕಷ್ಟಂ. ನವಪಂಚಮ ಮೊದಲಾಗಿ ಉೞಿದ ಕೂಟಂಗಳ್ ಮಧ್ಯಮಂ—೧೨.

ಟೀ|| ಮೃಗಶೀರ್ಷ ಸ್ವಾತಿ ಪುಷ್ಯಂ ಪುನರ್ವಸು ಶ್ರವಣಂ ಹಸ್ತಂ ಅನುರಾಧೆ ರೇವತಿ ಅಶ್ವಿನಿ—ಈ ಯೊಂಬತ್ತುಂ ನಕ್ಷತ್ರಂಗಳ್ ದೇವಗಣಂಗಳ್. ಉತ್ತರೆ ಉತ್ತರಾಷಾಢೆ ಉತ್ತರಾಭಾದ್ರೆ ಭರಣಿ ಆರ್ದ್ರೆ ರೋಹಿಣಿ ಪುಬ್ಬೆ ಪೂರ್ವಾಷಾಢೆ ಪೂರ್ವಾಭಾದ್ರೆ—ಈ ಯೊಂಬತ್ತುಂ ನಕ್ಷತ್ರಂಗಳ್ ಮನುಷ್ಯ ಗಣಂಗಳ್, ಜ್ಯೇಷ್ಠೆ ಶತ (ವಿಶಾಖೆ) ತಾರೆ ವಿಶಾಖೆ ಚಿತ್ರೆ ಕೃತ್ತಿಕೆ ಮಘೆ ಧನಿಷ್ಠೆ ಮೂಲಂ ಆಶ್ಲೇಷೆ—ಈ ಒಂಬತ್ತುಂ ನಕ್ಷತ್ರಂಗಳ್ ರಾಕ್ಷಸ ಗಣಂಗಳ್. ಈ ಗಣಂಗಳಲ್ಲಿ ದೇವಗಣಂ ದೇವಗಣಂ ಉತ್ತಮಂ, ಮನುಷ್ಯಗಣಂ ಮನುಷ್ಯಗಣಂ ಉತ್ತಮಂ, ರಾಕ್ಷಸಗಣಂ ರಾಕ್ಷಸಗಣಂ ಉತ್ತಮಂ (ಯಿವು ತಮ್ಮೊಳ್ ತಾವು ಉತ್ತಮಂ). ದೇವಗಣ ಮನುಷ್ಯಗಣಂಗಳ್ ಕೂಡಿದರೆ ಮಧ್ಯಮಂ, (ದೇವಗಣ ರಾಕ್ಷಸಗಣಂಗಳ್ ಕೂಡಿದೊಡೆ ಅಧಮಂ), ಮನುಷ್ಯಗಣ ರಾಕ್ಷಸಗಣಂಗಳ್ ಕೂಡಿದೊಡಂ ಅಧಮಂ, ಕಷ್ಟಂ—೧೩.

1 ವಾರುಣ. 2 ಕೊಡಗಿನ ಗೆಯ್ಮೆ. 3 ಸಪ್ತಕಮುಚಿತಂ. 4 ಶನಿವಾರೋದಯ. 5 ತಿದ್ದಿದರೆ ಆ ಕನ್ನೆಯನು ಕುಡುವರುಂ ಮುನಿಸಿಲ್ಲದೆ ಸುಖದಲಿಹರು.

(ಯೋನಿಕೂಟಂ ೩)

ಅಕ್ಕರಂ|| ಕುದುರೆ ಗಜಮಾಡು ನಾಗಿಣಿ ನಾಗೇಂದ್ರಂ ಶುನಕಿ ಪೆಣ್ಬೆಕ್ಕು ಅಜಂ ಬೆಕ್ಕು [1]ಮೂಷಕ |
ಸದಱಿಪೆಣ್ ಗೂಳಿ ಮಹಿಷಿ ಪೆಣ್ಬುಲಿ ಕೋಣಂ ಪುಲಿ ಪುಲ್ಲೆ ಯೆರಳೆ ನಾಯ್ ಕೋಡಗಂ ||
[2]ಪಿಡಿ ಪಿಡಿಕಂ ವಾನರಿ ಸಿಂಡಿತಿ ಘೋಟಗೆ ಮಾನವಪಶು ಪಿಡಿಯೆಂಬಿವು ಅಶ್ವಿ |
ನ್ಯಾದಿಯಿಂ ಬರೆ ಯೋನಿಗಳನಱಿ ನೀನಲ್ಲಿ ನಿಜದಿಂದೆ ಪಗೆಕೆಳೆಯಂ ||೧೪||

(ಗ್ರಹಶತ್ರುಮಿತ್ರತ್ವಂ ೪)

ಕಂ|| ದಿನಪಂಗೆ ರವಿಜ ಭೃಗಜರ್ |
ಕನಕಂಗೆ ಬುಧಂ ಬುಧಂಗೆ ಶಶಿ ಗುರುಗೆ ಬುಧೋ ||
ಶನರುಶನಂಗಿನಶಶಿಗಳ್ |
ಶನೈಶ್ಚರಂಗರ್ಕಸೋಮ ಭೌಮರ್ [3]ಪಗೆಗಳ್ ||೧೫||

ಮ|| ದಿನನಾಥಂಗೆ ಕುಜೇಂದುಶುಕ್ರಗುರುಗಳ್ ಸೋಮಂಗೆ ಸೂರ್ಯೇಂದುಜರ್ |
ಕನಕಂಗಿಂದ್ವಿನಮಂತ್ರಿಗಳ್ ಶಶಿಸುತಂಗರ್ಕೋಶನರ್ ಮಂತ್ರಿಗಿಂ ||
ದ್ವಿನ ಭೌಮರ್ ಭೃಗುಜಂಗೆ ಸೌಮ್ಯರವಿಜರ್ ನೀಳಂಗೆ ಶುಕ್ರಜ್ಞರಿಂ |
ತು ನಿತಾಂತಂ ಕೆಳೆಯರ್ ವಿಚಾರಿಪೊಡುದಾಸೀನಂಗಳನ್ಯಗ್ರಹಂ ||೧೬||

---

ಟೀ|| ಅಶ್ವಿನಿಗೆ–ಕುದುರೆ ಭರಣಿಗೆ–ಗಂಡಾನೆ ಕೃತ್ತಿಗೆಗೆ–ಆಡು ರೋಹಿಣಿಗೆ–ನಾಗಿಣಿ ಮೃಗಶಿರೆಗೆ–ನಾಗೇಂದ್ರಂ ಆರ್ದ್ರೆಗೆ–ಪೆಣ್ನಾಯ್ ಪುನರ್ವಸುಗೆ–ಪೆಣ್ಬೆಕ್ಕು ಪುಷ್ಯಕ್ಕೆ–ಹೋತು ಆಶ್ಲೇಷೆಗೆ–ಬೆಕ್ಕು ಮಘೆಗೆ–ಗಂಡಿಲಿ ಹುಬ್ಬೆಗೆ–ಹೆಣ್ಣಿಲಿ ಉತ್ತರೆಗೆ–ಗೂಳಿ ಹಸ್ತಕ್ಕೆ–ಎಮ್ಮೆ ಚಿತ್ತೆಗೆ–ಪೆಣ್ಬುಲಿ ಸ್ವಾತಿಗೆ–ಕೋಣಂ ವಿಶಾಖೆಗೆ–ಹುಲಿ ಅನೂರಾಧೆಗೆ–ಹುಲ್ಲೆ ಜ್ಯೇಷ್ಠೆಗೆ – ಎರಳೆ ಮೂಲಕ್ಕೆ – ಗಂಡುನಾಯ್ ಪೂರ್ವಾಷಾಢಕ್ಕೆ – ಕೋಡಗಂ ಉತ್ತರಾಷಾಢಕ್ಕೆ–ಎಱ್ತು ಶ್ರವಣಕ್ಕೆ–ಪೆಣ್ಕೋಡಗಂ ಧನಿಷ್ಠೆಗೆ–ಸಿಂಹಿ ಶತತಾರೆಗೆ–ಗೋಟಗೆ ಪೂರ್ವಭಾದ್ರಪದೆಗೆ–ಮನುಷ್ಯಂ ಉತ್ತರಾಭಾದ್ರಪದೆಗೆ–ಆಕಳು ರೇವತಿಗೆ–ಪೆಣ್ಣಾನೆ—ಇವು ಯೋನಿಗಳ್ ಇವಱ ಕೆಳೆಪಗೆಗಳ ನಱಿತುಕೊಳ್ವುದು—೧೪.

ಟೀ|| ಸೂರ್ಯಂಗೆ ಶನಿಶುಕ್ರರಿರ್ವರುಂ ಪಗೆಗಳ್. [4]ಮಂಗಳಂಗೆ ಬುಧಂ ಪಗೆ, ಬುಧಂಗೆ ಸೋಮಂ ಹಗೆ, ಬೃಹಸ್ಪತಿಗೆ ಬುಧಶುಕ್ರರಿರ್ವರುಂ ಪಗೆಗಳ್. ಶುಕ್ರಂಗೆ ಆದಿತ್ಯನುಂ, ಸೋಮನುಂ ಪಗೆಗಳ್. ಶನೈಶ್ಚರಂಗೆ ಆದಿತ್ಯಸೋಮಮಂಗಳರ್ ಮೂವರುಂ ಪಗೆಗಳ್—೧೫.

ಟೀ|| ಸೂರ್ಯಂಗೆ ಮಂಗಳಂ, ಸೋಮಂ, ಶುಕ್ರಂ, ಬೃಹಸ್ಪತಿ—ಈ ನಾಲ್ವರುಂ ಮಿತ್ರರ್. ಸೋಮಂಗೆ ರವಿ ಬುಧರಿರ್ವರುಂ ಮಿತ್ರರ್. ಮಂಗಳಂಗೆ ಸೋಮನುಂ, ಆದಿತ್ಯನುಂ, ಬೃಹಸ್ಪತಿಯುಂ—ಈ ಮೂವರುಂ ಮಿತ್ರರ್. ಬುಧಂಗೆ ಆದಿತ್ಯನುಂ, ಶುಕ್ರನುಮಿರ್ವರುಂ ಮಿತ್ರರ್. ಬೃಹಸ್ಪತಿಗೆ ಚಂದ್ರನುಂ, ಆದಿತ್ಯನುಂ, ಮಂಗಳನುಂ—ಈ ಮೂವರುಂ ಮಿತ್ರರ್. ಶುಕ್ರಂಗೆ ಬುಧನುಂ, ಶನಿಯುಮಿರ್ವರುಂ ಮಿತ್ರರ್. ಶನಿಗೆ ಶುಕ್ರನುಂ, ಬುಧನು ಮಾಯಿರ್ವರುಂ ಮಿತ್ರರ್. ಈ ಪೇೞ್ದ ಗ್ರಹಂಗಳ್ ತಮ್ಮೊಳಗೆ ತಾವು ಮಿತ್ರರ್. ಉೞಿದ ಗ್ರಹಂಗಳ್ ಸಮಂಗಳ್—೧೬.

---

1 ಕೊಂಕದಱ. 2 ಇಲ್ಲಿ ಪ್ರಾಸು ಕೆಟ್ಟಿದೆ– ಎತ್ತು ಎಂಬರ್ಥಕೊಡುವ ಶಬ್ದವಿರಬೇಕು. 3 ಪಗೆವರ್. 4 ಚಂದ್ರನಿಗೆ ಪಗೆಗಳನ್ನು ಹೇಳಿಲ್ಲ.



(ವಿವಾಹಕ್ಕುಚಿತ ನಕ್ಷತ್ರಂಗಳ್)

ಕಂ|| ಅನು[1]ರಾಧಂ ಮೂಱುತ್ತರೆ |
ಯನಿಲಂ ಮಘೆ ಮೃಗಶಿರಂ ಪ್ರಜಾಪತಿ ಮೂಲಂ ||
ದಿನನಾಥಂ ರೇವತಿ [2]ಯಿಂ |
ಬನಿತಱೊಳಂ ಮಾೞ್ಕೆ ಮದುವೆಯಂ ದೈವಜ್ಞರ್ ||೧೭||

(ವಿವಾಹಕ್ಕುಚಿತ ಲಗ್ನಂಗಳ್)

ಸಮನಿಸಿರೆ ಕನ್ನೆ ತೊಲೆ ಮಿಥು |
ನಮೆಂಬಿವತ್ಯುತ್ತಮಂ ವಿಚಾರಿಸೆ ಧನು ಮ ||
ಧ್ಯಮ ಮುಳಿದುವು ಕಷ್ಟಂ ಮ |
ತ್ತಮಲ್ಲಿ [3]ಬುಧಗುರು ಹಿಮಾಂಶುವುದಯಿಸೆ ಶುಭದಂ ||೧೮||

ಮ|| ಉದಯಕ್ಕದ್ರಿಗಜಾಂತ್ಯದೊಳ್ ವಿಫಲದಂ ಸೌಮ್ಯಗ್ರಹಂ ಶುಕ್ರನಂ |
ತ್ಯದೊಳಂ ಮೂಱಱೊಳಂ ಬೞಿಕ್ಕನುಚಿತಂ ನೇತ್ರಾಗ್ನಿರುದ್ರೇಷು ರಂ ||
ಧ್ರದೊಳುತ್ಕೃಷ್ಟಫಲಪ್ರದಂ ಹಿಮಕರಂ ಪಾಪಗ್ರಹಂಗಳ್ ಶುಭ |
[4]ಪ್ರದರೀಶರ್ತುವೊಳಗ್ನಿಯೊಳ್ ಮಹಿಸುತಂ ಮತ್ತೆಂಟಱೊಳ್ ನಿಂದಿತಂ ||೧೯||

(ಒಲ್ಲದ ಸ್ತ್ರೀ ಪುರುಷರ ಕೂಟಕ್ಕೆ)

ಕಂ|| ಪುರುಷನನೊಲ್ಲದ ವಧುವಂ |
ಸುರೇಂದ್ರ ಗುರು ಮೂಡೆ ಕೂಡುಗಂತಾ ವಧುವಂ ||
ಪುರುಷಂ ಮೆಚ್ಚದೊಡಂ ದೈ |
ತ್ಯರಾಜಗುರು ಮೂಡೆ ಕೂಡಿಸಂದುಂ ಕೊರ್ಪರ್ ||೨೦||

---

ಟೀ|| ಅನೂರಾಧೆ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ಸ್ವಾತಿ, ಮಘೆ, ಮೃಗಶಿರೆ, ರೋಹಿಣಿ, ಮೂಲಂ, ಹಸ್ತೆ, ರೇವತಿ—ಈ (೧೧) ಪನ್ನೊಂದು ನಕ್ಷತ್ರಂಗಳಲ್ಲಿ ವಿವಾಹಮಂ ಮಾಡುವುದು—೧೭.

ಟೀ|| ಕನ್ನೆ, ತೊಲೆ, ಮಿಥುನಮಿಾ ಮೂಱುಂ ಲಗ್ನಂಗಳ್ ಉತ್ತಮಂಗಳ್, [5]ಧನುಸ್ಸು ಮಧ್ಯಮಂ, ಉೞಿದ ಲಗ್ನಂಗಳ್ ಕಷ್ಟಂಗಳ್, ಆ ಕಷ್ಟ ಲಗ್ನಂಗಳ್ಗೆ [6]ಗುರುಚಂದ್ರಶುಕ್ರರ್ಕಳ್ ದೋರ್ಡೆ ಉತ್ತಮಂ—ಸಕಲ ಶುಭಕರ್ಮಂಗಳುಮಂ ಮಾಡಬಹುದು—೧೮.

ಟೀ|| ಶುಭಗ್ರಹಂಗಳ್ ಲಗ್ನಕ್ಕೆ ಏೞು, ಎಂಟು, ಹನ್ನೆರಡು (೭ ೮ ೧೨) ಈ ಮೂಱುಂ ಸ್ಥಾನಂಗಳಲ್ಲಿ ಪೊಳ್ತಿತಲ್ಲ. ಶುಕ್ರನುಂ [7]ಆಱಱಲ್ಲಿ, ಹನ್ನೆರಡಱಲ್ಲಿ (೬ ೧೨) ಒಳ್ಳಿತ್ತಲ್ಲ. ಚಂದ್ರಂ ಆ ಲಗ್ನಕ್ಕೆ ಎರಡು, ಮೂಱು, ಹನ್ನೊಂದು, ಅಯ್ದು, ಒಂಭತ್ತು (೨ ೩ ೫ ೯ ೧೧) ಈ ಸ್ಥಾನಂಗಳಲ್ಲಿ ಉತ್ತಮಂ. ಪಾಪಗ್ರಹಂಗಳ್ ಹನ್ನೊಂದು, ಆಱು, ಮೂಱು (೧೧ ೬ ೩) ಈ ಸ್ಥಾನಂಗಳಲ್ಲಿದೊರ್ಡೆ ಉತ್ತಮಂ, ಮಂಗಳಂ. ಎಂಟನೆಯಲ್ಲಿ (೮) ಕಷ್ಟಂ—೧೯.

ಟೀ|| ಪುರುಷನನೊಲ್ಲದ ಸ್ತ್ರೀಯುಂ ಬೃಹಸ್ಪತಿ ಉದಯವಾಗಲ್ [8]ಆ ಪುರುಷನೊಡನೆ

---

1 ರಾಧೇ, ರಾಧೆಯು. 2 ಯಿಂತಿನಿ. 3 ಟೀಕೆಯಂತೆ ಸಿತಗುರು–ಎಂದಿರಬಹುದು. 4 ಪ್ರದರ್ಶ ಶಾತ್ರುಗಳಗ್ನಿ. 5 ಧನುರ್ಲಗ್ನ. 6 ಬೃಹಸ್ಪತಿ ಶುಕ್ರರ್ಕಳ ಅಂಶವಾದೊಡೆ ಉತ್ತಮಂ, ಬೃಹಸ್ಪತಿ ಚಂದ್ರಶುಕ್ರರ್ಕಳ. 7 ಮೂಲದಲ್ಲಿ– ಮೂಱಱೊಳಂ ಎಂದಿದೆ, ಟೀಕೆಯಂತೆ– ಆಱಱೊಳಂ ಎಂದು ತಿದ್ದಿದರೆ ಛಂದಸ್ಸು ಕೆಡುವುದು. 8 ಆ ಸ್ತ್ರೀಯರನು ಆ ಪುರುಷರ ಕೂಡೆ ಮಲಗಿಸಿದರೆ.

[1]ತ್ರಿಪದಿ|| [2]ಅದಿದುವೆನ್ನದೆ ಸೂಟಿವಿುದುವೆಗಂ ಮಱುವಾಟ |
ಮದುವೆಗಂ ಕುಜನ ಕುಳಿಕನ ರಾಹುವಿ |
ನುದಯಮಭ್ಯುದಯಂ ಬುಧಬಂಧು || ೨೧ ||

(ಇಂತು ವಿವಾಹಪಟಲಂ)

### ೨. ಋತುಪಟಲಂ

(ಒಳಪೊಱ ನಕ್ಷತ್ರಂಗಳೊಳ್ ಮೆಯ್ನೆರೆದ ಫಲಂ)

ಚಂ|| [3]ಪಸರಿಸೆ ಕೃತ್ತಿಕಾದಿ ಭಚತುಷ್ಕಮಿವಂತರ ತಾರೆಗಳ್ ಪುನ |
ರ್ವಸು ಮೊದಲಾಗೆ ಮೂಱುಮವು ಬಾಹ್ಯದ ತಾರೆಗಳಿಂತು ಕೂಡೆ ಯೋ ||
[4]ಜಿಸುಗಱುಗಿರ್ಪತೆಂಟುಮವ ಮಲ್ಲಿ ರಜಸ್ವಲೆಯಾದವರ್ಗೆ ಪು |
ಟ್ಟಿಸುಗುಮಭೀಷ್ಟಮಂ ಕ್ರಮದೆ ನಷ್ಟಮನಂತರಬಾಹ್ಯತಾರೆಗಳ್ || ೨೨ ||

(ಮೆಯ್ನೆರೆದಪೊೞ್ತಿನ ವಸ್ತ್ರವರ್ಣಂಗಳ್)

ಮ|| ಮೊಲೆಗಳ್ ಬಿಟ್ಟೊಡಿರುಳ್ ಬಳಲ್ದೊಡೆ ಪಗಲ್ [5]ಸೇಕಾಗೆ ಮಧ್ಯಾಹ್ನಮಿ |
ರ್ಕೆ[6]ಲದೊಳ್ ಪಾರ್ದೊಡೆ ಬಯ್ಗು ಮೆಯ್ನೆರೆ(ಱೆ)ದ[7]ಪೊೞ್ತಿಂದಂತದಂ ಪೇೞ್ ನೋ ||
ಡಲೊಡಂ ನಕ್ಕೊಡೆ ಬೆಳ್ಪು ನಾಣ್ಚಿದೊಡೆ ಕರಿದೇನಂ ಮುಟ್ಟಿಯುಂ ಕೆಂಪು ಕೇ |
[8]ವಲಮಕ್ಕಂತವಳುಟ್ಟ ಪುಟ್ಟಗೆಯ ಬಣ್ಣಂ ಮಿಶ್ರದಿಂ ಮಿಶ್ರ[9]ಕಂ || ೨೩ ||

ಕೂಡಲ್ ಸ್ನೇಹವಪ್ಪುದು. ಸ್ತ್ರೀಯರನೊಲ್ಲದ ಪುರುಷರುಂ ಆ [10]ಶುಕ್ರೋದಯವಾದ ಆ ವೇಳೆಯಲ್ಲಿ ಕೂಡಿಸಲ್ ತಮ್ಮೊಳಗೆ ತಾವೇ ಸ್ನೇಹಮುಳ್ಳವರಾಗಿರ್ಪರ್—೨೦.

ಟೀ|| ಆವೇಳೆಯಿಾವೇಳೆಯೆನ್ನದೆ ಮಂಗಳನುದಯಂ ರಾಹುವಿನುದಯಂ ಕುಳಿಕನುದಯಂ— ಈ ವೇಳೆಯಲ್ಲಿ ಸೂಟಿವೆಂಡಿತಿಯು, ಮಱುವಾಟ ಮದುವೆಗಳಂ ಮಾಡುವುದು—೨೧.

ಟೀ|| ಮೆಯ್ನೆರೆದ ನಕ್ಷತ್ರಕ್ಕೆ (ಮುಹೂರ್ತಕ್ಕೆ) ಒಳನಕ್ಷತ್ರ ಹೊಱನಕ್ಷತ್ರಂಗಳಂ ನೋೞ್ಪೊಡೆ ಕೃತ್ತಿಗೆ ಮೊದಲಾಗೆ ನಾಲ್ಕು ನಕ್ಷತ್ರಂಗಳ್ ಒಳನಕ್ಷತ್ರಂಗಳಂ, ಪುನರ್ವಸು ಮೊದಲಾಗೆ ಮೂಱು ನಕ್ಷತ್ರಂಗಳ್ ಹೊಱನಕ್ಷತ್ರಂಗಳ್, ಮಘೆ ಮೊದಲಾಗೆ ನಾಲ್ಕು ನಕ್ಷತ್ರಂಗಳ್ ಒಳನಕ್ಷತ್ರಂಗಳ್, ಚಿತ್ತೆ ಮೊದಲಾಗೆ ಮೂಱು ನಕ್ಷತ್ರಂಗಳ್ ಹೊಱನಕ್ಷತ್ರಂಗಳ್, ಅನುರಾಧೆ ಮೊದಲಾಗೆ ನಾಲ್ಕು ನಕ್ಷತ್ರಂಗಳ್ ಒಳನಕ್ಷತ್ರಂಗಳ್, ಉತ್ತರಾಷಾಢೆ, ಶ್ರವಣಂ, ಅಭಿಜಿತ್ತು—ಈ ಮೂಱುಂ ಹೊಱನಕ್ಷತ್ರಂಗಳ್, ಧನಿಷ್ಠೆ ಮೊದಲಾಗೆ ನಾಲ್ಕು ನಕ್ಷತ್ರಂಗಳ್ ಒಳನಕ್ಷತ್ರಂಗಳ್, ರೇವತಿ ಮೊದಲಾಗೆ ಮೂಱುಂ ನಕ್ಷತ್ರಂಗಳ್ ಹೊಱನಕ್ಷತ್ರಂಗಳ್, ಇವಱೊಳಗೆ ಒಳನಕ್ಷತ್ರಂಗಳಲ್ಲಿ ಮೆಯ್ನೆರೆದೊಡೆ ಉತ್ತಮಂ, ಹೊಱನಕ್ಷತ್ರದಲ್ಲಿ ಮೆಯ್ನೆರೆದೊಡೆ ಪೊಳ್ಳಿತಲ್ಲ (ಹೊಲ್ಲ)—೨೨.

ಟೀ|| ಈ ಕನ್ನೆ ಮೆಯ್ನೆ(ಱೆ)ರೆದಳೆಂದು ಪೇೞ್ವಾಕೆಗೆ ಮೊಲೆ ಬಿಟ್ಟಿರ್ದೊಡೆ ಇರುಳ್ ಮೆಯ್ನೆರೆದ[11]ಳೆಂಬುದು, ಆ ಪೇೞ್ವಾಕೆ ಬಳಲುತ್ತಿರ್ದೊಡೆ ಪಗಲ್ ಮೆಯ್ನೆರೆದಳೆಂಬುದು,

1 ತಿವಿಧಿ, ತ್ರಿವಿದಿ—ಇದನ್ನು ಕಂದವೆಂದು ಒಂದು ಪ್ರತಿಯಲ್ಲಿ ಬರೆದಿದೆ, ಕಂದ ಲಕ್ಷಣವೂ ಪ್ರಾಸೂ ಇಲ್ಲ. 2 ಅದಿದುನದೀದಿನವೆನ್ನದೆ ಸೂಟಿ, ಅಗೀಗೆನ್ನದೆದಿ ಸೂಟಿ. 3 ಸಮನಿಸೆ. 4 ಯೋಜಿಸಲಾಗಿರ್ಪತೆಂಟು. 5 ಸಲೆ ಚೆನ್ನಾಗಿ ನಿಂದೊಡೆ (ಛಂದೋದೋಷ). 6 ಲನೊಳುತ್ತಿರೆ. 7 ಪೊೞ್ತಿಂದುದಂತಱಂ. 8 ವಲಮುಕ್ಕು ಮುಟ್ಟಪುಟ್ಟಗೆ, ವಲಮುಕ್ಕಂತದು ಉಟ್ಟ. 9 ವುಂ. 10 ಶುಕ್ರನು ಉದಯವಾಗಲು ಸ್ತ್ರೀ ಪುರುಷರಂ ಸಂಯೋಗ ಮಾಡಲ್. 11 ಳೆಂದು ಅಱಿವುದು.



(ಮೆಯ್ನೆರೆದ ಮೇಷಾದಿ ಲಗ್ನಫಲಂಗಳ್)

ಕಂ|| ಜಾಱೆ ಶುಚಿ ಸೊಬಗೆ [1]ಗೋತ್ರೋ |
ದ್ಧಾರೆ ಪತಿದ್ವೇಷಿ ಬಂಜೆ ಬಹುಸುತೆ [2]ಖಲೆಸಂ ||
ಸಾರದೊಳುತ್ತಮೆ ವಿಧವೆ ವಿ |
ಕಾರೆ ಪತಿವ್ರತೆ ಯಜಾದಿಯೊಳ್ ಮೆಯ್ನೆ(ಱೆ)ರೆದಳ್ || ೨೪ ||

(ಇಂತು ರಜಸ್ವಲಾಪಟಲಂ)

### ೪. ಸೀಮಂತ ಪುಂಸವನಪಟಲಂ

ಚಂ|| ಉರಗರಸಾಂತ್ಯವಲ್ಲದೆಡೆ[3]ಯೊಳ್ ನೆಱೆ ಕೂಡೆ ಶುಭಗ್ರಹಂಗಳೀ |
ಶ್ವರ [4]ಪುರಪಟ್ಕದೊಳ್ ನೆಲಸೆ ತಾನಶುಭಗ್ರಹಮುಗ್ರದಾರುಣಾ ||
ಸುರಗಣತಾರೆಯಂ ಬಿಸುಟು ಲಗ್ನದೊಳೊಂದಿರೆ ಚಂದ್ರನೊಳ್ಪನಾ |
ಳ್ದರೆ ಶುಭವಾಸರಂ [5]ನೆಗಱೆ ನೇವುವುಗಟ್ಟುವುದೆಂಟುತಿಂಗಳೊಳ್ || ೨೫ ||

(ಇಂತು ಸೀಮಂತಪಟಲಂ)

ಚೆನ್ನಾಗಿ ನಿಂದಿರ್ದೊಡೆ ಮಧ್ಯಾಹ್ನವೆಂಬುದು, [6]ಇದಿರಾಗಿ ನಿಂತು ಇರ್ಕೆಲನಂ ನೋಡಿದೊಡೆ ಬಯ್ಗೆಂದು ಪೇೞ್ವುದು, ಆಕೆ ಮಾತನಾಡುತ್ತುಂ ನಕ್ಕೊಡೆ ಪುಟ್ಟಸೀರೆ ಬಿಳಿದೆಂಬುದು, ಆಕೆ ನಾಣ್ಚುತ್ತುಂ ಮಾತನಾಡಿದೊಡೆ ಕರಿಯಸೀರೆಯೆಂಬುದು, ಆ ಪೇೞ್ವಾಕೆ ದೇಹದೊಳಗೆ ಆವುದೊಂದು ತಾಪಂ ಮುಟ್ಟುತ್ತುಂ ಮಾತನಾಡಿದೊಡೆ ಕೆಂಪಿನ ವಸ್ತ್ರಮೆಂಬುದು, ಆಕೆ ಪಲವು ಚೇಷ್ಟೆಗಳಂ ಮಾಡುತ್ತುಂ [7]ಪೇೞ್ದೊಡೆ ನಾನಾಬಣ್ಣವೆಂಬುದು.

ಟೀ|| ೧. [8]ಮೇಷಲಗ್ನದಲ್ಲಿ ಮೆಯ್ನೆರೆದವಳ್ ಜಾಱೆಯಪ್ಪಳ್. ೨. ವೃಷಭಲಗ್ನದಲ್ಲಿ ಶುಚಿಯಪ್ಪಳ್. ೩. ಮಿಥುನಲಗ್ನದಲ್ಲಿ ಭಾಗ್ಯವುಳ್ಳವಳಪ್ಪಳ್. ೪. ಕರ್ಕಾಟಕಲಗ್ನದಲ್ಲಿ ಬುಧಕುಲ ವಿಶುದ್ಧೆಯಪ್ಪಳ್. ೫. ಸಿಂಹಲಗ್ನದಲ್ಲಿ ಪತಿದ್ವೇಷಿಯಪ್ಪಳ್. ೬. ಕನ್ಯಾಲಗ್ನದಲ್ಲಿ ಬಂಜೆಯಪ್ಪಳ್. ೭. ತುಲಾಲಗ್ನದಲ್ಲಿ ಬಹುಪುತ್ರವತಿಯಪ್ಪಳ್. ೮. ವೃಶ್ಚಿಕಲಗ್ನದಲ್ಲಿ ದುಷ್ಟೆಯಪ್ಪಳ್. ೯. ಧನುರ್ಲಗ್ನದಲ್ಲಿ ಸಂಸಾರದೊಳಗುತ್ತಮೆಯಪ್ಪಳ್. ೧೧. ಕುಂಭಲಗ್ನದಲ್ಲಿ ವಿ (ಕಾರೆ) ಧವೆಯಪ್ಪಳ್. ೧೨. ಮೀನಲಗ್ನದಲ್ಲಿ ಪತಿವ್ರತೆಯಪ್ಪಳ್—ಈ ಪನ್ನೆರಡುಂ ಮೇಷಾದಿ ಮೀನ ಪರ್ಯಂತ ಫಲಂಗಳ್.

ಟೀ|| ಸೀಮಂತ ಕರ್ಮಮಂ ಮಾಡುವೊಡೆ ಶುಭಗ್ರಹಂಗಳ್ (೮–೬–೧೨)[9]ಎಂಟು, ಆಱು, ಪನ್ನೆರಡು ಈ ಸ್ಥಾನಂಗಳೊಳಲ್ಲದೆ ಉೞಿದ ಸ್ಥಾನಂಗಳ[10]ಲ್ಲಿರ್ದೊಡೆ ಅಶುಭಗ್ರಹಂಗಳ್ (೧೧–೩–೬) ಪನ್ನೊಂದು, ಮೂಱು, ಆಱು—ಈ ಸ್ಥಾನಂಗಳಲ್ಲಿರ್ದೊಡೆ, [11]ಉಗ್ರನಕ್ಷತ್ರಂ, ದಾರುಣನಕ್ಷತ್ರಂ, ಅಸುರನಕ್ಷತ್ರಂ—ಈ ನಕ್ಷತ್ರಂಗಳಂ ವರ್ಜಿಸಿ, ಆ ಕರ್ಮಮಂ ಮಾಡುವ ಲಗ್ನಕ್ಕೆ ಚಂದ್ರನುದಯವಾಗಲ್ ಲೇಸಬಯಸುವವಂ ಎಂಟನೆಯ [12]ತಿಂಗಳಲ್ಲಿ ನೇವುಗೆಯುಂ ಮಾಡುವುದು.

1 ಗೋತ್ರವಿ। ದಾರೆ. 2 ಖಲೆ ಸಾಱೆ ವಿಧವೆ ವಿಕಾರಿಪತಿವ್ರತೆ ಮೇಷಾದಿ ಲಗ್ನದೊಳ್. 3 ಮೊಳಿರೆ. 4 ಪುರತಾಣವೊಳ್. 5 ಗೆ ಉಟ್ಟಗೆಗಟ್ಟು, ನೇಉಉಗಟ್ಟು. 6 ಇದಿರಾಗಿ ಬಂದು ಕೆಲದಲ್ಲಿ ನಿಂದಿರ್ದೊಡೆ ಅಸ್ತಮಾನಮೆಂದಱಿವುದು. 7 ಕೇಳಲು ಚಿತ್ರವರ್ಣ. 8 ಮೇಷ ಮೊದಲಾಗೆ ಮೆಯ್ನೆರೆದ ಫಲಂ. 9 ಎಱು. 10 ಲ್ಲಿದ್ದರ್ ೧೧–೪ ಈ ಸ್ಥಾನಂ. 11 ಉಗ್ರತಾರೆ. 12 ತಿಂಗಳಿಗೆ ಗರ್ಭವಾದೊಡೆ, ತಿಂಗಳಿಗೆ ಉಟಗೆಯ ಕಟ್ಟು.

(ಪುಂಸವನಪಟಲಂ)

ಕಂ|| ಶ್ರವಣಾದಿತಿ [1]ಗುರುಮೃಗಧರ |
ರವಿ ಮೂಲಾಖ್ಯಂಗಳಾಗೆ ಸಿತಪಕ್ಷದಿನಂ ||
ಸವನಿಸಿ ಬರೆ ಮಾಡುಗೆ ಪುಂ |
ಸವನಮ[2]ನಿಂಬಾಗೆ ನವಮಶುದ್ಧೋದಯದೊಳ್ || ೨೬ ||

(ಇಂತು ಪುಂಸವನಪಟಲಂ)

೪. ಅನ್ನಪ್ರಾಶನಪಟಲಂ (ಅಗುೞೂಟಂ)

ಮ|| ಸ್ರ|| ಪಸುಗೂಸಂ ಮೂಡಮುಂತಾಗಿರಿಸಿ ಪಸೆಯೊಳಿಂಬಾಗೆ ದೈವಜ್ಞನಂ ಪೂ |
ಜಿಸಿ ಷಣ್ಮಾಸಾದಿಯಿಂ[3]ದಂ ಬರಿಸ ದಶಮಮಾಸಂಗಳೊಳ್ [4]ತೀವಿ ಬಂದಂ ||
ದೊಸೆವನ್ನಪ್ರಾಶನಂಮಾಡುಗೆ ಧರಣಿಸುತಕ್ಷೇತ್ರ ಮೀನಾರ್ಕಮಂ ವ |
ರ್ಜಿಸಿ ಸೌಮ್ಯಾಸ್ತೋದಯಂ [5]ವರ್ತಿಸೆ ದಶಮವಿಶುದ್ಧಂ ಸಮಂತಾಗೆ ಲಗ್ನಂ|| ೨೭ ||

ಮ|| ಸ್ರ|| ಇರೆ ಚಂದ್ರಂ ಬಾಣನೇತ್ರಾಂಬುಧಿ ಹರಪುರ ಶೈಲಂಗಳೊಳ್ ಸೌಮ್ಯನುರ್ವೀ |
ಧರ ಲಗ್ನೇಭಾಕ್ಷಿ ಲೋಕಾರ್ಣವ ಋತುಪುರಬಾಣಂಗಳೊಳ್ ಭಾರ್ಗವಂ ಶಂ ||
ಕರನೇತ್ರಾಗ್ನೀಷು ಚಂದ್ರಾಬುಧಿ ಶರರಸದೊಳ್ ಜೀವನಿಂಶಾಕ್ಷಿ ಭೂಭೃ |
ತ್ಕರಿ ರೂಪಾಶ್ವಂಗಳೊಳ್ ಪುತ್ತಿನಸಭವಪುರಾಂಗಂಗಳೊಳ್ ಮಂಗಳಂಗಳ್ || ೨೮ ||

---

ಟೀ|| ಪುಂಸವನಮಂ ಮಾಡುವೊಡೆ ಶ್ರವಣಂ, ಪುನರ್ವಸು, ಪುಷ್ಯಂ, ಮೃಗಶಿರೆ, ಹಸ್ತಂ, ಮೂಲಂ—[6]ಈ ನಕ್ಷತ್ರಂಗಳಲ್ಲಿ ಶುಕ್ಲಪಕ್ಷದ ಶುಭದಿನ ಶುಭವಾರಂಗಳಲ್ಲಿ ಆ ಮಾಡುವ ಲಗ್ನಕ್ಕೆ ಒಂಭತ್ತನೆಯ ಸ್ಥಾನದಲ್ಲಿ ಅವಗ್ರಹಂಗಳು ಯಿಲ್ಲದಿರ್ದೊಡೆ ಪುಂಸವನಮಂ ಮಾಡುವುದು—೨೬.

ಟೀ|| ಅನ್ನಪ್ರಾಶನಮಂ ಮಾಡುವೊಡೆ ಪುಟ್ಟಿದ ಶಿಶುವಂ ಆಱು ತಿಂಗಳೊಳಾದೊಡಂ, ಪತ್ತನೆಯ ತಿಂಗಳೊಳಾದೊಡಂ, ಒರಿಸದೊಳಾದೊಡಂ ಪಸೆಯ ಮೇಲೆ ಮೂಡಮುಂತಾಗೆ ಕುಳ್ಳಿರಿಸಿ ಜ್ಯೋತಿಶ್ಶಾಸ್ತ್ರಂ ಮೊದಲಾಗೆ [7]ಬಲ್ಲಂತಹ ಪಿರಿಯರಂ ಸತ್ಕರಿಸಿ, ಮೇಷ ವೃಶ್ಚಿಕಲಗ್ನ ಮೀನಮಾಸಂಗಳಂ ಬಿಟ್ಟು, ಶುಭಗ್ರಹಂಗಳ್ ಸಪ್ತಮಸ್ಥಾನ [8]ಉದಯಸ್ಥಾನಂಗಳಲ್ಲಿರಲ್ ಆ ಮಾಡುವ ಲಗ್ನಕ್ಕೆ ದಶಮಸ್ಥಾನದಲ್ಲಿ ಅವಗ್ರಹಂಗಳು ಯಿಲ್ಲದಿರ್ದೊಡೆ ಅನ್ನಪ್ರಾಶನಮಂ ಮಾಡಿಸುವುದು—೨೭.

ಟೀ|| ಅನ್ನಪ್ರಾಶನಂ ಮಾಡುವ ಲಗ್ನಕ್ಕೆ ಚಂದ್ರಂ (೫–೨–೧೧–೪–೩–೭) ಅಯ್ದು, ಎರಡು, ಪನ್ನೊಂದು, ನಾಲ್ಕು, ಎಂಟು, ಏೞು ಸ್ಥಾನಂಗಳಲ್ಲಿ ಇರ್ದೊಡೆ, ಬುಧಂ (೧–೧೨–೮–೨–೭–೪–೩–೫) ಒಂದು, ಹನ್ನೆರಡು, ಎಂಟು, ಎರಡು, ಏೞು, ನಾಲ್ಕು, ಮೂಱು, ಅಯ್ದು—ಈ ಸ್ಥಾನಂಗಳಲ್ಲಿರ್ದೊಡೆ, ಶುಕ್ರಂ (೧೧–೨–೩–೫–೧–೪–೬) (ಹನ್ನೊಂದು, ಎರಡು, ಮೂಱು, ಅಯ್ದು, ಒಂದು, ನಾಲ್ಕು, ಆಱು—ಈ ಸ್ಥಾನಂಗಳಲ್ಲಿರ್ದೊಡೆ, ಗುರು (೩–೭–೮–೧–೭) ಮೂಱು, ಏೞು, ಎಂಟು, ಒಂದು, [9]ಏೞು—ಈ ಸ್ಥಾನಂಗಳಲ್ಲಿರ್ದೊಡೆ, ಸೂರ್ಯಂ (೧೧–೩–೬) ಪನ್ನೊಂದು, ಮೂಱು, ಆಱು—ಈ ಸ್ಥಾನಂಗಳಲ್ಲಿರ್ದೊಡೆ, ಈ ಗ್ರಹಂಗಳ್ ಈ ಪೇೞ್ದ ಸ್ಥಾನಂಗಳಲ್ಲಿರ್ದೊಡೆ ಶುಭಕರಂಗಳ್[10]—೨೮.

---

1 ಪುಷ್ಯಂ. 2 ಸೀ ಒಂದಿರೆ. 3 ವತ್ಸರದೊಳೆ. 4 ಪೂರ್ಣದೊಳ್ ಬಂ। ತೊಸೆ. 5 ಸವನಿಸೆ. 6 ಈ ತಾರೆಗಳಿದ್ದು, ನಕ್ಷತ್ರಂಗಳ್. 7 ಬಲ್ಲದೈವಜ್ಞ ಸಂಸತ್ಕರಿ. 8 ಉದಯಮಾದಾಗಳ್. 9 ಅಶ್ವ ಎಂದರೆ ಏೞು, ಇಲ್ಲಿ ಏೞು ಎರಡಾವೃತ್ತಿ ಬಂದಿದೆ. 10 ಇಲ್ಲಿ ಅಂಗಾರಕ, ಶನಿ—ಈ ಎರಡು ಗ್ರಹಗಳನ್ನು ಹೇಳಿಲ್ಲ.



ಚಂ|| [1]ದೊರೆಕೊಳೆ ಸೌಮ್ಯಶುಕ್ರಗುರುವಾರದೊಳಶ್ವಿನಿ, ಚಿತ್ರೆ ಮೂಱು |
ತ್ತರೆಯನುರಾಧೆ ರೋಹಿಣಿ ಪುನರ್ವಸು ರೇವತಿ ವಿಷ್ಣು ಮಾರುತಂ ||
ಗುರುಶಶಿ ಭಾಸ್ಕರಂ ಶತವಿಶಾಖೆ ಧನಿಷ್ಠೆಯು[2]ನಂದೆ ರಿಕ್ತೆ ವಾ |
ಸರಪುವಯೋಗವಾಗದಿರೆ ಮಾಳ್ಕಗುೞೂಟಮನಂತಮುತ್ತಮಂ || ೨೯ ||

(ಇಂತು ಅನ್ನಪ್ರಾಶನಪಟಲಂ)

೫. ಚೌಲಕರ್ಮಪಟಲಂ

ವ|| ವರುಷಂ ಮೂಱಱೊಳುತ್ತರಾಯಣದ ಷಣ್ಮಾಸಂಗಳೊಳ್ ಜೊನ್ನದೊಳ್ |
ಗುರುಶುಕ್ರರ್ ಬಲವಂತರಾಗೆ ಶುಭವಾರಾಂಬೋದಯಂ ಕೂಡೆ ಭಾ ||
ಸ್ಕರನೊಳ್ಪಂ ಕುಡೆ [3]ಮುಂಬಗಲ್ ಪುರಶರಾಶಾವಿಶ್ವಶೈಲಾಕ್ಷಿ ಶಂ |
ಕರ ಸಂಖ್ಯಾದಿನಮಾಗೆ ಮಾಳ್ಪುದುಚಿತಂ ಚೌಲಕ್ರಿಯಾರಂಭಮಂ || ೩೦ ||

ಉ|| ರೇವತಿ ಪುಷ್ಯ ಮಶ್ವಿನಿ ಧನಿಷ್ಠೆ ಪುನರ್ವಸು ಚಿತ್ತೆ ಹಸ್ತ ಮಿಂ |
ದೀವರಬಾಂಧವಂ ಶ್ರವಣಮೆಂಬಭಿಧಾನವನಾಳ್ದು ನಿಂದ ತಾ ||
ರಾವಳಿಯುತ್ತಮಂ ಶತವಿಶಾಖೆ ಪಯೋಜಜನುತ್ತರಾತ್ರಯಂ |
ಭಾವಿಸೆ ಮಧ್ಯಮಂ ಪೆಱವು ಕಷ್ಟಮಭೀಪ್ಸಿತ ಚೌಲಕರ್ಮದೊಳ್ || ೩೧ ||

ಮ|| ಮೃಗಲಕ್ಷ್ಮಂ ನಯನೇಷುವಹ್ನಿನಿಧಿ ಶೈಲಸ್ಥಾನಂಗಳೊಳ್ [4]ಕ್ರೂರರ |
ಯ್ದಿ ಗುಣೇಶರ್ತುಗಳೊಳ್ ಶುಭಗ್ರಹಗಣಂ [5]ಕೇಂದ್ರೇಶ ಬಾಣಾಂಕದೊಳ್
[6]ಭೃಗುತಾನೆಂಟಱೊಳಾಗೆ ಕನ್ನೆ ಮಿಥುನಂ ಮೀನಂ ಮೃಗಂ ಕರ್ಕ ತೌ |
ಳಿ ಗವೇಂದ್ರಂ ವರಲಗ್ನಮಾಗಿ ನಿಲೆ ಮಾಳ್ಕಾನಂದದಿಂ ಚೌಳಮಂ || ೩೨ ||

(ಇಂತು ಚೌಲಕರ್ಮಪಟಲಂ)

---

ಟೀ|| ಬುಧ ಬೃಹಸ್ಪತಿ ಶುಕ್ರವಾರಂಗಳಾಗಿರುಹ, ಅಶ್ವಿನಿ, ಚಿತ್ರೆ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ಅನುರಾಧೆ, ರೋಹಿಣಿ, ಪುನರ್ವಸು, ರೇವತಿ, ಶ್ರವಣಂ, ಸ್ವಾತಿ, ಪುಷ್ಯಂ. ಮೃಗಶಿರೆ, ಹಸ್ತಂ, [7]ಶತವಿಶಾಖೆ, ಧನಿಷ್ಠೆ—ಈ ನಕ್ಷತ್ರಂಗಳ್ ಕೂಡುಹ, ಚೌತಿ, ನವಮಿ, ಚತುರ್ದಶಿ—ಈ ಮೂಱು ತಿಥಿಗಳಂ ಬಿಟ್ಟು ಅವಯೋಗಮಿಲ್ಲದಿರ್ದೊಡೆ ಅನ್ನಪ್ರಾಶನಮಂ ಮಾಳ್ಪುದು—೨೯.

ಟೀ|| ಚೌಲಕರ್ಮಕ್ಕೆ ಶಿಶುಗಳ್ ಪುಟ್ಟಿದ ಮೂಱನೆಯ ವರ್ಷದಲ್ಲಿ ಉತ್ತರಾಯಣದ ಆಱು ತಿಂಗಳಲ್ಲಿ ಶುಕ್ಲಪಕ್ಷದಲ್ಲಿ ಗುರುಶುಕ್ರರುದಯವಾಗಿರ್ದು ಸೋಮ ಬುಧ ಗುರುವಾರಂಗಳ್ ಕೂಡಿರ್ದೊಡೆ ಆದಿತ್ಯಂ ಬಲವಾಗಿರೆ ಪೂರ್ವಾಹ್ಣದಲ್ಲಿ ತದಿಗೆ, ಪಂಚಮಿ, ದಶಮಿ, ತ್ರಯೋದಶಿ, ಸಪ್ತಮಿ, ಬಿದಿಗೆ, ಏಕಾದಶಿ—ಈ ತಿಥಿಗಳ್ ಕೂಡಿರೆ ಶುಭಯೋಗ ಗ್ರಹಬಲಂಗಳ್ ಕೂಡೆ ಚೌಲಕರ್ಮಮಂ ಮಾಳ್ಪುದು—೩೦.

ಟೀ|| ರೇವತಿ, ಪುಷ್ಯಂ, ಅಶ್ವಿನಿ, ಧನಿಷ್ಠೆ, ಪುನರ್ವಸು, ಚಿತ್ತೆ, ಹಸ್ತಂ, ಮೃಗಶಿರೆ, ಶ್ರವಣಂ—ಈ ಯೊಂಬತ್ತು ನಕ್ಷತ್ರಂಗಳ್ ಉತ್ತಮಂ. ಶತವಿಶಾಖೆ, ರೋಹಿಣಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ—ಈ ಅಯ್ದು ನಕ್ಷತ್ರಂಗಳ್ ಮಧ್ಯಮಂ. ಉೞಿದ ನಕ್ಷತ್ರಂಗಳೆಲ್ಲಂ ಕಷ್ಟಂ. ಅವಱೊಳ್ ಚೌಲಕರ್ಮಮಂ ಮಾಡಲಾಗದು—೩೧.

ಟೀ|| ಚೌಲಂ ಮಾಡುವ ಲಗ್ನಕ್ಕೆ ಚಂದ್ರಂ (೨–೫–೩–೯–೭) ಎರಡು, ಅಯ್ದು,

---

1 ಇರುತಿರೆ. 2 ಇಂದುದಿತ, ವಿತ್ತ. 3 ಮುನ್ನಬಲ್ಪುಶರಾಶಾವಿಶ್ವಶ್ವೇಳುತ್ತಿಗಕ್ಷ ಕರಸಂಖ್ಯಾ. 4 ಪುರರೈದು. 5 ಖೇಂದ್ರೇಷು. 6 ಳ್ಪುಗುರುಂ ಎಂಟಱೊಳಾಗೆ. 7 ಶತಭಿಷೆ. 8 ಗಳಲ್ಲದೆ ಉೞಿದುವು ಕೂಡಿರುಹ ಮತ್ತೇನುಮವಯೋಗಂ.

೬. ಉಪನಯನಪಟಲಂ

ಅನವದ್ಯಂ|| ಕ್ರಿಯೆಯೊಳೊಂದಿರೆ [1]ಕಟ್ಟುಗೆ ವಿಪ್ರಕ್ಷತ್ರಿಯ ವೈಶ್ಯಕುಲಕ್ಕೆ ಮುಂ |
ಜಿಯನನುಕ್ರಮದಿಂದಂ ವಸಂತ ಗ್ರೀಷ್ಮ ಶರತ್ಸಮಯಂಗಳೊಳ್ ||
ನಿಯತಮಾಗೆ ಶುಭಗ್ರಹವಾರಂ ಮುಂಬಗಲೆಂಬಿವು ಮಾಣ್ದು ನಂ |
ದೆ[ಯ]ಯೊಳು ರಿಕ್ತದಿನಂಗಳನಿಂದ್ರೇಂಜ್ಯಂ ಬಲಮಂ ಕುಡೆ ಜೊನ್ನದೊಳ್ || ೩೩ ||

ಚಂ|| ನೆಗಟ್ದನುರಾಧೆ ರೋಹಿಣಿ ಪುನರ್ವಸು ಪುಷ್ಯ ಧನಿಷ್ಠೆ ಭಾಸ್ಕರಂ |
ಮೃಗಶಿರೆ ಯುತ್ತರಾತ್ರಯಮುಮೆಂಬಿವು ಕೂಡೆ ರಸಾರ್ಕವರ್ಜಿತಂ ||
ಮೃಗಧರನಂಗವಹ್ನಿಪೊಱಗಾಗೆ ಶುಭಗ್ರಹಮುನ್ನಮಂಗರು |
ದ್ರೆಗಣದೊಳಿರ್ಪೊಡಷ್ಟಮವಿಶುದ್ಧಿಯೊಳೊಂದಿರೆ ಮಾಳ್ಕೆ ಮಾಣಿಯಂ || ೩೪ ||
(ಇಂತು ಉಪನಯನಪಟಲಂ)

---

ಮೂಱು, ಒಂಭತ್ತು, ಏೞು—ಈ ಸ್ಥಾನಂಗಳಲ್ಲಿರಲ್, ಕ್ರೂರಗ್ರಹಂಗಳ್ (ಅಂಗಾರಕಂ, ಶನಿ, ಸೂರ್ಯರ್) (೩–೧೧–೬) ಮೂಱು, ಹನ್ನೊಂದು, ಆಱು—ಈ ಸ್ಥಾನಂಗಳಲ್ಲಿರಲ್, ಶುಭ ಗ್ರಹಂಗಳ್ ಕೇಂದ್ರ (೧೧–೫–೯) ಹನ್ನೊಂದು, ಅಯ್ದು, ಒಂಭತ್ತು—ಈ ಸ್ಥಾನಂಗಳಲ್ಲಿರಲ್, ಶುಕ್ರಂ ಎಂಟನೆಯ ಸ್ಥಾನದಲ್ಲಿರಲ್, ಕನ್ನೆ, ಮಿಥುನಂ, ಮೀನಂ, ಸಿಂಹಂ, ಕರ್ಕಾಟಕಂ, ತುಲೆ, ವೃಶ್ಚಿಕಂ, ವೃಷಭಂ—ಈ ಲಗ್ನಂಗಳೊಳ್ ಈ ಗ್ರಹಬಲಂಗಳ್ ಕೂಡಿರಲ್, ಚೌಲ ಕರ್ಮಮಂ ಮಾಳ್ಪುದು—೩೨.

ಟೀ|| ಕರ್ಮಮೊಂದಾದೊಡಂ ಬ್ರಾಹ್ಮಣ ಕ್ಷತ್ರಿಯ ವೈಶ್ಯರ್ಗೆ (ಬೇಱೆ ಬೇಱೆ) ಕಾಲಮಂ ಪೇಳ್ದಪೆಂ, ವಸಂತಕಾಲದ (ಚೈತ್ರ ವೈಶಾಖ ಮಾಸಂಗಳ)ಲ್ಲಿ ಬ್ರಾಹ್ಮಣಂಗೆ, ಗ್ರೀಷ್ಮರ್ತುವಿನ (ಜ್ಯೇಷ್ಠ ಆಷಾಢ ಮಾಸಂಗಳ)ಲ್ಲಿ ಕ್ಷತ್ರಿಯಂಗೆ, ಶರದೃತುವಿನ (ಆಶ್ವಯುಜ ಕಾರ್ತಿಕ ಮಾಸಂಗಳ)ಲ್ಲಿ ವೈಶ್ಯಂಗೆ—ಈ ಪೇಳ್ದ ಋತುಗಳಲ್ಲಿ ಉತ್ತಮವಹಂತಹ ತಿಥಿಯೋಗ ಗ್ರಹಬಲಂ ಕೂಡಿರೆ, ಪೂರ್ವಾಹ್ಣದಲ್ಲಿ ಶುಕ್ಲಪಕ್ಷದಲ್ಲಿ ಗುರುಬಲವಿರಲ್, ಓದಿಲ್ಲದ ದಿನಂ ಚೌತಿ, ನವಮಿ, ಚತುರ್ದಶಿಗಳಂ ಬಿಟ್ಟು ಉೞಿದ ದಿನಂಗಳಲ್ಲಿ ಮುಂಜಿಯಂ ಕಟ್ಟುವುದು—೩೩.

ಟೀ|| ಅನುರಾಧೆ, ರೋಹಿಣಿ, ಪುನರ್ವಸು, ಪುಷ್ಯಂ, ಧನಿಷ್ಠೆ, ಹಸ್ತಂ, ಮೃಗಶಿರೆ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ—ಈ ನಕ್ಷತ್ರಂಗಳ್ ಕೂಡಿರುಹ, ಆ ಮುಂಜಿಯ ಲಗ್ನಕ್ಕೆ (೬–೧೨) ಆಱು, ಹನ್ನೆರಡರಲ್ಲಿ ಚಂದ್ರನಿಲ್ಲದಿರುಹ, ಬುಧ ಗುರು ಶುಕ್ರರ್ಕಳ್ (೬–೩) ಆಱು, ಮೂಱು ಸ್ಥಾನಂಗಳಲ್ಲಿಲ್ಲದಿರುಹ, ಆದಿತ್ಯ ಮಂಗಳ ಶನೈಶ್ಚರ ರಾಹು ಕೇತುಗಳ್ (೬–೧೧) ಆಱು, ಹನ್ನೊಂದಱಲ್ಲಿರುಹ, ಆ ಲಗ್ನಕ್ಕೆ ಅಷ್ಟಮದಲ್ಲಿ ಆವಗ್ರಹಂಗಳುಮಿಲ್ಲದಿರುಹ, ಇಂತಹ ಮುಹೂರ್ತದಲ್ಲಿ ಮೂಱುವರ್ಣಕ್ಕಂ ಮುಂಜಿಯಂ ಕಟ್ಟುವುದು—೩೪.

1 ಕಟ್ಟು ವಿಪ್ರಕ್ಷತ್ರಿಯ ವೈಶ್ಯರಿಗೆ ಉಪನಯನವ ಮಾಡುವ ಕಾಲವ ಹೇಳಿಹೆನು, ವಸಂತಕಾಲ ಚೈತ್ರ ವೈಶಾಖ ಮಾಸಗಳಲಿ ಬ್ರಾಹ್ಮಣಂಗೆ, ಗ್ರೀಷ್ಮರ್ತುವಿನಲಿ ಜ್ಯೇಷ್ಠಾಷಾಢ ಮಾಸಂಗಳಲಿ ಕುಳಕ್ಕೆ ಮುಂಜಿಯ ನನುಕ್ರಮದಿಂದೆ ವಸಂತ ಗ್ರೀಷ್ಮ ಶರತ್ಸಮಯಂಗಳೊಳ್ ನಿಯತಮಾಗಿ ಶುಭಗ್ರಹವಾಱುಮೆಂಬಗವೆಂಬವು ಮಾಣ್ದನಾಧ್ಯಯನ ರಿಕ್ತದಿನಂಗಳನಿಂದ್ರೇಜ್ಯರು ಬಲಮಂ ಕುಡೆ ಜೊನ್ನದೊಳ್ ॥ ೩೨ ॥—ಎಂಬ ಅಶುದ್ಧ ಪದ್ಯವು ಒಂದು ಪ್ರತಿಯಲ್ಲಿದೆ.



೭. ಸಮಾವರ್ತನಪಟಲಂ

ಕಂ|| [1]ಮೃಗಶಿರೆ ಶೀಘ್ರಸ್ಥಿರ ಋ |
ಕ್ಷಗಳುದಿತೋದಿತ[ವು]ಮಾಗೆ ಕರ್ತೃಗೆ ವಸುಮಾ ||
ರ್ಥಿಗೆ ದಿನಪತಿರಹಿತ ರಾ |
ಶಿಗಳುದಯಿಸೆ ಮಾಳ್ಪುದೈ ಸಮಾವರ್ತನೆಯಂ || ೩೫ ||
(ಇಂತು ಸಮಾವರ್ತನಪಟಲಂ)

೮. ವನಪ್ರವೇಶಪಟಲಂ

ಮ|| ಸಿತಪಕ್ಷಂ ಶುಭವಾಸರಂ ಗ್ರಹಬಲಂ ಕೂಡಿರ್ಪಿನಂ ಧಾತೃರೇ |
ವತಿ ಮೂಱುತ್ತರೆ ವಾರುಣಂ ವಸುಗಳೆಂಬೀ ತಾರೆಗಳ್ ಸೌಮ್ಯನ ||
ನ್ನುತ ಲಗ್ನೋದ[ಯ]ಮಾಗೆ ಸೌಮ್ಯನಿರೆ ಕೇಂದ್ರೇಶಾನದೊಳ್ ಕೂಡೆ ಮ |
ತ್ತಿತರರ್ ವಹ್ನಿಭವಾಂಗದೊಳ್ ನಿಲೆ ವನಾವಾಸಪ್ರವೇಶಂ ಶುಭಂ || ೩೬ ||
(ಇಂತು ಪ್ರವೇಶಪಟಲಂ)

೯. ಬೀಜಾವಾಪಪಟಲಂ

ಕಂ|| [2]ಸಂದೇಕಾದಶಿ ಪಂಚಮಿ |
ಸಂದಿರ್ಪ ಸಪ್ತಮಿತದಿಗೆಯೆ ತೇರಸೆಯಿಂ ||
ತೊಂದಿ ಶುಭವಾಸರಂಗಳ್ |
ಸಂದಿರೆ ಮಿಗೆ ಕೃಷ್ಣಪಕ್ಷದೊಳ್ ಬಿತ್ತೆ ಶುಭಂ || ೩೭ ||

---

[3]ಟೀ|| ಮೃಗಶಿರೆ ಶೀಘ್ರ ಸ್ಥಿರನಕ್ಷತ್ರಂಗಳ್, ಶುಭವಾರ ಶುಭತಿಥಿಗಳ್ ಕೂಡೆ ವ್ರತ ಸಮಾವರ್ತನೆಯಂ ಮಾಡಿಸಿಕೊಳ್ವಾತಂಗೆ(೪–೮–೧೨) ನಾಲ್ಕು, ಎಂಟು, ಹನ್ನೆರಡು—ಈ ಸ್ಥಾನಂಗಳಲ್ಲಿ ಆವಗ್ರಹಂಗಳುಮಿಲ್ಲದಿರ್ದೊಡೆ ಸಮಾವರ್ತನೆಯಂ ಮಾಡಲ್ ಶುಭಮಪ್ಪುದು—೩೫.

ಟೀ|| ವಾನಪ್ರಸ್ಥಾಶ್ರಮಕ್ಕೆ ಶುಕ್ಲಪಕ್ಷವಾಗುಹ, ಉತ್ತಮ ತಿಥಿವಾರಂಗಳ್ ಕೂಡಿಹ, ಗ್ರಹಬಲಂಗಳಾಗಿಹ, ರೋಹಿಣಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ಶತಭಿಷೆ, ಧನಿಷ್ಠೆ—ಈ ನಕ್ಷತ್ರಂಗಳ್ ಕೂಡುಹ, ಶುಭಲಗ್ನದಲ್ಲಿ ಶುಭಗ್ರಹಂಗಳ್ ಕೇಂದ್ರಸ್ಥಾನ ಹನ್ನೊಂದನೆಯ ಸ್ಥಾನಂಗಳಲ್ಲಿರುಹ, ಪಾಪಗ್ರಹಂಗಳ್ (೩–೧೧–೬) ಮೂಱು, ಹನ್ನೊಂದು, ಆಱ ನೆಯ ಸ್ಥಾನದಲ್ಲಿ ಇರುಹ, ಈ ಶುಭದಿನದಲ್ಲಿ ವಾನಪ್ರಸ್ಥಾಶ್ರಮಮಂ ಮಾಡಿಕೊಳ್ವುದು—೩೬.

ಟೀ|| ಬಿತ್ತಂ ಬಾಳಿಸುವೊಡೆ, ಏಕಾದಶಿ, ಪಂಚಮಿ, ಸಪ್ತಮಿ, ದಶಮಿ, ತದಿಗೆ, ತ್ರಯೋದಶಿ—ಈ ತಿಥಿಗಳ್ ಕೂಡುಹ, ಶುಭಮಾದ ಸೋಮ ಬುಧ ಗುರು ಶುಕ್ರವಾರಂಗಳ್ ಕೂಡುಹ, ಕೃಷ್ಣಪಕ್ಷದಲ್ಲಿ ಬಿತ್ತಂ ಬಾಳಿಸುವುದು—೩೭.

1 ಮೃದುಸ್ನಿಗ್ಧ ಸ್ಥಿರನಕ್ಷತ್ರಂಗ। ಳುದಿತೋದಿತನವಮಾಗೆ ಕರ್ತೃವಸುಮಾ॥
ರ್ಥಿದಿನೇಶರಹಿತರಾಸಿಗ। ಳುದಯಿಸೆ ಮಾಳ್ಪುದು ಸಮಾವರ್ತನೆಯಂ ॥ ೩೫ ॥
—ಈ ಅಶುದ್ಧವಾದ ಕಂದವು ಒಂದು ಪ್ರತಿಯಲ್ಲಿದೆ.

2 ಸಂದೇಕಾದಶಿ ಪಂಚಮಿ। ಸಪ್ತಮಿಯು ತದಿಗೆಯೆಳ್ತೇಱಸೆಯಿಂ॥
ಬುತ್ತಮ ವಾಸರಮುಂ ಶುಭವಾಸರಮು। ವೊಂದಿರೆ ಕೃಷ್ಣಪಕ್ಷದೊಳ್ ಬಿತ್ತೆ ಶುಭಂ ॥ ೩೭ ॥
—ಎಂಬ ಅಶುದ್ಧ ಕಂದವಿದೆ.

3 ಟೀ॥ ಮೃದುಸ್ನಿಗ್ಧ ಸ್ಥಿರನಕ್ಷತ್ರಂಗಳ್.

ಕಂ|| ಅನುರಾಧೆ ಮಘೆ ಪುನರ್ವಸು |
[1]ದಿನಪಂ ರೇವತಿ ವಿಶಾಖೆ ಪುಷ್ಯಂ ಮೂಲಂ ||
ವನಜಭವನುತ್ತರಾತ್ರಯ |
[2]ಮಿನಿತಱೊಳಂ ಬಿತ್ತಲ್ಕೆ ಶುಭದಮಚಳಿತವಚನಾ || ೩೮ ||

ಚಂ|| ದೊರೆಕೊಳೆ ಸಂದ ಕರ್ಕಿಮಕರಂ ವೃಷಭಂ ಝಷಮೆಂಬ ಲಗ್ನಮೊಂ |
ದಿರೆ ನಯ[3]ನಾಂಕನಾಗರಹಿತಂ ಸುತಸದ್ಗ್ರಹ ಮಿಂದುವಂತಿಯೆಂ ||
ಬೆರಡಱೊಳಲ್ಲದನ್ಯರಿರೆ [4]ದಾಂಟಿರೆ ದೀರ್ಘಿತಮಪ್ಪ [5]ಗಂಡಮಂ |
ಪರಿಹರಿಸಲ್ ಸಮಸ್ತಶಕುನಂಬಿಡೆ ಬಿತ್ತುಗೆ ಧಾನ್ಯವರ್ಗಮಂ || ೩೯ ||

(ರಾಹುಚಕ್ರದ ಸೂತ್ರಂ)

ಚಂ|| ಸಿರದೊಳೆ ಮೂಱು ಕಂಠದೊಳೆ ಮೂಱುದರ ಪ್ರತಿ[6]ಬಂಧದಲ್ಲಿ ಪ |
ನ್ನೆರಡು [7]ತದಗ್ರಪುಚ್ಛದುವು ಮೂಱು [8]ಬಹಿರ್ಗತಮಾಱು ಮತ್ತಮಾ ||
ಸಿರದುವು ನಂಜು ಕಂಠದುವು ಕಾಡಿಗೆ ಗರ್ಭದೆ [9]ಧಾನ್ಯವೃದ್ಧಿ ಬಾ |
ಹಿರದುವು ಮೂಷಿಕಂ ಪುೞುವೆ ಪುಚ್ಛದೊಳೆಂದಱಿ ರಾಹುಚಕ್ರಮಂ || ೪೦ ||

ಟೀ|| ಅನುರಾಧೆ, ಮಘೆ, ಪುನರ್ವಸು, ಹಸ್ತಂ, ರೇವತಿ, ವಿಶಾಖೆ, ಪುಷ್ಯಂ, ಮೂಲಂ, ರೋಹಿಣಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ—ಈ ನಕ್ಷತ್ರಂಗಳಲ್ಲಿ ಬಿತ್ತಂ [10]ಬಾಳಿಸುವುದು—೩೮.

ಟೀ|| ಕರ್ಕಟಂ, ಮಕರಂ, ವೃಷಭಂ, ಮೀನಂ—ಈ ಲಗ್ನಗಳ್ ಕೂಡಿಹ[11](೨-೯-೮) ಎರಡು, ಒಂಭತ್ತು, ಎಂಟು—ಈ ಮೂಱುಂ ಸ್ಥಾನಂಗಳಲ್ಲಿ ಶುಭಗ್ರಹಂಗಳಿಲ್ಲದಿರುಹ, (೧-೮) ಜನ್ಮ, ಎಂಟು—ಈ ಸ್ಥಾನಂಗಳಲ್ಲಿ ಅಶುಭಗ್ರಹಂಗಳಿಲ್ಲದಿರುಹ, ಗಂಡಯೋಗಂ-ಪರಿಘಯೋಗಂ ಗಳೆರಡಂ ವರ್ಜಿಸಿ ಉೞಿದ ಯೋಗಂಗಳ್ [12]ಕೂಡಿರುಹ, ಸಮಸ್ತಶಕುನಂಗಳ್‌ತಿರ್ದೆ, ಈ ತಿಥಿ ವಾರಯೋಗ ನಕ್ಷತ್ರಂಗಳಲ್ಲಿ ಎಲ್ಲಾ ಧಾನ್ಯಂಗಳುಮಂ ಬಿತ್ತುವುದು—೩೯.

ಟೀ|| ಸರ್ಪಾಕಾರದಿಂದಂ ಬರೆವಕ್ರಮವೆಂತುಟೆಂದೊಡೆ, ಅದಱ ಬಗೆಯಂ ಬರೆದು [13]ತೋರ್ಪೆಂ— ಇದು ರಾಹುಚಕ್ರಂ— ರಾಹು ಚಕ್ರಮಂ ಸಂಪೂರ್ಣಮಾಗಿ ಬರೆದು, ರಾಹುವಿರ್ಪ ನಕ್ಷತ್ರಂ ಮೊದಲಾಗೆ ಆ ಸರ್ಪನ ಶಿರಸ್ಸಿನಲ್ಲಿ ಮೂಱು ನಕ್ಷತ್ರಂಗಳಂ ಬರೆವುದು. ಹಿಂದುಗಡೆಯಲ್ಲಿ (ಪೃಷ್ಠ) ಆಱು ನಕ್ಷತ್ರಂಗಳಂ ಬರೆವುದು. ಬಾಲದಲ್ಲಿ ಮೂಱು ನಕ್ಷತ್ರಂಗಳಂ ಬರೆವುದು. ಅಂತು ಇಪ್ಪತ್ತೇೞು ನಕ್ಷತ್ರಂಗಳಂ ತಱುವಾಯಿಂದೆ ರಾಹುವಿನ (ಸರ್ಪಾಕಾರದ) ಶಿರಸ್ಸು ಮೊದಲಾಗೆ ಬರೆದು ಫಲಮಂ ನೋಡುವುದು. ಶಿರಸ್ಸಿನಲ್ಲಿರ್ಪ ಮೂಱು ನಕ್ಷತ್ರಂಗಳಲ್ಲಿ ಬಿತ್ತಮಂ ಬಿತ್ತಿದೊಡೆ ವಿಷದಪ್ಪುದು. ಕಂಠದಲ್ಲಿರ್ಪ ಮೂಱು ನಕ್ಷತ್ರಂಗಳಲ್ಲಿ ಬಿತ್ತಿದೊಡೆ ಬೆಳೆ ಕಾಡಿಗೆಯುಪ್ಪುದು. ಉದರದಲ್ಲಿರ್ಪ ಪನ್ನೆರಡು ನಕ್ಷತ್ರಂಗಳಲ್ಲಿ ಬಿತ್ತಿದೊಡೆ ಧಾನ್ಯಂಗಳ್

1 ದಿವಸಂ. 2 ಮಿನಿತುಂ ಬಿತ್ತಲ್ಕೆ ಶುಭಮನಚಳಿತ. 3 ನಾಂತ್ಯ, ನಾಂತ. 4 ದಾಂಟದೆ. 5 ದಂಡಮಂ ಸಮಸ್ತ ಶಕುನಂ. 6 ಬದ್ಧ. 7 ಬಹಿರ್ಗತವಾಱು ಮಿಗೆ ಪುಚ್ಛದೊಳಂ ಸಲೆ ಮೂಱು ಮತ್ತ ಮಾಶಿರದೊಳ್. 8 ಬಹಿರ್ಗಮಾಱು. 9 ಧಾನ್ಯವಾ ಬಹಿರ್ಗತಮಿಲಿ ಪುಚ್ಛದೊಳ್ ಪುೞುಗಳೆಂದಱಿ ನಿಟ್ಟಿಸಿ ರಾಹುಚಕ್ರದೊಳ್. 10 ಬಿತ್ತುವುದು. 11 (೨-೧೨-೮) ಎರಡು, ಹನ್ನೊಂದು, ಎಂಟು. 12 ಪೊಳ್ಳಿದು. 13 ಓಲೆಯ ಪ್ರತಿಯಲ್ಲಿ ಒಂದು ಹಾವಿನ ಆಕಾರ ಬರೆದಿದೆ.



[1]ತ್ರಿಪದಿ|| ದಿನಪತಿ [ಶನಿ] ನೋಡೆ ಕಾಡಿಗೆ ಧರಣಿಯ |
ತ [ನಯನೆ] ನೋಡೆ ಕಾಡಿಗೆ [2]ಕಳಕುಳಂ |
ಫಣಿ ನೋಡೆ ಮುಯಿ ನಿಶ್ಚಯಮಕ್ಕುಂ || ೪೧ ||
(ಇಂತು ಬೀಜಾವಾಪಪಟಲಂ)

ಗಮನಾಗಮನ ಪ್ರಶ್ನೆ

ಕಂ|| ಗಮನಾಗಮನ ಪ್ರಶ್ನದೊ |
ಳಮೃತಕರಂ ಚರದೊಳಿರ್ಪೊಡುದಯಿಪೊಡೆ ಚರಂ ||
ಗಮನಾಗಮನಂ ದೊರೆಕೊ |
ಳ್ಗುಮದೆಂತುಂ ಸ್ಥಿರದೊಳಾಗದಚಳಿತವಚನಾ || ೪೨ ||

ಸ್ಥಿರದೊಳಿರೆ ಚಂದ್ರನುದಯಿಸೆ |
ಚರ[3]ಮಂದಱಿಂ ಪಯಣಮಕ್ಕು ಮದು ವಿಪರೀತಂ ||
ಬರೆ ಪಯಣಮಿಲ್ಲ ಚಂದ್ರಂ |
ಚರದೊಳ್ [4]ನಿಲೆ ಮಧ್ಯಮಂ ಗಮನಮಾಗಮನಂ || ೪೩ ||

ಚೆನ್ನಾಗಿ ಬೆಳೆವುವು. [5]ಬೆನ್ನಕಡೆಯಲ್ಲಿರ್ಪ ಆಱು ನಕ್ಷತ್ರಂಗಳಲ್ಲಿ ಬಿತ್ತಿದೊಡೆ ಇಲಿಮುಬಾಧೆಯುಪ್ಪುದು. [6]ಪುಚ್ಛದಲ್ಲಿರ್ಪ ಮೂಱು ನಕ್ಷತ್ರಂಗಳಲ್ಲಿ ಬಿತ್ತಿದೊಡೆ ಬೆಳೆ ಕಾಡಿಗೆಯುಪ್ಪುದು, ಹುೞು ಹೆಚ್ಚಿ ಕಿಡುವುದು—೪೦.

ಟೀ|| ಹಿಂದೆ ಪೇೞ್ದ ಉದರದಲ್ಲಿರ್ಪ ನಕ್ಷತ್ರಂಗಳುತ್ತಮಂಗಳಾದೊಡಂ ಆ ನಕ್ಷತ್ರಂಗಳ್ಗೆ ಸೂರ್ಯನಶನೈಶ್ಚರನ ದೃಷ್ಟಿಯಿರ್ದೊಡೆ ಬೆಳೆದ ಬೆಳೆ ಕಾಡಿಗೆಗೊಂಡು, ಮಂಗಳ ರಾಹುಗಳ ದೃಷ್ಟಿಯಿರ್ದೊಡೆ ಬೆಳೆ ಪಾೞಾಗಿ ಕೆಡುವುದು—೪೧.

ಟೀ|| ಪಯಣ[7]ಮಪ್ಪುದೋ? ಪೋಗಿರ್ಪರೂರಿಂದೆ ಬರ್ಪರೋ? ಎಂದು ಮಾಡಿದ ಪ್ರಶ್ನೆಗೆ, ಆ ವೇಳೆಯಲ್ಲಿ ಚಂದ್ರಂ ಚರರಾಶಿಯಲ್ಲಿರಲ್, ಆ ಪ್ರಶ್ನಲಗ್ನಂ ಚರರಾಶಿಯಾಗಿರಲ್, ಬೇಗದೆ ಪಯಣಮಪ್ಪುದು. ಬೇಗದಿಂ ಬರ್ಪರ್-ಎಂದು ಪೇೞ್ವುದು. ಚಂದ್ರಂ ಸ್ಥಿರರಾಶಿಯಲ್ಲಿರಲ್, ಲಗ್ನಂ ಸ್ಥಿರರಾಶಿಯಾಗಿರಲ್ ಗಮನಾಗಮ[8]ನಂಗಳಾಗವೆಂದು ಪೇೞ್ವುದು—೪೨.

ಟೀ|| ಚಂದ್ರಂ ಸ್ಥಿರರಾಶಿಯ[9]ಲ್ಲಿರ್ದೊಡಂ, ಪ್ರಶ್ನಲಗ್ನಂ ಚರಲಗ್ನಮಾಗಿರ್ದೊಡಂ ಪಯಣಮುಂಟೆಂದು ಪೇೞ್ವುದು. ಪ್ರಶ್ನಲಗ್ನಂ ಸ್ಥಿರಮಾದೊಡಂ, ಚಂದ್ರಂ ಚರಲಗ್ನದಲ್ಲಿರ್ದೊಡಂ ಪಯಣಮಿಲ್ಲೆಂದು ಪೇೞ್ವುದು. ಚಂದ್ರಂ ದ್ವಿಸ್ವಭಾವಲಗ್ನದಲ್ಲಿರ್ದು, ಆ ಪ್ರಶ್ನಲಗ್ನಂ ದ್ವಿಸ್ವಭಾವಮಾಗಿರ್ದೊಡೆ [10]ಒಪ್ಪಚಿ ವಿಳಂಬಮಂ ಪೇೞ್ವುದು—೪೩.

1 ತ್ರಿಪದಿ—ದಿನಕರ. 2 ಕಳಕಳಂಬಂ। 3 ದಂದಱಿಂ. 4 ನಿಲೆ ಕೂಡೆ ಮಧ್ಯಮಗಮನಂ. 5 ಪೊಱಗೆ ಪ್ರ್ಪ 6 ಬಾಲದ ಮೂಱು ನಕ್ಷತ್ರಂಗಳಲ್ಲಿ ಬಿತ್ತಿದೊಡೆ ಹುೞು ಹೆಚ್ಚುವುದು. 7 ಮಾದೀತೋ ಪೂರಿಂದ ಬಂದಾತೋ. 8 ನಮಿಲ್ಲವೆಂದು. 9 ಲ್ಲಿರ್ದು ಚರದಲ್ಲಿ ಉದಯಿಸೆ. 10 ಪೊಪಚ್ಚಿ.

ಕಂ|| ಉದಯದೊಳ್[1]ಕ್ಕಬ್ಧಿಸ್ಥಾ |
ನದೊಳಕ್ಕೆ ಕುಳೀರ ಮಿಥುನ ಘಟವೃಶ್ಚಿಕಮು ||
ಪ್ಪುದು ಮೞಗೆ ಪಯಣಮಂ ಮಾ |
ಡಿದೊಡಂ ಕೂಡಿದೊಡಮಿಲ್ಲ ಸಕಳ ಗ್ರಹಮುಂ || ೪೪ ||

ಸಿತಪಂಚಮಿ ಸಪ್ತಮಿ ದಶ |
ಮಿ ತೇರಸೆ ಬಿದಿಗೆ ತದಿಗೆ ಯೇಕಾದಶಿ ಯಿಂ ||
[2]ಬತಿಶಯ ದಿನಂಗಳೊಳ್ ಭೂ |
ಸುತ ಶನಿ ರವಿವಾರ ಮುೞಯೆ ಯಾತ್ರೆಗೆ ಶುಭದಂ || ೪೫ ||

ಸುರಪತಿ ಶಿಖಿ ಯಮನೈಋತಿ |
ವರುಣ ಮರುತ್ತುತ್ತರಾಶೆಗಳೊಳರ್ಕಕುಜಾಂ ||
ಗಿರಸ ಬುಧ ಶುಕ್ರ ಶನಿ ಹಿಮ |
ಕರವಾರಂ ವಾರಶೂಲಮಕ್ಕುಂ ಕ್ರಮದಿಂ || ೪೬ ||

ಚಂ|| ಭರಣಿ ವಿಶಾಖೆ ಚಿತ್ತೆ ಮಘೆ ಕೃತ್ತಿಗೆ [3]ಮಾರುತನಾರ್ದ್ರೆ ಪೂರ್ವೆಗಳ್ |
ಸುರಪತಿ ಜನ್ಮ[4]ತಾರೆ ಫಣಿಯೆಂಬಿವು ಪೊಲ್ಲ[5]ವು ಶೇಷಮುತ್ತಮಂ ||
ಪರಿಘಮನಲ್ಲಿ ದಾಂಟಲಣಮಾಗದು ಮತ್ತಸುರಾಧೆ ಯಶ್ವಿಯಂ |
ಗಿರನಿನಮೆಂಬಿವೆಲ್ಲ ದೆಸೆಗಂ ಪಯಣಕ್ಕೆ ಕರಂ [6]ಶುಭಾವಹಂ || ೪೭ ||

ಟೀ|| ಆ ಪ್ರಶ್ನಲಗ್ನಕ್ಕೆ ಉದಯಸ್ಥಾನದಲ್ಲಾದೊಡಂ, ನಾಲ್ಕನೆಯಸ್ಥಾನದಲ್ಲಾದೊಡಂ ಕರ್ಕಟಂ, ಮಿಥುನಂ, ಕುಂಭಂ, ವೃಶ್ಚಿಕಂ—ಈ ನಾಲ್ಕಱೊಳೊಂದುಮಾಗದೊಡೆ ಸರ್ವ ಗ್ರಹಂಗಳ್ ಕೂಡಿದೊರ್ಡಂ ಪಯಣಮಾಗದು—೪೪.

ಟೀ|| ಶುಕ್ಲಪಕ್ಷದ ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ಏಕಾದಶಿ, ತ್ರಯೋದಶೀ ತಿಥಿಗಳಲ್ಲಿ ಆದಿತ್ಯ ಮಂಗಳ ಶನಿವಾರಂಗಳ್ ಪೊಱಗಾಗೆ, ಉೞದ ವಾರಂಗಳ್ ಕೂಡಿರಲ್ ಆ ದಿವಸಂ ಪಯಣಕ್ಕೆ ಒಳ್ಳಿತ್ತು—೪೫.

ಟೀ|| ಮೂಡಲ್ ಆದಿತ್ಯವಾರಂ, ಆಗ್ನೇಯಕ್ಕೆ ಮಂಗಳವಾರಂ, ತೆಂಕಲ್ ಬೃಹಸ್ಪತಿ ವಾರಂ, ನೈಋತ್ಯಕ್ಕೆ ಬುಧವಾರಂ, ಪಡುವಲ್ ಶುಕ್ರವಾರಂ, ವಾಯವ್ಯಕ್ಕೆ ಶನಿವಾರಂ, ಬಡಗಲ್ ಸೋಮವಾರಂ, [7](ಈಶಾನ್ಯಕ್ಕೆ ಶುಕ್ರವಾರಂ)—ಈ ಪೇೞ್ದ ದಿಕ್ಕುಗಳ್ಗೆ, ಈ ಪೇೞ್ದ ವಾರಂಗಳ್ ಕೂಡಿರಲ್ ಪಯಣಂ ಮಾಡಲಾಗದು, ವಾರ ಶೂಲಮೆನಿಪುದು—೪೬.

ಟೀ|| ಭರಣಿ, ವಿಶಾಖೆ, ಚಿತ್ತೆ, ಮಘೆ, ಕೃತ್ತಿಗೆ, ಸ್ವಾತಿ, ಆರ್ದ್ರೆ, [8]ಪುಬ್ಬೆ, ಪೂರ್ವಾಷಾಢೆ, ಪೂರ್ವಭಾದ್ರಪದೆ, (ಜ್ಯೇಷ್ಠೆ), ಆಶ್ಲೇಷೆ, ಜನ್ಮನಕ್ಷತ್ರಂ—ಈ ನಕ್ಷತ್ರಂಗಳಲ್ಲಿ ಪಯಣಂ ಮಾಡಲಾಗದು, ಉೞದ ನಕ್ಷತ್ರಂಗಳೆಲ್ಲಮುತ್ತಮಂಗಳ್, ಈ ಉತ್ತಮನಕ್ಷತ್ರಂಗಳಲ್ಲಿ ಪರಿಘ ಯೋಗಂ ಕೂಡಿರ್ದೊಡೆ ಪಯಣಂ ಮಾಡಲಾಗದು. ಅನುರಾಧೆ, ಅಶ್ವಿನಿ, ಪುಷ್ಯಂ, ಪುನರ್ವಸು, ಹಸ್ತಂ—ಈ ನಕ್ಷತ್ರಂಗಳೊಳಾವಕಡೆಗಾದೊಡಂ ಪಯಣಂಮಾಡ ಬರ್ಪುದು—೪೭.

1 ಳಕ್ಕಾರ್ಕಬ್ಧಿ (ಈ ಪಾಠದಲ್ಲಿ ಹನ್ನೆರಡನೆಯ ಸ್ಥಾನದಲ್ಲಾದೊಡಂ—ಎಂಬುದನ್ನು ಸೇರಿಸಿಕೊಳ್ಳಬೇಕು). 2 ಬ ವಿಷಯ. 3 ಮಾಱುತನಾದ್ರೆ, ಮಾರುತರುದ್ರ. 4 ತಾರಕೆಗಳಿಂತಿವು. 5 ಮಶೇಷ. 6 ಶುಭವಾಸರಂ. 7 ಇದು ಒಂದು ಪ್ರತಿಯಲ್ಲಿದೆ—ಮೂಲದಲ್ಲಿ ಏೞು ದಿಕ್ಕಿಗೆ ಮಾತ್ರ ಹೇಳಿದೆ, ಮರುದ್ಧನದೇಶರೊಳಗರ್ಕ (ಎಂಬ ಪಾಠವಿದ್ದರೆ ಎಂಟು ದಿಕ್ಕುಗಳೂ ಬಂದಂತಾಗುವುದು). 8 ತ್ರಿಪೂರ್ವೆ.



ಮ|| ಸ್ರ|| ಇರೆ ಲಗ್ನಂ ಯಾತ್ರೆ ಜನ್ಮಾಷ್ಟಮವಿರಹಿತಮಾಪೇೞ್ದ ಲಗ್ನಕ್ಕೆ ಚಂದ್ರಂ |
ಕರಿಯೊಳ್ ದೈತ್ಯಾರ್ಚಿತಂ ಸಪ್ತಮಮೊಳನುಚಿತಂ ಶುಕ್ಲಪಕ್ಷೇಂದುವಂ ಸೌ ||
ಮ್ಯರುಮಂತಾವಿರ್ದೊಡಂ ಶೋಭನಮಿನತನಯಂ ಪತ್ತಱೊಳ್ ಪೊಲ್ಲ ಸೌಮ್ಯೇ |
ತರರುಂ ಕ್ಷೀಣೇಂದುವುಂ ತತ್ಪರಹರರಸದೊಳ್ ಯಾತ್ರೆಗತ್ಯಂತಪೂಜ್ಯರ್ || ೪೮ ||

(ಇಂತು ಗಮನಾಗಮನಪ್ರಶ್ನಂ)

### ದೇವತಾಪ್ರತಿಷ್ಠಾದಿಪಟಲಂ

ಕಂ|| ಸದಭಿಮತ ದೇವತಾಸೀ |
ಕದ ನಿಱಗೆಗೆ ನೆಗೞ್ದ ಮಾರ್ಗಶಿರಮುಂ ಮಾಘಂ ||
ಮೊದಲಾದಱುದಿಂಗಳು ಮಿ |
ಪ್ಪದಾಯಕಂ ಚೈತ್ರಮಾಸಮಂ ಕೆಲರೊಲ್ಲರ್ || ೪೯ ||

ಸಮನಿಸಿ ಬರೆ ಜೊನ್ನದ ಪಂ |
ಚಮಿ ಸಪ್ತಮಿ[1] ದಶಮಿ ತೇರಸೆ ಕಾಳದ ಪಂ ||
ಚಮಿ ಷಷ್ಠಿ ಬಿದಿಗೆ ಯೆಂಬಿವು |
ಸಮಸ್ತ ಸುರಪುರ ಗೃಹಪ್ರತಿಷ್ಠೆಗೆ ಶುಭದಂ || ೫೦ ||

ಟೀ|| ಪಯಣಂ ಮಾಡುವಾತಂಗೆ [2]ಚಂದ್ರಂ ಜನ್ಮಾಷ್ಟಮಂಗಳಲ್ಲಿರ್ದೊಡೆ ಪಯಣಂ ಮಾಡಲಾಗದು. ಪಯಣಕ್ಕೆ ಪೇೞ್ದ ಲಗ್ನಕ್ಕೆ ಚಂದ್ರನಷ್ಟಮದೊಳಿರ್ದು, ಶುಕ್ರನೇೞನೆ ಸ್ಥಾನದಲ್ಲಿರ್ದೊಡೆ ಪಯಣಂ ಮಾಡಲಾಗದು. ಶುಕ್ಲಪಕ್ಷದಲ್ಲಿ ಚಂದ್ರಂಗೆ [3]ಬೃಹಸ್ಪತಿ ಗುರು ಶುಕ್ರರ್ಕಳ ದೃಷ್ಟಿಯಿರ್ದೊಡೆ ಪಯಣಮುತ್ತಮಂ. ಪಯಣಂ ಮಾಡುವ ಲಗ್ನಕ್ಕೆ ಶನಿ ಪತ್ತಱೊಳಿರ್ದೊಡೆ ಪಯಣಂ ಮಾಡಲಾಗದು. [4]ಪಯಣಂ ಮಾಡುವ ತಾರೆಗೆ ಚಂದ್ರಬಲ ಮಿಲ್ಲದಿರ್ದೊಡೆ ಪಯಣಂ ಮಾಡಲಾಗದು. ಕ್ರೂರಗ್ರಹಂಗಳ್ (೧೦-೩-೧೧-೬) ಪತ್ತು, ಮೂಱು, ಪನ್ನೊಂದು, ಆಱು—ಈ ಸ್ಥಾನಂಗಳಲ್ಲಿರ್ದೊಡೆ ಪಯಣಮುತ್ತಮಂ—೪೮.

ಟೀ|| ದೇವತಾಪ್ರತಿಷ್ಠೆ ಮೊದಲಾದ ಪ್ರತಿಷ್ಠೆಗಳ್ಗೆ ಮಾರ್ಗಶಿರಂ, ಮಾಘಂ ಮೊದಲಾದಱುದಿಂಗಳ್—ಈ ಮಾಸಂಗಳೊಳ್ಳಿದುವು. ಇವಱೊಳ್ ಕೆಲರ್ ಚೈತ್ರಮಾಸಮಂ ವರ್ಜಿಸುವರ್—೪೯.

ಟೀ|| ಶುಕ್ಲಪಕ್ಷದ ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿ, ಕೃಷ್ಣಪಕ್ಷದ ಪಂಚಮಿ, ಷಷ್ಠಿ, ಬಿದಿಗೆ—ಎಂಬೀ [5]ತಿಥಿಗಳ್ ದೇವತಾಪ್ರತಿಷ್ಠೆ, ಪಟ್ಟಣ ಗೃಹಪ್ರತಿಷ್ಠೆಗಳ್ಗೆ ಉತ್ತಮಂ—೫೦.

1 ನವದಶಮಿ ತೇರಸಯುಂ ಕಳಿಪಂ| 2 ಜನ್ಮಚಂದ್ರ, ಅಷ್ಟಮಚಂದ್ರ, ದ್ವಾದಶವಾಗಿದ್ದರೆ. 3 ಸೋಮ ಬೃಹಸ್ಪತಿ. 4 ಕ್ರೂರಗ್ರಹಂಗಳ್ ಪಯಣಮಾಡುವಾತಗೆ ಚಂದ್ರನ ಬಲವಿಲ್ಲದಿರ್ದೊಡೆ ೧೦-೩-೧೧-೬ನೆಯ ಸ್ಥಾನದಲ್ಲಿರ್ದೊಡೆ ಪಯಣವಂ ಮಾಡಲಾಗದು. 5 ತಿಥಿಗಳಲ್ಲೂ ದೇವತಾಪ್ರತಿಷ್ಠೆ ಪಟ್ಟಣಪ್ರವೇಶ ಮೊದಲಾದುವಂ ಮಾಡಬಹುದು.

ಕಂ|| ಖರಕರಕುಜದಿನವಲ್ಲದೆ |
ಪೊರೆಕೊಳೆ ಪುಷ್ಯಂ ಧನಿಷ್ಠೆ ರೇವತಿ ಮೂಱು ||
ತ್ತರೆ ರೋಹಿಣಿ ಯೆಂಬಿವು ಶುಭ |
ಕರಂಗಳಾವ ಪ್ರತಿಷ್ಠೆಯಂ ಮಾಡುವೊಡಂ || ೫೧ ||

ಚಂ|| ಧನು ಮಿಥುನಂ ಘಟಂ ವನಿತೆ ಗೋಪತಿ ವೃಶ್ಚಿಕ ಮೆಂಬ ಲಗ್ನಮೇ |
ಬಿನೆಯಮು ಮೆಂಟುಮಲ್ಲದಿರೆ ಕರ್ತೃವ ರಾಶಿಗೆ ತದ್ಗ್ರಹೋದಯ ||
ಕ್ಕನಳಭವಾಂಗದೊಳ್ ನಿಲೆ [1]ಶುಭೇತರರಗ್ನಿರಸಾಷ್ಟವರ್ಜಿತಂ |
ವಿನುತ ಶುಭಗ್ರಹಂಗಳಿರೆ ಮಾೞ್ಕೆ ಮನೋಮುದದಿಂ ಪ್ರತಿಷ್ಠೆಯಂ || ೫೨ ||

ಚಂ|| ಕುಜಗುರುಶುಕ್ರರುಂ ಗುರುಕುಜೋಶನರುಂ ಭೃಗು ದೇವಮಂತ್ರಿ ಭೂ |
ಮಿಜರುಮಿನಾತ್ಮಜೇಂದುಬುಧರುಂ ಶಶಿ ಭಾನುಜಸೌಮ್ಯರುಂ ಶಶಾಂ ||
ಕಜ ಶಶಿ ಸೌರರುಂ ರವಿಶಶಾಂಕ ಸುರೇಜ್ಯರುಮೆಂಬ ಸದ್ಗ್ರಹ |
ವ್ರಜಮುದಯಾಂಬರಾಸ್ತದೆಡೆಯೊಳ್ ನಿಲೆ ತಕ್ಕುದು ಲಗ್ನಮುತ್ತಮಂ || ೫೩ ||

---

ಟೀ|| ಆದಿತ್ಯವಾರ ಮಂಗಳವಾರಂಗಳ್ ಪೊಱಗಾಗೆ ಉೞಿದ ವಾರಂಗಳಲ್ಲಿ ಪುಷ್ಯ, ಧನಿಷ್ಠೆ, ರೇವತಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ರೋಹಿಣಿ—ಎಂಬೀ ನಕ್ಷತ್ರಂಗಳಲ್ಲಿ ಶೈವಂ ವೈಷ್ಣವಂ ಮೊದಲಾದ ಆವ[2]ಪ್ರತಿಷ್ಠೆಗಳನಾದೊಡಂ ಮಾಡಿದೊಡೆ ಲೇಸು—೫೧.

ಟೀ|| ಧನು, ಮಿಥುನಂ, ಕುಂಭಂ, ಕನ್ನೆ, ವೃಷಭಂ, ವೃಶ್ಚಿಕಂ—ಈ ಲಗ್ನಂಗಳ್ ಪ್ರತಿಷ್ಠೆಯಂ [3]ಮಾಡಿಸುವ ಕರ್ತೃವಿನ ರಾಶಿಗೆ ಏೞು ಎಂಟನೆಯ [4]ಸ್ಥಾನಂಗಳಾಗಿಲ್ಲದಿರುಹ, ಆ ಪ್ರತಿಷ್ಠಾಲಗ್ನಕ್ಕೆ ಶನಿ ಮಂಗಳ ರಾಹುಕೇತುಗಳ್ (೩–೧೧–೬) ಮೂಱು, ಹನ್ನೊಂದು, ಆಱು ಸ್ಥಾನಂಗಳಲ್ಲಿರುಹ, ಸೋಮ ಬುಧ ಗುರು ಶುಕ್ರರ್ಕಳ್ (೩–೬–೮) ಮೂಱು, ಆಱು, ಎಂಟು—ಈ ಸ್ಥಾನಂಗಳಂ ಬಿಟ್ಟು ಉೞಿದ ಸ್ಥಾನಂಗಳಲ್ಲಿರುಹ, ಈ ದಿನಂಗಳಲ್ಲಿ ಎಲ್ಲಾ ಪ್ರತಿಷ್ಠೆಗಳಂ ಮಾೞ್ಪುದು—೫೨.

ಟೀ|| ಮಂಗಳ ಗುರು ಶುಕ್ರರೀ ಮೂವರುಂ, ಗುರು ಮಂಗಳ ಶುಕ್ರರೀ ಮೂವರುಂ, ಶುಕ್ರ ಗುರು ಕುಜರೀ ಮೂವರುಂ, ಬುಧ ಶನಿ ಚಂದ್ರರೀ ಮೂವರುಂ, ಚಂದ್ರ ಶನಿ ಕುಜರೀ ಮೂವರುಂ, ಬುಧ ಚಂದ್ರ ಶನಿಯಿಾ ಮೂವರುಂ, ಆದಿತ್ಯ ಗುರುಗಳೀ ಮೂವರುಂ, ಪ್ರತಿಷ್ಠೆಯಂ ಮಾೞ್ಪ ಲಗ್ನಕ್ಕೆ (೧–೧೦–೭) ಒಂದು, ಹತ್ತು, ಏೞು— ಈ ಮೂಱು ಸ್ಥಾನಂಗಳಲ್ಲಿರ್ದೊಡೆ, ದೇವತಾಪ್ರತಿಷ್ಠೆ ಮೊದಲಾದಾವ ಪ್ರತಿಷ್ಠೆಗಳುಮಂ ಮಾಡುವುದೊಳ್ಳಿತ್ತು—೫೩.

---

1 ಶುಭಾಕರ. 2 ಪ್ರತಿಷ್ಠೆಗಳಿಗೆ ಲೇಸು. 3 ಮಾಡುವುದು ಒಳ್ಳಿತು. 4 ಸನ್ನೆರಡನೆಯ ಸ್ಥಾನದಲ್ಲೂ ಇಲ್ಲದಿದ್ದರೆ.



*ಕಂ|| ನಯನನ ಹುತಾಶನ ನರಸ |
ಭಯು ವಸುದಳಗಣಿತವೆಂಬಿವ ಮರಕತಮಂ ||
ನಿಯುತಂ ಶಕ್ಕಲ್ ಲಗ್ನೋ |
ದಯದೊಳ್ ನೆಲಸಿವೊಡೆ ಸಿಲ್ಕುವುಚಿತಕ್ರಮದಿಂ || ೫೪ ||

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀಮತ್ಕವಿತಾವಿಳಾಸತನೂಜಂ
**ಶ್ರೀಮಚ್ಚಾವುಂಡರಾಯ**
ವಿರಚಿತಮಪ್ಪ
**ಲೋಕೋಪಕಾರದೊಳ್**
ನವಪಟಲಂ
[1]ದ್ವಿತೀಯಾಧಿಕಾರಂ

---

1 ದ್ವಿತೀಯಾಶ್ವಾಸಂ.

* ಈ ಕಂದಕ್ಕೆ ಟೀಕೆಯಿಲ್ಲ, ಕಂದವೂ ತುಂಬಾ ಅಶುದ್ಧವಾಗಿದೆ, ಇಲ್ಲಿಂದ ಮುಂದೆ ಈ ಸಂಸ್ಕೃತ ಶ್ಲೋಕವು ಒಂದು ಪ್ರತಿಯಲ್ಲಿದೆ—

ಅದಿತಿ ವಿಬುಧಮೈತ್ರೀ ರಾಜಸೇವಾಗ್ನಿಹೋತ್ರೀ |
ಪಶುಕೃಷಿ ವಿಷವಿದ್ಯಾ ಬಾಲಭಾರ್ಯಾದಿ ದಾಸೀ ||
ಗೃಹ ಗೃಹರೋಗಂ ಲೋಕವಾರ್ತೇಂದ್ರಿಯಾಣಾಂ |
ಕ್ಷಣಮಪಿಮುಪಪೇಕ್ಷಂ? ಜಾಯತೇ ಖಲ್ವನರ್ಥಃ ||

ಈ ಪದ್ಯವಾದಬಳಿಕ ಮುಂದೆ ಹೇಳಿರುವ ಈ ಭಾಗವಿದೆ—

ಚೂ ಚೆ ಚೊ ಲ—ಅಶ್ವಿನಿ ಲಿ ಲು ಲೆ ಲೊ—ಭರಣಿ ಅ ಇ ಉ ಎ—ಕೃತ್ತಿಕೆ ಓ ವ ವಿ ವು—ರೋಹಿಣಿ ವೆ ವೊ ಕ ಕಿ—ಮೃಗಶಿರೆ ಕೂ ಕಂ ಚೊ ಚಾ—ಆರ್ದ್ರೆ ಕೆ ಕೊ ಹ ಹಿ—ಪುನರ್ವಸು ಹೂ ಹೆ ಹೊ ಡ—ಪುಷ್ಯ ಡಿ ಡು ಡೆ ಡೊ—ಆಶ್ಲೇಷೆ ಮ ಮಿ ಮು ಮೆ—ಮಘೆ ಮೊ ಟ ಟಿ ಟೊ—ಪುಬ್ಬೆ ಟೆ ಟೊ ಪ ಪಿ—ಉತ್ತರೆ ಪೂ ಷ ಣಾ ಥ—ಹಸ್ತ ಪೇ ಪೂ ರ ರಿ—ಚಿತ್ರೆ ರು ರೇ ರೊ ತ—ಸ್ವಾತಿ ತಿ ತು ತೆ ತೊ—ವಿಶಾಖೆ ನ ನಿ ನೂ ನೆ—ಅನುರಾಧೆ ನೊ ಯ ಯಿ ಯು—ಜ್ಯೇಷ್ಠೆ ಯೆ ಯೊ ಬ ಬಿ—ಮೂಲಂ ಬು ದಂ ಭ ಡ—ಪೂರ್ವಾಷಾಢ ಜೆ ಜೊ ಜ ಜಿ—ಉತ್ತರಾಷಾಢ ಜು ಜೆ ಜೊ ಖ—ಅಭಿಜಿ ಖಿ ಖು ಖೆ ಖೊ—ಶ್ರವಣ ಗ ಗಿ ಗು ಗೆ—ಧನಿಷ್ಠೆ ಗೊ ಶ ಶಿ ಶು—ಶತಭಿಷಾಖಿ ಶೇ ಶೊ ಭಾ ದಿ—ಪೂರ್ವಾಭಾದ್ರಪದೆ ದು ಶು ಥ ಝ—ಉತ್ತರಾಭಾದ್ರಪದೆ ದೇ ದೊ ಚ ಚಿ—ರೇವತಿ

ಅಶ್ವಿನಿ ಭರಣಿ ಕೃತ್ತಿಕಾಪಾದಂ—ಮೇಷಂ. ಕೃತ್ತಿಕಾತ್ರಿಪಾದಂ ರೋಹಿಣಿ ಮೃಗಶಿರಾರ್ಧಂ—ವೃಷಭಂ. ಮೃಗಶಿರಾರ್ಧಂ ಆರಿದ್ರಾ ಪುನರ್ವಸುತ್ರಿಪಾದಂ—ಮಿಥುನಂ. ಪುನರ್ವಸ್ವೇಕಪಾದಂ ಪುಷ್ಯಮಾಶ್ಲೇಷಾಂತಂ—ಕಟಕಂ. ಮಘೆ ಪುಬ್ಬ ಉತ್ತರೈಕಪಾದಂ—ಸಿಂಹಂ. ಉತ್ತರಾತ್ರಿಪಾದಂ ಹಸ್ತ ಚಿತ್ತಾರ್ಧಂ—ಕನ್ಯಾ. ಚಿತ್ತಾರ್ಧಂ ಸ್ವಾತಿವಿಶಾಖಾತ್ರಿಪಾದಂ—ತುಲಾ. ವಿಶಾಖೈಕಪಾದಂ ಅನುರಾಧ ಜ್ಯೇಷ್ಠಾಂತಂ—ವೃಶ್ಚಿಕಂ. ಮೂಲ ಪೂರ್ವಾಷಾಢ ಉತ್ತರಾಷಾಢೈಕಪಾದಂ—ಧನು. ಉತ್ತರಾಷಾಢಾತ್ರಿಪಾದಂ ಅಭಿಜಿತ್ ಶ್ರವಣ ಧನಿಷ್ಠಾರ್ಧಂ—ಮಕರಂ. ಧನಿಷ್ಠಾರ್ಧಂ ಶತಭಿಷಾಖಿ ಪೂರ್ವಾಭಾದ್ರಪದತ್ರಿಪಾದಂ—ಕುಂಭಂ. ಪೂರ್ವಾಭಾದ್ರಪದೈಕಪಾದಂ ಉತ್ತರಾಭಾದ್ರಪದರೇವತ್ಯಂತಂ—ಮೀನಂ.

# ತೃತೀಯಾಧಿಕಾರಂ

## ೩. ವಾಸ್ತುಪ್ರಕರಣಂ

ಕಂ|| ಶ್ರೀನಿಳಯನಱಿದು ಮಾಡಿ |
ದರ್ಾನಿಳಯಂ [1]ತಾನದಕ್ಕುಮೆಂದಧಿಕಯಶ ||
ಶ್ರೀನಿಳಯಂ ಸದಮಳವಿ |
ದ್ಯಾನಿಳಯಂ ವಾಸ್ತುವಿದ್ಯೆಯಂ ವಿರಚಿಸುವೆಂ || ೧ ||

ಧನು ಕನ್ನೆ ಝಷಂ ಮಿಥುನಮು |
ಮಿನಿತುಂ ಪೊಱಗಾಗೆ ಕೆಲವು ಮಾಸಾಂತರದೊಳ್ ||
ಮನೆಯಂ ಮಾಡುಗೆ ಬಾಗಿಲ |
ನಿನಗೆಡದೊಳ್ ಬೆನ್ನೊಳಕ್ಕೆ ನಿಲೆ ಬುಧಬಂಧು || ೨ ||

ಖರಕಿರಣಂ ನೆಲಸಿರ್ಪೊಡೆ |
ಸುರಪುರಗೇಹಪ್ರತಿಷ್ಠೆಗುತ್ತಮಮೆಂದುಂ ||
ಸ್ಥಿರಭವನಂ ಮಧ್ಯಮಮು |
ಸ್ಥಿರಭವನಂ ದ್ವಿಸ್ವಭಾವಭವನಂ ಕಷ್ಟಂ || ೩ ||

[2]ಉರಗಂ ಶ್ರವಣಂ ಮೂಱು |
ತ್ತರೆ ಪೂರ್ವಾಷಾಡಮಿಂದು ರೋಹಿಣಿಯಿವಱೊಳ್ ||
ಗುರು ನೆಲಸಿರೆ ಗುರು[3]ದಿವಸವಾ |
ಗೆ ರಾಜಯೋಗಂ ಗೃಹಪ್ರತಿಷ್ಠೆಗೆ ಶುಭದಂ || ೪ ||

---

ಟೀ|| ಈ ವಾಸ್ತುವಿದ್ಯೆಯನಱಿದು ಮಾಡಿದ ಗೃಹಂ [4]ಸಂಪತ್ತಿಗೆ ನೆಲೆವನೆಯಾಗಿರ್ಪುದಾಗಿ ಕೀರ್ತಿ ಲಕ್ಷ್ಮಿಗೆ ನೆಲೆವನೆಯುಂ, ಸದಮಳ ವಿದ್ಯೆಗೆ [5]ನೆಲೆವನೆಯುಂ ಆಗಿರ್ಪ (ಕವಿಯೆ) ನಾಂ ವಾಸ್ತುವಿದ್ಯೆಯಂ ಪೇೞ್ದಪೆಂ—೧.

ಟೀ|| ಧನು, ಕನ್ನೆ, ಮೀನಂ, ಮಿಥುನಂ—ಈ ನಾಲ್ಕು ಮಾಸದಲ್ಲಿ ಮನೆಯಂ ಮಾಡಲಾಗದು. ಮೇಲಾದ ಎಂಟುಮಾಸಂಗಳಲ್ಲಿ ಮನೆಯಂ ಮಾಡಿದೊಡೆ ಒಳ್ಳಿತ್ತು. ಆ ಮನೆ ಬಾಗಿಲಂ ಮಾಡೆ ಬಡಬಾಗಿಲ್ ಮೂಡಬಾಗಿಲ್ಗಳಾಗೆ ಮಾಡುವುದು—೨.

ಟೀ|| ಸೂರ್ಯಂ ಉತ್ತರಾಯಣದಕ್ಷಿಣಾಯನಂಗಳೊಳಗೆ ತುಲಾಮಾಸ, ಮೇಷ ಮಾಸಂಗಳಲ್ಲಿ (ಆ ಸೂರ್ಯಂ) ಸಮನಾಗಿರ್ಪನಾಗಿ, ಆ ಮಾಸಂಗಳಲ್ಲಿ ದೇವಾಲಯ, ಪಟ್ಟಣ ಗೃಹ ಮೊದಲಾದುವಂ ಪ್ರಾರಂಭಮಾಡುವುದು. ಸ್ಥಿರ[6]ಲಗ್ನಂಗಳಲ್ಲಿ ಮಾಡಿದ ಮನೆ ಉತ್ತಮಂ, ಚರ[7]ಲಗ್ನಂಗಳಲ್ಲಿ ಮಾಡಿದ ಮನೆ ಮಧ್ಯಮಂ. ದ್ವಿಸ್ವಭಾವ[8]ಲಗ್ನಂಗಳಲ್ಲಿ ಮಾಡಿದ ಮನೆ ಕಷ್ಟಂ—೩.

ಟೀ|| ಆಶ್ಲೇಷೆ, ಶ್ರವಣಂ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರಪದೆ, ಪೂರ್ವಾಷಾಢೆ, ಮೃಗಶಿರೆ, ರೋಹಿಣಿ—ಈ ನಕ್ಷತ್ರಂಗಳಲ್ಲಿ ಬೃಹಸ್ಪತಿವಾರಂ ಕೂಡೆ ರಾಜಯೋಗ

---

1 ತಾನಿದ. 2 ಶ್ರವಣಂ ಮೂ. 3 ದಿನವಾಗೆ, ದಿನವಾಗಲ್. 4 ಆಯುಷ್ಯಕ್ಕೆ. 5 ನೆಲೆವನೆಯ ಪಂಥಾ ಈ ಕವಿಯು ಪೇೞ್ದಪಂ. 6 ಲಗ್ನನಕ್ಷತ್ರಂಗಳಲ್ಲಿ. 7 ಲಗ್ನನಕ್ಷತ್ರಂಗಳಲ್ಲಿ. 8 ಲಗ್ನನಕ್ಷತ್ರಂಗಳಲ್ಲಿ.



ಕಂ|| ವಸು ಚಿತ್ರೆ ವಿಶಾಖೆ ಪುನ |
ರ್ವಸುವಶ್ವಿನಿ ಯಾರ್ದ್ರೆ ವರುಣಮೆಂಬಿವಱೊಳ್ ತಾ ||
[1]ನಸುರೇಜ್ಯಂ ನಿಲೆ ತಾಂ ಮಾ |
ಡಿಸುವುದು ತದ್ದಿನದೊಳಮರದೇವಾಲಯಮಂ || ೫ ||

ಭರಣಿಯನುರಾಧೆ ಮಾರುತ |
ನೆರಡುಂ ಭಾದ್ರಪದೆ ಶಕ್ರನೆಂಬಿವಱೊಳ್ ಭಾ ||
ಸ್ಕರಸುತನಿರೆ ಶನಿವಾರಂ |
ಬರೆ ಮನೆಯಂ [2]ಮಾಡಬೇಡ ಮಡಗುಗೆ ಧನಮಂ || ೬ ||

ನಿರುತಮಘೆ ಪೂರ್ವೆ ಕೃತ್ತಿಗೆ |
ಗುರು ರೇವತಿ ಹಸ್ತಮೆಂಬ ತಾರೆಗಳೊಳ್ ಕೂ ||
ಡಿರೆ ಭೌಮಂ ತದ್ವಾರಂ |
ದೊರೆಕೊಳೆ [3]ಮನೆಮಾಡೆ ಬೇಯದಿರದುಱಿದಪುದೇ || ೭ ||

ಶ್ರವಣಾದಿ ಪಂಚಕದೊಳಂ |
[4]ರವಿರೆ ಮಘೆಯಾದಿಪಂಚಕದೊಳಿನನುಮಿರಲ್ ||
ಸಮನಿಸೆ ಜೊನ್ನಂ ಮನೆಮಾ |
ಡುವ ಮರನಂ ಕಡಿಯಲಾಗದೆಂದುಮಮೋಘಂ || ೮ ||

---

ಮೆನಿಪ್ಪುದು, ಆ ರಾಜಯೋಗಂಗಳಲ್ಲಿ ಮಾಡಿದ ಗೃಹಂಗಳ್ ಐಶ್ವರ್ಯಕ್ಕೆ ನೆಲೆವನೆಯಾಗಿರ್ಪುವು—೪.

ಟೀ|| ಧನಿಷ್ಠೆ, ಚಿತ್ರೆ, ವಿಶಾಖೆ, ಪುನರ್ವಸು, ಅಶ್ವಿನಿ, ಆರ್ದ್ರೆ, ಶತವಿಶಾಖೆ—ಈ ನಕ್ಷತ್ರಂಗಳಲ್ಲಿ ಶುಕ್ರನಿರಲ್ ಶುಕ್ರವಾರಂ ಕೂಡೆ ಆ ದಿವಸದಲ್ಲಿ ದೇವಾಲಯಂಗಳ ಪ್ರತಿಷ್ಠೆಯಂ ಮಾಳ್ಪುದು—೫.

ಟೀ|| ಭರಣಿ, ಅನುರಾಧೆ, ಸ್ವಾತಿ, ಪೂರ್ವಭಾದ್ರಪದೆ, ಉತ್ತರಭಾದ್ರಪದೆ, ಜ್ಯೇಷ್ಠೆ—ಈ ನಕ್ಷತ್ರಂಗಳಲ್ಲಿ ಶನಿಯಿರಲ್ ಶನಿವಾರಂ[6]ಕೂಡೆ ಆ ದಿನಗಳಲ್ಲಿ ಗೃಹಪ್ರತಿಷ್ಠೆಗಳಂ ಮಾಡಲಾಗದು, ನಿಕ್ಷೇಪಮನಿರಿಸುವೊಡೆ ಒಳ್ಳಿತ್ತು—೬.

ಟೀ|| ಮಘೆ, ಪುಬ್ಬೆ, ಕೃತ್ತಿಗೆ, ಪುಷ್ಯಂ, ರೇವತಿ, ಹಸ್ತಂ—ಈ ನಕ್ಷತ್ರಂಗಳಲ್ಲಿ ಮಂಗಳವಾರಂ [7]ಕೂಡೆ ಆ ದಿನದಲ್ಲಿ ಮನೆಯಂ ಮಾಡಿದಂದು ಆ ಮನೆಗೆ ಅಗ್ನಿಬಾಧೆಯಿಲ್ಲದೆ ಮಾಣದು—೭.

ಟೀ|| ಶ್ರವಣಂ, ಧನಿಷ್ಠೆ, ಶತವಿಶಾಖೆ, ಪೂರ್ವಾಭಾದ್ರಪದೆ, ಉತ್ತರಾಭಾದ್ರಪದೆ—ಈ ಅಯ್ದು ನಕ್ಷತ್ರಂಗಳಲ್ಲಿ ಚಂದ್ರನಿರಲ್, ಮಘೆ, ಪುಬ್ಬೆ, ಉತ್ತರೆ, ಹಸ್ತಂ, ಚಿತ್ರೆ—ಈ ಅಯ್ದು ನಕ್ಷತ್ರಂಗಳಲ್ಲಿ ಸೂರ್ಯನಿರಲ್ ಬೆಳ್ದಿಂಗಳ ದಿನಂ ಕೂಡಲ್ ಮನೆಯಂ [8]ಮಾಳ್ಪ ಮರಂಗಳಂ ಕಡಿಯಲಾಗದು—೮.

---

1 ನಸುರಮಂತ್ರೀಶಂ ನೆಲೆಯಾ | ಗೆಸೆದಿರೆ ತಾಂ ಮಾಡಿಸುಗೆ. 2 ಮಾಡಿ ಮಡಗುಗೆ. 3 ಮನೆಯಂ ಮಾಡೆ. 4 ದುವಿರಲ್ ಮಘಾದಿ ಪಂಚಕದೊಳಂ ರವಿಯಿರುತಿರೆ, ಚಕದೊಳು ರವಿಯೊಂದಿ ಬರಲ್. 5 [illegible] ಗಾದ ಮೋಘಂ. 6 ಕೂಡಿದ ದಿವಸಗಳಲ್ಲಿ. 7 ಕೂಡಿದಂದು ಮನೆಗಳಂ ಮಾಡೆ... ಅಗ್ನಿಬಾಧೆಯಾಗುವುದು. 8 ಕಟ್ಟುವ.

ಕಂ|| ಬೇವಿನ ಪುಣಿಸೆಯ ತಾಱೆಯ |
ಮಾವಿನ ಮುಳ್ಮರದ ಪಾಲ್ಮರಂಗಳ ಸುರಗೇ ||
ಹಾವಳಿಯ ಮರಂ ಕರಮಿಸು |
ಭಾವಹಮಕ್ಕುಂ ಗೃಹಕ್ಕೆ ಗೃಹಶಲ್ಯಂಗಳ್ || ೯ ||

ಚಂ|| ಕರಿಕು ತಗುಲ್ದು ಪುತ್ತಡರ್ದ ನೀರೆಱೆದೋವಿದ ಪೊಟ್ಟೆವೋದ ದೇ |
ವರ ಪೆಸರುಳ್ಳ ಜೇನಪುೞುವಿಂಗೆಡೆಯಾಗಿರೆ ಸುತ್ತ ಬಳ್ಳಿಯಿಂ ||
ಮುರಿದಿಭ ಮೊತ್ತಿನಿಂ ಮುಱಿದ ಗರ್ಭದ ಮಣ್ಣಿ ಡಿದಿರ್ದ ಗಂಟುಗೊಂ |
ಡರೆಗಡಿದಿರ್ದ ಗಾಳಿ ಕೊಳೆ ಬಿಟ್ಟ ಮರಂ ಶುಭಮಲ್ಲ ಮೆಲ್ಲಗಂ || ೧೦ ||

ಮ|| ಮರನಂ ಕೆತ್ತೆ ಕವಲ್ತು ತೋರ್ಪೊಡಿಲಿ ಮುದ್ಗಚ್ಛಾಯೆಯಿಂ ಕೇಕಱಂ |
ಕರಿದಾದಂದಹಿ ಪಚ್ಚನಾಗೆ ವಿಹಗಂ ಪೊಂಬಣ್ಣದಿಂ [1]ವೋತಿ ಕೇ ||
ಸುರಿಯಂ ಪೋಲ್ತಿರೆ ಕಪ್ಪೆ [2]ಖಟ್ಟಿರುಚಿಯಿಂ ನಿರ್ಧೂಮದಿಂ [3]ಪಲ್ಲಿ ಸೂ |
ಕರವರ್ಣಂ [4]ವುಗೆ ವೃಶ್ಚಿಕಂ ಸಮನಿಕುಂ ಮತ್ತಂತೆ ಕಲ್ಲಾದೊಡಂ || ೧೧ ||

ಕಂ|| ನಟ್ಟನಡು ಕಟ್ಟಕಡೆ ಪೆ |
ರ್ಚಟ್ಟೆ ಕರಂ ಗೊಂಟು ದೇವತಾಲಯದ ನೆಟ ||
ಲ್ಮುಟ್ಟುವೆಡೆ ನೀರ ತಡಿ ಮನೆ |
ಗಟ್ಟುವೊಡಶುಭಂ ದ್ವಿಜಾತಿ ವರ್ಗಕ್ಕೆಲ್ಲಂ || ೧೨ ||

ಟೀ|| ಬೇವು, ಹುಣಿಸೆ, ತಾಱೆ, ಮಾವು, ಮುಳ್ಮರಂಗಳ್, ಅರಳಿ, ಅತ್ತಿ, ಆಲಂ (ಕಳ್ಳಿ), ಪಲಸು ಮೊದಲಾದ ಪಾಲ್ಮರಂಗಳ್ ದೇವಾಲಯದ ಸೀಮೆಯೊಳಿರ್ಪ ಮರಂಗಳ್, ಈ ಮರಂಗಳಂ ಮನೆಗೆ ಇಕ್ಕಲ್, ಆ ಮರಂಗಳ್ ಮನೆಗೆ ಅನುಂಗಳಮಂ ಮಾಱ್ಪುವು, ಅವು ಗೃಹ ಶಲ್ಯಂಗಳೆನಿಸಿಕೊಳ್ವುವು—೯.

ಟೀ|| ಬೇಗೆ ಪಾಯ್ದು ಬೆಂದ ಮರಂ, ಮೊದಲ್ ಪುತ್ತಿಕ್ಕಿದ ಮರಂ, ನೀರಂಪೊಯ್ದು ಬೆಳಸಿದ ಮರಂ, ಪೊಟ್ಟೆವೋದ ಮರಂ, ಜೇನಪುೞುಗಳ್ಗೆಡೆಯಾದ ಮರಂ, ಬಳ್ಳಿಗಳ್ ಬಿಗಿದು ಸುತ್ತಿದ ಮರಂ, ಆನೆಯೊತ್ತಿ ಮುಱಿದ ಮರಂ, ತನಗೆ ತಾನೆ ಮುಱಿದು ಬಿಟ್ಟ ಮರಂ, ಗರ್ಭದಲ್ಲಿ ಮಣ್ಣೊಡನಿರ್ಪ ಮರಂ, ಗಂಟುಗೊಂಡಿರ್ಪ ಮರಂ, ಮುನ್ನಂ ಕಡಿದುಬಿಟ್ಟಿರ್ಪ ಮರಂ, ಗಾಳಿಗೆ ಬಿಟ್ಟ ಮರಂ—ಇಂತಹ ಮರಂಗಳಂ ಮನೆಗಿಕ್ಕಲಾಗದು, ಮಂಗಳಪ್ರದಂಗಳಲ್ಲವು—೧೦.

ಟೀ|| ಮನೆಯಂ ಕಟ್ಟುವೊಡೆ ಕಾಡೊಳಗೆ ಮರನನರ್ಜಿಸಿ ಕಡಿವಲ್ಲಿ ಮೊದಲ್ ಕಡಿದ ಸೆಕ್ಕೆ ಕವಲಾಗಿ ಬಿಟಲ್ ಇಲಿಗಳ್ ಪೆರ್ಚುವುವು. ಪೆಸಱಬಣ್ಣಂ ತೋಱಿದೊಡೆ ಪೆರ್ಗಣಂ ಪೆರ್ಚುವುವು. ಕಱಿಯಬಣ್ಣಮಾದೊಡೆ ಸರ್ಪಂಗಳ್ ಪೆರ್ಚುವುವು. ಕೆಂಪಾದೊಡೆ ಕಪ್ಪೆ ಪೆರ್ಚುವುವು. ನೀಲವರ್ಣಮಾಗಿ ಪೊಗೆಯವರ್ಣಮಾದೊಡೆ ಪಲ್ಲಿ ಪೆರ್ಚುವುವು. ಹಂದಿಯ ಬಣ್ಣಮಾದೊಡೆ ತೇಳ್ಗಳ್ ಪೆರ್ಚುವುವು—ಮೇಲೆ ಪೇೞ್ದ ವರ್ಣಂಗಳಾದೊಡೆ ಆ ಮನೆಯಲ್ಲಿ ಮೇಲೆ ಪೇೞ್ದ ಪ್ರಾಣಿಗಳ್ ಪೆರ್ಚಿ ಬಾಧಿಸುವುವು—೧೧.

ಟೀ|| ಗ್ರಾಮಮುಮಂಡಲದ ಸೂರ್ಯವೀಥಿ. ಸೋಮವೀಥಿಗಳಂ ಬಿಡದೆ ನಟ್ಟನಡುವೆ, ಕಟ್ಟಕಡೆಗಳಲ್ಲಿ ಮನೆಯಂ ಕಟ್ಟಲಾಗದು. ಗ್ರಾಮಮುಮಂಡಲದಿಂ ಪೊಱಗೆ ಮನೆಯಂ ಕಟ್ಟ

1 ಪೊತ್ತಿದೊರೆಕೇ. 2 ನೀಲರುಚಿ. 3 ಬಗ್ಗ. 4 ಮಿಗೆ.



ಕಂ|| ಮನೆಯಂ ಪೆರ್ಚಿಸುವೊಡೆ ಮು |
ನ್ನಿನ ಮಾಟಕ್ಕೆಯೊಳಯ್ದೆ ಮೂಡಲುಂ ಬಡಗಲ್ ಪೊ ||
ತ್ತೆ ನಿಮಿರ್ಚುಗುಱಿದ ದೆಸೆಗಳೊ |
ಳನಿತಂ ಪೆರ್ಚಿಸಲೆವೇಡ ಪೆರ್ಚಂ ಬಗೆವಂ || ೧೩ ||

ಕ್ಷೇತ್ರಮನಳವಡೆ ಮೊದಲೊಳ್ |
ಸೂತ್ರಂ ಪಱಿದಂದು ಮೂಡಣಿಂ ಬರೆ ಬಲದಿಂ ||
ಕ್ಷೇತ್ರಾಧಿಪತಿಗೆ ವನಿತೆಗೆ |
ಪುತ್ರಪ್ರಕರಕ್ಕೆ ಶಿಲ್ಪಿಗಕ್ಕುಮಪಾಯಂ || ೧೪ ||

ಕೋಡು ಕೊಲಗೆಲ್ ತೊಗಲ್ ಕೊಱೆ |
ದೋಡಿರ್ದ್ದಲ್ ಪಲ್ಲಿ ಪಾವು ಪವರಣೆ [1]ನವಿಲಾ ||
ವೋಡೆಂಬಿವು ಕಷ್ಟಂ ಮನೆ |
ಮಾಡುವ ನೆಲನನಗುೞೆ [2]ಕಾಣ್ಬೊಡುಱಿದುವು ಶುಭದಂ || ೧೫ ||

ಲಾಗದು. ಪೆರ್ಬಟ್ಟೆಗೂಡಿದ ತಾವುಗಳ್, ಅತ್ಯಂತ ಮೂಲೆಗಳ್, ದೇವಾಲಯದ ಶಿಖರದ ನೆೞಲ್ ಮುಟ್ಟುವ ತಾವು, ನೀರತಡಿ—ಇಂಥಾ ತಾವುಗಳಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರ್ಕಳ್ ಮನೆಗಳಂ ಕಟ್ಟುವೊಡೆ ಪೊಳ್ತಲ್ಲ—೧೨.

ಟೀ|| ಮನೆಗಳಂ ಪೆರ್ಚಿಸುವೊಡೆ ಮುನ್ನಿನ ನಿವೇಶಮಂ ಕೊಂಡಿರ್ದಲ್ಲಿ ಸರಿಯಂತಾ ಪೆರ್ಚಿಸುವುದು. ಮಿಗಿಲಾಗಿ ಪೆರ್ಚಿಸಬೇಕಾದೊಡೆ, ಮೂಡಲ್ ಬಡಗಲ್ ಪೆರ್ಚಿಸಿ ಮನೆಯಂ ಕಟ್ಟುವುದು. ಲೇಸಂ ಬಯಸುವವಂ ತೆಂಕಲ್ ಪಡುವಲ್ [3]ಮನೆಯಂ ಪೆರ್ಚಿಸ ಲಾಗದು—೧೩.

ಟೀ|| ಮನೆಗಳಂ ಮಾಡುವುದರ್ಕೆ ಕ್ಷೇತ್ರಮಂ ಮೂಡಣಾದಿಯಾಗೆ ಅಳೆವಲ್ಲಿ ಆ ಸೂತ್ರಂ ಮೂಡಣದಿಕ್ಕಿನಲ್ಲಿ ಪಱಿದೊಡೆ ಮನೆಯ ಯಜಮಾನಂಗೆ, ತೆಂಕಣದಿಕ್ಕಿನಲ್ಲಿ ಪಱಿದೊಡೆ ಆತನ ಸ್ತ್ರೀಗೆ, ಪಡುವಣದಿಕ್ಕಿನಲ್ಲಿ ಪಱಿದೊಡೆ ಆತನ ಪುತ್ರರ್ಕಳ್ಗೆ, ಬಡವಣದಿಕ್ಕಿನಲ್ಲಿ ಸೂತ್ರಂ ಪಱಿವೊಡೆ ಆ ಮನೆಯಂ ಮಾಡುವ ಕೆಲಸಿಗಂಗೆ—ಈ ಮರ್ಯಾದೆಯಲ್ಲಿ ದಿಕ್ಕುಗಳ ನಱಿದು ಮನೆಯಂ ಮಾಡಿದೊಡೆ ಅಪಾಯಂಗಳ್ ಬರ್ಪುವು—೧೪.

ಟೀ|| ಮನೆಯಂ ಮಾಡುವ ನೆಲನಂ ಸೋದಿಸುವಲ್ಲಿ ಮೊದಲೊಳ್ ನೆಲನನಗುೞೆ ಕೋಡು, ಕೊಲಗು, ಎಲು, ತೊಗಲ್, ಕೊಱಡು, ಹೆಂಚು, ಇದ್ದಲ್, ಹಲ್ಲಿ, ಹಾವು [4]ಹಾವರಣೆ, ನವಿಲು, ಆವೆ, ಓಡು—ಇಂತಹುದಂ ಕಾಣಲಾಗದು, ಇವಲ್ಲದೆ ಇಟ್ಟಿಗೆ ಮೊದಲಾದುವಂ ಕಾಣಲೊಳ್ಳಿತ್ತು—೧೫.

1 ಪಾವರಣೆ ವೋತಿಗಳೊಡನೆ. 2 ಕಾಣ್ಬುದುಱಿದುವು. 3 ಮನೆಯನೊತ್ತಿಸೊಡೆ ಲೇಸಾಗದು. 4 ಪಾವರಣೆವೋತಿ ಉಡುಯಿವಂ.

ಅಕ್ಕರಂ|| ಪಿಡಿದ ಶಂಕುಪ್ರಮಾಣಿನ ಗೇಣಿಂದೆ ಉತ್ತಮಮಾಗಿರೆ ಬೀಸಿ ಸೈತಿಂಪಿ |
ನಡುವೆ ಶಂಕುವುಮಂ ಪೊಕ್ಕು ಪೊಱಮಟ್ಟ ನೆೞಲನಾರೇಖೆಯೊಳರ್ಚಿಸಿಟ್ಟು ||
ಪಿಡಿತು ಸೂತ್ರಮುಂ ಪಡುವಲುಂ ಮೂಡಲುಮಾಗಿರ್ಕುಂ ಮತ್ತಲ್ಲಿ ಮಚ್ಚಂಬೀಸೆ |
ಬಡಗಲುಂ ತೆಂಕಲೆಂದಱಿ ಮೇಣ್ಪ್ರ್ರವ[ತಾ]ರೇಖೆಯಂ ನೋಡಿ ಮುಗ್ಗುಡ್ಡೆಯಂ
ನಿಂದುಕೊಳ್ಗೆ || ೧೬ ||

ಕಂ|| ಮೂಡಣ ಬಡಗಣ ಕೋಣೊಳ್ |
ಮೂಡಲ್ ಮೇಣ್ ಪಡುವಲಾಗೆ ನೀರ್ವರಿ ಶುಭಮಂ ||
ಮಾಡುಗುಮುೞಿದೆಡೆಗಳ ನೀ |
ರ್ವಾಡೆ ಧನಕ್ಷಯಮನಱಲುಮಂ ಪುಟ್ಟಿಸುಗುಂ || ೧೭ ||

ಆರಾಜಸ್ನಪನದ ಪಚ |
ನಾರಂಭದ ಸೆಜ್ಜೆಯಸ್ತ್ರದಾರೋಗಿಪ ಕೊ ||
ಟ್ಟಾರದ ಭಂಡಾರದ ದೇ |
ಹಾರದ ಮನೆಯು ಮೂಡಣಿಂ ಪ್ರದಕ್ಷಿಣಮುಚಿತಂ || ೧೮ ||

---

ಟೀ|| ಪನ್ನೆರಡಂಗುಲದ ಪ್ರಮಾಣಿನಲ್ಲಿ ಶಂಕುವಂ ಮಾಡಿ, ಆ ಶಂಕುವನೊಂದು ತಾಣದಲ್ಲಿ ಇರಿಸಿ, ಆ ಶಂಕುವಿನ ಸುತ್ತಲುಂ ಸೂತ್ರಮಂ ಒಟ್ಟೆತ್ತಾಗಿ ಬೀಸಿ, ಉದಯಾಸ್ತಮಯ ಕಾಲಂಗಳಲ್ಲಿ ಆ ಶಂಕುವಿನ ತುದಿಯ ನೆೞಲಂ ಆ ರೇಖೆಯಲ್ಲಿ ಕುಱುಹಾಗಿ, ಎರಡು ಕಡೆಯುಂ ಸೊನ್ನೆಯಂ ಬರೆದು, ಆ ಎರಡು ಸೊನ್ನೆಯ ಮೇಲೆ ಸೂತ್ರಮಂ ಪಿಡಿಯಲ್, ಅದು ಮೂಡಲ್ ಪಡುವಲೆನಿಸಿಕೊಳ್ವುದು. ಆ ಮೂಡಲ್ ಪಡುವಲ್ ರಚಿಸಿದ ರೇಖೆಯಿಂದೆ ಮೇಲಣ ಸೊನ್ನೆಗಳಂ ಮಧ್ಯಮಂ ಮಾಡಿಕೊಂಡು, ವೃತ್ತಾಕಾರದಿಂ ಕೆಯ್ವಾರಮಂ ಬೀಸಲ್, ನಡುವೆ ಮತ್ಸ್ಯಾಕಾರಂ ಪುಟ್ಟುವುದು. ಆ ಮತ್ಸ್ಯಾಕಾರದ ಎರಡು ಕಡೆಯ ರೇಖೆಯಂ ಎಡಬಲಂ ಮಾಡಿಕೊಂಡು, ನಡುವೆ ಸಸಿನಕ್ಕೆ ತೆಂಕಬಡಗಲಾಗಿ ಸೂತ್ರಮಂ ಪಿಡಿಯಲ್ ತೆಂಕಬಡಗಲಂ ಅಱಿವುದು. ಆ ಮೂಡಣ ತೆಂಕಣ ಮಧ್ಯ, ತೆಂಕಣ ಪಡುವಣ ಮಧ್ಯ, ಪಡುವಣ ಬಡಗಣ ಮಧ್ಯ, ಬಡಗಣ ಮೂಡಣ ಮಧ್ಯಗಳಂ ಲಚ್ಚಿಸಿಕೊಂಡು, ಆ ಲಚ್ಚಿಸಿದ ಕುಱುಹಂ ಮಧ್ಯಂ ಮಾಡಿ ಕೆಯ್ವಾರಮಂ ಬೀಸಿ, ನಡುವೆ ಪುಟ್ಟಿದ ಮತ್ಸ್ಯಂಗಳಂ ಮಧ್ಯಂಮಾಡಿ, ಸೂತ್ರಮಂ ಪಿಡಿದು ವಿದಿಕ್ಕುಗಳಂ ಅಱಿದುಕೊಳ್ವುದು—೧೬.

ಟೀ|| ಮನೆಯಂ ಮಾಡುವಲ್ಲಿ ನೀರ್ವರಿಯಂ ಮೂಡಲ್ ಬಡಗಲಾಗೆ ಮಾಡಿದೊಡೆ ಉತ್ತಮಂ. ಪಡುವಲ್ ತೆಂಕಲ್ ನೀರ್ವರಿಯಾದೊಡೆ ಧನಕ್ಷಯಮಂ ಮಾಳ್ಪುದು, ದುಃಖಮಂ ಪೆರ್ಚಿಸುವುದು—೧೭.

ಟೀ|| ಆ ರಾಜಗೃಹಂಗಳಂ ಕಟ್ಟುವೊಡೆ ಮೂಡಲಾದಿಯಾಗಿ ಮೂಡಲ್ ಮಜ್ಜನದ ಮನೆ, ಆಗ್ನೇಯದಲ್ಲಿ ಬಾಣಸಿನ ಮನೆ, ತೆಂಕಲ್ ಪವಡಿಸುವ ಮನೆ, ನೈಋತ್ಯದಲ್ಲಿ ಆಯುಧಂಗಳನಿರಿಸುವ ಮನೆ, ಪಡುವಲಾರೋಗಣೆಯ ಮನೆ, ವಾಯವ್ಯದಲ್ಲಿ ಕಣಜದ ಮನೆ, ಬಡಗಲ್ ಭಂಡಾರದ ಮನೆ, ಈಶಾನ್ಯದಲ್ಲಿ ದೇಹಾರದ ಮನೆ—ಈ ಪ್ರಮಾಣದಲ್ಲಿ ಮನೆಗಳಂ ಕಟ್ಟಿಸುವುದು—೧೮.



ಕಂ|| ಪಸರಿಸೆ ತರದಿಂ ಧ್ವಜ ಧೂ |
ಮಸಿಂಹ [1]ಶುನಕೋಕ್ಷಖರಗಜಧ್ವಾಂಕ್ಷಂಗಳ್ ||
ದೆಸೆಯಿಂದೆ ಮೂಡನಾಲ್ಕುಂ |
ದೆಸೆಯಾಯಂ ಶುಭದಮಲ್ಲಿ ಪೆಱವಶು[2]ಭಂಗಳ್ || ೧೯ ||

ಮನೆಯಗಲದಿಂದೆ ಗುಣಿಯಿ |
ಸು ನೀಳಮಂ ಪದಮೆನಿಕ್ಕು ಮದ[ನಂತೆ] ಬೞಿ ||
ಕ್ಕನಲನೊಳಱಿ [3]ದಿಭದಿಂ ತೆಗೆ |
ಯೆ ನಿಂದುವಕ್ಕುಂ ಧ್ವಜಾದಿ ಗೃಹದಾಯಂಗಳ್ || ೨೦ ||

ಮ|| ಪದಮಂ ರಂಧ್ರದಿನೊತ್ತಿಯೆತ್ತು ಗಜದಿಂ ಕೊಳ್ ಮಿಕ್ಕುದಕ್ಕುಂ ಧನಂ |
ತದವಾಪ್ತಂ ನಗಸಂಗುಣಂ ಫಣಿಹೃತಂ ಶೇಷಂ ಋಯಂ ಲಬ್ಧಮಂ ||
ತದು ತಾನಾಮನೆಗಾಯು ಮಾಗೃಹದ ನಕ್ಷತ್ರಂ ಬೞಿಕ್ಕೆಂಟಱಿಂ |
ಪದಮಂ ಘಾತಿಸಿ ನಾಲ್ಕಱಿಂದಿಱಿಸು [4]ಕೊಳ್ಳಾದಿತ್ಯನಿಂ ರಾಶಿಗಳ್ || ೨೧ ||

ಕಂ|| ಅಂಕದಿನೊಗೆ ಪದಮನದಂ |
ಬಿಂಕದಿನುಗಿ ಶೂನ್ಯರತ್ನಶೇಷಂ ತಿಥಿ ಬಂ ||
ದಂಕಮನೆತ್ತಲ್ ಮುನಿಯಿಂ |
ಶಂಕಿಸಬೇಡಕ್ಕುಂ ಶೇಷ ವಾರಂ ಧರೆಯೊಳ್ || ೨೨ ||

---

ಟೀ|| ತೞುವಾಯಿಂದೆ ಧ್ವಜಾಯಂ, ಧೂಮಾಯಂ, ಸಿಂಹಾಯಂ, ಶುನಕಾಯಂ, ವೃಷಭಾಯಂ, ಖರಾಯಂ, ಗಜಾಯಂ, ವಾಯಸಾಯಂ—[5]ಈ ಎಂಟು ಆಯಂಗಳುಂ ಮೂಡಲ್ ಮೊದಲಾಗಿ ಸವ್ಯದಿಂದೆ ಎಂಟು ದಿಕ್ಕಿನಲ್ಲಿಯುಮಿರ್ಪುವು, ಆ ದಿಕ್ಕುಗಳಲ್ಲಿ ನಿಂದ ಆಯಂಗಳ್ ನಾಲ್ಕುಂ ಶುಭಂಗಳ್, ಕೋಣೊಳ್ನಿಂದ ನಾಲ್ಕಾಯಂಗಳುಮಶುಭಂಗಳ್—೧೯.

ಟೀ|| ಮನೆಯಗಲಮನಳೆದು ನೀಳಮುಮನಳೆದು ಆ ಯೆರಡಂ ಗುಣಿಸಲ್, ಗುಣಿಸಿ ಬಂದುದು ಪದ[6]ಮೆನಿಪುದು, ಆ ಪದಮಂ ಮೂಱಱಿಂದೆ ಗುಣಿಸಿ, ಎಂಟಱಿಂಭಾಗಿಸೆ ಉೞಿದ ಶೇಷಂಗಳ್ ಧ್ವಜಾದಿಯಾಗೆ ಆಯಂಗಳೆನಿಸಿಕೊಳ್ವುವು—೨೦.

ಟೀ|| ಆ ಮುಂಗುಣಿಸಿ ಬಂದ [7]ಪದಮಂ, ಒಂಭತ್ತಱಿಂ ಗುಣಿಸಿ, ಎಂಟಱಿಂ ಭಾಗಿಸಲ್ ಉೞಿದ ಶೇಷಂ ಧನಮೆನಿಸಿಕೊಳ್ವುದು ಆ ಭಾಗಿಸಿ ಬಂದ ಧನಮಂ ಏೞಱಿಂ ಗುಣಿಸಿ, ಎಂಟಱಿಂ ಭಾಗಿಸಲ್ ಉೞಿದ ಶೇಷಂ ಋಯಮೆನಿಸಿಕೊಳ್ವುದು. ಆ ಭಾಗಿಸಿ ಬಂದ ಲಬ್ಧಂ ಮನೆಯ ಆಯುಷ್ಯಮಪ್ಪುದು. ಆ ಪದಮನೆಂಟಱಿಂ ಗುಣಿಸಿ, ಇಪ್ಪತ್ತೇೞಱಿಂ ಭಾಗಿಸಲ್ ಉೞಿದ ಶೇಷಂ ನಕ್ಷತ್ರಮಪ್ಪುದು. ಆ ಪದಮಂ ನಾಲ್ಕಱಿಂ ಗುಣಿಸಿ, [8]ಪನ್ನೆರಡಱಿಂ ಭಾಗಿಸಲ್ ಉೞಿದ ಶೇಷಂ ಆ ಮನೆಯ ರಾಶಿಯಪ್ಪುದು—೨೧.

ಟೀ|| ಆ ಪದಮನೊಂಭತ್ತಱಿಂ ಗುಣಿಸಿ, ಮೂವತ್ತಱಿಂ ಭಾಗಿಸಲ್ ಉೞಿದ ಶೇಷಂ ತಿಥಿಯೆನಿಸಿಕೊಳ್ವುದು. ಆ ಭಾಗಿಸಿ ಬಂದ ಲಬ್ಧಮಂ ಏೞಱಿಂ ಭಾಗಿಸಲುೞಿದ ಶೇಷಂ ವಾರಮೆನಿಸಿಕೊಳ್ವುದು—೨೨.

---

1 ಶುನಕೋಕ್ಷ ಖರಗಜಧ್ವಾಂ. 2 ಶುಭಂ. 3 ದಿಭದಿಂ | ತೆಗೆಯೆ ಬಂದುವಕ್ಕುಂ. 4 ಕೊಳ್ಳುದಿಂ ರಾಶಿ. 5 ಈ ಯೆಂಟಾಯಂಗಳೊಳಗೆ ಕೆಲವು ಶುಭಂಗಳ್, ಕೆಲವಶುಭಂಗಳ್. 6 ಮೆನಿಸಿಕೊಂಬುದು. 7 ಧ್ವಜಾದಿ ಆಯದ ಪದಮಂ. 8 ಒಂಭತ್ತಱಿಂ.

ಕಂ|| ಗೃಹಪತಿಯುಂರಾಶಿಗಂ ತ|
ದ್ಗೃಹರಾಶಿಗಮಾಗೆ ರಾಶಿಕೂಟಂ ಮಿತ್ರ ||
ಗ್ರಹಕೂಟಂ ಗಣಕೂಟಂ|
ಮಹಾವಿಭೂತಿಯನನಾರತಂ ಪೆರ್ಚಿಸುಗುಂ || ೨೩ ||

ಸುರಪತಿ ಯಮವರುಣ ಕುಬೇ|
ರರ ದೆಸೆ ತಲೆಯಾಗೆ ವಾಮಪಾರ್ಶ್ವದೊಳೆಂತುಂ ||
ಚರವಾಸ್ತು ಕನ್ನೆ ಮೊದಲಾ|
ಗಿರೆ ಪಡುಗುಂ ಮೂಱುಮೂಱುಮಾಸಂಬರೆಗಂ || ೨೪ ||

ನೆಲಸಿರ್ಪ ವಾಸ್ತುಪುರುಷನ|
ತಲೆ ಹೃದಯಂ ನಾಭಿ ಪಾದ ಮೆಂಬಿವಱಿ[3]ಡೆಯಂ ||
ತೊಲಗಿಸಿ ಮುಂದಣ ಮೆಯ್ಯೊಳ್|
ನಿಲಿಸುಗೆ ಕಂಭಮನಭೀಷ್ಟಫಲಮಂ ಕುಡುಗುಂ || ೨೫ ||

ಮೃಗಲಕ್ಷ್ಮನುದಯದೊಳ್ ನಿಲಿ|
ಸುಗೆ ಕಂಭಮನಿಂದು[1]ಸುತನ ಲಗ್ನಂ ಬರೆ ಪೆ ||
ಟ್ಟುಗೆ [2]ಡೆಂಕೆಗಳಂ ಕೆಸಱ|
ಕ್ಕುಗೆ ಭೃಗುಸುತನುದಯಮಾಗೆ ನಿಲ್ಕುಂ [3]ಚಿರಮುಂ || ೨೬ ||

ಬಡಗಲ್ ಮೂಡಲ್ ತೆಂಕಲ್|
ಪಡುವಲ್ ವಿಪ್ರಾದಿ[4]ವರ್ಣ ಗೃಹದೊಳ್ ಮುನ್ನಂ ||
ನಡುವುದು ಕಂಭಮನೊಂದಂ|
ನಡುವುದು ನೈಋತಿಯ ದೆಸೆಯೊಳಲ್ಲಿಂ ಬೞಿಯಂ || ೨೭ ||

ಟೀ|| ಆ ಮನೆಯ ಕರ್ತೃವಿನ ರಾಶಿಗಂ, ಆ ಮನೆಯ ರಾಶಿಗಂ, ರಾಶಿಕೂಟ, ಗಣಕೂಟ, ಗ್ರಹಮೈತ್ರಂ. ಗ್ರಹಕೂಟಂ, ಮುಂತಾದ ಕೂಟಂಗಳ್ ಕೂಡಲ್, ಬಹುಳಮಪ್ಪೈಶ್ವರ್ಯಂಗಳಂ ಕೊಡುವುದು, ಉತ್ತರೋತ್ತರಮುಮಪ್ಪುದು—೨೩.

ಟೀ|| ಮೂಡಲ್ ತೆಂಕಲ್ ಪಡುವಲ್ ಬಡಗಲ್—ಈ ನಾಲ್ಕು ದಿಕ್ಕಿನಲ್ಲಿಯುಂ ಚರವಾಸ್ತುಪುರುಷಂ, ಕನ್ಯಾಮಾಸಂ ಮೊದಲಾಗೆ ಮೂಱು ಮೂಱು ತಿಂಗಳ್ ಮೂಡಣ ದಿಕ್ಕಿನಲ್ಲಿ ಶಿರಸ್ಸು, ಪಡವಲ್ ಪಾದಮಾಗೆ ಈ ಮರ್ಯಾದೆಯಲ್ಲಿ ಪಲ್ಲಟಿಸಿ ಮಲಗಿರ್ಪಂ—೨೪.

ಟೀ|| ಸ್ಥಿರಮಾಗಿ ಮಲಗಿರ್ಪ ವಾಸ್ತುಪುರುಷನ ಶಿರಸ್ಸು, ಎದೆ, ಪೊಕ್ಕುಳ್, ಪಾದಂ—ಈ ಸ್ಥಾನಂಗಳಂ ಬಿಟ್ಟು, ಮುಂದಣ ಭಾಗದಲ್ಲಿ ಕಂಭಮಂ ನಡಲ್ ಆ ಮನೆಯಭೀಷ್ಟಾರ್ಥಸಿದ್ಧಿಯಂ ಕುಡುವುದು—೨೫.

ಟೀ|| ಚಂದ್ರನುದಯದಲ್ಲಿ [5]ಕಂಭಪ್ರತಿಷ್ಠೆಯಂ ಮಾಡುವುದು, ಬುಧನುದಯದಲ್ಲಿ ಜಂತೆಗಳಂ ಪೇೞಿಸುವುದು, ಶುಕ್ರನುದಯದಲ್ಲಿ ಕೆಸಱನಿಕ್ಕಲಾ ಮಾೞಿಗೆ [6]ಚಿರಕಾಲಂ ಸ್ಥಿರಮಾಗಿ ಸುಖಮಿರ್ಪುದು—೨೬.

ಟೀ|| ಬಡಗಣ ದಿಕ್ಕಿನಲ್ಲಿ ಬ್ರಾಹ್ಮಣರ್ಗೆ, ಮೂಡಣ ದಿಕ್ಕಿನಲ್ಲಿ ಕ್ಷತ್ರಿಯರ್ಗೆ, ತೆಂಕಣ

1 ಸುತಲಗ್ನಂ. 2 ಡೆಂಕೆಗಳಂ, ಜಂತೆಗಳಂ. 3 ಬೞಿಯುಂ. 4 ವರ್ಗ. 5 ಭಮಂನಾಟಿಸು. 6 ಅಪಾರದಿನ.



ಚಂ|| ನಿರುತಿಯ ಕಂಭದಿಂದಮನಿಳಾಸೆಯೊಳಿಕ್ಕುವ ಕಂಭ[1]ಮಪ್ಪುದೊ|
ರ್ವೆರಲನಿತರ್ಕೆ ತಗ್ಗಿತದಱಿಂದೆ [2]ಹರಾಸೆಯೊಳಿರ್ಪ ಕಂಭ[3]ಮಿ ||
ರ್ವೆರಲನಿತರ್ಕೆ ಮತ್ತೆ [4]ಕಿಱಿದಪ್ಪುದದರ್ಕೆ [5]ದಲುದ್ಧಮಪ್ಪುದೊ|
ರ್ವೆರಲನಿತುಂ ಹವಿರ್ಭುಜನ ಗೊಂಟಿನ ಕಂಭ[6]ಮದೂರ್ಜಿತಪ್ರದಂ || ೨೮ ||

ಕಂ|| ಮನೆಯಗಲದೊಳಗಲದ ನಾ|
ಲ್ಕನೆಯಂಶಮನೊಂದುಮಾಡಿ ನಿಲಿಸಿದೊಡಯ್ಯೊ ||
ಳೆನಿಸುಗುಮದಂತ್ಯಜಾತಿಯ|
ಮನೆ[7]ಯಾಗಿದ್ದೆಸೆಯೊಳಪ್ಪ ನಿರ್ವಾದಕ್ಕುಂ || ೨೯ ||

ಮ|| ಸ್ರ|| ಮನೆಯಯ್ಯೊ[8]ಳಿಂದೆ ಪತ್ತಂಗುಳಮಭಿಮತವಿಪ್ರಾಲಯಂಗಳ್ಗೆ[10] ಭೂಪಾ|
ಲನಿವಾಸಂಗಳ್ಗೆ ಪನ್ನಿರ್ವೆರಲುಮರಿಗಳನ್ವೀತಸಪ್ತಾಂಗುಲಂ ವೈ ||
ಶ್ಯನಿಕಾಯಂಗಳ್ಗೆ ಮರ್ಧಾಂಗುಲಿಯುಗಳಮಿತಂ ಶೂದ್ರಗೇಹಾಳಿಗಕ್ಕುಂ|
ತು ನಿತಾಂತಂ ಪೆರ್ಚೆ ಪೆರ್ಚಂ ಬಯಸುವ ಮನುಜಂ ಮಾಳ್ಕೆ ನಿರ್ವಾದಮೆಂದುಂ || ೩೦ ||

ದಿಕ್ಕಿನಲ್ಲಿ ವೈಶ್ಯರ್ಗೆ, ಪಡುವಣ ದಿಕ್ಕಿನಲ್ಲಿ ಶೂದ್ರರ್ಗೆ—ಈ ಮರ್ಯಾದೆಯಲ್ಲಿ ಈ ಪೇೞ್ದ ದಿಕ್ಕುಗಳಲ್ಲಿ ಕಂಭಪ್ರತಿಷ್ಠೆಯಂ ಮಾಡುವುದು—೨೭.

ಟೀ|| ನಿರುತಿಯಲ್ಲಿಕ್ಕಿದ ಕಂಭಕ್ಕೆ ವಾಯುವ್ಯದಲ್ಲಿ ನಡುವ ಕಂಭಮನೊರ್ವೆರಲನಿತು ಕಿಱಿದಾಗಿ ತಗ್ಗಿಸಿ ನಡುವುದು, ಆ ವಾಯುವ್ಯದಲ್ಲಿರ್ದ ಕಂಭದಿಂ ಈಶಾನ್ಯದಿಕ್ಕಿನಲ್ಲಿ ನಡುವಣ ಕಂಭಮಂ ವೊಂದು [11]ಬೆರಲನಿತು ತಗ್ಗಿಸಿ ನಡುವುದು, ಈಶಾನ್ಯದಿಕ್ಕಿನ ಕಂಭದಿಂ ಆಗ್ನೇಯ ದಿಕ್ಕಿನಲ್ಲಿ ನಡುವ ಕಂಭಮನೊರ್ವೆರಲನಿತು ಉದ್ಧಮಾಗಿ ನಡುವುದು—ಈ ಮರ್ಯಾದೆಯಲ್ಲಿ ಕಂಭಂಗಳಂ ನಟ್ಟು ಮನೆಯಂ [12]ಮಾಡಲ್ ಐಶ್ವರ್ಯದಿಂದೆ ಸುಖಮಾಗಿರ್ಪರು—೨೮.

ಟೀ|| ಮನೆಯಗಲಮನಳೆದು ಸೂತ್ರಮಂ ನಾಲ್ಕು ಭಾಗಂ ಮಾಡಿ, ಆ ಪ್ರಮಾಣದಲ್ಲಿ ಮತ್ತೊಂದು ಭಾಗಮಂ ಕೂಡಿಕೊಂಡು ಮನೆಯುದ್ದಮಂ ಕೊಳಲ್ ಅದು ಅಯ್ಯೊಳೆನಿಸಿಕೊಳ್ವುದು. ಉೞಿದ ಜಾತಿಯ ಮನೆಯಂ ಕಟ್ಟಲ್ ಕಟ್ಟಳೆಗಳಲ್ಲಿಂ—೨೯.

ಟೀ|| ಬ್ರಾಹ್ಮಣಂಗೆ ಅಯ್ಯೊಳಿಂದೆ ಪತ್ತಂಗುಲಮುದ್ದಮಂ ಕೊಳ್ವುದು, ಕ್ಷತ್ರಿಯರ್ಗೆ ಅಯ್ಯೊಳಿಂದೆ ಪನ್ನೆರಡುವರೆಯಂಗುಲಮುದ್ದಮಂ ಕೊಳ್ವುದು, ವೈಶ್ಯರ್ಗೆ ಅಯ್ಯೊಳಿಂದೆ ಏೞಂಗುಲಮುದ್ದಮಂ ಕೊಳ್ವುದು, ಶೂದ್ರರ್ಗೆ ಅಯ್ಯೊಳಿಂದೆ ಎರಡುವರೆಯಂಗುಲದುದ್ದಮಂ ಕೊಳ್ವುದು, ಲೇಸಂ ಬಯಸುವ ಮನುಷ್ಯರ್ ಈ ಮರ್ಯಾದೆಯೊಳೆ ಮನೆಯಂ ಕಟ್ಟಲ್ ಊರ್ಜಿತಮಾಗಿ [13]ಸುಖದಿಂದೆ ಬಾೞ್ವುದು—೩೦.

1 ಮೊಪ್ಪುಗೊಬ್ಬೆರಳ. 2 ಹಾಜಾಸಿಯೊ. 3 ಮಿಬ್ಬೆರಳ. 4 ಕಿರುದ. 5 ದಲೊಪ್ಪೆರ್ಮಾಪ್ಪೊಬ್ಬೆ. 6 ಮದುಚಿತ. 7 ಯಿರ್ದೆಸೆಯ. 8 ಳಿಂದದ. 9 ಲಮಿತ 10 ಗಳ್ಗೆ ಪನ್ನಿಬೆರಳುವರೆ. 11 ಅಂಗುಲವನು. 12 ಕಟ್ಟಲ್. 13 ಸುಖದಲಿಹುದು.

ಮ|| ತರದಿಂದಂ ನವಭಾಗೆಮಾಡಿ ಮನೆಯಂ ತದ್ದಕ್ಷಿಣೋಪಾಂತದಿಂ |
ಬರೆ ಸೂರ್ಯಾದಿಗಳಾಳ್ವರಲ್ಲಿ ಪಟುವ್ಯಂದಕ್ಕಿಂದುಜಸ್ಥಾನದೊಳ್ ||
ಸುರಸದ್ಮಕ್ಕೆ ಸುರೇಂದ್ರಮಂತ್ರಿಯೆಡೆಯೊಳ್ ದೈತ್ಯಾರ್ಚಿತಸ್ಥಾನದೊಳ್ |
ನರರ್ಗಿಂಬಾಗಿರೆ ಮಾಲ್ಕೆ ಬಾಗಿಲನದತ್ಯುತ್ಸಾಹಮಂ ಮಾಡುಗುಂ || ೩೧ ||

ಮ|| ಅಗಲಕ್ಕಿರ್ಮಡಿ ನೀಳಮಾಗೆ ತರುಗಳ್ [1]ಬೆಸುಲ್ಲದೊಂದಾಗೆ [2]ಮಾ |
ಡುಗೆ ನೇರ್ಪಟ್ಟಿರೆ ದಾರವಂಮಮನದಕಾರ್ದೋಜೆಯುಂ ಮಾಳ್ಕೆ ಮಾ ||
ಜಿಗಜಾ[3]ರೂಢಮನನ್ಯಮಂ ನಿಜಗೃಹದ್ವಾರಾಂತರೋದ್ದೇಶಮಂ |
[4]ಪುಗುವಾಗಲ್ ತಲೆಗೊರ್ಮೆಟಕ್ಕೆ ನಿಲೆ ಬಾಗಿಲ್ವಾಡಮಂ ಲೀಲೆಯಿಂ || ೩೨ ||

ಟೀ|| ಮನೆಯ ನೀಳಮನಳೆದು ಪೊಂಭತ್ತುಭಾಗೆಗಳಂ ಮಾಡೆ ಮನೆಗಳ್ಗೆ ತೆಂಕಲ್ ಪಡುವಲಾದಿಯಾಗೆ ಸೂರ್ಯಂ ಮೊದಲಾದ ಪೊಂಭತ್ತುಂ ಗ್ರಹಂಗಳ್ ಪೊಡೆಯರಾಗಿರ್ಪರ್, ಅಲ್ಲಿಂದೆ ಬುಧಸ್ಥಾನದಲ್ಲಿ ಹಟ್ಟಿ, ಆನೆಯ ಶಾಲೆ ಲಾಯಂಗಳ್ ಮೊದಲಾದುವರ್ಕೆ ಬಾಗಿಲ್ಗಳಂ ಮಾಡುವುದು, ಬೃಹಸ್ಪತಿಯ ಸ್ಥಾನದಲ್ಲಿ ದೇವಾಲಯಕ್ಕೆ ಬಾಗಿಲ್ಗಳಂ ಮಾಡುವುದು, ಶುಕ್ರ ಸ್ಥಾನದಲ್ಲಿ ಮನುಷ್ಯರ್ಗೆ ಬಾಗಿಲ್ಗಳಂ ಮಾಡುವುದು— ಈ ಮರ್ಯಾದೆಯಲ್ಲಿ ಮನೆಗೆ ಬಾಗಿಲ್ಗಳಂ ಮಾಡಿರಲ್ ಲೇಸಪ್ಪುದು—೩೧.

ಟೀ|| ಆ ಬಾಗಿಲ್ಗಳಂ ಮಾಡುವೊಡೆ ಅಗಲವೆನಿತನಿತಿರ್ಮಡಿ ನೀಳಮಂ ಮಾಡುವುದು, ಆದಾರವಂದದ ಅಗುಟಿ ಉತ್ತರಾಸೆಗಳ್ಗೆ ಮರಂಗಳ್ ಪಲ್ಲಟಮಿಲ್ಲದೆ ಪೊಂದೆಮರಂಗಳಂ [5]ಮಾಡುವುದು, ರಾಜದ್ವಾರದ ಬಾಗಿಲ್ವಾಡಕ್ಕೆ ಆನೆ, ಕುದುರೆಗಳನೇಱಿಕೊಂಡು ಪೋಗುವಾಗಳ್ ಶಿರಸ್ಸಿಗೆ ಮೇಲೆ ಪೊಂದು ಮೊಳಮುದ್ದಮಾಗೆ ಬಾಗಿಲ್ಗಳಂ ಮಾಡಿಸುವುದು —೩೨.

**ಗದ್ಯಂ**

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀ ಮತ್ಕವಿತಾವಿಳಾಸತನೂಜಂ
**ಶ್ರೀಮಚ್ಚಾವುಂಡರಾಯ**
ವಿರಚಿತಮಪ್ಪ
**ಲೋಕೋಪಕಾರದೊಳ್**
ವಾಸ್ತುಪ್ರಕರಣಂ
[6]ತೃತೀಯಾಧಿಕಾರಂ

1 ಪೇಱು. 2 ದೂಡುಗೆ, ಮಾಡಿರೆತೆರ್ಕ. 3 ರೂಢರುಮಂ ನಿಜ. 4 ಪುಗುದೊಪಾಗಲ್ತಲೆಗೊಂದಗದೊಳಕ್ಕೆ. 5 ಜೋಡಿಸುವುದು. 6 ತೃತೀಯಾಶ್ವಾಸಂ.

## *ಗೃಹಶಾಸ್ತ್ರಂ

ಶ್ಲೋ|| ಗೃಹಶಾಸ್ತ್ರಂ ಪ್ರವಕ್ಷ್ಯಾಮಿ ಬ್ರಹ್ಮಣಾ ರಚಿತಂ ಪುರಾ |
ಧ್ರುವಾದಿ ಷೋಡಶಪ್ರೋಕ್ತಾಃ ರಮ್ಯಾದಿ[ನಿ] ಪಸಾಸ್ತಥಾ || ೧ ||

ಧ್ರುವಂ ಧಾನ್ಯಂ ಜಯಶ್ಚೈವ ನಂದನಂ ಖರಮೇವ ಚ |
ಕಾಂತಂ ಮನೋರಥಂ ಪ್ರೋಕ್ತಂ ಸುಮುಖಂ ದುರ್ಮುಖಂ ತಥಾ ||

ಕ್ರೂರಂ ಚೈವ ಸುಪಕ್ಷಂ ಚ ಧನದಂ ಕ್ಷಯಮೇವ ಚ |
ಆಕ್ರಾಂಡಂ ವಿಪುಳಂ ಚೈವ ವಿಜಯಶ್ಚೈವ ಷೋಡಶಿ || || ೨ ||

†ಸಮ್ಯಗಷ್ಟಗೃಹಂ ಪ್ರೋಕ್ತಂ ರಮ್ಯಾದಿಗೃಹಮುತ್ತಮಂ |
ಶ್ರೀವರಂ ರುಚಿರಂ ಸರ್ವಾಕಂ ಚೈವ ತಥೋತ್ತಮಂ ||

ಅಕುಶಲಂ ಚ ಸನಾಜಾಯಾ(ಭಯಂ) ದಂತ ಸಮುದ್ರಮೇವ ಚ |
ಕಾರ್ಯಕರಂ ಗೃಹಾಣೀದಂ ಕಾಮಕುಶಲಂ ತ್ಯಜೇತ್? || || ೩ ||

ಟೀ|| ೧ ಧ್ರುವಂ, ೨ ಧಾನ್ಯಂ, ೩ ಜಯಂ, ೪ ನಂದಂ, ೫ ಖರಂ, ೬ ಕಾಂತಂ, ೭ ಮನೋಹರಂ, ೮ ಸುಮುಖಂ, ೯ ದುರ್ಮುಖಂ, ೧೦ ಕ್ರೂರಂ, ೧೧ ಸುಪಕ್ಷಂ, ೧೨ ಧನದಂ, ೧೩ ಕ್ಷಯಂ, ೧೪ ಆಕ್ರಾಂಡಂ, ೧೫ ವಿಪುಳಂ, ೧೬ ವಿಜಯಂ—ಇತ್ತೀಪ ಷೋಡಶ[1]ಗೃಹ ನಾಮಂಗಳ್, ಅವಱೊಳಗೆ ಪಂಚಮಂ ೫, ನವಮಂ ೯, ದಶಮಂ ೧೦, ತ್ರಯೋದಶಂ ೧೩, ಚತುರ್ದಶಂ ೧೪—[2]ಈ ಪಂಚಗೃಹಂಗಳಂ ಪ್ರಯತ್ನದಿಂ ವರ್ಜಿಸುವುದು ಉಳಿದ ಪನ್ನೊಂದು ಪೊಳ್ಳಿತ್ತು—೨.

ಟೀ|| ದ್ವಾರಾದಿ ಪ್ರಮಾಣಂಗಳ್, ಗೋಪುರಕ್ಕೆ ಅಗಲದಿಂ ಸರ್ವತಃ, ದ್ವಿಗುಣೋತ್ಸೇಧಂ, ಆನೆಗಳ್ ಪೋಗುವ ದ್ವಾರಂ ಎರಡುಮರೆಯುದ್ದಂ, ಅಂಗುಲದಲ್ಲಿ ಅಭಯುವಪ್ಪುದು ಬಾಗಿಲಮೇಲೆ ಬಾಗಲುಮದುದುವೆಂಬುದಕ್ಕುಂ? ಮುಂದಣ ಬಾಗಿಲ ಸರಿಸದಲ್ಲಿ ಹಿಂದಣ ಬಾಗಿಲಂ ಮಾಡಲಾಗದು, ಬಾಗಿಲ ಮುಂದೆ ಪೊಳಗೆ ಹೊಱಗೆ ಸುಸವಲ್ಲಿ ಗಾಡಮಂ ಮಾಡಲಾಗದು, ಬಾಗಿಲಿಂಗೆ ವೇಧೆ[ದಿ] ಹತ್ತುವುದು, (ಬಾಗಿಲ ಉತ್ಸೇಧ ದ್ವಿಗುಣಮಂ ಕಳೆದು ಹೊಱಗೆ ನಟ್ಟೊಡೆ ವೇಧೆ ತಪ್ಪುವುದು, [ಹೊಲ್ಲಹ ಬಾಗಿಲ್ ನಿಷಿದ್ದ ಗೃಹದ ಬಾಗಿಲ್. ಘಾತವಂ ಬಂದವಂ] ವಂದೆಯುಂ, ಮಾಡುವುದು.)—೩.

1 ಶಾಪದಂ ಗೃಹಂಗಳ್, ಶಪಥ ಗೃಹ. 2 ಏಕತ್ರಿಂಚ ಗೃಹಂ [ನಿತ್ಯಂ] ವರ್ಜಯೇತ್ತತ್ರಯತ್ನತಃ —(ಎಂಬ ಸಂಸ್ಕೃತ ವಾಕ್ಯವಿದೆ).

*ಗೃಹಶಾಸ್ತ್ರ ಪ್ರಾರಂಭಂ—ಈ ಗೃಹಶಾಸ್ತ್ರ ಪ್ರಕರಣದಲ್ಲಿ ಕನ್ನಡ ಪದ್ಯಗಳಿಲ್ಲ, ಸಂಸ್ಕೃತ ಶ್ಲೋಕಗಳೂ ಅವುಗಳ ಟೀಕೆಗಳೂ ಇದೆ, ಇದು ಗ್ರಂಥಕರ್ತೃವು ಹೇಳಿರುವ ವಿಭಾಗವಲ್ಲಿಲ್ಲ, ಆಶ್ವಾಸಾಂ (ಅಧಿಕಾರದ) ಕ್ಕ ಗದ್ಯವು ಹಿಂದಣ ವಾಸ್ತುಪಟಲದ ಕೊನೆಯಲ್ಲಿಯೇ ಇರುವುದರಿಂದ ಈ ಭಾಗವನ್ನು ಗ್ರಂಥಕರ್ತೃವು ಬರೆದಂತೆ ತೋರುವುದಿಲ್ಲ. ಆದರೆ ಗ್ರಂಥಕರ್ತೃವೇ ಈ ಭಾಗವನ್ನು ಸೇರಿಸಲು ಮೂಲ ಸಂಸ್ಕೃತ ಪದ್ಯಗಳನ್ನೂ ಅವುಗಳ ಟೀಕೆಯನ್ನೂ ಬರೆದಿಟ್ಟುಕೊಂಡಿದ್ದಿರಬಹುದೆಂಬ ಸಂಭಾವನೆಯಿಂದ ಇಲ್ಲಿ ಸೇರಿಸಿದೆ.

† ಈ ಪದ್ಯಗಳು ತುಂಬಾ ಅಶುದ್ಧವಾಗಿವೆ. ಟೀಕೆಗೂ ಮೂಲಕ್ಕೂ ಸಂಬಂಧವಿಲ್ಲ.

ಅಷ್ಟವಫಲಮಂ ಪೇಳ್ವೆಂ*

ನವರಂಗಗೃಹಂ ಕೃತ್ವಾ ಪಂಚಭಾಗಂ ತು ದಕ್ಷಿಣೇ |
ತ್ರಿಭಾಗಂ ವಾಮತಃ ಕುರ್ಯಾಚ್ಛ್ರೇಷು ದ್ವಾರಂ ವಿಧೀಯತೇ ||
ಪ್ರಜೇ(ಶ)ಜ ಜನ್ಮರಾಶೀನಾಂ ಮುಖಂ ದಕ್ಷಿಣತಶ್ಶುಭಂ |
ವಾಮತಃ ಪೃಷ್ಠತಃ ಕುರ್ಯಾತ್ ಕಾರ್ಯಹಾನಿಸ್ತು ನಿಶ್ಚಯಃ† || ೪ ||

---

೧. ಅಷ್ಟವಫಲವಂ ಪೇಳ್ವೆಂ

ಪೂರ್ವಾಷ್ಟವಮುಭಯವೃದ್ಧಿ, ಆಗ್ನೇಯಾಷ್ಟವಂ ರೋಗಂ, ದಕ್ಷಿಣಾಷ್ಟವಂ ಮರಣಂ, ನೈಋತ್ಯಾಷ್ಟವಂ ಶೋಕಂ, ಪಶ್ಚಾಷ್ಟವಂ ಧನಹಾನಿ, ವಾಯುವ್ಯಾಷ್ಟವಂ ಧನಲಾಭಂ, ಉತ್ತರಾಷ್ಟವಂ ಮುಕ್ತಿ, ಈಶಾನ್ಯಾಷ್ಟವಂ ಸರ್ವಸಿದ್ಧಿ—೪.

‡ ೨. ಮಾಸಫಲಮಂ ಪೇಳ್ವೆಂ

ಚೈತ್ರಮಾಸದಲ್ಲಿ ಮನೆಯಂ ಮಾಡೆ ಶೋಕಂ, ವೈಶಾಖದಲ್ಲಿ ಮಾಡೆ ಧನಲಾಭಂ, ಜ್ಯೇಷ್ಠದಲ್ಲಿ.... ಆಷಾಢದಲ್ಲಿ ಪಶುನಾಶಂ, ಶ್ರಾವಣದಲ್ಲಿ ಧನಲಾಭಂ, ಭಾದ್ರಪದದಲ್ಲಿ ಸ್ವಾಮಿಗೆ [1]ವಸತಿಯಿಲ್ಲ, ಆಶ್ವಯುಜದಲ್ಲಿ ಕಲಹಂ, ಕಾರ್ತಿಕದಲ್ಲಿ ಭೃತ್ಯನಾಶಂ, ಮಾರ್ಗಶಿರದಲ್ಲಿ ಧನಲಾಭಂ, ಪುಷ್ಯದಲ್ಲಿ ಹೊಲ್ಲೆಹಂ, ಮಾಘಮಾಸದಲ್ಲಿ ಒಳ್ಳಿತ್ತು, ಫಾಲ್ಗುಣಮಾಸದಲ್ಲಿ ಸರ್ವಸಂಪದಂ.

೩. ಸೂರ್ಯಫಲಮಂ ಪೇಳ್ವೆಂ

ಮೀನಂ, ಮೇಷಂ, ವೃಷಭಂ—ಇವುಗಳಲ್ಲಿ ಸೂರ್ಯನಿರಲ್ ಪೂರ್ವಬಾಗಿಲ ಮನೆಯಂ ಮಾಡಿದೊಡೆ ಧನಕ್ಷಯಮಪ್ಪುದು, ಚೋರಭಯಮಪ್ಪುದು. [2]ಮಿಥುನ, ಕಟಕ, ಸಿಂಹಂಗಳಲ್ಲಿ ಸೂರ್ಯನಿರಲ್ ಉತ್ತರದ್ವಾರದ ಮನೆಯಂ ಮಾಡಿದೊಡೆ ದಾರಿದ್ರ್ಯಂ, ದಾಸೀತ್ವಮಪ್ಪುದು. ಕನ್ನೆ, ತುಲೆ, ವೃಶ್ಚಿಕಂಗಳಲ್ಲಿ ಸೂರ್ಯನಿರ್ದೊಡೆ ಪಶ್ಚಿಮಮುಖದ ಬಾಗಿಲ ಮನೆಯಂ ಮಾಡಿದೊಡೆ ವಸತಿಯಾಗದು, ಶೂನ್ಯಮಕ್ಕುಂ. ಧನುರ್ಮಕರ ಕುಂಭಂಗಳಲ್ಲಿ ಸೂರ್ಯನಿರೆ ದಕ್ಷಿಣ ಮುಖದಬಾಗಿಲ ಮನೆಯಂ ಮಾಡಿದೊಡೆ ವಧೆ, ಬಂಧನಂ, ಮರಣಾಂತಿಕಂ.

೪. ಚಂದ್ರಫಲಮಂ[3] ಪೇಳ್ವೆಂ

ಚಂದ್ರಂ ಮನೆಯ ಮುಂದೆ ಇರ್ದನಾದೊಡೆ ಒಡೆಯಂಗೆ ವಸತಿಯಿಲ್ಲಂ. ಹಿಂದೆಯಿರ್ದೊಡೆ ಕನ್ನದಿಂದೆ ಹಾನಿಯಕ್ಕುಂ, ಕುಕ್ಷಿ ಶುಭಮಕ್ಕುಂ. ಮೇಷಾದಿ ವಿಷಮರಾಶಿಗಳಲ್ಲಿ ಚಂದ್ರನಿರ್ದೊಡೆ ಉತ್ತರ ದಕ್ಷಿಣಮುಖದ ಮನೆಯಂ ಮಾಡಿದೊಡೆ ಲೇಸು. ವೃಷಭಾದಿ ಸಮರಾಶಿಗಳಲ್ಲಿ ಚಂದ್ರನಿರ್ದೊಡೆ ಪೂರ್ವಪಶ್ಚಿಮಮುಖದ ಮನೆಯಂ ಮಾಡಿದೊಡೆ ಲೇಸು. ವಾಸ್ತುಪುರುಷನ ಶಿರಸ್ಸಿನಲ್ಲಿ ಮರಣಂ, ಬಾಹುಗಳಲ್ಲಿ ಅರ್ಥನಾಶಂ, ದಕ್ಷಿಣದಲ್ಲಿ ಪುತ್ರಶೋಕಂ, ಹಿಂದೆಸೆಯಲ್ಲಿ ರಾಜಭಯರೋಗಂ, ನಾಭಿಯಲ್ಲಿ ಬಂಧು ಪುತ್ರ ಸ್ತ್ರೀಪುರುಷ ಹಾನಿ, ಪಾದದಲ್ಲಿ ಓಡಿಪೋಪರ್, ವಾಮಕುಕ್ಷಿಯಲ್ಲಿ ಸರ್ವಸಿದ್ಧಿ—ಇದು ಮನೆಯ ಮೊದಲ ಕೆಸರ್ಗಲ್, ಕಂಭದ ನಿಲುಗೆ(ಗಳ)ಯಲ್ಲಿ, ಮುಖ್ಯ(ವಾಗಿ) ಗೃಹಪ್ರಾರಂಭದಲ್ಲಿ ನೋಡುವುದು.

1 ವಸ್ತಿ. 2 ಮಿಥುನ ಕರ್ಕಾಟಕ ಮಾಸಂಗಳಲ್ಲಿ, ಧನು ಕರ್ಕಟಗಳಲ್ಲಿ. 3 ಚಂದ್ರಬಲದ.
* ಅಷ್ಟವಕ್ಕೆ ಸಂಸ್ಕೃತ ಶ್ಲೋಕಗಳಾಗಲಿ, ಕನ್ನಡ ಪದ್ಯಗಳಾಗಲಿ ಇಲ್ಲ.
† ಟೀಕೆಯಿಲ್ಲ.
‡ ಇವುಗಳಿಗೆ ಸಂಸ್ಕೃತ ಶ್ಲೋಕಗಳಾಗಲಿ, ಕನ್ನಡ ಪದ್ಯಗಳಾಗಲಿ ಇಲ್ಲ.



ಕೆಱೆ ಭಾವಿಗಳಂ ತೋಡುವಲ್ಲಿ, ಅರಮೆಗಳನಿಡುವಲ್ಲಿ, ಜಗಲಿಗಳನಿಕ್ಕುವಲ್ಲಿ ಮುಖ್ಯವಾಗಿ ವಾಸ್ತು ನೋಡುವುದು. ಎಡದಲ್ಲಿ, ಮುಂಪಣ ಮೆಯ್ಯಲ್ಲಿ, ಪೊಳ್ಳಿಪ ಠಾವಿನಲ್ಲಿ ಪ್ರಾರಂಭವಾಗಿ ವಾಸ್ತು ನೋಡುವುದು. ಕ್ಷೇತ್ರಪ್ರಮಾಣ, ವಾಸ್ತುಪ್ರಮಾಣ, ವಾಸ್ತುವಿನ ಮರ್ಮಸ್ಥಾನಂಗಳಂ ತಪ್ಪಿಸುವುದು.

ಪ್ರಾರಂಭದಲ್ಲಿ [1]ವೃಷಭಾಯ, ಗಜಾಯ, ಸಿಂಹಾಯಮನುಳಿದಾಯಂಗಳ ಮೇಲೆ ಮಾಡಲಾಗದು. ಧ್ವಜಾಯಂ—ಸರ್ವಪೂಜ್ಯಂ, ಗಜಾಯ—ಮರ್ಥಲಾಭಂ, ಧೂಮಾಯಂ—ಮರಣಂ, ಸಿಂಹಾಯಂ—ರಾಜಪೂಜ್ಯಂ, ಶುನಕಾಯಂ—ಕಲಹಂ, ವೃಷಭಾಯಂ—ಧನಧಾನ್ಯವೃದ್ಧಿ, ಖರಾಯಂ—ಸ್ತ್ರೀನಾಶಂ (ದುಃಖಂ), ಗಜಾಯಂ—ರಾಜ್ಯಂ, ಧ್ವಾಂಕ್ಷಾಯಂ—ನಿಷ್ಫಲಂ—ತಂತಮ್ಮ ನೆಲೆಯಲ್ಲಿ ತಾವೊಳ್ಳಿದುವು.

೧ ಧ್ವಜಾಯದಲ್ಲಿ ಮಾಳ್ಪ ಮನೆಗಳಂ ಪೇಳ್ವೆಂ

ಅರಸಿಂಗೆ, ಮಂಡಪಕ್ಕೆ, ಮಡಿಗೆ, ಅಟ್ಟಳೆಗೆ, ಪಂಟಕ್ಕೆ, ಪ್ರಸಾದಕ್ಕೆ, ಪ್ರತಿಮೆಗಳ್ಗೆ, ಲಿಂಗಕ್ಕೆ (ಮಿಗಕ್ಕೆ), ವೇದಿಕೆಗೆ, ತೋರಣಕ್ಕೆ, ಸ್ತಂಭಕ್ಕೆ, ಚಾಮರಕ್ಕೆ, ಬೀಸಣಿಗೆಗೆ, ಶಿಕ್ಯೆಯಕ್ಕೆ (ಛತ್ರಯಕ್ಕೆ), ಕಂಭಪಥಕ್ಕೆ, ಉದ್ಯಾನವನಕ್ಕೆ, ಭಂಡಿಯಗಾಲಿಗೆ, ದೇವೋಪಕರಣಕ್ಕೆ, ಉಪ್ಪಲಿಗರ ಕಟ್ಟಿಗೆ—ಇನಿತರ್ಕೆ ಧ್ವಜಾಯಮಂ ಮಾಳ್ಪುದು.

೨ ಇನ್ನು ಧೂಮಾಯಮಂ ಪೇಳ್ವೆಂ

ಬ್ರಾಹ್ಮಣರ ಹೋಮಶಾಲೆಗೆ, ಅಗ್ಗಿಷ್ಟಿಗೆಯ ಪಾತ್ರೆಗೆ, ಕಮ್ಮರ ಸಾಲೆಗೆ—ಇಂತಿನಿತರ್ಕೆ ಧೂಮಾಯಮಂ ಕುಡುವುದು.

೩ ಮತ್ತಂ ಸಿಂಹಾಯಮಂ ಪೇಳ್ವೆಂ

ಕ್ಷತ್ರಿಯರ್ಗೆ, ಪಹಣಿಗಳ್ಗೆ, ಶ್ರೀಮಂತರ್ಗೆ, ಅರಿಲ್ಲರಿಗೆ? ಓಲಗಶಾಲೆಗೆ, ಸಭಾಮಂಟಪಕ್ಕೆ, ಗದ್ದುಗೆಗೆ, ಸಿಂಹಕಕ್ಕೆ, ಶಸ್ತ್ರಕ್ಕೆ, ರಥಕ್ಕೆ, ಓಲೆಯಕಾಱರ್ಗೆ, ಹುಲಿಯ ಬೇಂಟೆಗಾಱರ್ಗೆ, ಹುಲಿಮ ಭಂಡಿಗೆ, ಕಬ್ಬಿಲ ಸಮ್ಮಗಾಱರ್ಗೆ, ಮುಚ್ಚಿಗರ್ಗೆ—ಇಂತಿನಿತರ್ಕಂ ಶುನಕಾಯಮುಂ ಮಾಡುವುದು.

೪ ಶುನಕಾಯಮಂ ಪೇಳ್ವೆಂ

ಬೇಂಟೆಗಾಱರ್ಗೆ, ನಾಯಬೇಂಟೆಯವರ್ಗೆ, ಜಾಱರ್ಗೆ (ಚೋರರ್ಗೆ), ಬಿಕಾಱರ್ಗೆ, ಕುಂಬಱರ್ಗೆ, ಕಬ್ಬಿಲ ಸಮ್ಮಗಾಱರ್ಗೆ, ಮುಚ್ಚಿಗರ್ಗೆ—ಇಂತಿನಿತರ್ಕಂ ಶುನಕಾಯಮಂ ಮಾಡುವುದು.

೫ ವೃಷಭಾಯಮಂ ಪೇಳ್ವೆಂ

ಬ್ರಾಹ್ಮಣರ್ಗೆ, ಕ್ಷತ್ರಿಯರ್ಗೆ, ದವಸಿಗರ್ಗೆ, ಅಡಕೆಕಾಱರ್ಗೆ, ಕನ್ನಡಿಗರ್ಗೆ, ತಂಬುಲಿಗರ್ಗೆ, ಮಣಿಕಾಱ(ಹಾರ)ರ್ಗೆ, ಎತ್ತುಎಮ್ಮೆಗಳಂ ಹಲ್ಲಣಿಸುವವರ್ಗೆ, ರ(ವ)ಸ್ತ್ರಕ್ಷೇತ್ರಕ್ಕೆ, ಗದ್ದೆಗೆ, ಪಶ್ಚಿ ಶಾಲೆಗೆ, ಪಡುವೆಡೆಗೆ, ಜೀವಧನದ ಕೊಟ್ಟಿಗೆಗೆ, ಗಾಣಿಗರ್ಗೆ, ಕೆಯ್ಮಾಡುವವರ್ಗೆ, [illegible] ಚೌಕಿಗೆಗೆ (ಬಚ್ಚಲಿಗೆ), ಬಾಣಸ[2]ವನ್ನದ ಪಾತ್ರೆಗೆ, ಭೋಜನದ ಪಾತ್ರೆಗೆ, ಅಂಜನ[illegible] (ರಂದವಣಿಗೆ), ಭತ್ತಮಡಿಗೆ, ಕೊಟಾ(ಠಾ)ರಕ್ಕೆ, ಅಶ್ವಸಡ್ಡವ(ವೂ)ಪಟ್ಟಿಗೆ, ಇಂತಿವೆಲ್ಲರ [illegible] ಗಳ್ಗೆ, ಸಾರಿಫಲ(ಕ)ಕ್ಕೆ, ಗೋಣಿಗೆ, ಕಂಠಾವಳಿಗೆ, ಬಚ್ಚಲಿಂಗೆ, ಕೆಱೆ ಹೊಕ್ಕರಣೆ ಮೊದಲಾದವರ್ಕೆ—ಇಂತಿನಿತರ್ಕಂ ವೃಷಭಾಯಮಂ ಮಾಡುವುದು.

3 ವೃಷಭಾಯದಠಾವಿನಲ್ಲಿ ಗಜಾಯ ಸಿಂಹಾಯ ಪೂಜ್ಯವೃಷಭಾಯಮನುಳಿದು. 4 ರನ್ನದ.

೬ ಖರಾಯುಮಂ ಪೇೞ್ವೆಂ

ಬಣಜಿಗರ್ಗೆ, ಕಂಚಗಾಱರ್ಗೆ, ಜಾಲಗಾಱರ್ಗೆ, ಕಳಶಿ(ಱ)ಗಳ್ಗೆ, ಕುಂಬಱರ್ಗೆ, ಅಂದಣಿಗರ್ಗೆ, ಸೂಟಿಯರ್ಗೆ, ಚಿತ್ರಕರಂಗೆ, ಕಲ್ಕುಟಿಗರ್ಗೆ, ಗಾಣಿಗರ್ಗೆ, ವಿದ್ಯಾವಂತರ್ಗೆ, ಭಟ್ಟರ್ಗೆ, ಅಸಗರ್ಗೆ, ಮುಚ್ಚಿಗರ್ಗೆ, ಕೊಡು(ಕ)ಗರ್ಗೆ, ಮೇದರ್ಗೆ, ಸಿಪ್ಪಿಗರ್ಗೆ, ಜಾಡರ್ಗೆ, ಉಪ್ಪಲಿಗರ್ಗೆ, ಕುದುರೆಯಿಂಜೀವಿಸುವರ್ಗೆ—ಇಂತಿನಿತರ್ಗಂ ಖರಾಯುಮಂ ಮಾಡುವುದು.

೭ ಗಜಾಯವುಂ ಪೇೞ್ವೆಂ

ರಾಣಿಯರ್ಗೆ, ರಾಣೀವಾಸಕ್ಕೆ, ಭುವನಾಶ್ರಯಕ್ಕೆ, ದೇಹಾರದ ಚೌಕಿಗೆಗೆ, ವಿಲಾಸಿನಿಯರ್ಗೆ, ಸಜ್ಜೆವನೆಗೆ, ಉಪ್ಪರಿಗೆಗೆ, ಮಂಚಕ್ಕೆ, ಸುಖಾಸಕ್ಕೆ, ಪೆಟ್ಟಿಗೆಗೆ, ವಸ್ತ್ರಕ್ಕೆ, ಅಂಗರಕ್ಷಿಗಳ್ಗೆ, ತೋಂಟಿಗರ್ಗೆ, ನೆತ್ತದಮಣೆಗೆ, ಸಹಣಿಯರ್ಗೆ, ಅಂಜಣೆವಡಿಗೆ, ಉದಕಪಾತ್ರಕ್ಕೆ, ಬಚ್ಚಲಿಂಗೆ, ಕೊಪ್ಪಱಿಗೆಗೆ, ಪ್ರಧಾನರ್ಗೆ, ವೈಶ್ಯರ್ಗೆ, ಜೋಯಿಸರ್ಗೆ, ಸೇನಭೋವರ್ಗೆ, ಮಾವಂತರ್ಗೆ, ಹಸ್ತಿಶಾಲೆಗೆ, ಗಜಾಜಿಗೆ? ತೆಲ್ಲಿಗಂಗೆ, ಮಳವಕ್ಕೆ? ಬನಕ್ಕೆ, ಮರನ ನಡುವ ನೆಲಕ್ಕೆ (ತೇರನಡುವ ನೆಲಕ್ಕೆ)—ಇಂತಿನಿತರ್ಗಂ ಗಜಾಯುವಂ ಮಾಳ್ಪುದು.

೮ ಧ್ವಾಂಕ್ಷಾಯವುಂ ಪೇೞ್ವೆಂ

ತಪಸ್ವಿಗೆ, ಬಿಜ್ಜಾಱಿಗೆ (ಬಿಕಾರಿಗೆ), ಚೋರಂಗ, ಸಿದ್ಧಿಸಾಧನಂಗೆ (ಕಂಕೆಗೆ), ಬೇಂಟೆಗಾಱರ್ಗೆ, ಪಕ್ಷಿಯಗೂಡುಗಳ್ಗೆ, ಗಿಡುಗನ ಬೇಂಟೆಕಾಱರ್ಗೆ, ಸಮ್ಮಗಾಱರ್ಗೆ, ಪಾಣರ್ಗೆ, ದೊಂಬರ್ಗೆ, ಹೊಲೆಯಜಾತಿಗೆ—ಇಂತಿನಿತರ್ಗಂ ಧ್ವಾಂಕ್ಷಾಯುವಂ ಮಾಳ್ಪುದು.

ಸಿಂಹಾಯು, ವೃಷಭಾಯು, ಗಜಾಯುಂಗಳ್—ವಿವಾಹಮಂಟಪಕ್ಕೆ, ಜಗಲಿಗೆ [1]ವೊಳ್ಳಿತ್ತು. ನೆಗರಪುರ ಸ್ಥಾಪನೆ, ಬ್ರಹ್ಮಪುರಿ, ಕೆಱೆ—ಇಂತಿನಿತರ್ಗಂ ಬಿದಿರ ದಂಡದಲ್ಲಿ ಆಯುಮಂ ತರ್ಪುದು, ಪ್ರಾಸಾದ ಜಾತಿಗಳ್ಗೆ ಬಿದಿರಕಂಬಿಯ ಹಸ್ತದಲ್ಲಿ ಆಯುವಂ ತರ್ಪುದು, ಮನೆಯ ಒಡೆಯನ ಹಸ್ತದಲ್ಲಿ ತರ್ಪುದು, ಇಲ್ಲದೆ ಕಂಬಿಯ ಹಸ್ತದಲ್ಲಿ ತರ್ಪುದು, ಗೇಣೊಳಾದೊಡಂ, ಅಂಗುಲದೊಳಾದೊಡಂ, ಜವೆಯೊಳಾದೊಡಂ ಆಯುವಂ ತರ್ಪುದು.

ಗೃಹದ ನಕ್ಷತ್ರಮನೆಂಟಱಿಂ ಭಾಗಿಸಿದ ಶೇಷಂ ಆಯುವಕ್ಕುಂ. ನಕ್ಷತ್ರಮಂ [2](೩೦) ಮೂವತ್ತಱಿಂ ಗುಣಿಸಿ, (೧೬) ಪದಿನಾಱಱಿಂ ಭಾಗಿಸೆ ಶೇಷಂ ಧ್ರುವಾದಿ ಗೃಹನಾಮಂಗಳಕ್ಕುಂ, ಪದಮಂ (೮) ಎಂಟಱಿಂ ಗುಣಿಸೆ ಗೃಹನಾಮಮಕ್ಕುಂ, ಮೇಳವಿಸಿ ಮೂಱಱಿಂ (೩) ಭಾಗಿಸಿದ ಶೇಷಂ ಗ್ರಹಾದಿ ದೇವತಾನಾಮಮಕ್ಕುಂ, ಪದಮಂ (೪) ನಾಲ್ಕಱಿಂ ಗುಣಿಸಿ, (೬೦) ಅಱುವತ್ತಱಿಂ ಭಾಗಿಸೆ ಶೇಷಂ ಆಯುಷ್ಯಮಕ್ಕುಂ, ಅದಂ (೫) ಅಯ್ದಱಿಂ ಬಾಗಿಸೆ ಶೇಷಂ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಮೆಂಬ ಪಂಚಭೂತಮಕ್ಕುಂ, ಒಂಭತ್ತಱಿಂ (೯) ಗುಣಿಸಿ ಪನ್ನೊಂದಂ (೧೧) ಕೂಡಿಕೊಂಡಯ್ದಱಿಂ ಭಾಗಿಸಿದ ಶೇಷಂ ಪಂಚಭೂತಾತ್ಮಕಂ.

*ಶೋ|| ಯೇ ಶನಿಕ್ರಿಯತೇ ದ್ವಾರೇ–ಪಿತ್ರೈದ್ವಾರೇ ಸದಾಮುಖಂ |
ದ್ವಾಭ್ಯೋದಯ ಉಪಾದಾನಂ—
ವಿರಚಿತೇ ಸಮಾಪ್ತಂ.

---

1 ಲೇಸು. 2 (೩೦).

* ಈ ಶ್ಲೋಕಗಳು ತುಂಬಾ ಅಬದ್ಧಗಳಾಗಿವೆ.



ಶ್ಲೋ|| ಮುಖಮೇಕಂ ಹೃದಿಚತ್ವಾರಿ ಜೈನಂಪ್ರಿಕಳಶಂ ||
ಕಂಠೇ ತ್ರೀಣಿಕಳಶಂ ವಾಸ್ತು ತಸ್ಯಾಃ ಪ್ರಕೀರ್ತಿತಂ ||
ಮುಖಮೇಕಂ ಶಿರತ್ಸೇಥ ಪೂರ್ವೇ ಉದ್ವಾಸ ಏವಚ ||
ದಕ್ಷಿಣೇಹ್ಯರ್ಥಲಾಭಶ್ಚ ಪಶ್ಚಿಮೇ ಧನಸಂಪದಂ ||
ಉತ್ತರೇ ಯುದ್ವಿನಾಶಶ್ಚ ಗರ್ಭೇಗರ್ಭವಿನಾಶನಂ ||
ಚಿರಕಾಲಸ್ಥಿತಂ ಕಂಠೇ ಗುಹ್ಯದೇಶೇ ವ್ಯವೃಥಾ ಭವೇತ್ ||

ಇಂತು ಕಳಶವಾಸ್ತು†

---

† ಇಲ್ಲಿಂದ ಮುಂದೆ ಕೆಲವು ಸಂಖ್ಯಾಸೂಚಕ ಶಬ್ದಗಳೂ, ಛಂದಸ್ಸಿನ ಗಣಪ್ರಸ್ತಾರವೂ, ಕೆಲವು ಅರ್ಥವಾಗದ ಅಶುದ್ಧ ಸಂಸ್ಕೃತ ಪದ್ಯ ಕಾವ್ಯಗಳೂ ಇವೆ. ಕೊನೆಯಲ್ಲಿ— ಕ್ಷೇತ್ರರಾಶಿಯರ್ಂರಿಂದೆ ಗುಣಿಸಿ ೧೫ ರಿಂ ಭಾಗಿಸೆ ಶೇಷಂ ತಿಥಿಯಕ್ಕುಂ, ಪದಮನೆಂಟಱಿಂ ಗುಣಿಸಿ ೧೨ ರಿಂ ಭಾಗಿಸಿದ ಶೇಷಂ ಆಯುವಕ್ಕುಂ, ಆ ಪದಮನೆ ೩ ರಿಂ ಗುಣಿಸಿ ೮ ರಿಂ ಭಾಗಿಸಿದ ಶೇಷಂ ಬಿಯಮಕ್ಕುಂ. ಮುಂದೆ—ಧ್ರುವಂಧಾನ್ಯಂ – ಎಂಬ ಹಿಂದೆ ಹೇಳಿರುವ ಗೃಹನಾಮದ ಶ್ಲೋಕಗಳಿವೆ. ಕೊನೆಯಲ್ಲಿ—ಇತಿ ವಾಸ್ತುಪಟಲಂ ಸಮಾಪ್ತಂ – ಎಂದಿವೆ.

# ಚತುರ್ಥಾಧಿಕಾರಂ

## ೪. ಉತ್ಪಾತಾಧ್ಯಾಯಂ

ಕಂ|| ಸಚರಾಚರವಸ್ತೂ[1]ತ್ಪಾ |
ತಚಯಂ ಜನವಿಳಯಕರಮದಂ ರಕ್ಷಿಸಲೆಂ ||
ದಚಳಿತವಚನಂ ಪುಣ್ಯೋ |
ಪಚಯಮನುತ್ಪಾತಶಾಂತಿಯಂ ವಿರಚಿಸಿದಂ || ೧ ||

ಮ|| ನರರನ್ಯಾಯದೆ ವರ್ತಿಸುತ್ತುಮಿರೆ ಪಾಪಂ ಪೆರ್ಚುಗುಂ ಪಾಪದು |
ಬ್ಬರದಿಂ ದೈವವಿರಕ್ತಿ ಸಂಭವಿಸುಗುಂ ತದ್ದೇವತಾಕ್ಷೋಭದಿಂ ||
ದೊರೆಕೊಂಡಿರ್ಕುಮಪಾಯಮಂತದನೆ ಪೇೞ್ದೊಂದಂದದಿಂ ದಿವ್ಯಮಂ |
ಬರಭೌಮಂಗಳೆನಿಪ್ಪ ಮೂಱುತೆಱದುತ್ಪಾತಂಗಳುಂ ತೋಱುಗುಂ || ೨ ||

ಮ|| ಸ್ರ||[2]ವಿಸದಂ ತಾರಾಗ್ರಹಾನೀಕದ ವಿಕೃತಿ ವಲಂ ದಿವ್ಯಮಕ್ಕುಂ ಮಹಾ ವಾ |
ಯು[3]ಸಿಡಿಲ್ ನಿರ್ಘಾತಮುಳ್ಕುಂ ಸುರಧನು ಪರಿವೇಷಾದಿ ದೋಷಂಗಳುಂ ನಾ ||
ಭಸಮಕ್ಕುಂ ಸ್ಥಾವರಂ ಜಂಗಮಮಿವಱ ವಿಕಾರಕ್ಕೆ ದಲ್ ಭೌಮಮೆಂಬೀ |
ಪೆಸರಕ್ಕುಂ ನೋೞ್ಪೊಡೆಂತುಂ ಪ್ರಕೃತಿವಿಕೃತಿಯಾದೆಂದಮುತ್ಪಾತಮಕ್ಕುಂ || ೩ ||

---

ಟೀ|| ಸ್ಥಾವರ ಜಂಗಮಾತ್ಮಕ ಮಾಗಿರ್ದ ಲೋಕದಲ್ಲಿ ಪುಟ್ಟಿದಂತಹ ಆ ಉತ್ಪಾತಂಗಳ್ ಜನಂಗಳಂ ಬಾಧಿಸುವುವಾಗಿ ಆ ಪ್ರಾಣಿಗಳಂ [4]ರಕ್ಷಿಸಲಿಕ್ಕೆ ಪುಣ್ಯಂಗಳ ಮೊತ್ತಮಹಂತಹ ಆ ಉತ್ಪಾತಂಗಳಂ ಪೆಸರ್ಗೊಂಡು ಪೇೞ್ದು, ಅವರ್ಕೆ ಶಾಂತಿ[5]ಯುಂ (ಅಚಳಿತವಚನಂ) ಪೇೞ್ದರ್ಪಂ—೧.

ಟೀ|| ಲೋಕದೊಳಗೆ ಮನುಷ್ಯರ್ಕಳನ್ಯಾಯದಿಂದೆ ನಡೆವುದಱಿಂದೆ ಪಾಪಂ ಪೆರ್ಚುವುದು, ಆ ಪಾಪಂ ಪೆರ್ಚುವುದಱಿಂದೆ ದೈವಂ ವಿಮುಖಮಪ್ಪುದು. ಆ ದೇವತಾಕ್ಷೋಭದಿಂದೆ ಅಪಾಯಂ ಪುಟ್ಟುವುದು, ಆ ಅಪಾಯಂಗಳ್ ದಿವ್ಯಂ, ಅಂತರಿಕ್ಷಂ, ಭೌಮಂ—ಎಂದು ಮೂಱುಂ ತೆಱನಾಗಿ ಪುಟ್ಟುವುವು—೨.

ಟೀ|| ನಿರ್ಮಲಮಾಗಿರ್ಪ ನಕ್ಷತ್ರಂಗಳ್ ಅಶ್ವಿನ್ಯಾದಿ ತಾರೆಗಳ್, ಸೂರ್ಯ ಚಂದ್ರರ್ ಮೊದಲಾದ ಗ್ರಹಂಗಳ್ ಇವುಗಳ ವಿಕಾರಂಗಳ್ ದಿವ್ಯಂಗಳೆನಿಸಿಕೊಳ್ವುವು. ಬಿಱುಗಾಳಿ ಬೀಸುಹ, ಸಿಡಿಲೆಱಗುಹ, ಉಳ್ಕು ಬೀೞುಹ, ಇಂದ್ರಚಾಪಂ ಮೂಡುಹ, ಸೂರ್ಯ ಚಂದ್ರರ್ಗೆ ಪರಿವೇಷವಾಗುಹ—ಇಂತಹ ದೋಷಂಗಳ್ ಆಕಾಶದಲ್ಲಿ ಪುಟ್ಟಿದೊಡೆ ಅಂತರಿಕ್ಷೋತ್ಪಾತಂಗಳೆನಿಸಿಕೊಳ್ವುವು: ಸ್ಥಾವರಮಹಂತಹ ಮರಂಗಳ್, ದೇವತಾಪ್ರತಿಮೆ, ಭೂಮಿ—ಇಂತಹವು ಕಂಪಿಸುಹ, ಪ್ರಾಣಿಗಳಲ್ಲಿ ತಮ್ಮ ಸಹಜವಲ್ಲದ, ವಿಕಾರಂ ಪುಟ್ಟುಹ– ಇಂತಹವು ಭೌಮೋತ್ಪಾತಂಗಳೆನಿಸಿಕೊಳ್ವುವು. ಈ ಭೌಮಾಂತರಿಕ್ಷದಿವ್ಯಂಗಳೆಂಬ ಮೂಱುಂತೆಱದ ಉತ್ಪಾತಂಗಳುಮಂ ಪೇೞ್ದಪೆಂ—೩.

1 ಸ್ತುತ್ಪಾರ. 2 ವಿ(ಸಿ)ಷದಂ, ವಿಸಮಂ. 3 ಸಿಡಿಲ್ಲಳ್ಪಾತ. 4 ರಕ್ಷಿಸುವುದಾಗಿ. 5 ಗಳಂ ಪೇಳಿಹೆನು.



ಮ|| ತ್ರಿವಿಧೋತ್ಪಾತದೊಳರ್ಪಿನಾಭಸವಿಕಾರಂ ದೇವತಾಶಾಂತಿಯಿಂ |
ದವೆ ಶಾಂತ್ಯಾ[1]ವಹ ಮಲ್ಲಿ ದಿವ್ಯಮರಿದಾ ದಿವ್ಯಕ್ಕೆ ಲೇಸಾಗಿ ಮಾ ||
ಡ್ಕೆ ವಿಶೇಷಂ ಕನಕಾನ್ನಗೋಕುಲಮಹೀದಾನಂಗಳಂ ಕೊಟ್ಟು ಹೋ |
ಮವನೀಶಾನ್ಯದೊಳೊ*ಯ್ದು ಅಂಬುಗಱಿದಂದಾದೋಷಮುಂ ಪಿಂಗುಗುಂ || ೪ ||

ಕಂ|| ವನಿತೆಯರೊಳ್ ಮೇಣ್ ತನ್ನೊಳ್ |
ತನುಜರೊಳಂ ಕೋಶದೊಳ್ ಪುರೋಹಿತನೊಳ್ ವಾ ||
ಹನದೊಳ್ ನಿಜಪುರದೊಳ್ [2]ಪರಿ |
ಜನದೊಳ್ ಜನಿಯಿಸುಗುಮಖಿಳದೈವೋತ್ಪಾತಂ || ೫ ||

ಅಕ್ಕರಂ|| ಸರಸಿಜೋದ್ಭವಯುಮಮುನಿವಿಕೃತಿಯಿಂ ದ್ವಿಜರ್ಗೆ ದಿಕ್ಪಾಲರಿಂ ಗೋಕುಲಂಗ |
ಳ್ಗುರಗನಿಂ ಪರಿವಾರಕ್ಕೆ ಗುಹನಿಂ ಮಂಡಳಿಕರ್ಗೆ ಗಣಪನಿಂ ದಂಡೇಶರ್ಗೆ |
ಹರಿಯಿಂ ಧಾತ್ರನಿಂ ಪ್ರಜೆಗಳ್ಗೆ ಯಕ್ಷನಿಂ ಸ್ತ್ರೀಯರ್ಗೆ ರಾಕ್ಷಸನಿಂ ಕುಮಾರರ್ಗೆ ಶುಕ್ರ |
ಗುರುಶನೈಶ್ಚರರಿಂ ಪುರೋಹಿತರ್ಗೆಂಟುತಿಂಗಳೊಳಗಮಪಾಯಮುಮಕ್ಕುಗುಂ || ೬ ||

---

ಟೀ|| ಪಿಂದೆ ಪೇೞ್ದ ಮೂಱುಂತೆಱದುತ್ಪಾತಂಗಳ್, ಶಾಂತಮಪ್ಪುದರ್ಕೆ ದೇವತಾಶಾಂತಿಯಂ ಮಾೞ್ಪುದು. ಮೂಱನೆಯ ದಿವ್ಯಂ ಶಾಂತಮಪ್ಪುದರ್ಕೆ, ಸುವರ್ಣದಾನ, ಅನ್ನದಾನ, ಭೂದಾನ, ಗೋದಾನಂಗಳಂ ಚೆನ್ನಾಗಿ ಮಾಡಿ, ಈಶಾನ್ಯದಿಕ್ಕಿನಲ್ಲಿ ಹೋಮಮಂ ಉಪದ್ರವಪ್ರೀತಿಯಾಗಿ ಮಾಡುವುದು—ಈ ಮೂಱುಂ ತೆಱದುತ್ಪಾತಂಗಳುಂ ಶಾಂತಮಪ್ಪುವು. ಈ ಮೂಱುಂ ತೆಱದ ಉತ್ಪಾತಂಗಳೊಳಗೆ ದಿವ್ಯೋತ್ಪಾತಮುಗ್ರಮಾದುದು, ಆದರ್ಕೆ ಈ ಪೇೞ್ದ ಮರ್ಯಾದೆಯಲ್ಲಿ ಶಾಂತಿಯಂ ಮಾಡಲ್ ಉಪಶಾಂತಮಪ್ಪುದು—೪.

ಟೀ|| ಸ್ತ್ರೀಯರ್ಕಳಲ್ಲಿ, ತನ್ನಲ್ಲಿ, ಪುತ್ರರಲ್ಲಿ, ಭಂಡಾರದ ಮನೆಯಲ್ಲಿ, ಪುರೋಹಿತನಲ್ಲಿ, ತಾನೇಱುವಶ್ವಾದಿವಾಹನಂಗಳಲ್ಲಿ, ತಾನಿರ್ಪ ಪಟ್ಟಣದಲ್ಲಿ, ತನ್ನ ಸೇವಕ ಜನಂಗಳಲ್ಲಿ—ಇನಿತು ತಾವಿನಲ್ಲಿ [3]ದೈವಿಕವಾಗಿರ್ಪುತ್ಪಾತಂಗಳ್ ಪುಟ್ಟುವುವು—೫.

ಟೀ|| ಬ್ರಹ್ಮಪ್ರತಿಮೆ, ಯಮ, ಋಷಿಯರ್ಕಳ ಪ್ರತಿಮೆಗಳಲ್ಲಿ [4]ವಿಕಾರಮುಂ ಪುಟ್ಟಿದೊಡೆ ಬ್ರಾಹ್ಮಣರ್ಗೆ ಬಾಧೆಯಪ್ಪುದು. ಇಂದ್ರಾಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ ಈಶಾನರೆಂಬಷ್ಟದಿಕ್ಪಾಲಕರ ಪ್ರತಿಮೆಗಳಲ್ಲಿ ವಿಕಾರಂ ತೋಱಿದೊಡೆ ಗೋವುಗಳ್ಗೆ ಬಾಧೆಯಪ್ಪುದು. ನಾಗರ ಪ್ರತಿಮೆಗಳಲ್ಲಿ ವಿಕಾರಂ ಪುಟ್ಟಿದೊಡೆ ಪರಿವಾರಕ್ಕೆ ಬಾಧೆಯಪ್ಪುದು. ಸ್ವಾಮಿಕಾರ್ತಿಕನ ಪ್ರತಿಮೆಯಲ್ಲಿ ವಿಕಾರಂ ಪುಟ್ಟಿದೊಡೆ ಮಂಡಳಿಕರ್ಗೆ ಬಾಧೆಯಪ್ಪುದು. ವಿನಾಯಕನ ಪ್ರತಿಮೆಯಲ್ಲಿ ವಿಕಾರಂ ತೋಱಿದೊಡೆ ಪ್ರಧಾನರ್ಗೆ ಬಾಧೆಯಪ್ಪುದು. ವಿಷ್ಣು ಪ್ರತಿಮೆ, ಬ್ರಹ್ಮ ಪ್ರತಿಮೆಗಳಲ್ಲಿ ವಿಕಾರಂ ಪುಟ್ಟಿದೊಡೆ ಪ್ರಜೆಗೆ ಬಾಧೆಯಪ್ಪುದು. ಯಕ್ಷ ಪ್ರತಿಮೆಯ ವಿಕಾರದಿಂ ಸ್ತ್ರೀ

1 ಮಹಿಮಲ್ಲಿ 2 ಪುರಜನ. 3. ದೈವೀ. 4. ಪುಟ್ಟಿದಂತಹ ವಿಕಾರಗಳಲ್ಲಿ

*ಅಱಂಬುಗಱಿ ಶಬ್ದಕ್ಕೆ ಟೀಕೆಯಲ್ಲಿ ಸರಿಯಾದ ಅರ್ಥ ಬರೆದಿಲ್ಲ–ಉಪದ್ರವಪ್ರೀತಿಯಾಗಿ– ಎಂದಿದೆ. ಇದಕ್ಕೆ ನಿಷ್ಕೃಷ್ಟವಾಗಿ ಅರ್ಥವಾಗುವುದಿಲ್ಲ–ಜೈನರ ಹರಿವಂಶ(ನೇಮಿನಾಥ)ಪುರಾಣದಲ್ಲಿ ಗೋಕುಲದಲ್ಲಿ ವಸುದೇವನು ಉತ್ಪಾತಶಾಂತಿಗಾಗಿ ಅಱಂಬುಗಱಿಯಲು ಹೋಗಿದ್ದನು ಎಂದು ಪ್ರಯೋಗವಿದೆ.

ಚಂ|| ಸುಲಲಿತ ದೇವತಾಪ್ರತಿಮೆಯಕ್ಕೆ ಸುರಾಲಯಮಕ್ಕೆ ಲಿಂಗಮ |
ಕ್ಕಲುಗು[1] ವೊಡಾಟಿಸ್ವೊಡಂ ಕುಸಿದು ಭಿನ್ನಮದಾಗಿ ತೋಱೆವೊಡಂ ||
ಬಲ[2]ನಡೆವಲ್ಲಿ ಕಂಬುಗೆಯ ಭಂಡಿ ಕಟಲ್ದು ಡಿದಿರ್ವೊಡೆತ್ತಲುಂ |
ತೊಲಗದೆ ನಟ್ಟು ನಿಲ್ವೊಡದು ದೇಶಮಹೀಶವಿನಾಶಕಾರಣಂ || ೭ ||

ಉ|| ಈತೆಱದಿಂದಮಾದ ವಿಕೃತಕ್ಕವನೀಶಪುರೋಹಿತಂ [3]ಶುಚಿ |
ರ್ಭೂತತೆಯಿಂ ತ್ರಿರಾತ್ರಮುಪವಾಸಮನಿರ್ದು ಯಥೋಕ್ತಮಾಗಿ [4]ಸಂ ||
ಗೀತಮು ಮುಣ್ಮೆ ತತ್ಪ್ರತಿಮೆಯಂ ವಿನುತಾಷ್ಟವಿಧಾರ್ಚನಂಗಳಿಂ |
ಪ್ರೀತಿಯೊಳಯ್ದೆ ಪೂಜಿಸುಗೆ ಸಪ್ತದಿನಂಬರೆಗಂ ನಿರಂತರಂ || ೮ ||

ಕಂ|| ಪಿಂಗದೆ ಮತ್ತಂ ಮಧುಪ |
ರ್ಕಂಗೆಯ್ದ್ ವಿಧಿಯುಕ್ತಮಪ್ಪಿನಂ ಸ್ಥಾಲೀಪಾ ||
ಕಂಗೆಯ್ದು ಬೇಳೆ ತನ್ಮಂ |
ತ್ರಂಗಳನುಪಶಾಂತಿಯಕ್ಕುಮಂಚಳಿತವಚನಾ || ೯ ||

ಯರ್ಗೆ ಅಪಾಯಮಪ್ಪುದು. ರಾಕ್ಷಸ ಪ್ರತಿಮೆಯ ವಿಕಾರದಿಂ ಕುಮಾರರ್ಗೆ ಅಪಾಯಮಪ್ಪುದು. ಶುಕ್ರ ಬೃಹಸ್ಪತಿ ಶನೈಶ್ಚರ ಪ್ರತಿಮೆಗಳಲ್ಲಿ ಪುಟ್ಟಿದಂತಹ ವಿಕಾರಂಗಳಿಂದೆ ಪುರೋಹಿತರ್ಗೆ ಕೇಡಪ್ಪುದು—ಈ ಪೇೞ್ದ ಪ್ರತಿಮೆಗಳಲ್ಲಿ ವಿಕಾರಂಗಳ್ ಪುಟ್ಟಿದೊಡೆ ಎಂಟು ತಿಂಗಳೊಳಗೆ ಅಪಾಯಂ ತೋಱುವುದು—೬.

ಟೀ|| ಮನೋಹರಂಗಳಪ್ಪ ದೇವತಾಪ್ರತಿಮೆಗಳಾದೊಡಂ, ದೇವಾಲಯಂಗಳಾದೊಡಂ, ಲಿಂಗಮಾದೊಡಂ ಅಲುಗಿದೊಡೆ, [5]ಕುಸಿದು ಕುರ್ಗಿದೊಡೆ, ಭಿನ್ನಮಾಗಿ ತೋಱಿದೊಡೆ, ಸೇನೆನಡೆವಲ್ಲಿ [6]ಪೀನಿಗೆಯ ಭಂಡಿಯಚ್ಚು ಕಟಲ್ಚಿ ಮುಱಿದು ಬಿೞ್ದೊಡೆ, ಆವ ಕಡೆಯಲ್ಲಿಯುಂ ತೊಲಗದೆ ನಟ್ಟು ನಿಂದೊಡೆ—ಈ ಪೇೞ್ದ ಉತ್ಪಾತಂಗಳಿಂದೆ [7]ದೇಶದ, ಅರಸರ ವಿನಾಶ ಕಾರಣಂಗಳಪ್ಪುವು—೭.

ಟೀ|| ಈ ಮರ್ಯಾದೆಯಲ್ಲಾದ ವಿಕಾರಂಗಳ್ಗೆ ಅರಸಿನ ಪುರೋಹಿತಂ ಶುಚಿಯಾಗಿ ಮೂಱು ದಿವಸ ಮುಪವಾಸಮಿರ್ದು ಗೀತ ವಾದ್ಯ ನೃತ್ಯ ಸಹಿತಮಾಗಿ ಆ ವಿಕಾರಂ ಪುಟ್ಟಿದ ಪ್ರತಿಮೆಗೆ ಅಷ್ಟವಿಧಾರ್ಚನೆಯಂ ಮಾಡಿ ಈ ಮರ್ಯಾದೆಯಲ್ಲೇೞುದಿನ ಪರ್ಯಂತಮುಂ ಪೂಜೆಯಂ ಮಾೞ್ಪುದು—೮.

ಟೀ|| ಆ ಯೇೞುದಿನಂ ಆ ಪ್ರತಿಮೆಗೆ ಮಧುಪರ್ಕಂ ಮೊದಲಾಗೆ ಷೋಡಶೋಪ

1. ಪೊಡಱ್ದುರೆ ತಾಂಕುಸಿದುಂ ಪಿರಿದಾಗಿ ತೋಱೆವೊಡಂ, ಡಾಟಿಸ್ವೊಡೆ ಬೆಮರ್ವೊಡೆ. 2. ಆಕಾರಾಂತ ಪ್ರಥಮಾಪ್ರಕೃತಿಪ್ರಯೋಗವು ಚಿಂತ್ಯವು 3. ಶುಚೀಭೂತತೆ ಎಂದಿರಬೇಕು. 4. ಸನೀತ, ಸಂಖ್ಯಾತ, 5. ಕುಸಿದೊಡೆ ಉದ್ದವಾದೊಡೆ, ಬೆಮರ್ದೊಡೆ. 6. ಪಿನಾಕಿಯ, ಸೂಸಗೆಯ. 7. ದೇಶಕ್ಕೆ ಅರಸುಗಳ್ಗೆ ವಿನಾಶಮಕ್ಕುಮಿದು ಕಾರಣಂಗಳಹವು.



ಮ|| ಪಗ[1]ಲೊಳ್ ಕಟ್ಟಲೆ ಪೊಣ್ಮೆ ಭೂಮಿನಭ[2]ದೊಳ್ ದೂಳುಣ್ಮೆ ಮೇಣತ್ತಲುಂ |
ಪೊಗೆ ಕಿರ್ಚಿಲ್ಲದೆ ಪುಟ್ಟೆ [3]ತಾರೆ ದಿನದೊಳ್ ಮೇಣ್ ತೋಱೆ ಮೇಣ್ ರಾತ್ರಿಯೊಳ್ ||
ಮುಗಿಲೆಲ್ಲಂ ಪರಿವಲ್ಲ ತೋಱದಿರೆ ನಕ್ಷತ್ರಂಗಳುಂ ನಾಡೆ ಪು |
ಟ್ಟುಗುಮನ್ಯಾಯಮಮ ಮಿೞ್ದಿಯುಂ ಕಲಹಮುಂ ದುರ್ಭಿಕ್ಷಮುಂ ಕುತ್ತಮುಂ || ೧೦ ||

ಪೃಥ್ವೀ|| ಹಿರಣ್ಯ ಫಳಪುಷ್ಪಧಾನ್ಯಚಯವೃಷ್ಟಿಯಿಂದಂ [4]ಭಯಂ |
ಕರಂ ಪ್ರಜೆಗೆ ಪುಟ್ಟುಗುಂ ಕಱಿವ ಕೆಂಡದಿಂ ಪಾಂಸುವಿಂ ||
[5]ಪುರಂ ಕಿಡುಗುಮಲ್ಲಿ[6]ಜೀವತತಿ ಬಿೞ್ದೊಡುರ್ವೀಕ್ಷಯಂ |
ಪರಿಸ್ಖಲಿತವೃಷ್ಟಿಯಪ್ಪುದಱಿ ನಿೞ್ದಿಗಳ್ ಪೆರ್ಚುಗುಂ || ೧೧ ||

ಚಂ|| ಮುಗಿಲಣಮಿಲ್ಲದಲ್ಲಿ ಮೞೆ ಕೊಳ್ವೊಡೆ ಮಾಣದಕಾಲವೃಷ್ಟಿ ತೊ |
ಟ್ಟಗೆ ದಿನಸಪ್ತಕಂಬರೆಗ ಮಾಗಳುತೋಱೆವೊಡೆ ಚಕ್ರವರ್ತಿ ಪೊಂ ||
ದುಗು ಮದನೀರ್ಗಳಂಬೆರಸು ನೆತ್ತರ ಪೆರ್ಮೞೆಯಾಗೆ ಮುಖ್ಯಮಂ |
ತ್ರಿಗೆ ಮಡಿವಕ್ಕುಮುರ್ವಿ ಸ್ರುತಲೋಹಿತವೃಷ್ಟಿಯಿನಕ್ಕು ಮಾಹವಂ || ೧೨ ||

ಚಾರಮಂ ಮಾಡಿ ಯಥೋಕ್ತಮಾಗಿ ಸ್ಥಾಲೀಪಾಕದಿಂ ಚರುವಂ ಮಾಡಿ ಆ ದೇವತಾಮಂತ್ರಂಗಳಿಂದೆ ಹೋಮಮುಮಂ ಮಾಡುತ್ತಿರಲುಪಶಾಂತಿಯಪ್ಪುದು—೯.

ಟೀ|| ಪಗಲ್ ಕಟ್ಟಲೆ ತೋಱುಹ, ಗಾಳಿಯಿಲ್ಲದೆ ಆಕಾಶದಲ್ಲಿ ದೂಳಿ ತೋಱುಹ, ಅಗ್ನಿಯಿಲ್ಲದೆ ಎಲ್ಲಾ ಕಡೆಯುಂ ಪೊಗೆ ಪುಟ್ಟುಹ, ಪಗಲ್ ನಕ್ಷತ್ರಂಗಳ್ ತೋಱುಹ, ರಾತ್ರಿಯಲ್ಲಿ ಮುಗಿಲಿಲ್ಲದೆ ನಕ್ಷತ್ರಂಗಳ್ ಕಾಣದಿರುಹ—ಈ ಮರ್ಯಾದೆಯಲ್ಲುತ್ಪಾತಂಗಳ್ ತೋಱಿದೊಡೆ ಆ ನಾಡಿಂಗೆ [7]ಅನ್ಯಾಯದಿಂದೀತಿ ಬಾಧೆಗಳ್ ದುರ್ಭಿಕ್ಷಂಗಳ್ ರೋಗಂಗಳ್ ಪುಟ್ಟುವುವು.

ಟೀ|| ಸುವರ್ಣಂಗಳ ವೃಷ್ಟಿ, ಫಲಪುಷ್ಪಂಗಳ ವೃಷ್ಟಿ, ಧಾನ್ಯಂಗಳ ವೃಷ್ಟಿ—ಈ ವೃಷ್ಟಿಗಳಿಂದೆ ಪ್ರಜೆಗಳ್ಗೆ ಭಯಂಕರತೆ ಪುಟ್ಟುವುದು. ಕೆಂಡದ ಮೞೆ ಸುರಿಹ, ಗಾಳಿಯಿಲ್ಲದೆ ದೂಳಿ ಮಸಗುಹ ಇವಱಿಂದೆ ಪಟ್ಟಣಂಗಳ್ ಕಿಡುವುವು. ಪ್ರಾಣಿಗಳ್ ಬಿೞ್ದೊಡೆ ದೇಶಕ್ಷಯಮಂ ಪೇೞ್ವುದು. ತಡೆದು ಕಿಱುಕಿಱಿದಾಗಿ ಮೞೆ ಬಂದೊಡೆ (ಊರಿಂಗೆ) ಈತಿ ಬಾಧೆಗಳ್ ಅಪ್ಪುವು. [ಈತಿ ಬಾಧೆಗಳೆಂದೊಡೆ—ಅತಿವೃಷ್ಟಿ, ಅನಾವೃಷ್ಟಿ, ಶಲಭ (ಮಿಡಿತೆಗಳ್), ಮೂಷಕ, ಗಿಳಿವಿಂಡು, ಸ್ವಚಕ್ರಪರಚಕ್ರ – ಎಂಬಿವೀತಿ ಬಾಧೆಗಳೆನಿಸುಗುಂ]—೧೧.

ಟೀ|| ಮೋಡಂ ತೋಱದೆ ಆಕಸ್ಮಿಕವಾಗಿ ಮೞೆ ಬಂದೊಡೆ, ಅಕಾಲವೃಷ್ಟಿ ಯೇೞು ದಿನಪರ್ಯಂತಂ ಬಿಡದೆ ಕಱೆದೊಡೆ ಇವಱಿಂದೆ ಆ ರಾಜ್ಯದ ಅರಸಿಂಗೆ ಅಪಾಯಮಂ ಪೇೞ್ವುದು. ಮದಸಹಿತ ಮಹ [8]ಮೞೆಗಳ್ವೆರಸು ರಕ್ತದ ವೃಷ್ಟಿಯಾದಲ್ ಮುಖ್ಯಪ್ರಧಾನರ್ಗೆ ಅಪಾಯಮಂ ಪೇೞ್ವುದು, ರಕ್ತದ ಕಡಲ್ ಪರಿವಂತಹ [9]ಮೞೆಯಾದೊಡೆ ಅರಸಿಂಗೆ ಅಪಾಯಮಕ್ಕುಂ—೧೨.

1. ಲೊಳ್ಸಲೆ. 2. ದೊಳಳ್ಗುಣ್ಮೆ. 3. ಕಾಲೆ. 4. ದಾ ಭಯಂ. 5. ಪುರ. 6. ದೇವತ... 7. ಅನ್ಯಾಯದಿಂದೆ ಬಾಧೆಗಳ್. 8. ಮೊಳೆ. 9. ಕಾಲಗಳು ಅಹವು, ಕಾಳೆಗಳ.

ಉ|| ರವಿ[1]ಯಿರ್ದತ್ತಲೆ [2]ಮೋಣ್ ನೆಲಲ್ ಸಿಲೆ ನಿರಭ್ರಾಕಾಶದೊಳ್ ಭಾನು ತೋ |
ಱುವೊಡೆಂತುಂ ನೆೞಲಲ್ಲಿ ತೋಱದಿರೆ ಶೀತೋಷ್ಣಂ ವಿಪರ್ಯಾಯ ಮಾ ||
ಗೆ ವಿನಾಶಂ ವಿಷಯಕ್ಕೆ ಸಂಭವಿಸುಗುಂ ನಿರ್ಮೇಘಮಾದಂದು ಮೋಣ್ |
[3]ದಿವದೊಳ್ ಮೋಣಿರುಳೊಳ್ ಸುರೇಂದ್ರಧನು ತೋರ್ಪಂದುಣ್ಮುಗುಂ ಕ್ಷುದ್ಭಯಂ
|| ೧೩ ||

ಮಾಲಿನಿ|| [4]ಎಸೆಯೆ ವಿವಿಧಗೀತಾತೋದ್ಯಮೆತ್ತಂ ಪೊದಱ್ದಾ |
ಗಸದಿ ಸದೞನಕ್ಕುಂ ಕುತ್ತಮುಂ ಮೃತ್ಯುವುಂ ಬಾ ||
ಜಿಸದೆ ಮೊೞಗೆ ತೂರ್ಯಂ ಬಾಜಿಸುತ್ತಿರ್ಪಿನಂ ಮೋ |
ೞುಸಿರದಿರೆ ನರೇಂದ್ರಂ ಸಾಗು[5]ಮುಗ್ರಾಜಿಯಕ್ಕುಂ || ೧೪ ||

ಚಂ|| ಅನಿಲವಿಕಾರವಿಾ ತೆಱದೆ ತೋಱದೊಡುತ್ಸವದಿಂದಮಾಪ್ರಭಂ |
ಜನನನೆ ಭಕ್ತಿಯಿಂದಮೊಸೆದರ್ಚಿಸಿ ಮಾರುತಮಂತ್ರದಿಂದೆ ನೆ ||
ಟ್ಟನೆ ಜಪಹೋಮಮುಂ ನೆಱೆಯೆ ಮಾಡಿಸಿ ವಿಪ್ರಕುಳಕ್ಕೆ ಮಾೞ್ಕೆ ಭೋ |
ಜನಮುನನೂನಮಂ ಕುಡುಗೆ ದಾನಮನೊಪ್ಪಿನೆ ಬೇೞ್ಪ ಮಾನವಂ || ೧೫ ||

ಟೀ|| ಸೂರ್ಯನಿರ್ದೆಡೆಗೆ ನೆೞಲ್ ತಿರುಗಿದೊಡೆ, ನಿರ್ಮೇಘಮಾಗಿರ್ದ ಆಕಾಶದಲ್ಲಿ ಸೂರ್ಯಂ ತೋಱಲ್ ನೆೞಲಿಲ್ಲದಿರುಹ, ಶೀತಮುಷ್ಣಮಾಗುಹ, ಉಷ್ಣಂ ಶೀತಮಾಗುಹ— ಇವಱಿಂದೆ ದೇಶಕ್ಕೆ ಕೇಡಂ ಪೇೞ್ವುದು. ಮೋಡಮಿಲ್ಲದಂದು ಪಗಲಲ್ಲಾದೊಡಮಿರುಳೊಳಾದೊಡಂ ಇಂದ್ರಧನು ತೋಱಲ್ ಪ್ರಾಣಿಗಳ್ಗೆ ಹಸಿವು ಘನಮಪ್ಪುದು—೧೩.

ಟೀ|| ಆಕಾಶಮಾರ್ಗದಲ್ಲಿ ಆಕಸ್ಮಿಕವಾಗಿ[6] ನಾನಾಗೀತವಾದ್ಯ ವೀಣಾಧ್ವನಿಗಳ್ ಪುಟ್ಟಲ್ ಇವಱಿಂದೆ ದೇಶದೊಳಗೆ ಪ್ರಜೆಗಳ್ಗೆ ರೋಗ ಮೃತ್ಯುಗಳಪ್ಪುವು. ಪಱೆಗಳಂ ಬಾಜಿಸದೆ ಧ್ವನಿಗಳ್ ಹುಟ್ಟುಹ, ಬಾಜಿಸಿದೊಡಂ ಧ್ವನಿ ಪುಟ್ಟದಿರುಹ ಇಂತಹುವಾದೊಡೆ ಅರಸುಗಳ್ಗೆ ಮರಣಮಂ ಪೇೞ್ವುದು ಭಯಂಕರಮಪ್ಪ ಕಾಳಗಮುಮಪ್ಪುದು—೧೪.

ಟೀ|| ಈ ಪಿಂದೆ ಪೇೞ್ದಂತಹ ಉತ್ಪಾತಂಗಳ್ ವಾಯುವಿಕಾರದಿಂದೆ ಪುಟ್ಟಿದುವು, ಇವರ್ಕೆ ಅರಸುಗಳ್ ವಾಯುದೇವತೆಗೆ ಭಕ್ತಿಯಿಂದೆ ವಾಯವ್ಯಮಂತ್ರಂಗಳಿಂದೆ ಚೆನ್ನಾಗಿ ಪೂಜಿಸಿ, ಬ್ರಾಹ್ಮಣರ ಕೆಯ್ಯಲ್ಲಿ ಜಪಹೋಮಂಗಳಂ ಮಾಡಿಸಿ, ಬ್ರಾಹ್ಮಣಭೋಜನಮಂ ಮಾಡಿಸಿ ಸಂಪೂರ್ಣಮಪ್ಪ ದಾನಂಗಳಂ ಮಾಡಿಸಲ್ ಆ ಉತ್ಪಾತಂಗಳ ಶಾಂತಿಯಪ್ಪುವು—೧೫.

1. ಯಿಂದಂ ಪ್ರತಿಬಿಂಬಿಸುತ್ತೆ ಮಹಾದಾಕಾಶಂಗಳೊಳ್ ಭಾನು ರವಿಯಿರ್ದತ್ತಲೆ ಕೇಳ್‌ನೆೞಲ್ಸಿಲೆ ಮಹಾಕ್ರೂರಂ ನಿರಭ್ರಂಗಳೊಳ್, ಎಂಬ ಪಾದ ಹೆಚ್ಚಾಗಿದೆ. 2. ಮೆಣ್ ನೆೞಲಲ್ಲಿರೆ. 3. ದಿನದೊಳ್ ನಿಶಿಯೊಳ್ 4. ಎಸಗಿರಲತಿ ವೀಣಾಗೀತವಾದ್ಯಂ. 5. ಮುದ್ರಾಜ್ಞಿ ಯಕ್ಕುಂ. 6. ಪಱೆಗಳಂ ಬಾಜಿಸುವ ಧ್ವನಿಯಾದೊಡೆ.



ಮ||ಸ್ರ|| ಭರದಿಂ ನಿರ್ಘಾತಮಾದಂ[1]ದುಷೆಯೊಳವನಿಪಾಮಾತ್ಯವರ್ಗಕ್ಕೆ ಜಾವಂ |
ಬರೆಗಂ ಶೂದ್ರಾನ್ವಯಕ್ಕಂ ಪುರಪತಿಗಮೆರಡ್ಜಾಮಮಪ್ಪನ್ನೆಗಂ ಕಿಂ ||
ಕರವಿಪ್ರೌಘಕ್ಕೆ ಯಾಮತ್ರಯದ ಕಡೆವರಂ ವೈಶ್ಯವಂಶಾಳಿಗಸ್ತಂ |
ಬರೆಗಂ ಚೋರಾದಿನೀಚಪ್ರತತಿಗೆ ನಿಯತಂ ಮಾಡುಗುಂ [2]ನಾಡೆ ಕೇಡಂ || ೧೬ ||

[3]ಪೃಥ್ವಿ|| ಇರುಳ್ ಮೊದಲ ಜಾವಮಪ್ಪನ್ನೆಗಂ ಪೊಸೆಯೆ ಸಸ್ಯಕ್ಕೆ ನ |
ಷ್ಟಿರುಳ್ವರೆಗಮಾ ಪಿಶಾಚನಿವಹಕ್ಕೆ ಯಾಮತ್ರಯಂ ||
ಬರಂ ದ್ವಿರದವಾಜಿಗಳ್ಗೆ [4]ದಿನಪೋದಯಾಂತಂಬರಂ |
ನಿರಾಕುಳದೆ ಪೋಪಪಮಂಗಶುಭಮೆಂಗೆ ನಿರ್ಘಾತಮಂ || ೧೭ ||

ಕಂ|| ಘನಪಥದೊಳೆಲ್ಲ ಸೆಸೆಯೊಳ |
ಮೆನಿತಾನುಂ ತೆರದ ರೂಪಮಂ [5]ತಳೆದುಲ್ಕಾ ||
ಶನಿವಿದ್ಯುತ್ತಾರಾ ವಿ |
ಷ್ಣನಾಮದಿಂ ದುಱ್ಕಮಯ್ದು ತೆಱದೊಳ್ ನೆಗೞ್ಗುಂ || ೧೮ ||

ಟೀ|| ಆಕಾಲದಲ್ಲಿ ಬಱಸಿಡಲ್ ನಿಶ್ಚಯವಾಗಿ ಯೆಱಗುವಲ್ಲಿ ಉದಯ ಕಾಲದಲ್ಲಿ ಯೆಱಗಿದೊಡೆ ಅರಸುಗಳ್ಗಂ ಪ್ರಧಾನಿಗಳ್ಗಂ ಕೇಡಂ ಪೇೞ್ವುದು. [6]ಎರಡನೆಯ ಜಾವದಲ್ಲಿ ಯೆಱಗಿದೊಡೆ ಪಟ್ಟಣ ಸ್ವಾಮಿಗೆ ಕೇಡಂ ಪೇೞ್ವುದು. ಮೂಱನೆಯ ಜಾವಂ ತುಂಬುವನ್ನೆಬರಂ ಎಱಗಿದೊಡೆ ಸೇವಕರಾಗಿರ್ಪ ಬ್ರಾಹ್ಮಣರ್ಗೆ ಅಪಾಯಮಂ ಪೇೞ್ವುದು. ನಾಲ್ಕನೆಯ ಜಾಮಂ ತುಂಬಿ ಅಸ್ತ[7]ಮಯಮಹನ್ನೆಬರಂ ಎಱಗಿದೊಡೆ ವೈಶ್ಯಜಾತಿಗಳ್ಗೆ ಕಳ್ಳರ್ ಜೂದುಗಾಱರ್ ಮೊದಲಾದ ಕೀೞು ಜಾತಿಯವರ್ಗೆ ಅಪಾಯಮಂ ಪೇೞ್ವುದು—೧೬.

ಟೀ|| ರಾತ್ರಿಯಲ್ಲಿ ಮೊದಲ ಜಾವಂ ತುಂಬುವನ್ನೆವರಂ ಎಱಗಿದೊಡೆ ಸಸಿಗಳ್ಗೆ ಕೇಡಪ್ಪುದು. ಎರಡನೆಯ ಜಾವಂ ತುಂಬುವನ್ನೆವರಂ ಎಱಗಿದೊಡೆ ಭೂತಪಿಶಾಚಂಗಳ್ಗೆ ಅಪಾಯಮಂ ಪೇೞ್ವುದು. ಮೂಱನೆಯ ಜಾವಂ ತುಂಬುವನ್ನೆವರಂ ಎಱಗಿದೊಡೆ ಆನೆ ಕುದುರೆಗಳ್ಗೆ ಅಪಾಯಮಂ ಪೇೞ್ವುದು. ನಾಲ್ಕನೆಯ ಜಾವದಲ್ಲಿ ಸೂರ್ಯೋದಯಮಹನ್ನೆವರಂ ಎಱಗಿದೊಡೆ ಸುಖದಿನೂರಿಂಗೆ ಪೋಪ ಜನಕ್ಕೆ ಅಪಾಯಮಂ ಪೇೞ್ವುದು—೧೭.

ಟೀ|| ಮೇಘ[8]ಮಾರ್ಗದ ಎಲ್ಲಾ ದೆಸೆಗಳಲ್ಲಿಯುಂ [9]ಅನೇಕ ಪ್ರಕಾರದ ವರ್ಣಂಗಳಾಗಿ

1. ದುಷೆರುಷಿಯೊಳವನಿಪಾಮಾತ್ಯವರ್ಗ. 2. ಕೂಡೆ.

3. ಒಂದು ಪ್ರತಿಯಲ್ಲಿ ಈ ವೃತ್ತಕ್ಕೆ ಪ್ರತಿಯಾಗಿ ಈ ಕಂದವಿದೆ—

ಕಂ|| ಇರುಳೊಂದಜಾಮೊಳಗೆ ಸಸಿಗ |
ಳ್ಗೆರಡಕ್ಕೆ ಪಿಶಾಚಿಗಳ್ಗೆ ಮೂಱನೆಯೊಳ್ ಗಜ ||
ತುರಗಕ್ಕೆ ದಿನಪೋದಯಂ |
ಬರೆಗೆ ನಿರಾಕುಳದೆ ಪೋಪವರ್ಗಶುಭಕರಂ || ೧೭ ||

4. ದಿನಪೋದಾತ್ಯಂ ಬರೆಯೆ. 5. ತಳ್ದು. 6. ಮೊದಲ ಜಾವದಲ್ಲಿ ಯೆಱಗಿದೊಡೆ ಶೂದ್ರಜಾತಿಗೆ ಕೇಡಪ್ಪುದು ಎರಡನೆಯ— 7. ಮಯಮಪ್ಪಾಗ. 8. ಮಿಲ್ಲದೆ ಗಗನದೊಳ್. 9. ನಾನಾವರ್ಣ.

ಕಂ|| ಶ್ವೇತಾದಿ ಚತುರ್ವರ್ಣದೊಳ್ |
ಪೇತಂ ಪೋಣುತ್ತರಾದಿ ಚತುರಾಶಾಸಂ ||
ಭೂತಂ ತಾನದುಮುಲ್ಕಾ |
ಪಾತಂ ವಿಪ್ರಾದಿವರ್ಣಮಂ ಸಂಹರಿಕುಂ || ೧೯ ||

ಮ|| ರವಿಯಿಂ ಮೇಣ್ ಶಿಶಿರಾಂಶು[1]ವಿಂದೊಗೆಯೆ ಮೇಣ್ ತದ್ಬಿಂಬಮಂ ಸೋಂಕೆ ಮೇ |
ಣವನೀಕಂಪಮದಾಗಲಾಗೆ ವಿವಿಧೋಲ್ಕಾಪಾತಮಾ ದೋಷದಿಂ ||
ದವನಾವೃಷ್ಟಿ ನರೇಂದ್ರಹಾನಿ ಪರಚಕ್ರಾಕ್ರಾಂತಿ ದುರ್ಭಿಕ್ಷಮೆಂ |
ಬಿವು ನಿರ್ವ್ಯಾಜದಿನಕ್ಕುಮೆಂದಱಗ [2]ಮಂದಾಚಾರ್ಯ ಶಾಸ್ತ್ರೋಕ್ತಿಯಿಂ || ೨೦ ||

ಚಂ|| ಜಲರುಹಮಿತ್ರನುಂ ಬಲದೊಳಾಗಿರೆ ನಿಂದ ನೃಪಂಗೆ ಚಂದ್ರನಿಂ |
[3]ಬಲದೊಳಗಾಗೆ ಭೂಮಿಗಶುಭಂ ನಡೆವಾತನ ಮುಂದೆ ಸೂರ್ಯಮಂ ||
[4]ಡಲಗತಮಾಗಿ ಬೀೞೆ ವಿಜಯಾ[5]ವಹಮಕ್ಕುಮದೆತ್ತ ಬೀೞ್ದೊಡ |
ತ್ತಲೆ ಮುಖಮಾಗಿ ಕಾದೆ ರಿಪುಸೇನೆಯೊಳಾತನೆ ಗೆಲ್ಗುಮಾಜಿಯೊಳ್ || ೨೧ ||

ಯುಲ್ಕು ತೋಱುವುವು, ಅವರ್ಕೆ [6]ನಾಮಂ ಉಲ್ಕು ಸಿಡಿಲ್, ಮಿಂಚು, ತಾರೆ, ವಿಷ್ಣು [7]ಎಂಬಿವು. ಆ ಅಯ್ದುಂ ತೆಱದ ಉಲ್ಕುಗಳ್—೧೮.

ಟೀ|| ಬಡಗಲ್ ಶ್ವೇತವರ್ಣಂ, ಮೂಡಲ್ ರಕ್ತವರ್ಣಂ, ತೆಂಕಲ್ ಹೊಂಬಣ್ಣಂ, ಪಡುವಲ್ ಕೃಷ್ಣವರ್ಣಂ, ಈ ಪ್ರಕಾರವರ್ಣದ ಉಲ್ಕುಗಳ್ ಬಿೞ್ದೊಡೆ ಕ್ರಮಮಾಗಿ ಬ್ರಾಹ್ಮಣ ಕ್ಷತ್ರಿಯ, ವೈಶ್ಯ, [8]ಶೂದ್ರರ್ಗೆ ಅಪಾಯಮಂ ಪೇೞ್ವುದು—೧೯.

ಟೀ|| ಸೂರ್ಯಕಿರಣಂಗಳ್ಗೆ ಉಷ್ಣಕಾಲದ ಮಧ್ಯಾಹ್ನವೇಳೆಯಲ್ಲಿ ಶೈತ್ಯಂ ಪುಟ್ಟುಹ ಚಂದ್ರಕಿರಣಂಗಳಲ್ಲಿ ಉಷ್ಣಂ ಹುಟ್ಟುಹ, ಭೂಮಿಕಂಪಿಸುಹ, ನಾನಾವರ್ಣದ ಉಲ್ಕು ಬೀೞುಹ, ಈ ಮರ್ಯಾದೆಯಿಂದೆ ಉತ್ಪಾತಂಗಳ್ ತೋಱಲ್ ಆ ದೋಷದಿಂದೆ [9]ಕಾಲಮೞೆಗಳ್ ಬಾರವು. ಅರಸುಗಳ್ಗೆ ಅಪಾಯಮಕ್ಕುಂ, ಪರರಾಜ್ಯದರಸುಗಳ್ ಒತ್ತಿ ರಾಜ್ಯಮಂ ಕೊಳ್ವರ್, ಬಱನಪ್ಪುದು, ಇವು ಸಂದೇಹಮಿಲ್ಲದೆ [10]ಮಾಂದಾಚಾರ್ಯಂ ಪೇೞ್ದ ಶಾಸ್ತ್ರದಿಂದಪ್ಪುವು—೨೦.

ಟೀ|| ಕಾಳೆಗಕ್ಕೆ ನಡೆವಾತಂಗೆ ಬಲದ ಸೂರ್ಯಸ್ವರಂ ನಡೆಯುತ್ತಿರೆ ಆ ಕಾಳೆಗಮಂ ಗೆಲ್ವಂ. [11]ಅಲ್ಲಿ ಎಡದ ಚಂದ್ರಸ್ವರಂ ನಡೆಯುತ್ತಿರೆ ಸೋಲಮಂ ಪೇೞ್ವುದು. ಯುದ್ಧಕ್ಕೆ ಪೋಪಾತನ ಮುಂದೆ ಸೂರ್ಯ[12]ಮಂಡಲದಿಂ ಉಲ್ಕು ಬಿದ್ದಂತೆ ತೋಱದೊಡೆ ಆತಂ ಕಾಳೆಗಮಂ ಗೆಲ್ವಂ. ಉಲ್ಕು ಎತ್ತ ಮುಖಮಾಗಿ ಬಿೞ್ದೊಡತ್ತ ಮುಖಮಾಗಿ ಕಾದುತಿರಲ್ ಆ ಕಾಳೆಗ[13]ಮಂ ಗೆಲ್ವಂ—೨೧.

1. ವಂದೊಗೆ. 2. ಮಾಡಾಚಾರ್ಯ, ಚಾಡಾಚಾರ್ಯ. 3. ಬಲದೊಳ್ಪಡೆಗೆಯಾಯಿಗಶುಭಂ. 4. ಡಲತವಾಗಿ. 5. ಯಾಹತ. 6. ಪೆಸರ್ 7. ಎಂಬ ಪೆಸರಯ್ದಱಿಂದೆ ಉಲ್ಕುಗಳ್ ಪೇೞಿಸಿಕೊಳ್ವುವು. 8. ಜಾತಿಗಳ್ಗೆ ಪಿಂದೆ ಪೇೞ್ದ ದಿಕ್ಕುಗಳು ಪಿಡಿದುಕ್ರಮದಿಂದೆ ಅಪಾಯ. 9. ಕಾಲಕಾಲಂಗಳಲ್ಲಿ ವೃಷ್ಟಿಗಳಾಗವು. 10. ಮಾಂಧಾ, ಮಂಡಾ. 11. ಅಲ್ಲಿ ಚಂದ್ರ ನಡೆಯುತ್ತಿರಲು. 12. ಮಂಡಲಂ. 13. ದೊಳ್‌ಗೆಲವುಂಟು.



ಚಂ|| ಪ್ರತಿಮೆಯ ಮೇಲೆ [1]ಬೀೞುತಿರಲುಲ್ಕು ಮದುಂ ವಿಷಯಕ್ಕೆ ಶಸ್ತ್ರದೊಳ್ |
[2]ಕ್ಷಿತಿರತಿಗಳ್ಗೆ ಮತ್ತೆ ಕಡೆಗಾಡಿನೊಳೊಕ್ಕಲಿಗಂಗೆ ಗೇಹಸಂ ||
ತತಿಯೊಳಧೀಶ್ವರಂಗೆ ತುಱುಪಟ್ಟಿಗಳೊಳ್ ಪಶುಸಂಕುಳಕ್ಕೆ ಪೂ |
ಜಿತ ಕುಜದೊಳ್ ಪ್ರಸಿದ್ಧಪುರುಷಂಗೆ ವಿನಾಶಮನುಂಟುಮಾಡುಗುಂ || ೨೨ ||

ಚಂ|| ಸರಸಿಜಮಿತ್ರರಶ್ಮಿ ಪವನಾಹತಿಯಿಂದಮನೇಕವರ್ಣದಿಂ |
ಪೊರೆದ [3]ಮುಗಿಲ್ಗಳುಳ್ಳ ನಭದೊಳ್ ಧನುರಾಕೃತಿಯಾಗಿ ತೋರ್ಪೊಡಂ ||
[4]ಸುರಧನುವೆಂಬರಂತದನನಂತವಿಷಾಹಿಯ [5]ಸುಯ್ಯುಮೆಂಬರಾ |
ಸುರಧನು ಪೋಪವಂಗಿದಿರೊಳಾದೊಡೆ ಹಾನಿಯನುಂಟುಮಾಡುಗುಂ || ೨೩ ||

ಕಂ|| ಎಡೆವಱಯದೆ ನೆಲವತ್ತಿರ್ದೆ |
ಕಡುನುಣ್ಪಂ ಪಲವು ಬಣ್ಣಮಂ ಪಡೆದೆರಡಾ ||
ದೊಡೆ ಮನುಲೋಕದಲ್ಲಿ ಯೊಗೆದಿ |
ರ್ಪೊಡಮಾ ಸುರಧನು ಶುಭಪ್ರದಂ ವೃಷ್ಟಿಕರಂ || ೨೪ ||

ಟೀ ಪೇೞ್ದಂತಹ ಉಲ್ಕುಗಳ್ ಗ್ರಾಮಾಧಿ ದೇವತೆಗಳ ಪ್ರತಿಮೆಗಳ ಮೇಲೆ ಬೀೞಲ್ ಆ ದೇಶಕ್ಕೆ ಅಪಾಯಮಪ್ಪುದು, ಆಯುಧಂಗಳ ಮೇಲೆ ಬೀೞಲ್ ಅರಸುಗಳ್ಗೆ ಕಷ್ಟಂ, [6]ಹೊಲದೊಳಗೆ ಬಿೞ್ದೊಡೆ ಆ ಗೆಯ್ದ ಒಕ್ಕಲಿಗಂಗೆ ಅಪಾಯಮಪ್ಪುದು, ಮನೆಯ ಮೇಲೆ ಬಿೞ್ದೊಡೆ ಆ ಮನೆಯ ಒಡೆಯಂಗೆ ಕಷ್ಟಂ, ಪಟ್ಟಿಗಳ ಮೇಲೆ ಬಿೞ್ದೊಡೆ ಆಕಳುಗಳ್ಗೆ ಕಷ್ಟಂ, ಗ್ರಾಮಂಗಳಲ್ಲಿ ಕಟ್ಟೆಗಳಂ ಕಟ್ಟಿರ್ದ ವೃಕ್ಷಂಗಳ ಮೇಲೆ ಬೀೞಲ್ ಆ ದೇಶದೊಳಗೆ ಹೆಸರುಳ್ಳ ಪ್ರಾಪ್ತಪುರುಷಂಗೆ ಹೀನಂ, ಈ ಪೇೞ್ದ ಸ್ಥಾನಂಗಳಲ್ಲಿ ಉಲ್ಕು ಬಿೞಲ್ ಈ ಪೇೞ್ದಂತಹವರ್ಗೆ ಅಪಾಯಂಗಳಂ ಪೇೞ್ವುದು—೨೨.

ಟೀ|| ಸೂರ್ಯರಶ್ಮಿಗಳ್ ಗಾಳಿಯ ಹೊಯ್ಲಿನಿಂದೆ ಅನೇಕ ವರ್ಣಮಾಗಿ ಮೋಡಮಾಗಿರ್ದ ಠಾವಿನಲ್ಲಿ [7]ಇಂದ್ರಧನುವಂತೆ ತೋಱಲ್ ಇಂದ್ರಧನುವೆಂಬರ್. ಅನಂತಫಣಾಮಣಿ ರತ್ನದ ಕಾಂತಿ ಆತನ ಉಸಿರಿಂದೆ ರಶ್ಮಿಯಾಗಿ ತೋಱಲ್ ಅದನುಂ ಇಂದ್ರಧನುವೆಂಬರ್. ಈ ಇಂದ್ರಧನುಗಳ್ ಪಯಣಂ ಪೋಪಾತಂಗೆ ಇದಿರೊಳಾದೊಡೆ ಆತಂಗೆ ಅಪಾಯಮಂ ಪೇೞ್ವುದು.

ಟೀ|| ಆ ಯಿಂದ್ರಧನುವೆಡೆವಱಯದೆ ಭೂಮಿಯಂ ಬಿಡದೆ ನುಣ್ಪಾಗಿ ಪಲವು ಬಣ್ಣಮಾಗೆ, ಆಕಾಲದಲ್ಲಿ ಆ ಇಂದ್ರಧನು ಪ್ರತಿಬಿಂಬಿಸಿ ಎರಡಾಗಿ ಮನುಷ್ಯಲೋಕದಲ್ಲಿ ತೋಱದೊಡೆ ಆ ಇಂದ್ರಧನು ಮಂಗಳಮಂ ಪೇೞ್ವುದು ಸುವೃಷ್ಟಿಯಂ ಮಾಡುವುದು—೨೪.

1. ಬೀೞೆ ಉಲ್ಕು. 2. ಕ್ಷಿತಿಪತಿಗೂರೊಳೆ. 3. ಗಿಲೊಲುಳ್ಳ. 4. ಧನುವೆಂದವಂಶಪನವನೆಂ. 5. ಸೂರ್ಯ. 6. ಊರೊಳಗೆ ಹೊಲದೊಳಗೆ. 7. ಧನುವಾಗಿ.

ಕಂ|| ಸುರಧನು ಪಾಟಳ ರುಚಿಯಾ |
ಗಿರೆ ಸಮರಂ ಪೀತವರ್ಣಮಾಗಿರೆ ವೈಶ್ಯಾ ||
ನರಭಯಮಂತದು ಕರಿದಾ |
ಗಿರೆಯುಂ ಧಾರಿಣಿಗೆ ಕೂಡೆ ಪೆರ್ಬಸಮಕ್ಕುಂ || ೨೫ ||

ಮ||ಸ್ರ|| ಮರನೊಳ್ ದೇವೇಂದ್ರಚಾಪಂ ನೆಗೆದಿರೆ ಬೆಳೆಗುಂ [1]ಧಾತ್ರಿಯೊಳ್ ಮುಂದೆ ಸಸ್ಯೋ |
ತ್ಕರನಾಶಂ ವಾರಿಯೊಳ್ ಪುಟ್ಟಿರೆ ಬಱ[2]ನೊಗೆಗುಂ ವೃಷ್ಟಿ ಸಂಪೂರ್ಣಮಾಗು ||
ತ್ತಿರೆ ಮೂಡಲ್ [3]ತೋರ್ಪೊಡಕ್ಕುಂ ಬಱನೆ ಬಱದೊಳಂ ತಾನದಾದಂದನೂನಂ |
ದೊರೆಕೊಳ್ಗುಂ ವೃಷ್ಟಿ ಮೇಣ್ ಪಶ್ಚಿಮ[4]ದೆಸೆಯೊಳೆ ತಾನಾದೊಡಂ ವೃಷ್ಟಿಯಕ್ಕುಂ || ೨೬ ||

(ಅನ್ಯಗ್ರಂಥಂ)

ಕಂ|| ಕುಂದದೆ ಜ್ಯೇಷ್ಠಾಷಾಢೊ |
ಳೆಂದುಂ ಶ್ರಾವಣದೊಳೆಸೆಯೆ ವರುಣನ ದೆಸೆ[5]ಯೊಳ್ ||
ಇಂದಿರವಿಲ್ ತೋಱಲ್ ಮಱೆ |
ಸಂದಿಸೆ ಮಾಸತ್ರಯಂಬರಂ ಬಱನಕ್ಕುಂ || ೨೭ ||

(ಸ್ವಗ್ರಂಥಂ)

ಮ|| ಇರುಳಿಂದ್ರಾಶೆಯೊಳಿಂದ್ರಚಾಪಮಿರೆ ಭೂಪಾಲರ್ಗೆ ಮೇಣ್ ತೆಂಕಲಾ |
ಗಿರೆ ಸೇನಾಪತಿಗಳ್ಗೆ ಪಶ್ಚಿಮ[6]ದೊಳಾಗಿರ್ದಂದು [7]ಸಾಮಂತರಾಂ ||
ತರ ವರ್ಗಕ್ಕೆ ಪೊದೆಬ್ದು ತೋಱೆ ಬಡ[8]ಗಲ್ ಮಂತ್ರಿಪ್ರಧಾನರ್ಗೆ ನೀ |
ಳ್ದಿರೆ ಕೋಣೋಳ್ ವಿದಿಶಾವನಿ [9]ಪ್ರಭೃತಿಗಳ್ಗಕ್ಕುಂ ಭಯಂ ನಿಶ್ಚಯಂ || ೨೮ ||

---

ಟೀ|| ಆ ಯಿಂದ್ರಧನು ಬಿಳಿದು ಕೆಂಪು ಈ ಯೆರಡು ವರ್ಣಂಗೂಡಿದ ಬಣ್ಣಮಾಗಿರ್ದೊಡೆ ಕಾಳೆಗಮಂ ಪೇೞ್ವುದು. ಪೊಂಬಣ್ಣಮಾಗಿರ್ದೊಡೆ ಕಿರ್ಚ್ಚಿನ ಭಯಮಂ ಪೇೞ್ವುದು, ಕೃಷ್ಣವರ್ಣಮಾಗಿ ತೋಱಿದೊಡೆ ಭೂಮಿಗೆ [10]ಪೆರ್ಬಸಮಂ (ದೊಡ್ಡ ಬಱಮಂ) ಪೇೞ್ವುದು—

ಟೀ|| ಮರದ ಮೇಲೆ ಇಂದ್ರಧನುಸ್ಸು ತೋರಲ್ ಬೆಳಸು ಚೆನ್ನಪ್ಪುದು. ಭೂಮಿಯ ಮೇಲೆ ತೋಱಿದೊಡೆ ಸಸಿಗಳ್ಗೆ ಕೇಡಪ್ಪುದು. ಉದಕದ ಮೇಲೆ ಇಂದ್ರಧನುಸ್ಸು ತೋಱಿದೊಡೆ ಬಱನಕ್ಕುಂ ಮಱೆ ಸುರಿವಾಗಳಿಂದ್ರಧನು ಮೂಡಿದೊಡೆ ಮಱೆ ತೆಗೆವುದು, ಮಱೆಯಿಲ್ಲದ ವೇಳೆಯಲ್ಲಿ ಇಂದ್ರಧನು ಮೂಡಲ್ ಮಱೆಯುಪ್ಪುದು. ಪಡುವಲ್ ಇಂದ್ರಧನು ಮೂಡೆ ಮಱೆಯಕ್ಕುಂ—೧೬..

ಟೀ|| ಇಂದ್ರಧನು ಜ್ಯೇಷ್ಠಾಷಾಢ ಶ್ರಾವಣಂ ಈ ಮೂಱು ಮಾಸಗಳಲ್ಲಿ ಪಡುವಣ ದಿಕ್ಕಿನಲ್ಲಿ ಮೂಡಿದೊಡೆ ಮೂಱು ತಿಂಗಳ ಪರ್ಯಂತಂ ಬಱಸುವುದು—೧೭.

ಟೀ|| ರಾತ್ರಿಯಲ್ಲಿ ಇಂದ್ರಧನು ಮೂಡಣ ದಿಕ್ಕಿನಲ್ಲಿ ತೋಱಲ್ ಅರಸುಗಳ್ಗೆ ಭಯಮಂ

---

1. ರಾತ್ರಿಯೊಳ್. 2. ನಲೆಗುಂ, ನೊಲೆಗುಂ. 3. ತೋರ್ಪಕ್ಕುಂಬಱೆವಱದೊಳಂತಾನದಂ ನಂದನೂನಂ. 4. ದೆಸೆಯೊಳಂತಾದೊಡಂ. 5. ಯೊಳನಿಂದ ಕೊವಿಂದ ಮಱೆಗಳ್, ಯೊಳಗಿಂದ್ರಧನು ತೋಱೆ ಮಱೆಗಳ್. 6. ಳಾದಂದು ಸಾಮಂತರಕುಲವರ್ಗರ್ಗೆ. 7. ಟೀಕೆಯಂತೆ 'ಸಾಮಂತಬೇಹರ ವರ್ಗಕ್ಕೆ' ಎಂದಿರಬಹುದು. 8. ಗಲುಂ. 9. ಪ್ರಪ್ರತಿ, ಪ್ರಕೃತಿ. 10. ಉಬ್ಬಸಮಂ.



ಮ|| ತರದಿಂ[1]ಚಾಪ ಮಯೂರ ತಾರ [2]ತಿಳಗೋಕ್ಷೀರಾಬ್ಜ ನೀರೋಪಮಂ |
ದೊರೆಕೊಳ್ಗುಂ ಶಶಿ[3]ಭಾನುಗಳ್ಗೆ ಸಮವರ್ಣಂ ಶ್ವೇತವರ್ಣಂ ಪೊದ ||
ಱ್ದಿರೆ ಸುಸ್ನಿಗ್ಧತೆ ಭಿನ್ನವೃತ್ತಮೆನೆ ಚಂದ್ರಾದಿತ್ಯರೊಳ್ ತೋರ್ಪೊಡಂ |
ಪರಿವೇಷಂ ಶುಭದಂ ಸುಭಿಕ್ಷಜನಕಂ ಶ್ರೀ ಶಿಷ್ಟಕಲ್ಪದ್ರುಮಾ || ೨೯ ||

ಕಂ|| ನವಿಲ ಕೊರಲಂತೆ ಪರಿವೇ |
ಷವರ್ಣಮಾದಂದು ವೃಷ್ಟಿ ಬಹುವರ್ಣದೆ ಭೂ ||
ಪವಧಂ [4]ಸಮರಂ ಸುರಚಾ |
ಪವರ್ಣದಿಂ ಪೊಗೆಯ ವರ್ಣದಿಂ ಭಯಮಕ್ಕುಂ || ೩೦ ||

ಚಂ|| ಉದಯದಲತ್ತಲಸ್ತಮಯಮಪ್ಪಿನ [5]ಮಿಂದ್ವಿನಮಂಡಲಂಗಳಂ |
ಪುದಿದಿರೆ ಭಿನ್ನಮಾಗಿರೆ [6]ವಿರೂಕ್ಷಮದಾಗಿರೆ ಶುಕ್ತಿವರ್ಣದಂ ||
ದ[7]ದಿನಿರೆ ಭಂಡಿಯಂತಿರೆ ಶರಾಸನದಂತಿರೆ ಮೇಣ್ ತ್ರಿಕೋಣರೂ |
ಪದಿನಿರೆ ರೂಪಮಂದು ಪರಿವೇಷ[8]ಮಶೇಷ ಜಗದ್ವಿನಾಶನಂ || ೩೧ ||

---

ಪೇೞ್ವುದು, ತೆಂಕಲ್ ಮೂಡಿದೊಡೆ [9]ಪಾಡಿ ಮುಖಿಗೆ ಭಯಮಂ ಪೇೞ್ವುದು. ಪಡುವಲ್ ಮೂಡಿದೊಡೆ [10]ಸಾಮಂತರ್ಗಂ ಬೇಹಾರಿಗಳ್ಗಂ ಕೇಡಂ ಪೇೞ್ವುದು, ಬಡಗಲ್ ಮೂಡಿದೊಡೆ ಮಂತ್ರಾಲೋಚನೆಯುವರ್ಗಂ ಪ್ರಧಾನಿಗಳ್ಗಂ ಕಷ್ಟಮಂ ಪೇೞ್ವುದು, ಆಗ್ನೇಯ, ನೈಋತ್ಯ ವಾಯುವ್ಯೇಶಾನ್ಯ ವಿದಿಕ್ಕುಗಳಲ್ಲಿ ಮೂಡಿದೊಡೆ ಆ ದಿಕ್ಕುಗಳೊಳಿರ್ಪ ಪ್ರಜೆಗಳ್ಗೆ ಕೇಡಂ ಪೇೞ್ವುದು. ಈ ಮರ್ಯಾದೆಯಲ್ಲಿ ಇಂದ್ರಧನು ಮೂಡಲ್ ಈ ಪೇೞ್ದವರ್ಗೆ ಭಯಮಂ ಪೇೞ್ವುದು—೨೮.

ಟೀ|| ತಱುವಾಯಿಂದೆ [11]ಚಾಪವರ್ಣಂ, [12]ನವಿಲಬಣ್ಣಂ, [13]ಬೆಳ್ಳಿಯ ವರ್ಣಂ, [14]ಎಳ್ಳಿನ ವರ್ಣಂ, ಹಾಲಿನ ವರ್ಣಂ, [ಶಂಕದ ವರ್ಣಂ], ನೀರ ವರ್ಣಂ ಈ ಮರ್ಯಾದೆಯಲ್ಲಿ ಸೂರ್ಯಚಂದ್ರರ್ಗೆ ಪರಿವೇಷಂ ತೋಱುವುವು, ಆ ಚಂದ್ರಸೂರ್ಯರ್ಗೆ ಅವಱ ಸವರ್ಣವಾಗಿ ತೋಱಲ್ ಅಲ್ಲಾ ಶ್ವೇತವರ್ಣವಾಗಿ ನಯವಾಗಿ ವೃತ್ತವಾಗಿಕೊಂಡು ಬಾಗಿಲಾಗಿ ತೋಱಲ್ ಆ ಪರಿವೇಷಂ ಲೇಸಂ ಪೇೞ್ವುದು, ಸುಭಿಕ್ಷಮಪ್ಪುದು—೨೯.

ಟೀ|| ಪರಿವೇಷಂ ನವಿಲ ಕೊರಲ ವರ್ಣಮಾಗಿ ತೋಱಲ್ ಮಱೆಯಕ್ಕುಂ, ಪಲವು ವರ್ಣದಿಂ ತೋಱಲ್ ಅರಸುಗಳ್ಗೆ ಅಪಾಯಮಂ ಪೇೞ್ವುದು, ಸುರಧನುವಿನ ವರ್ಣಮಾಗಿರಲ್ ಕಾಳೆಗಮಂ ಪೇೞ್ವುದು, ಪೊಗೆಯವರ್ಣಮಾಗಿರಲ್ ಭಯಮಂ ಪೇೞ್ವುದು—೩೦.

ಟೀ|| ಉದಯಕಾಲದಲ್ಲಾಗಲಿ, ಅಸ್ತಮಯದಲ್ಲಾಗಲಿ ಚಂದ್ರಸೂರ್ಯರ್ಗೆ ಪರಿವೇಷಂ ಬಟ್ಟೆತ್ತಾಗಿ ಭಿನ್ನವಿಲ್ಲದೆ ತೋಱುಹ, ಭಿನ್ನವಾಗಿ ತೋಱುಹ, ನಯವಲ್ಲದೆ ತೋಱುಹ, ಭಂಡಿಯಂತೆ ತೋಱುಹ, ಬಿಲ್ಲಿನಂತೆ ತೋಱುಹ, ಅಲ್ಲಾ ಗೊಂಟಾಗಿ ತೋಱುಹ – ಈ ಮರ್ಯಾದೆಯಲ್ಲಿ ಆ ಪರಿವೇಷಂ ಕಾಣಬಂದೊಡೆ ಎಲ್ಲಾ ಲೋಕಂಗಳ್ಗಂ ಭಯಮಂ ಪೇೞ್ವುದು—೩೧.

---

1 ಚಾಪ, ಭಾಸ. 2 ತಿಲಕ್ಷೀರ ರಂಭೋಪಮಂ, ನೀತೋಪಮಂ. 3 ರಾ(ವಾ)ಜಿ. 4 ಸುರದಸುರಚಾಪ ವರ್ಣದಿಂ ಭಯಮಕ್ಕುಂ. 5 ಚಂದ್ರ, ರವಿ. 6 ವಿರೂಪ. 7 ದೆನೆಜಿ. 8 ಮಹೀಶ. 9 ಸೇನಾಪತಿಗೆ ಹೀನಂ.10 ಸಾಮಂತ ಬೇ(ವ್ಯವ)ಹಾರಿಗಳ್ಗೆ. 11 ಕ್ರಮದಿಂದೆ ಹಲವು ಬಣ್ಣಂ. 12 ನೀಲ. 13 ಬಿಳಿಪು. 14 ಎಳ್ಳೆಣ್ಣೆಯ.

ಕಂ|| ಪರಿವೇಷಮಾಗೆ ಮೃಗಪ|
ಕ್ಷಿರಾಜಿಗಳ್ಕರೆಯೆ ದೀಪ್ತದೊಳ್ ಸಂಜೆಗಳೊಳ್ ||
ದೊರೆಕೊಳೆ ಭಯವೊದವುಗುಮದ|
ನೊರಸುವೊಡುಳ್ಕಾದಿಗಳ್ ಧನೇಂದ್ರರ್ ಮಡಿಗುಂ || ೩೧ ||

ಮ||ಸ್ರ|| ಪರಿವೇಷಂ ಸೂರ್ಯನೊಳ್ [1]ಮೇಣ್ ಶಶಿಯೊಳೊಗೆಯೆ ತನ್ಮಧ್ಯದೊಳ್ ಭೂಮಿಜಂ ವೊ|
ಕ್ಕಿರೆ ದಂಡಾಧೀಶ ಸೇನಾಪತಿ ನೃಪಲಯ[2]ಮಸ್ತ್ರಾಗ್ನಿಯಿಂದಂ ಭಯಂ ಮೇ ||
ಣಿರೆ ಸೌಮ್ಯಂ ಲೇಖಕಸ್ಥಾವರಸಚಿವ ಶುಭಪ್ರಾಪ್ತಿವೃಷ್ಟಿಪ್ರದಂ ಮೇ|
ಣಿರೆ ದೇವೇಜ್ಯಂ ಧರಿತ್ರೀಪತಿ ಸಚಿವಪುರೋಧಃಕ್ಷಯಂ ತಾನದಕ್ಕುಂ || ೩೨ ||

ಮ|| ಭೃಗುಪುತ್ರಂ ಪರಿವೇಷದೊಳ್ ಪುಗೆ ನೃಪ ಸ್ತ್ರೀ[3]ಯಾದಿಗಳ್ಗಾದಮ|
ಚ್ಚಿಗಮಕ್ಕುಂ ಪಸವಲ್ಲಿ ಸೌರಿಯಿರೆ ಶೂದ್ರಕ್ಷುದ್ರಧಾನ್ಯಕ್ಕೆ ಕೇ ||
ಡೊಗೆಗುಂ ಪೆರ್ಮೞೆ[4]ಯಕ್ಕುಮಲ್ಲಿರೆ ತಮಂ ಕಾಂತಾಜನಂ [4]ಗರ್ಭಮ|
ಚ್ಚಿಗಮಕ್ಕುಂ ರುಜೆಯಲ್ಲಿ ಕೇತುವಿರೆ ನಾನಾ ಬಾಧೆಗಳ್ ಪುಟ್ಟುಗುಂ || ೩೩ ||

ಕಂ|| ಪರಿವೇಷದೊಳ್ ಗ್ರಹದ್ವಯ|
ಮಿರೆ ಕದನಂ ತ್ರಿಗ್ರಹಂಗಳಿರೆ ಪಸವುಂ ನಾ ||
ಲ್ಕಿರೆ ನೃಪವಧೆ[5]ಯಯ್ದುಮವಂ|
ತಿರೆ ಸಾಕ್ಷಾತ್ಪ್ರಳಯ[6]ಮೆಂತುಟಂತುಟಿಯಕ್ಕುಂ || ೩೪ ||

---

ಟೀ|| ಸೂರ್ಯಚಂದ್ರರ್ಗೆ ಪರಿವೇಷಮಾದಾಗಳ್ ಮೃಗಂಗಳ ಪಕ್ಷಿಗಳ ಸಮೂಹಂ ಸೂರ್ಯನಿರ್ದ ದಿಕ್ಕಿನಲ್ಲಿ ಉದಯಾಸ್ತಮಯಂಗಳಲ್ಲಿ ಕರೆಯಲ್ ಭೀತಿಯಂ ಪೇೞ್ವುದು, ಪರಿವೇಷಮಾದಾಗಳ್ ಉಳ್ಕಿ ಬಿೞ್ದೊಡೆ ಧನವುಳ್ಳವರ್ಗೆ ಕೇಡಂ ಪೇೞ್ವುದು—೩೧.

ಟೀ|| ಸೂರ್ಯಚಂದ್ರರ್ಗೆ ಪರಿವೇಷಮಾದಲ್ಲಿ ಆ ಪರಿವೇಷದೊಳಗೆ ಮಂಗಳನಿರಲ್ ಪ್ರಧಾನಂಗೆ, ಪಾಡಿವಳಿಗೆ ಅರಸುಗಳ್ಗೆ ಶಸ್ತ್ರಂಗಳಿಂದಂ ಅಗ್ನಿಯಿಂದಂ ಭಯಮಂ ಪೇೞ್ವುದು ಅಲ್ಲಾ ಆ ಪರಿವೇಷದೊಳಗೆ ಬುಧನಿರಲ್ ಕರಣಿಕ ಸಸ್ಯಾದಿ ಸ್ಥಾವರ ಪ್ರಧಾನರ್ಗೆ [7]ಒಳ್ಳಿತ್ತು. ಮೞೆಯಕ್ಕುಂ, ಅಲ್ಲಾ ಆ ಪರಿವೇಷದೊಳಗೆ ಬೃಹಸ್ಪತಿಯಿರ್ದೊಡೆ ಅರಸಿಂಗೆ, ಪ್ರಧಾನಂಗೆ, ಪುರೋಹಿತಂಗೆ ಈ ಮೂವರ್ಗಪಾಯಮಂ ಪೇೞ್ವುದು—೩೨.

ಟೀ|| ಆ ಪರಿವೇಷದೊಳಗೆ ಶುಕ್ರನಿರಲ್ ಅರಸುಗಳ ರಾಣಿವಾಸಂಗಳ್ಗೆ ಅಚ್ಚಿಗಮಂ ಪೇೞ್ವುದು. ಆ ಪರಿವೇಷದೊಳಗೆ ಶನಿಯಿರಲ್ ಶೂದ್ರರ್ಗೆ ಕೀೞುಧಾನ್ಯಂಗಳ್ಗೆ ಕೇಡಂ ಪೇೞ್ವುದು. ಆ ಪರಿವೇಷದೊಳಗೆ ರಾಹುವಿರ್ದೊಡೆ ಮಿಗಿಲಾಗಿ ಮೞೆಯಂ ಪೇೞ್ವುದು. ಸ್ತ್ರೀಯರ್ಗೆ ಗರ್ಭಮಾದೊಡೆ ಆ ಗರ್ಭಕ್ಕೆ ರೋಗಂಗಳ್ ಪುಟ್ಟುಗುಂ. ಆ ಪರಿವೇಷದಲ್ಲಿ ಕೇತುವಿರ್ದೊಡೆ ನಾನಾ ಬಾಧೆಗಳ್ ಪುಟ್ಟುಗುಂ—೩೩.

ಟೀ|| ಆ ಪರಿವೇಷದೊಳಗೆರಡುಗ್ರಹಂಗಳಿರ್ದೊಡೆ ಜಗಳಂಗಳ್ ಪುಟ್ಟುವುವು. ಮೂಱು

---

1 ನೊಳ್ದಸಿಯೊಳೊಗೆಯೆ ತನ್ಮದೊಳ್. 2 ಲಯಶಸ್ತ್ರಾ, ನೃಪತಿಗೆ ಶಸ್ತ್ರಾ. 3 ಯಾಯಿಗ. 4 ಮಕ್ಕಗುಮಕ್ಕುಂ, ಮಪ್ಪಗು ಮಲ್ಲಿಂ. 5 ಯಯ್ದಿರೆಳಿಗೆ ಸಾ, ಯಯ್ದುೞೊಳಿಂತಿರೆ. 6 ಮಂತುಟಿಯಕ್ಕುಂ. ಒಳ್ಳಿತ್ತು ಭಯಮಂ ಪೇೞ್ವುದು.



ಉ|| ಆ ಪರಿವೇಷಮರ್ಕಶಶಿಬಿಂಬಮನಂತೆರಡಾಗಿ ಸುತ್ತಿ ಸೇ|
ನಾಪತಿ ಸಾಗುಮಂತದನೆ ಮೂವಳಸಾಗೆ[1]ಕುಮಾರನಾಶನಂ ||
ಭೂಪವರಂ ಗ್ರಹಕ್ಕೆ ಪರಿವೇಷಮದಾಕ್ಷಣ[2]ದೊಳ್ ತದೀಯ ದೋ|
[3]ಷಾಪಹಮೆಂಗೆ ಕೇತುವೊಗೆದಂದು[4]ವರಾಹಸುಸಂಹಿತೋಕ್ತಿಯಿಂ || ೩೫ ||

ಮ||ಸ್ರ|| ಪ್ರತಿಸೂರ್ಯಂ ಸೂರ್ಯನಿಂದಂ ಬಡಗಲೊಗೆಯೆ ವೃಷ್ಟಿಪ್ರದಂ ತೆಂಕಲಾದಂ|
ದು ತಗುಳ್ಗುಂ ಗಾಳಿ[5]ಸಾರ್ದಿರ್ಕೆಲದೊಳೊಗೆಯೆ ಕೊಳ್ಗುಂ ಮಹಾವೃಷ್ಟಿ ಮೇಣಾ ||
ಗೆ ತದುರ್ವೀಪಾಳನಾಶಂ ಕೆಳಗೆ ನಿಲೆ ಜನಂ ಪೊಂದುಗುಂ ಮಾಲೆಗೊಂಡಂ|
ತೆ ತಱಂಗೊಂಡಿರ್ಪೊಡಕ್ಕುಂ ರುಜೆ[6]ನೃಪಮರಣಂ ಬೇಡಬಿಂದಕ್ಕಪಾಯಂ || ೩೬ ||

ಮ|| ಋತುವರ್ಣಕ್ರಮದಿಂದ[7]ವೊಂದಿದ ದಿನಂ ನೀಲಾಭದಿಂ ಸ್ನಿಗ್ಧಮ|
ಚ್ಛಕರಂ ಪಾಂಡರಮಾಗಿ ಕಣ್ಗೆಸೆಯೆ ಮೇಣ್ ಬೆಳ್ಪಾಗೆ ವೈಡೂರ್ಯದಾ ||
ಕೃತಿಯಿಂ ತತ್ಪ್ರತಿಸೂರ್ಯನಲ್ಲಿ[8]ಶುಭದಂ ಪೀತತ್ವದಿಂ ವ್ಯಾಧಿ ಮೇ|
ಣತಿ[8]ರಕ್ತಚ್ಛವಿಯಿಂದಮುಗ್ರಸಮರಂ ತಾನಕ್ಕು ಮಾದೇಶದೊಳ್ || ೩೭ ||

---

ಗ್ರಹಂಗಳಿರ್ದೊಡೆ ಬಱನಂ ಪೇೞ್ವುದು. ಆ ಪರಿವೇಷದೊಳಗೆ ನಾಲ್ಕುಂ ಗ್ರಹಂಗಳಿರ್ದೊಡೆ ಅರಸುಗಳ್ಗೆ ಅಪಾಯಮಂ ಪೇೞ್ವುದು. ಆ ಪರಿವೇಷದೊಳಗೆ ಅಯ್ದು ಗ್ರಹಂಗಳಿರ್ದೊಡೆ ದೇಶಕ್ಕೆ ಪ್ರಳಯಕಾಲದಂತೆ ಕೇಡಂ ಸೂಚಿಸುವುವು—೩೪.

ಟೀ|| ಸೂರ್ಯಚಂದ್ರರ್ಗೆ ಎರಡು ಸುತ್ತಾಗಿ ಪರಿವೇಷಮಾಗಲ್ ಪಾಡಿವಳಿಗೆ ಅಪಾಯಮಂ ಪೇೞ್ವುದು, ಮೂಱು ಸುತ್ತಾಗಿವರೆ ಅರಸುಕುಮಾರವರ್ಗಕ್ಕೆ ಅಪಾಯಮಂ ಪೇೞ್ವುದು. ಗ್ರಹಂಗಳ್ಗೆ ಪರಿವೇಷಮಾದಂದು ಕೇತು ಹುಟ್ಟಿದೊಡೆ ಆ ಕ್ಷಣದೊಳಗೆ [9]ದೋಷಂಗಳ್ ಪೋಪುವು. ಇದು ವರಾಹ ಸಂಹಿತೆಯ ಮತದಿಂದೆ ಪೇೞ್ಪುದು—೩೫.

ಟೀ|| ಪ್ರತಿ ಸೂರ್ಯಂ ಸೂರ್ಯನಿಂದಂ ಬಡಗಲ್ ತೋಱಲ್ ಮೞೆಯಪ್ಪುದು, ತೆಂಕಲಾದೊಡೆ ಗಾಳಿ ಘನಮಪ್ಪುದು. ಆ ಸೂರ್ಯನ ಎರಡು ದಿಕ್ಕಿನಲ್ಲಿ ಪ್ರತಿಸೂರ್ಯಂ ತೋಱಿದೊಡೆ ಅತಿವೃಷ್ಟಿಯಪ್ಪುದು. ಆ ಸೂರ್ಯನಿಂದಂ ಮೇಲೆ ಪ್ರತಿಸೂರ್ಯಂ ತೋಱಿದೊಡೆ ಆ ದೇಶದ ಅರಸಿಂಗೆ ಮರಣಮಂ ಪೇೞ್ವುದು. ಆ ಸೂರ್ಯನಿಂದಂ ಕೆಳಗೆ ಪ್ರತಿಸೂರ್ಯಂ ತೋಱಿದೊಡೆ ಪ್ರಜೆಗಳ್ಗೆ ಅಪಾಯಮಂ ಪೇೞ್ವುದು. ಮಾಲೆಗೊಂಡ ಮರ್ಯಾದೆಯಲ್ಲಿ ಸೂರ್ಯನಿಂದಮೆಲ್ಲಾ ಕಡೆಗುಂ ಪ್ರತಿಸೂರ್ಯರ್ ತೋಱಿದೊಡೆ ಆ ದೇಶದ ಪ್ರಜೆಗೆ ಅತಿ ರೋಗಮಂ ಪೇೞ್ವುದು, ಅರಸರ್ಗೆ ಅಪಾಯಮಂ ಪೇೞ್ವುದು, ಕೀೞುಜಾತಿಯವರ್ಗೆ ಬಾಧೆಗಳ್ ಪೆರ್ಚುವುವು—೩೬.

ಟೀ|| ಆಱುಮೃತುಗಳ ವರ್ಣದಿಂದೆ ಪ್ರತಿ ಸೂರ್ಯಂ ನೀಲವರ್ಣಂ, ಬಿಳಿಯ ವರ್ಣಂ ವೈಡೂರ್ಯದ ಮರ್ಯಾದೆಯ ಬಿಳಿಯ ವರ್ಣಂ ಈ ವರ್ಣಂಗಳಾಗಿ ಮೂಡಲ್ ಪೊಳ್ಳಿತ್ತು,

---

1 ಕುಮಾರೇಶನನಾಶ, ಕುಮುದೇಶನೊಂದಿರಲ್. 2 ದೊಳ್ಕಿಳಿರ್ಯದೋ. 3 ಷಾವಹ. 4 ವರಾಹಶಂ. 5 ಯಕ್ಕುಂ ದ್ವಯ. 6 ನೃಪವರರ್ಗಂ ಬೇಡರಿಂದರ್ಕಪಾಯಂ, ಬೇಡಱಿಂದರ್ಕಪಾಯಂ. 7 ವೊಂದಿದಾನಂ ಪೋಲಿಪ್ಪಸುಸ್ನಿಗ್ಧ. 8 ರಕ್ತಕ್ಷಮದಾಗೆ. 9 ತೋಱುವುವು.

ಕಂ|| ಸಿತರಕ್ತ ಪೀತಕೃಷ್ಣ |
ದ್ಯುತಿಯಿಂ ವಿಪ್ರಾದಿ ಜಾತಿಯೊಳ್ ಪುಟ್ಟಿಸುಗುಂ ||
[1]ಕ್ಷತಿಯಂ ಗಂಧರ್ವಪುರಂ |
ಹುತವಹ ಧೂಮಾಭವಾಗೆ ಬೇಡರ್ ಕಿಡುವರ್ || ೩೯ ||

ಮ|| ಸ್ರ|| ಮರಸರ್ಪಂ ಮೂಡೆ ಮೂಡಲ್ ನೃಪತಿಗೆ ಪಡುವಲ್ [2]ಮರ್ತ್ಯವರ್ಗಕ್ಕೆ ತೆಂಕಲ್ |
[3]ಧರಣೀಭೃದ್ದಂಡನಾಥಾಗ್ರಣಿಗೆ ಬಡಗ[4]ಲಂತಾ ಪುರೋಧಂಗಪಾಯಂ ||
ಮೊರೆಕೊಳ್ಗಂ ಸುತ್ತಲುಂ [5]ತೋಱಿದೊಡೆ ಜನಪಗಂ ನಾಡೆಯುಂ ಭೀತಿಯೆತ್ತಂ |
ಪಿರಿದಕ್ಕುಂ ಶಾಂತದೊಳ್ ತೋರ್ಪೊಡೆ ನೃಪತಿಜಯಂ ದೀಪ್ತದೊಳ್ ಭೂಪನಾಶಂ
|| ೪೦ ||

ಕಂ|| ಊರಿಂ ಬಡಗಲ್ ನೆಗೆದಂ |
ದೊರಱುವುದು ಪೊಳ್ತನೀಗುವೆಂತುಂ ಕೋಣೊಳ್ ||
ಕಾರುಕರ್ಗಕ್ಕುಂ ನೆರೆ ಸಂ |
ಹಾರಮನದ್ಭುತಮೆನಿಪ್ಪ ಗಂಧರ್ವಪುರಂ || ೪೧ ||

---

ಹೊಂಬಣ್ಣದಿಂ ಮೂಡಲ್ ವ್ಯಾಧಿಗಳ್ ಘನಮಪ್ಪುವು, ಕೆಂಪಾಗಿ ಮೂಡಲ್ [6]ಬಲ್ಗಾಳೆಗಮಪ್ಪುದು, ಈ ಪೇಳ್ದ ವರ್ಣಂಗಳಿಂದಮಾವದೇಶದಲ್ಲಿ ತೋಱಿದೊಡೆ ಆ ದೇಶದಲ್ಲಿ ಈ ಪೇಳ್ದ ಫಲಂಗಳಪ್ಪುವು—೩೮.

ಟೀ|| ಪ್ರತಿಸೂರ್ಯಂ ಮೂಡುವಾಗಲ್ ಬಿಳಿದಾಗಿ ಮೂಡಿದೊಡೆ ಬ್ರಾಹ್ಮಣರ್ಗೆ ಅಪಾಯಮಂ ಪೇಳ್ವುದು, ಕೆಂಪಾಗಿ ಮೂಡಿದೊಡೆ ಕ್ಷತ್ರಿಯರ್ಗೆ ಅಪಾಯಮಂ ಪೇಳ್ವುದು. ಹೊಂಬಣ್ಣವಾಗಿ ಮೂಡಿದೊಡೆ ವೈಶ್ಯರ್ಗೆ ಅಪಾಯಮಂ ಪೇಳ್ವುದು, ಕಪ್ಪಾಗಿ ಮೂಡಿದೊಡೆ ಶೂದ್ರರ್ಗೆ ಅಪಾಯಮಂ ಪೇಳ್ವುದು. ಭೂಮಿಯ ಮೇಲೆ ಯಿರ್ದ ಗಂಧರ್ವನಗರಂ ಹೊಗೆಯ ವರ್ಣವಾಗಿರ್ದುದಂ ಕಂಡೊಡೆ ಬೇಡಜಾತಿಗೆ ಅಪಾಯಮಂ ಪೇಳ್ವುದು—೩೯.

ಟೀ|| ಮರಸರ್ಪಂ ಮೂಡಲ್ ಮೂಡಿದೊಡೆ ಅರಸುಗಳ್ಗೆ ಅಪಾಯಮಂ ಪೇಳ್ವುದು, ಪಡುವಲ್ ಮೂಡಿದೊಡೆ ಪ್ರಜೆಗಳ್ಗೆ ಕೇಡಂ ಪೇಳ್ವುದು, ತೆಂಕಲ್ ಮೂಡಿದೊಡೆ ಸೇನಾಪತಿಗೆ ಅಪಾಯಮಂ ಪೇಳ್ವುದು. ಬಡಗಲ್ ಮೂಡಿದೊಡೆ ಪುರೋಹಿತಂಗಪಾಯಮಂ ಪೇಳ್ವುದು. ದಿಕ್ಕುವಿದಿಕ್ಕು ಎಲ್ಲಾ ಕಡೆಯುಂ ಮೂಡಿದೊಡೆ ಅರಸಿಂಗಮಾ ದೇಶಕ್ಕಂ ಮಿಗಿಲಪ್ಪ ಭೀತಿ ಪುಟ್ಟುವುದು. ಶಾಂತದಿಕ್ಕಿನಲ್ಲಿ ಮೂಡಿದೊಡೆ ಅರಸುಗಳ್ಗೆ ಜಯಮಪ್ಪುದು. ದೀಪ್ತದಿಕ್ಕಿನಲ್ಲಿ ಮೂಡಿದೊಡೆ ಅರಸುಗಳ್ಗೆ ಕೇಡಂ ಪೇಳ್ವುದು—೪೦.

ಟೀ|| ಗಂಧರ್ವಪುರಂ ತಾಸಿರ್ದ ಊರಿಂದೆ ಬಡಗದಿಕ್ಕಿನಲ್ಲಿ ತೋಱಿದೊಡೆ ಆ ಪೂರಿಂಗೆ ಕೇಡಂ ಪೇಳ್ವುದು, ಈಶಾನ್ಯದಿಕ್ಕಿನಲ್ಲಿ ಮೂಡೆ ಆ ಪೂರಿಂಗೆ ಲೇಸಂ ಪೇಳ್ವುದು. ಪಂಚಕಾರುಕರ್ಗೆ ಕೇಡಂ ಪೇಳ್ವುದು—೪೧.

1 ಕ್ಷಿತಿಯಂ. 2 ಮಾತ್ಯ ಮಾತ್ಯ. 3 ರಣಗ. 4 ಲಾಗಲ್. 5 ತೋರ್ಪೊಡೆ ಜನಪತಿಗಂ. 6 ಬೊಬ್ಬಿತಪ್ಪ(?).



ಕಂ|| ಬಲದೊಳ್ ತೋರ್ಪೊಡೆ ಜಯಮೆಡ |
ದೊಳಗಂ ರಿಪುಭಯಮನೇಕವರ್ಣದ ಗಗನ ||
ಸ್ಥಳದೊಳ್ [1]ಕೇತನಮಾಲಾ |
ಕಳಿತಂ ಮರಸರ್ಪನೊಗೆಯೆ ಕಾಳೆಗಮಕ್ಕುಂ || ೪೨ ||

ಕಂ|| ಚಂದ್ರಾದಿತ್ಯರುಮಂ ದಿವಿ |
ಜೇಂದ್ರನನುತ್ಸಾಹದಿಂದಮೊಸೆದರ್ಚಿಸಿ ಭೂ ||
ಪೇಂದ್ರಂ [2]ದ್ವಿಜರ್ಗಾದರ |
ದಿಂ ದ್ರವ್ಯಮನೀಯಲನೀಯುಮುಪಶಮಮಕ್ಕುಂ || ೪೩ ||

ಕಂ|| ಜನಪದದೊಳ್ ತೊಟ್ಟಗೆ ಕಿ |
ಚ್ಚರ್ ನಂದೆ ಮೇಣ್ ಪುಳ್ಳಿಯಿಲ್ಲದುರಿಯುತ್ತಿರೆ ಮೇ ||
ಣನಿಮಿತ್ತಮುರಿಯೆ ಪೃಥ್ವೀರ್ |
ಜನನಾಥರ್ ಸಾಗುವುವನ ದೇಶಂ ಕಿಡುಗುಂ || ೪೪ ||

ಚಂ|| ಅಸಿ ಮೊದಲಾದ ಕೈದು ನೆವಮಿಲ್ಲದೆ ತಾಮೊಱೆಯಿಂದಮುರ್ಚೆ ಕಂ |
[3]ಪಿಸಿ ದಸಿಗೆಯ್ಗೆ, ಸಿಳ್ದುರಿಯೆ [4]ಮೇಣ್ ಗೃಹತೋರಣಕೇತು ದೇವತಾ ||
ವಸಥಮುದಗ್ನಿ[5]ಯಿಲ್ಲದುರಿಯುತ್ತಿರೆ ಮೇಣವಱಲ್ಲಿ ಪೊಂದಗು |
[6]ರ್ವಿಸುವಿಸೆಗಂ ಸಿಡಿಲ್ ಪೊಡೆಯೆ ಮುಂದಱುದಿಂಗಳಗಕ್ಕುಮಾಹವಂ || ೪೫ ||

---

ಟೀ|| ಮರಸರ್ಪಂ ತಾಸಿರ್ದ ಊರಿಂದೆ ತೋಱಿದೊಡೆ ಆ ಊರ್ಗೆ ಗೆಲ್ಲಮಂ ಪೇಳ್ವುದು. ಅಲ್ಲಾ ಊರಿಂದ ಎಡದ ಭಾಗದಲ್ಲಿ ತೋಱಿದೊಡೆ ಆ ಪೂರ್ಗೆ ಶತ್ರುಗಳಿಂ [7]ಸೋಲಮಪ್ಪುದು. ಆಕಾಶದಲ್ಲಿ ನಾನಾಬಣ್ಣವಾಗಿ [8]ಧ್ವಜಾಕಾರಮಾಗಿ ಮರಸರ್ಪಂ ತೋಱಲ್ ಕಾಳೆಗಮಪ್ಪುದು—೪೨.

ಟೀ|| ಹಿಂದೆ ಪೇಳ್ದ [9]ಪ್ರತಿಸೂರ್ಯಂ, ಪರಿವೇಷಂ ಇಂದ್ರಧನುಸ್ಸು, ಮರಸರ್ಪಂ, ಗಂಧರ್ವನಗ(ಪು)ರಂ, ಧೂಮಕೇತು ಮೊದಲಾದ ಅದ್ಭುತಂಗಳ್ಗೆ ಅರಸಾದಾತಂ ಸೂರ್ಯಚಂದ್ರರ್ಕಳಂ ತತ್ತದ್ದೇವತೆಗಳ ಪ್ರತಿಮೆಗಳಂ ಮಾಡಿಸಿ ಆ ಪ್ರತಿಮೆಗಳಂ ಷೋಡಶೋಪಚಾರಗಳಿಂದಮರ್ಚಿಸಿ ಸಂತೋಷದಿಂದೆ ಬ್ರಾಹ್ಮಣರ್ಗೆ ಅನ್ನವಸ್ತ್ರಸುವರ್ಣ ಮೊದಲಾದ ದಾನಂಗಳಂ ಮಾಡಿ ಆ ಪ್ರತಿಮೆಗಳಂ ಬ್ರಾಹ್ಮಣರ್ಗೆ ಕುಡಲ್ ಉತ್ಪಾತಂಗಳ್ ಶಾಂತಂಗಳಪ್ಪುವು—೪೩.

ಟೀ|| ದೇಶದೊಳಗೆ ಉರಿಯುತ್ತಿರ್ದ ಕಿಚ್ಚು ಇರ್ದಂತಿರ್ದು ನಂದುಹ, ಆ ಕಿಚ್ಚು ಕಟ್ಟಿಗೆಯಿಲ್ಲದೆ ತನಗೆ ತಾನೆ ಉರಿಯುತ್ತಿರಲು (ಇರ್ದಂತಿರ್ದು ಉರಿ ತೋಱಿದೊಡೆ) ಆ ದೇಶದ ಅರಸು ಸಾವಂ, ಆ ದೇಶಮುಂ ಕಿಡುವುದು—೪೪.

ಟೀ|| ಅಡಾಯುಧಂ ಮೊದಲಾಗೆ ಇರ್ದಂತಹ ಕೈದುಗಳ್ ಒಱೆಯಿಂದಂ ತಮಗೆ ತಾವೇ ಉರ್ಚಿ ನಡುಗಿ ಧ್ವನಿಮಾಡುತ್ತುಮಿರಲ್ ಮನೆಯ ಬಾಗಿಲ ಮುಂದಣ ತೋರಣಂ ನಿಂದುರಿಯುತ್ತಿರಲ್, ಶಿಕ್ಷೆಯ ದೇವತಾಗೃಹಂಗಳಿರ್ದಂತಿರ್ದು ಅಗ್ನಿಯಿಲ್ಲದುರಿಯುತ್ತಿರೆ ಸಿಡಿಲ್ ಪೊಡೆಯುತ್ತಿರೆ ಮುಂದೆ ಆಱುದಿಂಗಳೊಳಗೆ ಕಾಳೆಗಮಪ್ಪುದು—೪೫.

1 ಕೇತನಕುಳಿಕಂ. 2 ದ್ವಿಜರ್ಗಾ. 3 ಪಿಸೆದಸಗೆ. 4 ಮೇಣು ತೋರಣ ಕೇತು ದೇವ ದಾ. 5 ಯಿಂದ. 6 ರ್ವಿಸುತಿರೆ ಪಿನ್ನೆಗಂ, ಸಿಡಿಲೆರಗಲು. 7 ಭಯಮಂ. 8 ಧ್ವಜದಂತೆ, ನಾದದಂತೆ. 9 ಉತ್ಪಾತಂಗಳ್ ಪ್ರತಿ.

ಕಂ|| ಪಡುವೆಡೆ ಕಿರ್ಚಿಲ್ಲದೆ ಪೊಗೆ |
ಯುಡುವೊಡೆ ಮೇಣ್ ಪಟದ ಸೀರೆಯುರಿದೇೞ್ವೊಡೆ ಮೇಣ್ ||
ಕಿಡಿಗಳ್ ತಲೆಯಿಂದಂ ಪೊಱ
ಮಡುವೊಡೆ ಯಮಗೃಹಮನೆಯ್ದುವಂ ತಡೆಯದವಂ || ೪೬ ||

ಕಂ|| ಅವನಿಪತಿ ತುಪ್ಪದಿಂ ಸಾ |
ಸಿವೆಯಿಂ ಪಾಲ್ಮರನ ಸಮಿಧೆಯಿಂ ಹುತವಹಮಂ ||
ತ್ರವಿಧಾನದೆ ಬೇಳಿಸಿ ಕುಡೆ |
ಸುವರ್ಣಮಂ ದ್ವಿಜರ್ಗೆ ಶಾಂತಿಯಂ ಬಯಸುವವಂ || ೪೭ ||

ಕಂ|| ಅಱಗೆಱೆ ಮಡು ಮೊದಲಾಗಿರೆ |
ಬಱಬಱಬತ್ತುವೊಡೆ ಊರ ಮೊದಲಿಂದಂ ಮೇಣ್ ||
ತೊಱೆಗಳದಿರೇಱ ಪರಿವೊಡೆ |
ಮಱುಗನಿಸಂತಡೆಯದಾಪುರಂ ಪಾೞಕ್ಕುಂ || ೪೮ ||

ಚಂ|| ತೊಱೆ ವಿಪರೀತದಿಂ ನೆಣನ ನೆತ್ತರ [1]ಮದ್ಯದ ತೈಲದಂದದಿಂ |
ನೆಱೆದು ಕಲಂಕಿ ಬರ್ಪೊಡಱದಿಂಗಳಿಗನ್ಯರ [2]ಸೇನೆ ಮೇಲೆ ಬಂ ||
ದುಱದಿಱುಗುಂ ಬಲಕ್ಕೆ ರಸಗಂಧವಿಪರ್ಯಯಮಾಗಿ ತೋಱೆ ಮೇ |
ಣೊಱತೆ[3]ಗಳಿಲ್ಲದಲ್ಲೊಱತೆಯಿಕ್ಕೆ ಮಹಾಭಯಮಕ್ಕುಮುರ್ವಿಯೊಳ್ || ೪೯ ||

---

ಟೀ|| ಮಲಗುವ ಠಾವಿನಲ್ಲಿ ಕಿರ್ಚಿಲ್ಲದೆ ಹೊಗೆಯೇೞ್ವೊಡೆ ಅಲ್ಲಾ ಪೊದೆದಿರ್ದ ವಸ್ತ್ರಮುರಿಯುತ್ತಿರಲ್ ತನ್ನ ತಲೆಯಿಂದೆ ಕಿಡಿಗಳ್ [4]ಪೊಱಮಡುವಂತಿರಲ್ ಆತಂಗೆ ಬೇಗನೆ ಮರಣಮಂ ಪೇೞ್ವುದು—೪೬.

ಟೀ|| ಈ ಪಿಂತೆ ಪೇೞ್ದ ಉತ್ಪಾತಂಗಳ್ಗೆ ಶಾತಿಯಂ ಬಯಸುವರಸಂ ತುಪ್ಪಂ ಸಾಸಿವೆ ಹಾಲ್ಮರನ ಸಮಿತ್ತು ಈ ದ್ರವ್ಯಂಗಳಿಂದೆ ಅಗ್ನಿದೇವತಾರ್ಥಮಾಗಿರ್ದ ಮಂತ್ರಂಗಳಿಂ ಹೋಮಮಂ ಮಾಡಿಸಿ ಬ್ರಾಹ್ಮಣರ್ಗೆ ಗೋದಾನ, ಭೂದಾನ, ಅನ್ನದಾನ ಸುವರ್ಣ ದಾನಂಗಳಂ ಮಾಡಲ್ ಇವಱಿಂದೆ ಆ ಉತ್ಪಾತಂ ಶಾಂತಮಪ್ಪುದು—೪೭.

ಟೀ|| ಅಱ (ಎಂದುಂ ಒಣಗದ) ಗೆಱೆ ಮಡುಗಳಾಗಿರ್ದಂತಹ, ಕೆಱೆಗಳ್ ಇದ್ದಂತಿರ್ದು ಬತ್ತುಹ, ಊರ ಮುಂದೆ ಪರಿವ ಪಳ್ಳಂ ಏಱ ಮುಂತಾಗೆ ಪರಿಹ, ಆ [5]ಪೂರು ಬೇಗದಿಂ ಕಿಡುವುದು—೪೮.

ಟೀ|| ತೊಱೆಗಳ್, [6]ನೆಣನಂತೆ, ನೆತ್ತರಂತೆ, ಮದ್ಯದಂತೆ, ಎಣ್ಣೆಯಂತೆ, ಉದಕಂಗಳ್ ಪರಿಯುತ್ತಿರಲ್ ಅಱದಿಂಗಳಿಂಗೆ ಪರರಾಜ್ಯದ ಅರಸುಗಳ್ ಬಂದು ದೇಶಮಂ ಕಿಡಿಸುವರ್, ಆ ಸೇನೆಗೆ ರಸದ್ರವ್ಯಂಗಳ್ ತಮ್ಮ ತಮ್ಮ ಗುಣಮಲ್ಲದೆ ವಿಪರೀತ [7]ಸ್ವಾದುಗಳಪ್ಪುವು. ಸುಗಂಧ ದ್ರವ್ಯಂಗಳ್ ದುರ್ಗಂಧಂಗಳಾಗಿ ತೋರ್ಪುವು, ಒಱತೆಯಿಲ್ಲದ ಠಾವುಗಳಲ್ಲಿ ಒಱತೆಗಳ್ ಪುಟ್ಟುವೊಡೆ ಇವಱಿಂದೆ ಭೂಮಿಯ ಮೇಲೆ [8]ತುಂಬಾ ಭಯಂಗಳ್ ಪುಟ್ಟುವುವು—೪೯.

---

1 ಮಚ್ಚದ. 2 ಮಚ್ಚರ. 3 ಗಳಿಲ್ಲದಲ್ಲಿ ಮೊಱೆಯಿಕ್ಕಿ. 4 ಉದಿರುವಂತಿರಲ್. 5 ಪಟ್ಟಣಂ. 6 ಖಂಡದಹಾಗೆ. 7 ಗಳ್ ಪುಟ್ಟುವುವು. 8 ಅಪಾರ.



ಕಂ|| [1]ನೀರುರಿಯೆ ಪೊಗೆಯೆ ಕುದಿಗೊಳೆ |
ನೀರೊಳಗಣ ರೂಪು ನುಡಿಯೆ ಬಿಡಮೊದಱೆ ಕರಂ ||
ಪಾರ್ೞಿಸಿ ಪಾಡೆ ಪೋಕಿಸಿ |
ಮಾರಿ ತಗುಲ್ದಟ್ಟೆ ತಿಂಗುಮಾ ಜನಪದಮಂ || ೫೦ ||

ಕಂ|| [2]ಸಲಿಲವಿಕಾರಕ್ಕರ್ಚಿಸಿ |
ಜಲಾಧಿಪನ ವರುಣಮಂತ್ರದಿಂ ಜಪಹೋಮಂ ||
[3]ಗಳನೆಯ್ದೆ ಮಾಡಿದಂದಾ |
ಜಳಜಾತೋದ್ಭೂತದೋಷಮಿಂದುಪಶಮಿಕುಂ || ೫೧ ||

ಮ|| ಅನಿಮಿತ್ತಂ ಮರನೊಂದು [4]ಕೊಂಬುಡಿವೊಡಂ ಮೇಣ್ ಲೋಹಿತಂ ಸೋರ್ವೊಡಂ |
ಜನಿಯಿಕ್ಕುಂ ಕದನಂ ಪ್ರಸಿದ್ಧಕುಜದೊಳ್ ಧೂ[5]ಮಾರ್ಚಿಗಳ್ ಪುಟ್ಟೆ ತೊ ||
ಟ್ಟನೆ ತೋರ್ಪಂದುಮಕಾಲಪುಷ್ಪಫಲಮಾದಂದುಂ ನೃಪಂ ಪೊಂದುಗುಂ
ಧನಧಾನ್ಯಕ್ಷಯಮಕ್ಕುಮಾಮರನೊಳಂ [6]ಪಾಲ್ನೀರೊಸರ್ತಿರ್ಪಿನಂ || ೫೨ ||

ಚಂ|| ಒಣಗಿದ ಭೂರುಹಕ್ಕೆ ತಳಿರಾದೊಡೆ ಮೇಣ್ ನಿರುಜದ್ರುಮಂ ತಳಿ |
ರ್ಒಣಗುವುಡೆಣ್ಣೆಯಂತೆ ಮರನೊಳ್ ಸುರಿತರ್ಪೊಡೆ ಮೇಣಶೇಷಧಾ ||
ರಿಣಿ ಪಸವಿಂದೆ ಕೂಡಿ ಕಿಡುಗಂಸ್ರಿಪದಿಂ ಘೃತಮೆಚ್ಚೊಡಂ ಸಮಾ |
ರಣಭಯಮಕ್ಕು ಮಲ್ಲಿಯುಮೊಸರ್ಪೊಡೆ ಕುತ್ತಮದೆತ್ತಮೊತ್ತುಗುಂ || ೫೩

---

ಟೀ|| ಇರ್ದಂತಿರ್ದು ನೀರೊಳಗೆ ಉರಿ ಪುಟ್ಟುಹ, ಹೊಗೆ[7]ದೋಱುಹ, [8]ಕುದಿಗೊಳುಹ, ನೀರೊಳಗಣ ಪ್ರತಿರೂಪುಗಳ್ [9]ನುಡಿಹ, ಅಲ್ಲಾ ಅದಱಲ್ಲಿ [10]ಬೞಲುಹ, ಹಾರ್ೞಿಸಿ [11]ಪಾಡುಹ, ಅೞುಹ, ಈ ವಿಕಾರಂಗಳಿಂದೆ ಆ ದೇಶಮಂ ಮಾರಿಯಟ್ಟೆ ಅಲೆದು ಕಿಡಿಸುವುದು—೫೦.

ಟೀ|| ಈ ಪೇೞ್ದ ಪ್ರಕಾರದಿಂ ಉದಕಂಗಳಲ್ಲಿ ಉತ್ಪಾತಂಗಳ್ ಪುಟ್ಟಿದೊಡೆ [12]ಜಲಾಧಿಪನಾದ ವರುಣದೇವನಂ ವಾರುಣಮಂತ್ರಂಗಳಿಂದೆ ಅರ್ಚಿಸಿ ಬ್ರಾಹ್ಮಣರ ಕೈಯ್ಯಿಂದೆ ಜಪಹೋಮಂಗಳಂ ಮಾಡಿಸಲ್ ಆ ಜಲದೊಳಗೆ ಪುಟ್ಟಿದಂತಹ ಉತ್ಪಾತಂಗಳ್ ಶಾಂತಮಪ್ಪುವು—೫೧.

ಟೀ|| ಗಾಳಿಯಿಲ್ಲದೆ ವೃಕ್ಷಂಗಳ ಕೊಂಬು ಮುಱಿದು ಬೀೞುಹ, ಆ ವೃಕ್ಷಂಗಳ ಕೊಂಬುಗಳಿಂದೆ ನೆತ್ತರ್ ಸುರಿಹ, ಇವು ತೋಱುವೊಡೆ ಆ ಪಟ್ಟಣದಲ್ಲಿ ಇರ್ದಂತಿರ್ದು ಕಾಳೆಗಂಗಳ್ ಪುಟ್ಟುವುವು. ಪ್ರಸಿದ್ಧಮಾಗಿ ಊರ ಮುಂದೆ ಇರ್ದಂತಹ ವೃಕ್ಷಂಗಳಿಂದೆ ಪೊಗೆಯುಮುರಿಯುಂ ಪುಟ್ಟೆ ಕಾಣಬರುಹ, ಅಕಾಲಂಗಳಲ್ಲಿ ಪೂಕಾಯ್ಗಳಾಗುಹ, ಇವಱಿಂದೆ ಆ ಪಟ್ಟಣದ ಅರಸಂಗೆ ಕೇಡಂ[13] ಪೇೞ್ವುದು, ಅಲ್ಲಾ ಆ ವೃಕ್ಷಂಗಳ್ಗೆ ಇರ್ದಂತಿರ್ದು [14]ಪಾಲಾದೊಡಂ ನೀರಾದೊಡಂ ಸುರಿದೊಡೆ ಆ ಪಟ್ಟಣದಲ್ಲಿ ಧನದಾನ್ಯಕ್ಷಯಮಾಗಿ ಬಱಪ್ಪುದು—೫೨.

ಟೀ|| ಒಣಗಿದ ಮರಂ ಚಿಗುರಿದೊಡೆ ಒಳ್ಳಿತಪ್ಪ ಮರಂ ತಳಿರ್ತು ಒಣಗಿದೊಡೆ ಮರ

---

1 ನಿರಿಗೆಯು ಕುದಿಗೊಳೆ ನೀರೊಳಗಣರೂಪು ನುಡಿಯೆ ಬಿಡಮೊದರೆ ಕರಂ ಪಾರ್ೞಿಸಿ ಪಾಡೆ ಸೋಕಿಕಿ ಮಾರಿ ತಗುಳ್ದಟ್ಟೆ. 2 ಜಲದ. 3 ಳನು ಮಾಡಿಸಲು ಮಂತಾದಳಜಾತಾದ್ಭುತ, ಜಲಜೋತ್ಪಾತಾದಿ(ಳ). 4 ಕೊಂಬುಮುರಿ. 5 ಮಾಜ್ರ. 6 ಪಾಲಕ್ಕೆ ನೀರೊಸರ್ಪೊಡಾ. 7 ಹೊಱಡುಹ. 8 ಕುದಿದ ಹಾಗೆ. 9 ಮಾತಾಡುಹ. 10 ಮೊಱಲಿದರೆ, ಅದರಲ್ಲಿ ಮಿಂದರೆ. 11 ಪಾಡಿದಡೆ, ಅತ್ತೊಡೆ. 12 ಜಲಂಗಳಿಗೆ ಅಧಿಪತಿ. 13 ಕೇಡು ತಪ್ಪದು. 14 ಪಾಲಂತೆ, ನೀರಂತೆ.

ಮಲ್ಲಿಕಾಮಾಲೆ|| ಬಾಳಭೂಮಿರುಹಕ್ಕೆ [1]ಪೂಪೊಗೆದಂದು ಬಾಳಲಯಂ ಮರಂ |
ಕಾಳಮಲ್ಲದ ಕಾಳದೊಳ್ [2]ಫಲಪುಷ್ಪದೊಳ್ ನೆಱೆದಂದು ಮೇಣ್ ||
ಮೂಳದಿಂದಮಕಾರಣಂ ಕೆಡೆದಂದು ದೇಶದ ಹಾನಿ ವೃ |
ಕ್ಷಾಳಿಗಳ್ [3]ನಡೆವಂದು ಮೇಣ್ ನುಡಿವಂದು ಮಾಜನನಾಶನಂ || ೫೪ ||

ಚಂ|| [4]ಪಲತೆಱದಿಂದೆ ವೃಕ್ಷವಿಕೃತಂ ದೊರೆಕೊಂಡೊಡೆ ಪತ್ತು ತಿಂಗಳೊಳ್ |
[5]ಪಲಿಯಿಕುಮಾ ಮಹೀರುಹಕೆ ಸತ್ತಿಗೆಯಂ ಪಿಡಿದಲ್ಲಿ ರುದ್ರನಂ ||
ನಿಲಿಸಿ ಯಥೋಕ್ತಮರ್ಚಿಸಿ ವಿಧಾನದೆ ಬೇಳಿಸಿ ಭೂಸುರರ್ಗೆ ತು |
ಯ್ಯಲನುಣಲಿಕ್ಕೆ ಕೆಯ್ಯನೊಸೆದಿತ್ತೊಡೆ ಪಿಂಗುಗುಮಾಮಹಾದ್ಭುತಂ || ೫೫ ||

(ಸಸ್ಯೋತ್ಪಾತಂ)

ಕಂ|| ಜವೆ [6]ಜೋಳಂ ಕೊಱೆ ಮೊದಲಾ |
ದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ ||
ಕುವಳಯ ಸರಸಿರುಹಂಗಳೊ |
[7]ಳವಳ್ಗಳಾದಂದು [8]ಮಱುಗೆ ತತ್ಪತಿಯಱಿವಂ || ೫೬ ||

ನಿಂದೆ ಎಣ್ಣೆಯ ಮರ್ಯಾದೆಯಲ್ಲಿ ಸುರಿದೊಡೆ ಇವಱಿಂದೆ ಆ ದೇಶದಲ್ಲಿ ಬೆಳಸಿಲ್ಲದೆ ಕಿಡುವುದು. ಆ ಮರದಿಂದೆ ತುಪ್ಪದ ಮರ್ಯಾದೆಯಲ್ಲಿ ಸುರಿದೊಡೆ ಗಾಳಿಯಿಂದೆ ಅಧಿಕವಾಗಿ ಭೀತಿ ಹುಟ್ಟಿ ಆ ದೇಶದ ಪ್ರಜೆಗಳ್ಗೆ ರೋಗಂ ಪುಟ್ಟುವುದು—೫೩.

ಟೀ|| ಎಳೆಯ ಮರಂಗಳಲ್ಲಿ ಅಕಾಲದಲ್ಲಿ ಪೂಗಳ್ ತೋಱಿದೊಡೆ ಆ ಪಟ್ಟಣದಲ್ಲಿ ಶಿಶುಗಳ್ಗೆ ಕೇಡಂ ಪೇೞ್ವುದು, ಮರಂಗಳಲ್ಲಿ ಕಾಲಮಲ್ಲದಕಾಲದಲ್ಲಿ ಫಲಪುಷ್ಪಂಗ[9]ಳಾಗುಹ, ಅಲ್ಲಾ, ಗಾಳಿಯಿಲ್ಲದೆ ವೃಕ್ಷಂಗಳ್ ಬೇರೊಡನೆ ಕಿೞ್ತು ಬೀೞುಹ, ಇವಱಿಂದೆ ಆ ದೇಶಕ್ಕೆ [10]ಹಾನಿಯಂ ಪೇೞ್ವುದು. ಅಲ್ಲಾ ಮರಂಗಳ್ ನಡೆವಂತೆ [11]ಕಾಣಬರುಹ, ನುಡಿವ ಧ್ವನಿಗಳಂತೆ ಕೇಳಿಬರುಹ ಇವಱಿಂದೆ ಆ ದೇಶದ ಪ್ರಜೆಗಳ್ಗೆ ಕೇಡಂ ಪೇೞ್ವುದು—೫೪.

ಟೀ|| ಈ ಮರ್ಯಾದೆಯಲ್ಲಿ ಮರಂಗಳಿಂದೆ ನಾನಾಪ್ರಕಾರದಲ್ಲಿ ವಿಕಾರಂಗಳ್ ಪುಟ್ಟಿ ತೋಱಲ್ ಅದಱಿಂದೆ ಪತ್ತು ತಿಂಗಳಿಂಗೆ [12]ಅಪಾಯಂಗಳ್ ತೋರ್ಪುವು. ಆದರ್ಕೆ ಆ ವಿಕಾರಂ ತೋಱಿದ ಮರಕ್ಕೆ ಸತ್ತಿಗೆಯಂ ಪಿಡಿದು ಆ ವೃಕ್ಷದ ಮೊದಲಲ್ಲಿ ರುದ್ರನಂ ಪ್ರತಿಷ್ಠಿಸಿ ಶಾಸ್ತ್ರೋಕ್ತಮಾಗಿ ಪೂಜಿಸಿ ಬ್ರಾಹ್ಮಣರ್ಕಳಿಂದೆ ಯುಕ್ತಮಾಗಿ ಹೋಮಂಗಳಂ ಬೇಳಿಸಿ, ಪರಮಾನ್ನಮಂ ಭೋಜನಂ ಮಾಡಿಸಿ ಪಾತ್ರವಱಿತು [13]ಭೂಮಿದಾನಮಂ ಮಾಡಲ್ ಆ ಹುಟ್ಟಿದ ಅದ್ಭುತಂಗಳ್ ಶಾಂತಮಪ್ಪುವು—೫೫.

ಟೀ|| ಜವೆ, ಜೋಳಂ, ನವಣೆ ಮೊದಲಾದ ಧಾನ್ಯಂಗಳ್ಗೆ ವೊಂದೆ ದಂಟಿನಲ್ಲಿ ತೆನೆಗಳೆರಡಾಗಿರ್ದೊಡೆ, ನೆಯ್ದಿಲ್ ತಾವರೆಗಳ್ ಅವಳಿಗಳಾಗಿ ಬೆಳೆದೊಡೆ ಅವರ್ಕೆ ಅಧಿಪತಿಗಳಾಗಿರ್ದವರ್ಗೆ ಕೇಡಂ ಪೇೞ್ವುದು—೫೬.

1 ಕ್ಕೆ ಪೊಗೆ. 2 ಪುಷ್ಪದೊಳ್ ನೆಱೆ. 3 ದಂದು ಜನನಾಶನಂ. 4 ಪಲವು ತೆಱದಿಂದೆ ವೃಕ್ಷವಿಕೃತಂ ದೊರೆಕೊಂಡೊಡೆ ಪತ್ತು ತಿಂಗಳೊಳ್ ಪಲಿ ಯಿಕುಮಾಮಹೀರುಹಕೆ ಸತ್ತಿಗೆಯಂ ಪಿಡದು ಮಾಮಹಾದ್ಭುತಂ. 5 ಫಲವಡೆದಾ. 6 ಜೋಳಂ ಮೊದಲಾಗಿ ಪೊಜೆ ಮೊದಲಾದು, ಜೋಳಂ ಕೊರಲ್ ಮೊದಲಾದು. 7 ಳವಳಿಗಳಾದಂ. 8 ಪೊಱಗೆ. 9 ಳ್ ತೋಱಿದೊಡೆ. 10 ಹಾನಿಯಕ್ಕುಂ. 11 ಕಾಣಬಂದರೆ ನುಡಿವ ಧ್ವನಿ ಕೇಳಿದರೆ. 12 ಗಳಂ ಪೇೞ್ವುದು ಅದರ್ಕೆ ಶಾಂತಿ ಅವ್ಯಕ್ತಕ್ಕೆ. 13 ಜಪಹೋಮಂಗಳಂ ಮಾಡಿಸಿ ಆ ಬ್ರಾಹ್ಮಣರ್ಗೆ.



ಮ|| ಬೆಳಸತ್ಯದ್ಭುತ[1]ಮಪ್ಪೊಡೊಂದೆ ಮರನೊಳ್ ನಾನಾವಿಧಂ ಪುಷ್ಪಮುಂ |
ಫಳಮುಂ ತೋರ್ಪೊಡೆ ವೈರಿಭೂಪನಿಕುರುಂಬಂ ಮೇಲೆ ಬರ್ಕುಂ ರಸಾ ||
ವಳಿಯನ್ನಂ ಸವಿಯಿಲ್ಲದಿರ್ಪೊಡೆ ತಿಲಂ ನಿಸ್ತೈಲ[2]ಮಾಗಿರ್ಪೊಡೊ |
ಬ್ಬಳಮೇಣೆಬ್ಬಳಮೆಣ್ಣೆಯಪ್ಪೊಡೆ ಭಯಂ ತದ್ದೇಶದೊಳ್ ತೋಱುಗುಂ || ೫೭ ||

ಕಂ|| ವಿಕೃತಫಲಪುಷ್ಪಶಾಖಿಯ |
ನೆ ಕೊಯ್ದು ಕೊಂಡೂರ ಪೊಱಗೆ ನಟ್ಟರ್ಚಿಸಿ ವೈ ||
ದಿಕವಿಧಿಯಿಂ ಬೇಳಿಸಿ ಕುಡು |
ಗೆ ಕನಕಮಂ ದ್ವಿಜರ್ಗೆ ಶಾಂತಿಯಂ ಬಯಸುವವಂ || ೫೮ ||

(ಧ್ವಜೋತ್ಪಾತಂ)

ಕಂ|| ದ್ವಾರಪತಾಕೆಗಳುಂ ಗೃಹ |
ತೋರಣಮಿಂದ್ರಧ್ವಜಂ[3]ಗಳೆಂದಿಂತಿವು ನಿ ||
ಷ್ಕಾರಣದಿನುಡಿದು ಕೆಡೆದೊಡೆ |
ಧಾರಿಣಿಯಧಿಪತಿಗೆ ಮರಣಮಕ್ಕುಮಮೋಘಂ || ೫೯ ||

ಟೀ|| ಬಿತ್ತಿರ್ದಂತಹ ಬೆಳಸುಗಳ್ ಅತ್ಯದ್ಭುತಮಾಗಿ ಬೆಳೆದೊಡೆ, ಒಂದೆ ವೃಕ್ಷದಲ್ಲಿ ಹಲವು ಪ್ರಕಾರದ ಹೂ, ಹೀಚು, ಮಿಡಿ, ಕಾಯ್, ಪಣ್ಗಳ್ ಅಕಾಲದಲ್ಲಿ ಆದೊಡೆ ಇವಱಿಂದೆ ಆ ದೇಶದ ಅರಸುಗಳ ಮೇಲೆ [4]ಪರರಾಜ್ಯದರಸುಗಳ್ ದಂಡೆತ್ತಿ ಬರ್ಪರ್, ರಸದ್ರವ್ಯಂಗಳ್, ಅನ್ನಂಗಳ್ ಇವಂ ಸುಖದಲ್ಲಿರ್ದು ಭುಂಜಿಸುವಾತಂಗೆ ಸ್ವಾದುವಿಲ್ಲ[5]ದಿರ್ದೊಡೆ ಎಳ್ಳಿನಲ್ಲಿ ತೈಲಂ ಪುಟ್ಟ[6]ದಿರ್ದೊಡೆ ಎಳ್ಳಿನಿಂದೆ, ವೆಗ್ಗಳಮಾಗಿ ತೈಲಂ [7]ಬಂದೊಡೆ ಇವಱಿಂದೆ ಆ ದೇಶದಲ್ಲಿ ಭಯಂಗಳ್ ಪುಟ್ಟುವುವು—೫೭.

ಟೀ|| ಈ ಪೇೞ್ದ ಸಸ್ಯವೃಕ್ಷಂಗಳಲ್ಲಿ [8]ಮೂಡಿದ ಪೂಪಲಂಗಳ ಶಾಕೊಂಬುಸಹಿತಂ ಮುಱಿದುಕೊಂಡು ಬಂದು ಊರ ಪೊಱಗೆ ನಟ್ಟು ಅರ್ಚಿಸಿ ಶಾಸ್ತ್ರೋಕ್ತಮಾಗಿ ಹೋಮಂಗಳಂ ಬೇಳಿಸಿ ಬ್ರಾಹ್ಮಣರ್ಗೆ [9]ಸುವರ್ಣಂ ಮೊದಲಾದ ದಾನಂಗಳಂ ಕುಡಲ್ ಆ ಉತ್ಪಾತಂಗಳ್ ಶಾಂತಮಪ್ಪುವು—೫೮.

ಟೀ|| [10]ಬಾಗಿಲಲ್ಲಿ ಕಟ್ಟಿರ್ದಂತಹ ಪತಾಕೆಯುಂ, ತೋರಣಂಗಳುಂ ಕಾಮಪರ್ವಂಗಳಲ್ಲಿ ಮೊದಲೆ ಮಾಡಿದಂತಹ ಇಂದ್ರಧ್ವಜಂಗಳುಂ ಕಾರಣಮಿಲ್ಲದೆ ಮುಱಿದು ಬಿೞಲ್ ಆ ದೇಶದ ಅರ[11]ಸಿಂಗೆ ಮರಣಮಪ್ಪುದು—೫೯.

1 ಮಾಗಿ ತೋಱೆ. 2 ಮಾಗಿರ್ಪಂದೊಕ್ಕಳ. 3 ಗಳೆಂಗಳಿಂದಿಂ. 4 ಪರರಾಯರ ಭೀತಿ. 5 ವಿಲ್ಲದಿಹಣ. 6 ಟ್ಟದಿಹಣ. 7 ಬಾಹಣ. 8 ಹುಟ್ಟಿದ. 9 ಸುವರ್ಣಾದಿ ಮಹಾ. 10 ಬಾಗಿಲೆ ಕಟ್ಟಿರ್ದ ತೋರಣ ಪತಾಕೆಗಳ್. 11 ಅರಸಾಗಿರ್ದಾತಂಗೆ ಸಂದೇಹಮಿಲ್ಲದೆ ಮರಣಮುಂ ಪೇೞ್ವುದು.

(ನೇಗಿಲೆಱ್ತುಗಳುತ್ಪಾತಂ)

ಕಂ|| ನೇಗಿಲುಮೆಱ್ತುಂ ಸಂಧಿಸ |
1ಪೋಗದೆ ನಿಲೆ ನಟ್ಟ ಮನೆಯ ಮುಟ್ಟುಗಳೊಳ್ ಮೇ ||
ಣಾಗೆ ವಿಕಾರಂ ನರಿ ಮೇ |
2ಣೋಗಡಿಸದೆ ಕರೆಯೆ ಕೆಯ್ದುವಿಂ ಭಯಮಕ್ಕುಂ || ೬೦ ||

(ಪಕ್ಷಿಮೃಗೋತ್ಪಾತಂ)

ದ್ರುತವಿಲಂಬಿತಂ|| ಎರಡು 3ಸಂಜೆಯೊಳಂ ಮೃಗಪಕ್ಷಿಗಳ್ |
4ನೆರೆದು ದೀಪ್ತದೊಳೂಳೆ ವಿಹಂಗಮೋ ||
ತ್ಕರಮದಾಗಸದೊಳ್ ಪ್ರತಿಲೋಮದಿಂ |
ಚರಿಯಿಸುತ್ತಿರೆ ಸಂಭವಿಕುಂ ಭಯಂ || ೬೧ ||

ಕಂ|| ಊರ ಖಗಮಡವಿಯೊಳ್ 5ಮೇ |
ಣೂರೊಳ್ ವನಜಾತವಿಹಗತತಿ ರಾತ್ರಿಯೊ6ಳಂ ||
ತಾ ರಾತ್ರಿಚರಂ ಪಗಲೊಳು7 |
ದಾರತೆಯಿಂ 8ಚರಿಯಿಸುತ್ತುಮಿರೆ ಪಾೞಕ್ಕುಂ || ೬೨ ||

(ಪಿಂಗಲಿ ಮೊದಲಾದ ಪಕ್ಷಿಗಳುತ್ಪಾತಂ)

ಕಂ|| ಪಿಂಗಲಿ ಪೋದಗ9 ಪೊಱಸು ಬ |
ಕಂ ಗಿಡಿಗಂ ಗೂಗೆಯಾದಿಯಾದ ಖಗಂ ರಾ ||
ಜಾಂಗಣದೊಳ್ ಚರಿಸುವೊಡೆ ಸ |
ರಂಗೆಯ್ವೊಡೆ ತಡೆಯದಾ ಗೃಹಂ ಪಾೞಕ್ಕುಂ || ೬೩ ||

---

ಟೀ|| ಆರಂಭದಲ್ಲಿ 10ಏಱಂ ಪೂಡಿದಲ್ಲಿ ನೇಗಿಲುಮೆಱ್ತುಂ ನಟ್ಟಂತೆ ಇರ್ದೊಡೆ, ಮನೆಯ ಮುಟ್ಟುಗಳೊಳಗೆ ವಿಕಾರಂಗಳ್ ಪುಟ್ಟಿದೊಡೆ ಪಗಲ್ ಸೂರ್ಯಂಗಿದಿರಾಗಿ ನರಿಗಳ್ 11 ಪೊದಱಿದೊಡೆ ಆ ದೇಶಕ್ಕೆ 12ಕೆಯ್ದುವಿಂ ಭಯಂ ಪುಟ್ಟುವುದು—೬೦.

ಟೀ|| ಉದಯಾಸ್ತಮಯಸಂಧ್ಯಾಕಾಲಂಗಳಲ್ಲ ಮೃಗಂಗಳುಂ ಪಕ್ಷಿಗಳುಂ ನೆರೆದು ದೀಪ್ತಸ್ಥಾನದಲ್ಲಿ ಊಳಿಡಲ್, ಪಕ್ಷಿಜಾತಿಗಳ್ ಆಕಾಶಮಾರ್ಗದಲ್ಲಿ ವಿಪರೀತಮಾಗಿ ಪಾಱುತ್ತಿರಲ್ ಇವಱಿಂದೆ ಆ ದೇಶಕ್ಕೆ ಇರ್ದಂತಿರ್ದು ಭಯಂ ಪುಟ್ಟುವುದು—೬೧.

ಟೀ|| ಊರೊಳಗೆ ಚರಿಸುವಂತಹ ಪಕ್ಷಿಗಳ್ ಆರಣ್ಯದೊಳಗೆ ಸಂಚರಿಸುತ್ತಿರಲ್, ಅಡವಿಯೊಳಗೆ ಸಂಚರಿಸುವಂತಹ ಪಕ್ಷಿಗಳ್ ಊರೊಳಗೆ ಸಂಚರಿಸುತ್ತಿರಲ್, ರಾತ್ರಿಯಲ್ಲಿ ಸಂಚರಿಸುವ ಪಕ್ಷಿಗಳ್ ಪಗಲೊಳೆ ಸಂಚರಿಸುತ್ತಿರಲ್ ಪಗಲೊಳ್ ಸಂಚರಿಸುವ ಪಕ್ಷಿಗಳ್ ರಾತ್ರಿಯಲ್ಲಿ ಸಂಚರಿಸುತ್ತಿರಲ್ ಈ ಉತ್ಪಾತಂಗಳಿಂದೆ ಆ ದೇಶಂಗಳ್ ಕಿಡುವುವು—೬೨.

ಟೀ|| 13ಹಾಲಹಕ್ಕಿ, ಕರಿಯಹಕ್ಕಿ, ಪೊಱಸು (ಪಾರಿವಾಳದ ಹಕ್ಕಿ) ಬಕಂ, ಗಿಡಿಗಂ,

1 ಪೋಗದಿರೆ, ಪೋಗದೆಸಂಧಿಸಿನಿಲೆ. 2 ಣೋಗದೆ ಸದೆಕರೆಯೆ. 3 ಸಂಧಿಗಳೊಳ್. 4 ನೆರಗಳೆರಡು. 5 ನಿಲಲೂರೊಳ್ ಜನಜಾತಿ, ವನಜಾತಿ. 6 ಳಂ ರಾತ್ರಿ ಚರರೆ ಪಗಲೊ. 7 ಳುತಾ ರಾತ್ರಿಯೊಳ್. 8 ಚರಿಯಿಸುತಿರ್ಪೊಡತಿ. 9 ಪಿಂಗಲಿ ಪೊಱಸು. 10 ಆಱ ಹೂ. 11 ಕರೆಯಲ್. 12 ಆಯುಧಂಗಳಿಂದೆ. 13 ಹೊಱಸಿನ ಹಕ್ಕಿ, ಪಕ್ಕವಕ್ಕಿ.



ಮ||ಸ್ರ|| ಮನೆಯೊಳ್ ಮೇಣ್ ಬಾಗಿಲೊಳ್ ತೋರಣ1ದೊಳೆಱಗೆ ಪಕ್ಷಿವ್ರಜಂ ಸರ್ಪ ಗೇಹಾಂ |
2ಗಣದೊಳ್ ಜೇನಂಬಿವಂತಲ್ಲ3ಯೆ ನೆಗೆದಿರೆ ತದ್ಗೇಹನಾಥಂಗಪಾಯಂ4 |
ಶುನಕಂ ಶಲ್ಯಂಗಳಂ ಮೇಣ್, ಶಬದವಯವಮಂ ಕರ್ಚಿ ಪೊಕ್ಕಂದು ಕುತ್ತಂ |
ಜನಿಯಿಕ್ಕುಂ ಬಾಣಮಂ ಮೇಣ್ ಪಶುವೆ ಯೆೞೆ5ಯುತುಂ ಬರ್ಪೊಡುರ್ವೀಶ ನಾಶಂ || ೬೪ ||

(ಶಾಂತಿ)

ಕಂ|| ಖಗಮೃಗಸಂಕುಳ ವಿಕೃತಿಗ6 |
ಳೊಗೆಯೆ ಧರಾಮಳಕುಳಕ್ಕೆ ಮೃಷ್ಟಾನ್ನಮನಿ ||
ಕ್ಕುಗೆ ಹೋಮಮಹೀದಾನಮ |
ನಗಣಿತಮೆನೆ ಕುಡುಗೆ ಶಾಂತಿಯಂ ಬಯಸುವವಂ || ೬೫ ||

(ಪುತ್ರೋತ್ಪಾತಂ)

ಕಂ|| ಯುವತಿ ಪ್ರಸೂತಿಕಾಲ್ಕುಂ |
ಸವನಿಸೆ ಹೀನಾತಿರಿಕ್ತಮಪ್ಪಂತಿರೆ ಮೇ ||
ಣವಳೆರಡು ಮೂಱು ನಾಲ್ಕು |
ಯ್ದುವರಂ ಸಂಭವಿಸೆ ತತ್ಕುಲಂ ಕ್ಷಯಮಕ್ಕುಂ || ೬೬ ||

---

ಗೂಗೆ ಇವು ಮೊದಲಾದ ಅರಣ್ಯದಲ್ಲಿ ಚರಿಪ ಪಕ್ಷಿ7ಗಳ್ ಊರಮನೆಯ ರಾಜಾಂಗಣದಲ್ಲಿ ಬಂದು ಆಡಲ್ 8ಆ ಗೃಹಕ್ಕೆ ಆ ಊರಿಂಗೆ ಕೇಡಂ ಪೇಳ್ವುದು—೬೩.

ಟೀ|| ಮನೆಯೊಳಗೆ ಬಾಗಿಲ್ ತೋರಣಂಗಳಲ್ಲಿ ಪಕ್ಷಿಗಳ್ ಮುಂತಾಗಿ9 ಬಂದು ಕುಳ್ಳಿರಲ್, ಸರ್ಪಂ ಬರಲ್, [ಪುತ್ತು ಪುಟ್ಟಲ್ ಎಂದಿರಬಹುದು] (ಅಡವಿಯಲ್ಲಿ ಚರಿಸುವಂತಹ ಮೃಗಪಕ್ಷಿಗಳ್ ಬಂದು ಮನೆಯಂ ಪುಗಲ್10) ಮನೆಯಲ್ಲಿ ಜೇನಿಕ್ಕಿದೊಡೆ ಆ ಮನೆಯೊಡೆಯಂಗೆ ಕೇ11ಡಂ ಪೇೞ್ವುದು, ನಾಯ್ಗಳ್ ಶಬದ ಎಲ್ಲಗಳಂ ಅವಯಂಗಳಂ ಕಚ್ಚಿಕೊಂಡು ಬಂದು ಮನೆಯಂ ಪುಗಲ್ ಆ ಮನೆಯಲ್ಲಿ ರೋಗಂ ಪುಟ್ಟುಗುಂ, ಆಕಳ್ಗಳ್ ಅಂಬನೆೞೆದುಕೊಂಡುಬಂದು ಊರಂ ಪೊಕ್ಕೊಡೆ ಆ ಪಟ್ಟಣದರಸಿಂಗೆ ಕೇಡಂ ಪೇೞ್ವುದು—೬೪.

ಟೀ|| ಈ ಪೇೞ್ದಂತಹ 12ಮೃಗಪಕ್ಷಿಗಳ ವಿಕಾರಂ ಪುಟ್ಟಲ್ ಶಾಂತಿಯಂ ಬಯಸುವಂತಹ ಅರಸಂ ಬ್ರಾಹ್ಮಣರ್ಗೆ ಮೃಷ್ಟಾನ್ನಮನಿಕ್ಕಿಸಿ 13ಉತ್ತಮದ ಹೋಮಂಗಳಂ ಮಾಡಿಸಿ ಭೂದಾನಂ ಮೊದಲಾದ ದಾನ14ಮಂ ಮಾಡಲಾ ಉತ್ಪಾತಂ ಶಾಂತಮಪ್ಪುದು—೬೫

ಟೀ|| ಸ್ತ್ರೀಯರ್ಗೆ ಪ್ರಸೂತಿಕಾಲಮಾಗುತ್ತಿರಲ್ ಹೀನಾಂಗದ ಅಧಿಕಾಂಗದ ಶಿಶುಗಳ್ ಪುಟ್ಟಲ್, ಅಲ್ಲಾ ಅವಳಿಮಕ್ಕಳಾಗಿ ಮೂಱು ನಾಲ್ಕಯ್ದು ಪರ್ಯಂತಂ 15ಪುಟ್ಟಲ್ ಆ ಕುಲಂ ಕೆಟ್ಟುಪೋಪುದು—೬೬.

1 ದೊಳ್ ನೆಱೆಗೆ. 2 ನವದೊಳ್ ಜಂ, ವನದೊಳ್. 3 ಯೆ ನಿನೆಗೆ. 4 ಯಂ ಜನಿಸುತ್ತಿಕ್ಕಗಳ್ಳಂ ಮೇಣಶುಭವಯವದುಂ. 5 ಪುತ್ತುಂ (ತ್ರ) ಬರ್ಪಂದು ಭೂಮಿಶ. 6 ಳೊಳಗೆ ಎಡ(ಱ)ಯ ಮರಕುಳ. 7 ಮನೆಯ ರಾಜಾಂಗಣದೊಳ್. 8 ಆ ಮನೆ ಪಾೞಪ್ಪುದು. 9 ಹಿಂತಾಗಿ. 10 ಪುಗಲ್ ರೋಗಂ ಪುಟ್ಟುವುದು. 11 ಹೀನವು. 12 ಮೃಗಂಗಳಿಂದ ಉತ್ಪಾತಂಗಳ್. 13 ಉಕ್ತಿವ ಹೋಮಂ. 14 ಸಂಪೂರ್ಣಮಾಗಿ ಮಾಡಲ್, ಸುವರ್ಣದಾನಂಗಳಂ ಮಾಡಲ್. 15 ಅವಳು ಮಕ್ಕಳ್ ಪುಟ್ಟಲ್.

(ಪಶುಮೃಗಾದ್ಯುತ್ಪಾತಂ)

ಉ|| ಗೋಮಹಿಷೀಕರೇಣು ತುರಗೋಷ್ಟ್ರಕುಲಕ್ಕವಳಾಗೆ ಪೊಂದುಗುಂ |
ತಾಮಱುದಿಂಗಳಿಂಗೆ ನೆಲೆಗೆಟ್ಟುೞಿಗುಂ ನಿಜಯೂಥಮಂ ನಿಜ ||
ಸ್ವಾಮಿಯುಮಂತವಂ ಪರನೃಪಾವಳಿಗಿಟ್ಟೆ ಧರಾಮರರ್ಗ್ಗೆ ಗೋ |
ಭೂಮಿಹಿರಣ್ಯದಾನಮನನಾಕುಳದಿಂ ಕುಡೆ ದೋಷನಾಶನಂ || ೬೭ ||

ಉ|| ಪಾವಿಲಿ ಬೆಕ್ಕು ಮತ್ಸ್ಯಮಿನಿತುಂ ಪೊಱಗಾಗಿರೆ ಮತ್ತಮನ್ಯ ಜೀ |
ವಾವಳಿ ತಮ್ಮ ಜಾತಿಯಡಗಂ ತಿನೆ ಪೆವರ್ಸಮಕ್ಕುಮಲ್ಲಿ ನಾ ||
ನಾವಿಧ ಜೀವರಾಶಿ ಪರಯೋನಿಗಳೊಳ್ [1]ನೆರೆವಲ್ಲಿ ನಾಡೆ ಕೇ |
ಡಾವಗಮೆಂಗೆ ವಾಜಿಗಳೊಳಲ್ಲಿ [2]ಮನುಷ್ಯರೊಳಲ್ಲಿ ನಿಂದಿತಂ || ೬೮ ||

ಚಂ|| ಚರಣಮನಾವಗಂ ಬಡಿಯೆ ಜೀವಧನಂ ತನುಪೀಡೆ ಮುಂತೆ ಮೆಯ್ |
ಮುಱಿದುಮಭಕ್ಷ್ಯಮಂ ತಿನೆ ಲಯಂ ನಡುಗುತ್ತಿರೆ ಕಳ್ಳರಿಂ ಭಯಂ ||
ನಿರುಜನಡುರ್ತು ಮೋಹುಗೊಳುತುಂ ಬಡವಪ್ಪೊಡೆ ಹಾನಿ ರಾತ್ರಿಯೊಳ್ |
ಕಱೆಯೆ ನಿರಾಕುಳಂ ಬರಡು ತತ್ಪತಿಗಾಗಳೆ ಕೇಡ ಮಾಡುಗುಂ || ೬೯ ||

ಮ|| ಮೊದಲಿಂದಂ ಮುಱಿದಂದು ದಕ್ಷಿಣರದಂ ಭೂಪರ್ಗೆ ಮಧ್ಯಪ್ರದೇ |
ಶದೆ ದೇಶಕ್ಕೆ ತದಗ್ರದಿಂ ಪರಿಜನಕ್ಕಕ್ಕುಂ ಲಯಂ ವಾಮದಂ ||
ತದ ಭಂಗಂ ಕ್ರಮದಿಂ ಕುಮಾರಕ ಪುರೋಧೋಮಂತ್ರಿವರ್ಗಕ್ಕೆ ಮಾ |
ಣದಿಭಂ ಕ್ಷೀಣಕುಜಾದಿಗಳ್ ಮುಱಿವಿನಂ ಪಾಯ್ದಂದು ಶತ್ರುಕ್ಷಯಂ || ೭೦ ||

ಟೀ|| ಗಂಟೆಯಾಕಳು, ಎಮ್ಮೆ, ಆನೆ, ಕುದಿರೆ, ವೊಟ್ಟೆ ಇವರ್ಕೆ ಅವೞಿ ಮಱಿಗಳ್ ಪುಟ್ಟಲ್[3] ಆಱುದಿಂಗಳಿಂಗೆ ಸಾವುವು ಅಲ್ಲಾ ತಮ್ಮ ಹಿಂಡುಗಳನಗಲಿ ಪೋಪ್ಪುವು, ಅಂತಹ ಪಶುಮೃಗಗಳ ಒಡೆಯಂ ಅವಂ ಪರದೇಶದರಸರ್ಗಿಟ್ಟೆ ಬ್ರಾಹ್ಮಣರ್ಗೆ ಗೋದಾನ, ಭೂಮಿದಾನ, ಹಿರಣ್ಯದಾನ, ಮೊದಲಾದ ದಾನಂಗಳಂ ವಿನಯದಿಂದೆ ಮಾಡಲ್ ಆ ದೋಷಂಗಳ್ ಕಿಡುವುವು—೬೭.

ಟೀ|| ಪಾವು, ಇಲಿ, ಬೆಕ್ಕು, ಮೀನ್ ಇವು ಪೊಱಗಾಗೆ ಉೞಿದ ಜೀವರಾಶಿಗಳ್ ತಂತಮ್ಮ ಜಾತಿಯ ಮಾಂಸಮಂ ತಾವೆ ತಿನೆ ಅನಾವೃಷ್ಟಿಯಾಗಿ ಬಱನಪ್ಪುದು, ಮನುಷ್ಯರ್ ಕುದಿರೆಗಳ್ ಪೊಱಗಾಗೆ ಜೀವರಾಶಿಗಳ ಅನ್ಯಜಾತಿಗಳ ಯೋನಿಗಳಲ್ಲಿ ಕೂಟಮಂ ಕೂಡಲ್ ಆ ದೇಶಂ ಕಿಡುವುದು—೬೮.

ಟೀ|| ಗೋವುಗಳ್ ವ್ಯಾಧಿಗಳಿಲ್ಲದೆ ಅವಾಗಳುಂ ಕಾಲ್ಗಳಂ ಒಡಿಮುಕೊಳಲ್ ಆವೞಿ ಒಡೆಯಂಗೆ ವ್ಯಾಧಿಯಪ್ಪುದು, ಆ ಗೋವ್ಗಳುಂ ಮುಖಮಂ ಪಿಂದಕ್ಕೆ ತಿರಿಗಿಸಿ ಅಭಕ್ಷ್ಯಂಗಳಂ ತಿನಲ್ ಆ ಒಡೆಯಂಗೆ ಕೇಡಂ ಪೇೞ್ವುದು, ಆ ಗೋವುಗಳ್ ಸುಮ್ಮನೆ ನಿಮಿತ್ತಮಿಲ್ಲದೆ ನಡುಗುತ್ತುಮಿರಲ್ ಕಳ್ಳರಿಂದೆ ಭಯಮಕ್ಕುಂ ಮೋಹಂ ಕೊಳುತ್ತುಂ ಸುಮ್ಮನೆ ಬಡವಾದೊಡಂ ಒಡೆಯಂಗೆ ನಷ್ಟಮಂ ಪೇೞ್ವುದು, ಬರಡಾಕಳು ಬಿಡದೆ ಕಱೆದೊಡೆ ಒಡೆಯಂಗೆ ಕೇಡಂ ಪೇೞ್ವುದು—೬೯.

ಟೀ|| ಬಲದ ದಾಡೆ ಇರ್ದಂತಿರ್ದು ಮೊದಲಿಂದ ಮುಱಿದೊಡೆ ಅರಸಿಂಗೆ ಕೇಡಂ ಪೇೞ್ವುದು, ನಡುದಾಡೆ ಮುಱಿದೊಡೆ ಆ ದೇಶಕ್ಕೆ ಕೇಡಂ ಪೇೞ್ವುದು. ತುದಿದಾಡೆ ಮುಱಿದೊಡೆ

1 ನೆಱೆವಂದು. 2 ಮನುಷ್ಯರುಮಲ್ಲಿ. 3 ಅವೞಿ ಕಾಯ್ಗಳ್ ನೆಲೆಗಿಡುವುವು. ಇಷ್ಟನಱಿತಂತಹ ಅವೞಿ ಒಡೆಯಂ ಆ ಮಱಿಯನಿಕ್ಕಿದಂತಪ ಅವಂ ಪರದೇಶಂಗಳ್ಗೆ ಕಳುಹಿಸಿ ಬ್ರಾಹ್ಮಣರುಗಳಿಗೆ.



ತರಳಂ|| ಎರಡು ಸಂಜೆಯೆ ದೀಪ್ತಮದ್ಭುತಮಪ್ಪೊಡಂ ಕರಿನೋರ್ವಿ ಮೇಣ್ |
ಪರಿವೊಡಂ ಧರಣಿಪ್ರಕಂಪನಮಪ್ಪೊಡಂ ಭಯಮಕ್ಕು ಮು ||
ವರಿಗೆ ರಾಕ್ಷಸರೂಪುಮದ್ಭುತಮಾಗಿ ತೋರ್ಪೊಡೆ ಪುಟ್ಟುಗುಂ |
ಮರಣಮುಂ ಪಕೃತಕ್ಕೆ ಮಾಡುಗೆ ಕೋಟಿ ಹೋಮದ ಶಾಸ್ತಿಯಂ || ೭೧ ||

ಮ|ಸ್ರ|| ಪರಿವೇಷಂ ಭೂಮಿಕಂಪಂ ಪೊಗೆಯೊಗೆಯೆ ಸಿಡಿಲ್ ಕಾದ್ರ ಸಂಧ್ಯಾದ್ವಯಂ ನೀ |
ಳ್ದ ರಜಂ ನಿರ್ಘಾತಮೆಂದಿಂತಿವು ಸವನಿಸೆ ಮೇಣ್ ವೃಕ್ಷದೊಳ್ ಮಾಕ್ಷಿಕ ಸ್ನೇ ||
ಹರಸಂ ಪುಷ್ಪಂಗಳುಂ ಸಂಭವಿಸೆ ಪಶುಗಳಂ ಪಕ್ಷಿಗಳ್ [1]ಸೋಂಕೆ ನಿರ್ದು |
ಷ್ಕರಮಂತಾ ಚೈತ್ರವೈಶಾಖಮೊಳನಿತು ವಿಕಾರಂಗಳಾದಂದು ತದ್ಜ್ಞರ್ || ೭೨ ||

ಶಾ|| ಕಾರುಳ್ಕಾಪತನಂಗಳಾಗೆ ರಜಮುಂ ಪೆರ್ಗಾಳಿಯುಂ ಪೆರ್ಚೆ ಸಂ |
ಧ್ಯಾರಾಗಂ ಕಿಡಿ ಪೊಣ್ಮೆ ವಹ್ನಿರಹಿತಂ ಧೂಮಾರ್ಚಿಗಳ್ ಪುಟ್ಟೆ ಮೇಣ್ ||
ಸೂರೇಂದು[2]ದ್ಯುತಿಗಳ್ ಕವಲ್ತಿರೆ ನದಂಗಳ್ ಬತ್ತೆ ಸಂಕ್ಷೋಭಿತಾಂ |
ಭೋರಾಶಿಪ್ರತಿಮಾನಮಾಗಿರೆ ನಭಂ ನಿರ್ದೋಷಮಾ ಗ್ರೀಷ್ಮದೊಳ್ || ೭೩ ||

ಸೇವಕಜನಕ್ಕೆ ಕೇಡಂ ಪೇೞ್ವುದು, ಎಡಗಡೆಯದಾಡೆ ಮುಱಿದೊಡೆ ಅರಸಿನ ಕುಮಾರವರ್ಗಕ್ಕೆ ಕೇಡಂ ಪೇೞ್ವುದು, ಎಡದಾಡೆ ಮಧ್ಯಕ್ಕೆ ಮುಱಿಯಲ್ ಆ ಅರಸಿನ ಪುರೋಹಿತಂಗೆ ಕೇಡಂ ಪೇೞ್ವುದು, ಎಡಗಡೆಯ ತುದಿದಾಡೆ ಮುಱಿದೊಡೆ ಪ್ರಧಾನವರ್ಗಕ್ಕೆ ಕೇಡಂ ಪೇೞ್ವುದು, ಸಸಿಮರಂಗಳಿರ್ದಂತಿರ್ದು ಮುಱಿದು ಬಿೞ್ದೊಡೆ ಆ ದೇಶಕ್ಕೆ ಕೇಡಂ ಪೇೞ್ವುದು—೭೦.

ಟೀ|| ಉದಯಾಸ್ತಮಯದೆರಡುಂಸಂಜೆಗಳೊಳ್ ದೀಪ್ತಸ್ಥಾನದೊಳದ್ಭುತಂ ತೋಱೆದೊಡೆ ಬಲಿಷ್ಠನಾಗಿರ್ದ ಭೂಮಿ ಇರ್ದಂತಿರ್ದು ಬಾಯ್ವಿಡೆ, ಭೂಮಿಯಿರ್ದಂತಿರ್ದು ನಡುಗಿದೊಡೆ ಪ್ರಜೆಗಳ್ಗೆ[3]ಪಾಯಮಂ ಪೇೞ್ವುದು, ರಾಕ್ಷಸರೂಪು ಇರ್ದಂತಿರ್ದು ತೋಱಿತೊಡೆ ಆ ದೇಶದ ಪ್ರಜೆಗಳ್ಗೆ ಸಾವಂ ಪೇೞ್ವುದು. ಅವರ್ಕೆ ಅರಸಾಗಿರ್ದಾತಂ ಕೋಟಿಹೋಮದ ಶಾಂತಿಯಂ ಮಾಡಲ್ ಆ ವುತ್ಪಾತಂ ಶಾಂತಮಪ್ಪುದು—೭೧.

ಟೀ|| ವಸಂತಾದಿ ಷಡೃತುಗಳಲ್ಲಿ ಪುಟ್ಟುವ ಅದ್ಭುತಂಗಳ ನಿರ್ದೋಷತ್ವಮಂ ಪೇೞ್ವರ್ಪರ್ ಸೂರ್ಯಚಂದ್ರರ್ಗೆ ಪರಿವೇಷಂ ತೋಱುಹ, ಭೂಕಂಪಮಾಗುಹ, ಇರ್ದಂತಿರ್ದು ಹೊಗೆ ಪುಟ್ಟುಹ, ಉದಯಾಸ್ತಮಯದೆರಡು ಸಂಧ್ಯಾಕಾಲಂಗಳಲ್ಲಿ ರಕ್ತವರ್ಣವಾಗೆ ಸಿಡಿಲೆಱಗುಹ, ಗಾಳಿಯಿಲ್ಲದೆ ಇರ್ದಂತಿರ್ದು ದೂಳಿಯೇೞುಹ, ಮೋಡಂಗಟ್ಟದೆ ಬಱಸಿಡಿಲೆಱಗುಹ, ಇಂತಹ ಉತ್ಪಾತಂಗಳ್ ಪುಟ್ಟಲ್, ಅಲ್ಲಾ ಮರಂಗಳಿಂದೆ ಜೇನುತುಪ್ಪಂ, ಎಳ್ಳೆಣ್ಣೆಗಳಂತೆ ರಸಂ ಪರಿಹ, ಅಕಾಲದಲ್ಲಿ ಆಗದಂತಹ ಪುಷ್ಪಂಗಳಾಗುಹ, ಪಶುಗಳಲ್ಲಿ ಪಕ್ಷಿಗಳ್ ಸಂಯೋಗಿಸುತ್ತಿರುಹ, ಇಂತಹ ಉತ್ಪಾತಂಗಳುಂ ಚೈತ್ರವೈಶಾಖಮಾಸಂಗಳಲ್ಲಿ ತೋಱಿದೊಡೆ ದೋಷಮಿಲ್ಲವೆಂದಱಿವುದು—೭೨.

ಟೀ|| ಕಾರಿರುಳಲ್ಲಿ ಉಲ್ಕು ಬೀೞುಹ, ದೂಳಿ ಮಸಗುಹ, ಬಿಱುಗಾಳಿ ಬೀಸುಹ, ಉಭಯ ಸಂಧ್ಯಾಕಾಲಂಗಳಲ್ಲಿ ಆಕಾಶದೊಳಗೆ ಕೆಮ್ಮುಗಿಲ್ ಮಸಗುಹ, ಕಿರ್ಚಿಲ್ಲದೆ ಹೊಗೆಜ್ವಾಲೆಗಳ್ ತೋಱುಹ, ಸೂರ್ಯಚಂದ್ರರ್ಕಳ ಕಿರಣಂಗಳೆರಡಾಗಿ ತೋಱುಹ, ನದೀನದಂಗಳ್

1 ಸೋಂಕೆ ನಿರ್ದೋಷಮುಮಂತಾ ಚೈತ್ರ, ಸಂಬ್ಯೆನಿರ್ದುಷ್ಕರಮಂತಾ. 2 ದ್ಯುತಿಕವಲ್ತಿರೆ ನದಂಗಳ್ ಸಂಕ್ಷೊ. 3 ಗಳ್ಗೆಪಾತಿಯಂ.

ಚಂ॥ ಸುರಧನು ಮೂಡೆ ಮಿಂಚೆ ಪರಿವೇಷ[1]ಮದಾಗಿರೆ ಶುಷ್ಕವೃಕ್ಷಮೊಂ |
ದಿರೆ ತಳಿರ್ಗೊಳ್ [2]ನೆಲಂ ಮೊರೆಗೆ ಕಂಪಿಸೆ ಬಾಯ್ಬಿಡೆ ಬೆಟ್ಟು ಬೀೞೆ [3]ಮಂ ||
ದಿರ ಮುಡಿದಟ್ಟಿ ತಗ್ಗೆ ನದಿಯಿಂ ಸ್ರವಣಂ ಪೊಱಪೊಣ್ಮೆ ಮಿಕ್ಕು ಪೊ |
ಕ್ಕರಣೆಯನೀರ್ಗಳುರ್ಕಿ ಪೊಱಪೊಣ್ಮೆ ಘನಾಗಮದೊಳ್ ವಿನಿಂದಿತಂ || ೭೪ ||

ಮಂದಾಕ್ರಾನ್ತಂ॥ ಭೂತವ್ರಾತಂ ಸುರಗಣವಿಮಾನೋತ್ಕರಂ [4]ದೇವ ಸಂಧ್ಯಾ |
ಘಾತಂ ತೋಱುತ್ತಿರೆ ಗಗನ[5]ದೊಳ್ ಭೂಧ್ರಕುಂಜಂಗಳೊಳ್ ಸಂ ||
ಗೀತಾ[6]ತೋದ್ಯಂ ನೆಗೞೆ ಪಗಲೊಳ್ ತಾರೆಗಳ್ [7]ತೋಱಲುಳ್ಕಾ |
ಪಾತಂಗಳ್ ತೋರ್ದೊಡೆ ಶರದದೊಳ್ ನಂದನಂದೋಕ್ತಿಯಿಂದಂ || ೭೫ ||

ಮ॥ ಮೃಗಪಕ್ಷಿಧ್ವನಿ ಮಂಜು ಶೀತಪವನಂ ದಿಗ್ಧೂಮಮೆಂದಿಂತಿವಾ |
ಗಿ [8]ಗಿರೀಂದ್ರಂ ವನದಾಸರಂಗಳೆಡೆಯೊಳ್ ತಳ್ತಿತ್ತಲುಂ ಸುತ್ತಿ ಗಾ ||
ಡಿಗೆ ದಿವ್ಯಾಂಬರಮುಣ್ಮೆ ರಾಕ್ಷಸಗಣಂಗಳ್ ತೋಱೆ ಮಾರ್ತಂಡನು |
ರ್ವಿಗತಾಸ್ತೋದಯಮಾಗೆ ಗಾರ್ಗ್ಯಮತದೊಳ್ ಹೇಮಂತದೊಳ್ ನಿರ್ಭಯಂ
|| ೭೬ ||

---

ಇರ್ದಂತಿರ್ದು ಬತ್ತುಹ, ಕಲಂಕಿದ ಸಮುದ್ರಂಗಳುಂ ಆಕಾಶಮುಂ ಸಮನಾಗಿ ತೋಱುಹ, ಇಂತಹ ಉತ್ಪಾತಂಗಳ್ ಜ್ಯೇಷ್ಠಾಷಾಢ ಮಾಸಂಗಳಲ್ಲಿ ತೋಱಲ್ ದೋಷಂಗಳಿಲ್ಲಂ—೭೩.

ಟೀ॥ ಇಂದ್ರಧನು ಮೂಡುಹ, ಮಿಂಚು ತೋಱುಹ, ಸೂರ್ಯಚಂದ್ರರ್ಗೆ ಪರಿವೇಷ ಮಾಗುಹ, ಒಣಗಿರ್ದ ಮರಂಗಳ್ ಚಿಗುರುಹ, ಭೂಮಿ ದನಿಗುಟ್ಟುಹ, ನಡುಗುಹ, ಬಾಯ್ಬಿಡುಹ, ಬೆಟ್ಟಂಗಳ್ ಬಿರಿದು ಬೀೞುಹ, ಮನೆಗಳ್ ಕುಗ್ಗಿ ತಗ್ಗುಹ, ನದೀನದಂಗಳುರ್ಕಿಹರಿಹ, ಒಕ್ಕರಣೆಗಳ ಬಾವಿ ಉಕ್ಕಿ ತುೞ್ಚಾಡಿ ಹರಿಹ, ಈ ಅದ್ಭುತಂಗಳ್ ವರ್ಷಾಕಾಲದ ಶ್ರಾವಣ, ಭಾದ್ರಪದ ಮಾಸಂಗಳಲ್ಲಿ ತೋಱಿದೊಡೆ ದೋಷಮಿಲ್ಲಂ—೭೪.

ಟೀ॥ ಚತುರ್ವಿಧಮಹಂತಹ ಭೂತಸಮೂಹಂ ಗಂಧರ್ವಾದಿ ದೇವಗಣಂಗಳ್ ತೋಱುಹ, ವಿಮಾನಂಗಳ್ ತೋಱುಹ, ಪರ್ವತಂಗಳ ಪೊದರುಗಳಲ್ಲಿ ನಾನಾಧ್ವನಿ ಕೇಳಬರುಹ, ದಿವದಲ್ಲಿ ನಕ್ಷತ್ರಂಗಳ್ ತೋಱುಹ, ಈ ವಿಕಾರಂಗಳ್ ಶರತ್ಕಾಲದಲ್ಲಿ ಆಶ್ವಯುಜ ಕಾರ್ತೀಕಮಾಸಂಗಳಲ್ಲಿ ತೋಱಲ್ ನಂದಾಚಾರ್ಯರ ಮತದಿಂದೆ ದೋಷಮಿಲ್ಲಂ—೭೫.

ಟೀ॥ ಪಕ್ಷಿಮೃಗಂಗಳ ವಿಕಾರಧ್ವನಿ ಪುಟ್ಟುಹ, ಮಂಜುಮುಸುಕುಹ, ಆದಿತ್ಯಂ ಶೈತ್ಯವಹ, ಬಿಱುಗಾಳಿ ಬೀಸುಹ, ದಿಕ್ಕುಗಳಲ್ಲಿ ಪೊಗೆ ಮುಸುಗುಹ, ಅಡವಿಯೊಳ್ ಸರೋವರದೊಳ್ ಬೆಟ್ಟಂ ಸುತ್ತಿದಂತೆ ತೋಱುಹ, ರಾಕ್ಷಸಗಣಂಗಳ್ ತೋಱುಹ, ವಸ್ತ್ರಂಗಳ್ ಸುತ್ತಿದಂತೆ ತೋಱುಹ, ಸೂರ್ಯಂ ಭೂಮಿಯ ಮೇಲೆ ಉದಯಾಸ್ತಮಯಮಾದಂತೆ ತೋಱುಹ, ಇಂತಹ ವಿ[9]ಕಾರಂಗಳ್ ಹೇಮಂತರ್ತುವಿನೊಳ್ ಮಾರ್ಗಶಿರಪುಷ್ಯಮಾಸಂಗಳೊಳ್ ತೋಱಲ್ ಗರ್ಗಾಚಾರ್ಯರ ಮತದಿಂದೆ ದೋಷಕರಮಲ್ಲಂ—೭೬.

---

1 ಮಾಗಿರೆ. 2 ಮರಂ. 3 ಮುಂಬರಮುಡಿದುಗ್ಗಿರೆ. 4 ದೇವತಾಸಂಧ್ಯಾ. 5 ಳಿಂದ್ರದ್ರಿಕುಜಂಗಳೊಳ್. 6 ಗೀತಾವಾದ್ಯಂ. 7 ತೋಱೆ ಮೇಣುಳ್ಕಾಪಾತಂಗಳ್ ತೋಱುವೊಡೆ ಶರದ. 8 ಗಿರೀಂದ್ರ ವನಾವಸಥಂಗ. 9 ಉತ್ಪಾತಂಗಳ್.



ಹರಿಣಿ॥ ಪವನಜನಿತೋತ್ಪಾತಂ ಸ್ತ್ರೀರೋಷಮುದ್ಭುತಗರ್ಭಸಂ |
ಭವಮಭಿತಾರೋಳ್ಕಾಪಾತಂ ಲತಾಂಕುರವೈಕೃತಂ ||
ವಿವಿಧವಿಕೃತಾಕಾರಂ ಭಿನ್ನಾಂಜನಪ್ರತಿಮಾಂಬರಂ |
ಸವನಿಸಿರೆ ನಿರ್ದೋಷಂ ತಾನಕ್ಕುಮಾಶಿಶಿರಾಗ್ರದೊಳ್ || ೭೭ ||

ಕಂ॥ ಪವಮಾನಂ ದಹನಂ ವಾ |
ಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂ ||
ದಿವಗಳೊಳೊಂದೊಂ(ದರೆ?)ದುಂ ಜಾ |
ವವನಾಳ್ವರ್ ಬೇಱೆವೇಱೆಯಾಕ್ರಮದಿಂದಂ || ೭೮ ||

ಕಂ॥ ಸ್ವಾತಿ ಪುನರ್ವಸು ಪಶ್ವಿನಿ |
ಶೀತಕರಂ ಚಿತ್ರೆ ಹಸ್ತಮುತ್ತರೆಯೆಂದಿಂ ||
ತೀತಾರೆಗಳೇೞುಂ ವಿ |
ಖ್ಯಾತಿಯ ವಾಯುವ್ಯಮಂಡಲಂ ತಾಮಕ್ಕುಂ || ೭೯ ||

ಅನವದ್ಯಂ॥ ಪವನಮಂಡಲದೊಳ್ ಮರುತಾಕಂಪಾದಿಗಳಾದೊಡೆ ಶಸ್ತ್ರಭೃ |
ತ್ಕವಣಿವಾಸನ ಗಾಯಕವೈಶ್ಯಂ ಶಿಲ್ಪಿವಿನಾಶನಮೊಂದುಗುಂ ||
ವಿವಿಧರೋಗದವಗ್ರಹದಿಂದಂ ತಾಂ ಕಿಡುಗುಂ ಕುರುಮಾಗಧ |
ದ್ರವಿಡಮಂಡಳ ಕುಂತಳಮುರ್ತ್ಯೋರ್ವೀವಳಯಂ ಮಿಗೆ ಬರ್ದುಕುಂ || ೮೦ ||

---

ಟೀ॥ ಗಾಳಿಯಿಂದೆ ಪುಟ್ಟಿದ ವಿಕಾರಂಗಳ್, ಸ್ತ್ರೀಯರ್ಕಳಿಂದೆ ಪುಟ್ಟಿದ ಹೀನಾಧಿಕಾಂಗದ ಗರ್ಭದುತ್ಪತ್ತಿಗಳ್ ದಿವಾರಾತ್ರಂಗಳೆನ್ನದೆ ಉಲ್ಕು ಬೀೞುಹ, ಲತೆಗಳೊಳಗೆ ವಿಕಾರಂಗಳ್ ಪುಟ್ಟುಹ, ವಿವಿಧವಾದ ವಿಕೃತಾಕಾರಂಗಳ್ ಒಡೆದ ನೀಲಾಂಜನದ ಕಲ್ಲಚ್ಛಾಯೆಯು ಆಕಾಶದಲ್ಲಿ ತೋಱುಹ, *ಈ ಉತ್ಪಾತಂಗಳ್ ಶಿಶಿರರ್ತುವಿನ ಮಾಘಫಾಲ್ಗುಣ ಮಾಸಂಗಳಲ್ಲಿ ತೋಱಿದೊಡೆ ದೋಷಮಿಲ್ಲಂ—೭೭.

ಟೀ॥ ವಾಯು, ಅಗ್ನಿ, ಇಂದ್ರಂ, ವರುಣಂ ಇವರ್ ಮೊದಲಾದ ದಿಕ್ಪಾಲಕರ್ ದಿವಾರಾತ್ರಿಗಳ ಜಾವಂಗಳಲ್ಲಿ ಆರಿಯರೆಜಾವಮಂ ಉದಯಕಾಲದಲ್ಲಿ ಇಂದ್ರಂ ಮೊದಲಾಗೆ ಕ್ರಮದಿಂ ಭೋಗಿಸುವರ್—೭೮.

ಟೀ॥ ಸ್ವಾತಿ, ಪುನರ್ವಸು, ಅಶ್ವಿನಿ, ಮೃಗಶಿರೆ, ಚಿತ್ರೆ, ಹಸ್ತ, ಉತ್ತರೆ ಈ ಏೞುಂ ನಕ್ಷತ್ರಂಗಳ್ ವಾಯುವ್ಯಮಂಡಲಮೆನಿಸಿಕೊಳ್ವುದು—೭೯.

ಟೀ॥ ಪವನಮಂಡಳದೊಳಗಣ ನಕ್ಷತ್ರಂಗಳ ವಾಯು ಕಂಪಿಸಲ್ ಓಲೆಯಕಾಱ ವ್ಯವಹಾರಿ, ಭಟ್ಟಂ, ಹಾಡುವ ಗಣರ್, ವೈಶ್ಯರ್, ಬಡಗಿ, ಚಿಪ್ಪಿಗ ಮೊದಲಾದ ಶಿಲ್ಪವಿದ್ಯೆಗಳಲ್ಲಿ ಬರ್ದುಕುವ್ವ ಇಂತಹ ಜಾತಿಗಳ್ಗೆ ಕೇಡುಂ, ಎಲ್ಲಾ ದೇಶಂಗಳ್ ಮಱೆಯಿಲ್ಲದೆ ಸಸಿಗಳ್ ಕಿಡುವುವು.

---

* ಇವಱಿಂದೆ ಊರುಗಳ್ಗೆ ಕೇಡಂ ಪೇೞ್ದುದು, ಎಲ್ಲಾ ದೇಶಂಗಳಲ್ಲಿಯುಂ ಮಱೆಯಿಲ್ಲದೆ ಬಜಿನಸ್ಯಂ, (ಕೆಡುವುದು) ಕುರುದೇಶ, ಮಗಧದೇಶ, ತಿಗುಳದೇಶ ಮಂಡಲಕುಂತಳದೇಶಮುೞಿದ ಭೂವಳಯಂ ಇಂತಹ ದೇಶಂಗಳ್ಗೆ ಲೇಸಂ ಪೇೞ್ದುದು (ಗ್ರಂಥಪಾತದಿಂದ).

ಕಂ|| ಭರಣಿಮಘೆ ಪೂರ್ವೆ ಕೃತ್ತಿಗೆ |
ಸುರಮಂತ್ರಿ ವಿಶಾಖೆ ಪೂರ್ವಭಾದ್ರಪದೆ ಖ(ರು)ಕ್ಷೋ |
ತ್ಕರಮೆಂಬೇಱುಂ ವೈಶ್ವಾ |
ನರಮಂಡಳಮೆಂಬ ನಾಮಮಂ ತಳೆದಿರ್ಕುಂ || ೮೧ ||

ಮಲ್ಲಿಕಾಮಾಲೆ|| ಅಂಗವಂಗಕಳಿಂಗ ಕೇರಳ ಬಾಹ್ಲಿಕ ದ್ರವಿಡಾದಿ ದೇ |
ಶಂಗಳೆಂಬಿವು ಕೇಡನೆಯ್ದುಗುಮುಯ್ದಿ ಪೆರ್ವಸಮಕ್ಕುಮು ||
ಗ್ರಂಗಳಾ ಜ್ವರಂ ವಿಷೂಚಿಕೆ ಎಂಬಿವಾಗಳೆ ಪೊರ್ದುಗುಂ |
ಪಿಂಗುಗುಂ ನೃಪಮೈತ್ರಿ ಪಾವನಮಂಡಳೋದ್ಭವದೋಷದಿಂ || ೮೨ ||

ಕಂ|| ಶ್ರವಣಂ ಧನಿಷ್ಠೆ ರೋಹಿಣಿ |
ದಿವಿಜಾಧಿಪನಭಿಜೆಯುತ್ತರಾಷಾಢಂ ಮೈ ||
ತ್ರವೆನಿಪ್ಪ ತಾರೆಗಳ್ ವಾ |
ಸವಮಂಡಳಮೆಂಬ ನಾಮಮವಚಳಿತವಚನಾ || ೮೩ ||

ಪೃಥ್ವೀ|| [1]ಸುರಾಧಿಪತಿಮಂಡಲಪ್ರಭವದೋಷದಿಂದದ್ಭುತಂ |
ಸುರಾಷ್ಟ್ರಮಭಿಸಾರಮೆಂಬ [2]ವಿಷಯಕ್ಕಮಕ್ಕುಂ ಭಯಂ ||
ನರೇಂದ್ರರೞಿವರ್ ಪಲರ್ ಪ್ರಬಲವೃಷ್ಟಿಯಕ್ಕುಂ ಸಮ |
ಸ್ತರೋಗದಿನಿಳಾತಳಂ ಲಯಮನೆಯ್ದುಗುಂ ನಿಶ್ಚಯಂ || ೮೪ ||

---

ಕುರುಮಾಗಧ, ಮಗಧದೇಶ, ತಿಗುಳದೇಶ, ಮಂಡೆಳ ಕುಂತಳದೇಶಮುೞಿದ ಭೂವಳಯಂ ಇಂತಹ ದೇಶಂಗಳ್ಗೆ ಲೇಸಂ ಪೇೞ್ವುದು—೮೦.

ಟೀ|| ಭರಣಿ, ಮಘೆ, ಪುಬ್ಬೆ, ಕೃತ್ತಿಕೆ, ಪುಷ್ಯಂ, ವಿಶಾಖೆ, ಪೂರ್ವಭಾದ್ರಪದೆ ಎಂಬೀ ಯೇೞುಂ ನಕ್ಷತ್ರಂಗಳ್ ಅನುಕ್ರಮದಿಂ ಕೂಡಿ ಮೂಡುತ್ತಿರಲ್ ಅದು ವೈಶ್ವಾನರಮಂಡಲ ಮೆನಿಪುದು—೮೧.

ಟೀ|| ಅಂಗದೇಶ, ವಂಗದೇಶ, ಕಳಿಂಗದೇಶ, ಮಲೆಯಾಳದೇಶ, ಸಿಂಧುದೇಶ, ತಿಗುಳಾಣ್ಯ ಈ ದೇಶಂಗಳ್ಗೆ ಕೇಡಂ ಪೇೞ್ವುದು. ಉೞಿದ ದೇಶಂಗಳ್ಗೆ ದುರ್ಭಿಕ್ಷಂ, ಜ್ವರಂ, ಅಜೀರ್ಣಂ, ವಿಷೂಚಿಕೆ (ಅಜೀರ್ಣ) ಈ ದೋಷಂಗಳ್ ಅಪ್ಪುವು. ಅರಸುಗಳ್ ತಮ್ಮೊಳಗೆ ಸ್ನೇಹಂ ಪುಟ್ಟದೆ ಕಲಹಂಗಳಂ ಮಾೞ್ಪರ್ ಇಂತಹ ಕೇಡುಗಳಗ್ನಿಮಂಡಲದಿಂದಪ್ಪುವು—೮೨.

ಟೀ|| ಶ್ರವಣಂ, ಧನಿಷ್ಠೆ, ರೋಹಿಣಿ, ಜ್ಯೇಷ್ಠೆ, ಅಭಿಜಿತು, ಉತ್ತರಾಷಾಢೆ, ಅನುರಾಧೆ, ಈ ಯೇೞುಂ ನಕ್ಷತ್ರಂಗಳ್ ಕ್ರಮದಿಂದಮೊಂದೇ ಬಾರಿ ತೋಱಿದೊಡೆ ಅದು ಇಂದ್ರಮಂಡಳ ಮೆಂಬುದು—೮೩.

ಟೀ|| ಇಂದ್ರಮಂಡಲದ ನಕ್ಷತ್ರಂಗಳ ದೋಷದ ಸಾಮರ್ಥ್ಯದಿಂ ಸೌರಾಷ್ಟ್ರದೇಶಂ, ಅಭಿಸಾರದೇಶಂ—ಈ ಯೆರಡುಂ ದೇಶಕ್ಕಂ ಭಯಮಕ್ಕುಂ. ಪಲಂಬರರಸುಗಳ್ ಲಯಮನೆಯ್ದುವರ್, ಅತಿವೃಷ್ಟಿಯಪ್ಪುದು, ಸಕಲವ್ಯಾಧಿಗಳಿಂ ಭೂತಲಂ ಲಯಮನೆಯ್ದುವುದು—೮೪.

1 ಸುವಾಧಿಪಮಂಡಲ. 2 ಮಂಡಲಕ್ಕ.



ಕಂ|| ಶತಭಿಷೆ ಮೂಲಂ ಫಣಿ ರೇ |
ವತಿ ಪೂರ್ವಾಷಾಢೆಯುತ್ತರಾಭಾದ್ರೆಯುಮಾ ||
ಪತಿಯೆನಿಸಿದ ನಕ್ಷತ್ರ |
ಪ್ರತತಿಗಳಾರಯ್ಯೆ ವರುಣಮಂಡಲಮಕ್ಕುಂ || ೮೫ ||

ಕಂ|| ವೈದೇಹಿಕ ಗೋವರ್ಧನ |
ಚೇದಿ ವಿಹಾರಾದಿ ದೇಶ ಮೞಗುಂ ರಿಪುಗಳ್ ||
ಕಾದಿದೊಡೆ ಕೆಳೆಗೊಳ್ಗುಂ ಮೞೆ |
ಯಾದಂ ಪಿರಿದಕ್ಕು ವರುಣಮಂಡಲಫಲದಿಂ || ೮೬ ||

ಮ|| ಸಲೆ ವಾಯೂದ್ಭವವೇಳೆಯೊಳ್ ನೆಗಲ್ದ ಭೂಕಂಪಾದಿಯುಂ ಶಕ್ರಮಂ |
ಡಲವಾ ವಾಸವವೇಳೆಯೊಳ್ ಜನಿಯಿಸಿರ್ದುತ್ಪಾತಮುಂ ವಾಯುವಂ ||
ಡಲಮಾರಯ್ಯೆ ಪರಸ್ಪರಂ ಕಿಡಿಸುಗುಂ ಮೇಣ್ವಾರುಣಾಗ್ನೇಯಮಂ |
ಡಲವೇಳಾಕ್ರಮನೊಂದಿ ಸಂಭವಿಸಿದುತ್ಪಾತಂಗಳಂ ತೂಳ್ದುಗುಂ || ೮೭ ||

ಉ|| ಮಾರುತವೇಳೆಯೊಳ್ ದಹನಮಂಡಲಮೊಂದಿದ ವಹ್ನಿವೇಳೆಯೊಳ್ |
ಮಾರುತಮಂಡಲಂ ನೆಗೞೆ ಮಾರಿ ಬಱಂ ಪಸಮೆಂಬಿವಕ್ಕು ಮಾ ||
ವಾರಣವಾಹಮಂಡಲದ [ವಾರುಣ] ಸಂಗತಿಯೊಳ್ ಸುವೃಷ್ಟಿ ದು |
ರ್ವಾರಮನೂನಮಪ್ಪ ಜಲಮೊಂದುಗು ಮಾರುತದದ್ಭುತಂಗಳಿಂ || ೮೮ ||

---

ಟೀ|| ಶತವಿಶಾಖೆ, ಮೂಲಂ, ಆಶ್ಲೇಷೆ, ರೇವತಿ, ಪೂರ್ವಾಷಾಢೆ, ಉತ್ತರಾಭಾದ್ರೆ. ಆದ್ರ್ರೆ—ಈ ಏೞುಂ ನಕ್ಷತ್ರಂಗಳ್ ಕ್ರಮದಿಂದಮೊಂದಾಗಿ ಕೂಡಲ್ ವರುಣಮಂಡಲಮೆನಿಪ್ಪುದು—೮೫.

ಟೀ|| ವೈದೇಹಿಕದೇಶ, ಗೋವರ್ಧನದೇಶ, ಚೇಡದೇಶ, ವಿಹಾರದೇಶ—ಯೀ ಮೊದಲಾದ ದೇಶಂಗಳ್ಗೆ ಕೇಡಂ ಪೇೞ್ವುದು. ಮುನ್ನ ಹಗೆವರ್ ಕೆಳೆಯವರಪ್ಪರ್, ಬಹುಮೞೆಯಕ್ಕುಂ, ವರುಣಮಂಡಲಂ ಪುಟ್ಟಿದುದಱಿಂದೆ ಈ ಫಲಂಗಳಪ್ಪುವು.

ಟೀ|| ವಾಯುಮಂಡಲಂ ಪುಟ್ಟಿದ ವೇಳೆಯಲ್ಲಿ ಭೂಕಂಪಂ ಪುಟ್ಟಿದೊಡೆ ಆ ವಾಯುಮಂಡಲ ದೋಷಂ ಕಿಡುವುದು, ಇಂದ್ರಮಂಡಲಂ ಪುಟ್ಟಿದ ವೇಳೆಯಲ್ಲಿ ವಾಯುಮಂಡಲಂ ಪುಟ್ಟಿದೊಡೆ ಆ ಯಿಂದ್ರಮಂಡಲದೋಷಂ ಕಿಡುವುದು, ವರುಣಮಂಡಲಂ ಜನಿಸಿದ ವೇಳೆಯಲ್ಲಿ ಅಗ್ನಿಮಂಡಲಂ ಪುಟ್ಟಿದೊಡೆ ಆ ವರುಣಮಂಡಲದೋಷಂ ಕಿಡುವುದು, ಈ ಮಂಡಲಂಗಳ್ ಪುಟ್ಟಿದ ವೇಳೆಯೊಳ್ ಅವರ್ಕೆ ತಮ್ಮೊಳಗೆ ತಾವೆ ಶತ್ರುಮಂಡಲಂಗಳಾಗಿರ್ದ ವೇಳೆಯಲ್ಲಿ ಮೂಡಲ್ ಅನ್ಯೋನ್ಯಮಾಗಿ ಅಪ್ಪ ದೋಷಂಗಳ್ ಕಿಡುವುವು—೮೭.

ಟೀ|| ವಾಯುಮಂಡಲಂ ಪುಟ್ಟಿದ ವೇಳೆಯಲ್ಲಿ ಅಗ್ನಿಮಂಡಲಂ ಪುಟ್ಟಿ, ಅಗ್ನಿಮಂಡಲಂ ಪುಟ್ಟಿದ ವೇಳೆಯಲ್ಲಿ ವಾಯುಮಂಡಲಂ ಪುಟ್ಟಿದೊಡೆ ಆ ದೇಶಕ್ಕೆ ಸಾವುಂ ಬಱನುಂ ಅನಾವೃಷ್ಟಿಯುಮಪ್ಪುವು. ವರುಣಮಂಡಲಂ ಪುಟ್ಟಿದ ವೇಳೆಯಲ್ಲಿ ಇಂದ್ರಮಂಡಲಂ ಪುಟ್ಟಿದೊಡೆ ಸುವೃಷ್ಟಿಯಪ್ಪುದು, ಒಳ್ಳಿಯ ಬೆಳಸಪ್ಪುದು—೮೮.

ಮ|| ಘಳಯಿಕ್ಕುಂ [1]ಜಲಧೀಶಮಂಡಲದ ದೋಷಂ ಸದ್ಯಮತ್ತಿಂದ್ರಮಂ |
ಡಳದೋಷಂ ದಿನಸಪ್ತಮಕ್ಕೊಗೆಗು ಮತ್ತಾತಿಂಗಳೊಳ್ ವಹ್ನಿಮಂ ||
ಡಳದೋಷಂ ಪವಮಾನಮಂಡಳದ ದೋಷಂ ತೋರ್ಕುಂ[2]ಪಿರ್ತಿಂಗಳೊಳ್ |
ಸಲೆಯುರ್ವೀವಳಯಪ್ರಕಂಪನಫಲಂ ಷಣ್ಮಾಸದೊಳ್ ತೋಱುಗುಂ || ೮ ||

ಟೀ|| ವರುಣಮಂಡಲಂ ಪುಟ್ಟಿದ ದೋಷಂ ಆ ಕ್ಷಣದಲ್ಲಿಯೆ ಫಲಮಂ ತೋಱುವುದು, ಇಂದ್ರಮಂಡಲಂ ಪುಟ್ಟಿದ ದೋಷಂ ಏೞುದಿವಸಕ್ಕೆ ಫಲಮಂ ಕುಡುವುದು, ಅಗ್ನಿಮಂಡಲಂ ಪುಟ್ಟಿದ ದೋಷಂ ಪೊಂದುತಿಂಗಳಿಂಗೆ ಫಲಮಂ ತೋಱುವುದು, ವಾಯುಮಂಡಲಂ ಪುಟ್ಟಿದ ದೋಷಂ ಎರಡು ತಿಂಗಳಿಂಗೆ ಫಲಮಂ ಕುಡುವುದು, ಭೂಕಂಪದ ಫಲಂ ಆಱುದಿಂಗಳಿಂಗೆ ತೋಱುವುದು—೮.

ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀ ಮ ತ್ಕ ವಿ ತಾ ವಿ ಳಾ ಸ ತ ನೂ ಜಂ
ಶ್ರೀಮಚ್ಚಾವುಂಡರಾಯ
ವಿರಚಿತಮಪ್ಪ
ಲೋಕೋಪಕಾರದೊಳ್
ಉತ್ಪಾತಾಧ್ಯಾಯಂ
[3]ಚತುರ್ಥಾಧಿಕಾರಂ

---

1 ಜಲಧೀಶ. 2 ನೀತಿಂಗಳೊಳ್. 3 ಚತುರ್ಥಾಶ್ವಾಸಂ.

# ಪಂಚಮಾಧಿಕಾರಂ

## ೫. ಉ ದ ಕಾ ರ್ಗ ಳಂ

ಕಂ|| ಸ್ಥಾವರ ಜಂಗಮಮೆಂಬೀ |
ಜೀವಚಯಕ್ಕೆಂತು [1]ನೋೞ್ಪೊಡಂ [2]ಜೀವನಮೇ ||
ಜೀವನಮೆಂದುದಕಾರ್ಗಳ |
[3]ಕೋವಿದನಿದನೆಸೆಯೆ ಪೇೞ್ದ ಮುಚಳಿತವಚನಂ || ೧ ||

ಕಂ|| ಅನುರಾಧೆ ಭಾನು ಪುಷ್ಯಂ |
ಧನಿಷ್ಠೆ ಮಘೆ ಶತವಿಶಾಖೆ ಮೂಱುತ್ತರೆಯೆಂ ||
[4]ಬಿನಿತಱೊಳಂ ವಿಧಿಯಿಂ ವರು |
ಣನನರ್ಚಿಸಿ ಭಾವಿ ತೋಡೆ ಶುಭಮಂ ಮಾೞ್ಕುಂ || ೨ ||

ಕಂ|| ಬಿಸುಡುವು[5]ದಗ್ನಿ ಸಮೀರನ |
ದೆಸೆಗಳನುೞಿದಾದ ದೆಸೆಗಳಿಂ ಬಡಗಲ್ ನೀ ||
ರೆಸೆವಂತಗುೞಿಸುವುದು ಕೂ |
ಪಸರೋವರ ದೀರ್ಘಿಕಾ ತಟಾಕಂಗಳುಮಂ || ೩ ||

ಚಂ|| ತುಱುಗಿ ತಳಿರ್ತು ಪೂತು ಫಲಮಾದೆಲೆಯಿಕ್ಕಿ(ಕ್ಕ)ದ ಕೊಂಬುಗಳ್ ನೆಲ |
ಕ್ಕೊಱಗಿದ ನುಣ್ಪುವೆತ್ತ ಮರನುಳ್ಳೆಡೆಯೊಳ್ ಜಳಮುಕ್ಕುಮಲ್ಲಿಯೆಂ ||
ದಱಿವುದು ಕಾೞ್[6]ದಂಕಿದೆ ನಱುಂಕಿದ ಕೊಂ[7]ಬೊಣಗಿರ್ದ ಪೊಟ್ಟೆ ಪೋ |
ದೊಱಗಿದ ವೃಕ್ಷದಿಂದಱಿವುದಾಯೆಡೆಯೊಳ್ ಜಳಮಾಗದೆಂಬುದಂ || ೪ ||

ಟೀ|| ಸ್ಥಾವರ ಜಂಗಮಾತ್ಮಕಮಾಗಿರ್ದ ಈ ಲೋಕಕ್ಕೆ ಉದಕಮೇ ಜೀವನಮಾಗಿರ್ಪು ದಾಗಿ ಆ ವುದಕಂ ಪುಟ್ಟುವಂತಹ ಸ್ಥಾನಮಂ ಉದಕಾರ್ಗಳಕೋವಿದನಪ್ಪ ಅಚಳಿತವಚನಂ ಶಾಸ್ತ್ರ ಮುಖದಿಂ ಪೇೞ್ದಪೆನೆಂದು [8]ಪೇೞುತ್ತಿರ್ದಪಂ—೧.

ಟೀ|| ಅನುರಾಧೆ, ಹಸ್ತಂ, ಪುಷ್ಯಂ, ಧನಿಷ್ಠೆ, ಶತವಿಶಾಖೆ, [9]ಉತ್ತರೆ, ಉತ್ತರಾಷಾಢೆ ಉತ್ತರಾಭಾದ್ರಪದೆ, ಈ ನಕ್ಷತ್ರಂಗಳಲ್ಲಿ ಜಲಾಧಿಪತಿಯಪ್ಪ ವರುಣನಂ ಶಾಸ್ತ್ರೋಕ್ತಿಯಿಂದೆ ಪೂಜಿಸಿ ಭಾವಿಗಳಂ ತೋಡಲ್ ಜಲಸಿದ್ಧಿಯಪ್ಪುದು—೨.

ಟೀ|| ಗ್ರಾಮಂಗಳ್ಗೆ ಆಗ್ನೇಯ ವಾಯವ್ಯ[10]ದಿಕ್ಕುಗಳಂ ಬಿಟ್ಟು ಬಡಗಣದಿಕ್ಕಿನಲ್ಲಿ ಭಾವಿ, ಒಕ್ಕರಣೆ, ತಟಾಕಂಗಳಂ ಚೆಂದಮಾಗಿ ಅಗುೞಿಸುವುದು—೩.

ಟೀ|| ಸಂಪೂರ್ಣಮಾಗಿ ತಳಿರ್ತು ಪೂಪಣ್ಗಳಿಂದೆ ಕೂಡಿ ಪಣ್ಣೆಲೆಯಾಗದೆ ತಳಿರ್ತ ಕೊಂಬುಗಳ್ ನೆಲಕ್ಕೊಱಗಿರ್ದ ಕೋಮಳತೆಯಾಗಿರ್ದ [11]ಮರಂಗಳ ಕೆಳಗೆ ಉದಕಂ ಪುಟ್ಟುವು

---

1 ನೋಪೊಡಂ ಜೀವನ. 2 ಧಾರಿಣಿಯೊಳ್. 3 ಕೋವಿದನೆಸೆಯೆ. 4 ಬಿವಱೊಳಂ, ಬಿನಿತು ನಕ್ಷತ್ರದೊಳಂ ವಿಧಿಯಿಂ ವರುಣನ. 5 ದೂರ್ಗೆ ಸಮೀರಾಗ್ನಿ ಪುರಾಸೆಯ ನುೞಿದಾದೆಸೆಯೊಳಿರೆ ಬಡಗಲ್ನೀರ್ತ್ತೆಸೆ ವಂತಗುೞಿಸುವುದು......ತಟಾಕಂಗಳಂ. 6 ದಂಬಿದ. 7 ಬೊಳಗಿರ್ದ ಟಾಟೆಯೋದೊಱಗಿದ ವೃಕ್ಷವಿಂ ಮುಱಿದೊಣಂಗಿದಱೆಡೆಯೊಳ್. 8 ತೊಡುಗುತ್ತು ಮಿರ್ದಪನು. 9 ಮೂಱುತ್ತರೆ. 10 ದಿಕ್ಕು ಪಟ್ಟಣದ ಸಮೀಪಂ ಈ ಸ್ಥಾನಂಗಳಂ. 11 ಮರಂಗಳು ಉಳ್ಳ ಠಾವಿನಲ್ಲಿ.

ಕಂ|| ಪುಲ್ಲಿಲ್ಲದ ನೆಲದೊಳ್ ಪಸು |
ರ್ಪುಲ್ಲಾದೊಡಮಲ್ಲದಂದು ಪುಲ್ಲುಳ್ಳೆಡೆಯೊಳ್ ||
ಪುಲ್ಲಿನಿತುಮಿಲ್ಲದಿರ್ದೊಡ |
ಮಲ್ಲಿಯೆ ನೀರಕ್ಕುಮಲ್ಲಿ ಮೇಣ್ ನಿಧಿಯಕ್ಕುಂ || ೫ ||

ಪೃಥ್ವಿ|| ಕರಂಜತರು ಪುಟ್ಟೆ ಪುಲ್ಗಿಡುಗಳಾಗೆ ಮೇಣ್ ಪುಟ್ತುವಂ |
ಕುರಂ ಕರಮೆ ಕೆಂಪು[1]ವೆತ್ತಿರೆ ತದುರ್ವಿಯಂ ತೋಡೆ ಮೇಣ್ ||
ಸುರಕ್ತಮೆನಿಕುಂ ಬಱಿಕ್ಕೆ ಸಲೆ ಪುಟ್ಟುಗುಂ ನೀರ್ ನಿರಂ |
ತರಾಳದೊಳನೂನ[2]ಮಕ್ಕು ತೊಗಱಕ್ಕುಮಂತಾ ಜಳಂ || ೬ ||

ಕಂ|| ಶಿಲೆ ವೈಡೂರ್ಯದುದುಂಬರ |
ಫಲಮಧು ಘೃತಸಾ(ಷಾ)ರದ(ದಾ)ಭ್ರಪಾರಾವತಕ ||
ಜ್ಜಲವರ್ಣಮಾದೊಡದಱಿಂ |
ಜಲಮಕ್ಕುಂ ಕೆಳಗನೂನಮಚಳಿತವಚನಾ || ೭ ||

ಮ|| ಉದಕಂ ಕರ್ಪೆಸದಿರ್ಪ ಮಣ್ಣೊಳೊಗಱಕ್ಕುಂ ನೀಲಿಯಂ ಪೋಲ್ವ ಬ |
ಣ್ಣದ ಮಣ್ಣೊಳ್ ಬಿಳಿದಪ್ಪ ಮಣ್ಣೊಳನಿದಕ್ಕುಂ ಧೂಸರಂ ಪೊನ್ನ ಬ ||
ಣ್ಣದ ಮಣ್ಣೊಳ್ ಪರಲಾಗಿ ಕೆಂಪೆಸೆವ ಮಣ್ಣೊಳ್ ಕೈಪೆಯಾಗಿರ್ಕುಮೊಂ |
ದಿದ ಬೆಳ್ಗೆಂಪೆಸೆದಿರ್ಪ ಮಣ್ಣೊದವಿದಂದುಪ್ಪಕ್ಕು (ಮವ್ಯಾ)ನಿವ್ಯಾರ್ಜದಿಂ || ೮ ||

ದೆಂದಱಿವುದು, ಒಣಗಿದ ಬತ್ತಿದ, ನಱುಂಕಿದ ಕೊಂಬುಗಳೊಣಗಿರ್ದ ಪೊಟ್ಟೆ[3]ವೋಗಿ ಬಾಗಿರ್ದ ಮರಂಗಳ್ ಇರ್ದ ತಾವಿನಲ್ಲಿ ತೋಡಿಸಲ್ ಉದಕಂ ಆಗದೆಂದಱಿವುದು—೪.

ಟೀ|| ಆವ ತಾವಿನಲ್ಲಿ ಪುಲ್ಲಿಲ್ಲದೆ ಒಂದು ತಾವಿನಲ್ಲಿ ಪಸುರ್ಪುಲ್ ಪುಟ್ಟಿದೊಡೆ ಮತ್ತಂ ಎಲ್ಲಾ ತಾವಿನಲ್ಲಿಯುಂ ಪುಲ್ಪುಟ್ಟಿ ಒಂದು ತಾವಿನಲ್ಲಿ ಪುಲ್ಪುಟ್ಟದಿರ್ದೊಡೆ ಆ ಕುಱುಹುಗಳನುಳ್ಳ ತಾವಿನ್ನಲ್ಲಿ ತೋಡಿದೊಡೆ ಉದಕಂ ಬರ್ಪುದು, ಅಲ್ಲಿ ನಿಕ್ಷೇಪಮು ಮುಂಟೆಂದು ಪೇಳ್ವುದು—೫.

ಟೀ|| ಹುಲಿ[4]ಗಿಲಮರಂಗಳ್ ಪುಟ್ಟಿದಲ್ಲಿ [5]ಆ ಮರನ ತಳದಲ್ಲಿ ಚಿಕ್ಕಗಿಡುಗಳ್ ಪುಟ್ಟಿರಲ್ ಅಲ್ಲಿ ಆ ಮರಂಗಳಲ್ಲ ಪುಟ್ಟುವಂತಹ [6]ಬೇರ್ಗಳ್ ಬಹಳ ಕೆಂಪಾಗಿರಲ್ ಆ ತಾವಿನಲ್ಲಿ ತೋಡಿಸಲ್ ಆ ತೋಡಿದ ಮಣ್ಣು ಕೆಂಪಾಗಿರಲ್ ಆ ಭೂಮಿಯಲ್ಲ ನೀರ್ ಪುಟ್ಟುವುದು, ಆ ಪುಟ್ಟಿದ ಉದಕವೊಗರಪ್ಪುದು—೬.

ಟೀ|| ಆವುದೊಂದು ಭೂಮಿಯಂ ತೋಡುವಲ್ಲಿ ಕಲ್ಗಳ್ ವೈಡೂರ್ಯಚ್ಛಾಯೆ ಅತ್ತಿ ಹಣ್ಣಿನಛಾಯೆ (ಈ ಛಾಯೆಗಳಾ[7]ಗಿರಲ್ ಅಲ್ಲಿ ಹುಟ್ಟಿದ ಉದಕಂ) ಜೇನುತುಪ್ಪ, ತುಪ್ಪ ಅಭ್ರ (ಬಿಂಗದ) ಪಾರಿವಾಣ(ಳ)ದ ಹಕ್ಕಿ ಕಾಡಿಗೆ[8] ಇವಱ ಛಾಯೆಗಳ್ ತೋಱಲ್ ಆ ತಾವಿನಲ್ಲಿ ಉದಕಂ ಬಹುಳಮಪ್ಪುದು—೭.

ಟೀ|| ಆವುದೊಂದು ಭೂಮಿಯನ[9]ಗುಟಿಲ್ ಆ ಪುಟ್ಟಿದ ಮಣ್ ಕಪ್ಪಾಗಿರಲ್ ಅಲ್ಲಿ ಪುಟ್ಟಿದ ಉದಕಂ [10]ತೊಗಱಪ್ಪುದು, ನೀಲವರ್ಣದ ಬಿಳಿಯ ವರ್ಣದ ಮಣ್ ತೋಱಿದೊಡೆ ಆ

1 ಪೆತ್ತಿತದು. 2 ಮಪಕ್ಕುಂ ಮೊಗರ. 3 ಯಾಗಿರ್ದ ಇಂತಪ ಮರಂ. 4 ಗೆಲಿ. 5 ಅದಱ. 6 ಬೇರ್ಗಳ್. 7 ಆಗಿಪ. 8 ಈ ವರ್ಣಂಗಳ್. 9 ನಗಸಲ್. 10 ಒಗಜು, ತೊವಜು.



ಕಂ|| ಸುರರಾಜಾದ್ಯಷ್ಟದಿಶಾಂ |
ತರಂಗಳೊಳ್ ಶಿಲೆಗಳೊಗೆಯೆ ದಿಶೆಗಳ ದೆಸೆಯೊಳ್ ||
ಪಿರಿದಕ್ಕುಂ ನೀರ್ ವಿದಿಶಾಂ |
ತರಂಗಳೊಳ್ ಗೆಂಟಱಿಂದೆ ನೀರ್ ಕಿಱಿದಕ್ಕುಂ || ೯ ||

ಕಂ|| ಆರಯ್ವೊಡೆ [1]ಪಚ್ಚಿತು ಮೆಳೆ |
ನೀರಿಲ್ಲದ ನೆಲದೊಳಾಗೆ ಹಸ್ತತ್ರಯದಿಂ ||
ವಾರುಣದಿಗಂತರಾಳದೊ |
ಳೋರಂತಿರೆ ಪುರುಷದನಿತಱೊಳ್ ನೀರಕ್ಕುಂ || ೧೦ ||

ಕಂ|| ಮುಳ್ಳಿಲ್ಲದ ಬನ್ನಿಯುಮರ |
ನುಳ್ಳೆಡೆಯೊಳಮಲ್ಲದಂದು ಮೇಣ್ ಪುತ್ತುಗಳೊಂ ||
ದುಳ್ಳೆಡೆಯೊಳ್ ಬೆಳ್ವುತ್ತಾಗ |
ಳುಳ್ಳೆಡಯೊಳ್ ವೊಂದು ಪುರುಷದೊಳ್ ನೀರಕ್ಕುಂ || ೧೧ ||

ಕಂ|| ಧರೆ ಪೊಗೆಯಿಡುವೊಡೆ ಪುಲ್ ಸು |
ರ್ಬುರುಗೊಂಡೆಳದಳಿಸಿ ಮೇಣ್ ತಳಿರ್ತೆಸೆದಿರೆ [2]ನೇಣ್ ||
ತರದಿಂ ಕೀಟಿಲೆ [3]ಕೊಳೆಯು |
ತ್ತಿರೆ ಮೇಣ್ ಕೆಳಗೆರಡು ಪುರುಷದೊಳ್ ನೀರಕ್ಕುಂ || ೧೨ ||

ಪುಟ್ಟಿದ ನೀರ್ ಸ್ವಾದುವಪ್ಪುದು, ಧೂಸರವರ್ಣಂ, ಪೊಂಬಣ್ಣದ ಪರಲ್ ಬೆರಕೆಗೂಡೆ ಕೆಂಪಾಗಿರ್ದ ಮಣ್ ಪುಟ್ಟಿದಲ್ಲಿ ಅಲ್ಲಿ ಪುಟ್ಟಿದ ಉದಕಂ ಕಹಿಯಾಗಿರ್ಪುದು, ಬಿಳಿದು ಕೆಂಪು ಮಿಶ್ರಮಾಗಿರ್ದ ಮಣ್ ತೋಱಿದೊಡೆ ಅಲ್ಲಿ ಪುಟ್ಟಿದ ಜಲಂ ಉಪ್ಪುನೀರಪ್ಪುದು, ಈ ಪೇಳ್ದ ಮಣ್ಣ ಕುಱುಹುಗಳಿರ್ದೊಡೆ ಪುಟ್ಟುವ ಜಲಂ ಸಂದೇಹವಿಲ್ಲದೆ[4] ಸಂತತಸ್ವಾದುವಾಗಿರ್ಪುದು—೮.

ಟೀ|| ಮೂಡಲಾದಿಯಾಗೆ ಇರ್ದ ಎಂಟು ದಿಕ್ಕುಗ[5]ಳೊಳ್ ಕಲ್ ಪುಟ್ಟಲ್ ಆ ದಿಕ್ಕುಗಳ ತಾವಂ ತೋಡಲ್ ನೀರ್ ಬಹುಳಮಪ್ಪುದು, [6]ಮತ್ತಾ ವಿದಿಕ್ಕುಗಳಲ್ಲಿ ತೋಡಿಸಲ್ ನೀರ್ ಕಿ[7]ಱಿದಾಗಿ ಪುಟ್ಟುವುದು—೯.

ಟೀ|| ಆವುದೊಂದು ತಾವಿನಲ್ಲಿ ಪಸುರಾಗಿ ಮೆಳೆ ಬಹುಳಮಾ[8]ಗಿರ್ದುದು, ಆ ತಾವಿನಿಂ ಪಡುವಣ ದಿಕ್ಕಿನೊಳ್ ಮೂಱುಹಸ್ತ ಪ್ರಮಾಣಿನ ಭೂಮಿಯಂ ಬಿಟ್ಟು ತೋಡಿಸಲ್ ಆ ತಾವಿನಲ್ಲಿ ಒಂದು [9]ಆಳ ಪ್ರಮಾಣಿನಲ್ಲಿ ಉದಕಂ ಪುಟ್ಟುವುದು—೧೦.

ಟೀ|| ಆವುದೊಂದು ಭೂಮಿಯಲ್ಲಿ ಮುಳ್ಳಿಲ್ಲದಿರ್ಪ ಬನ್ನಿಯುಮರನಿರ್ದೊಡೆ, ಅಲ್ಲಾ ಪುತ್ತುಳ್ಳ ತಾವಿನಲ್ಲಿ ಅಲ್ಲಾ[10] ವಿಸ್ತಾರಮಾಗಿ ಪುತ್ತುಳ್ಳ ತಾವಿನಲ್ಲಿ, ಇಂತಹ ತಾವುಗಳಲ್ಲಿ ಒಂದು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು—೧೧.

ಟೀ|| ಆವುದೊಂದು ತಾವಿನಲ್ಲಿ ಭೂಮಿ ಹೊಗೆಯಿಡುತ್ತಿರಲ್ ಪುಲ್ ಕುರುಳ್ಗೊಂಡು ಪಸುರಾಗಿ ಬೆಳೆದು ನಳನಳಿಸುತ್ತಿರ್ದೊಡೆ ಕೀಟಿಲೆಗಳ್ ತರುವಾಯಿಂದೆ [11]ಕೊಳೆಯುತ್ತಿರೆ ಆ ತಾವಿನಲ್ಲಿ ತೋಡಿಸಲ್ ಎರಡು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು—೧೨.

1 ಪಚ್ಚೆಯ, ಪಚ್ಚನೆ. 2 ಮೇಣ್‌ದಿರೆ ಮೇಣ್. 3 ಕಳವುತ್ತಿರೆ. 4 ನೋಡಲಹುದು. 5 ದಿಕ್ಕುಗಳ ತಾವಿನಲ್ಲಿ. 6 ಮತ್ತಾವ. 7 ಆ ದಿಕ್ಕಿನಲ್ಲಿ ಪುಟ್ಟಿದ ನೀರಿಂದಂ. 8 ಇದ್ದೀತು, ನೀರಿಲ್ಲದಲ್ಲಿ ಬಹುಳವಾಗಿದ್ದೀತು. 9 ಆಳುದ್ದದಲ್ಲಿ. 10 ಪೊಸತಾಗಿ ಪುಟ್ಟಿದ. 11 ಕಾಳಉತ್ತಿರಲ್.

ವ॥ ನೆಲನಂ ಘಟ್ಟಿಸೆ ಶಬ್ದಮುಬ್ಬರಿಪೊಡಂ ಮೇಣ್ ಮಿಂಚುವೆತ್ತಿರ್ಪೊಡಂ ।
ಶಿಲೆಗಳ್ ಬೆಳ್ಪೆಸೆದಿರ್ಪೊಡಂ ತರುಗಳೊಳ್ ನಿಂದೊಂದು ಕೊಂಬಾವಗಂ ।
ನೆಲನಂ [1]ಮೋದುವೊಡಂ ಬೆಳೆರ್ತೊಡಮದರ್ಕೇಂ ಸಂದೆಯಂ ನಿಶ್ಚಯಂ ।
ಜಲಮಕ್ಕುಂ ಪುರುಷದ್ವಯ ಪ್ರಮಿತದೊಳ್ ಶ್ರೀಶಿಷ್ಟಕಲ್ಪದ್ರುಮಾ ॥ ೧೩ ॥

ಕಂ॥ ಜಲರಹಿತದೇಶದೊಳ್ ನೇ ।
ಱಿಲಮರದಿಂ ಮೂಡಲುರಗಗೇಹಮಾದೊಡೆ ತೆಂ ॥
ಕಲೆರಡು ಕೆಯ್ಯಂತರದೊಳ್ ।
ಜಲಮಿರ್ಪುರುಷಪ್ರಮಾಣದದ್ಭುತಮಕ್ಕುಂ ॥ ೧೪ ॥

ಕಂ॥ ಅಲ್ಲಿ ಪುರುಷಪ್ರಮಾಣದೊ ।
ಳೆಲ್ಲಂ ಕರಿದಪ್ಪ ಮಣ್ಣು ಮರ[2]ವೊಱಸಿನವೋಲ್ ॥
ಕಲ್ಲುಂ ಮೀನುಂ ಸಂದೆಯ ।
ಮಿಲ್ಲದೆ ಕಾಣಲ್ಕೆ ಬರ್ಕುಮಚಳಿತವಚನಾ ॥ ೧೫ ॥

ಕಂ॥ ಉರಗನಿವಾಸಂ ಲೊಕ್ಕಿಯ ।
ಪೊರೆಯೊಳ್ ಸಮನಿಸಿದೊಡದಱ ತೆಂಕಣ ದೆಸೆಯೊಳ್ ॥
ಪುರುಷ ದ್ವಿತಯದೊಳಕ್ಕುಂ ।
ಕರತ್ರಯಾಂತರದಿನಗುೞೆ ಸುಸ್ವಾದುಜಳಂ ॥ ೧೬ ॥

ಕಂ॥ ಒದವಿದರೆ ಬಿಳಿದೆನಿಪ ಬಱಿ ।
ವದಣೆಯ ಕಿಱುದೆಂಗು ನೆಲ್ಲಿಯೆಂಬಿನಿತಱ ಮೂ ॥
ಲದಿ ನಿರ್ಕೆಯ್ಯೆಡೆಯೊಳ್ ತೆಂ ।
ಕದೆಸೆಯೊಳಱ ಮೂಱುಪುರುಷದೊಳ್ ನೀರಕ್ಕುಂ ॥ ೧೭ ॥

ಟೀ॥ ಭೂಮಿಯಂ ಬಾಱಿಸಲ್ ಧ್ವನಿಯಾದೊಡೆ ಅಲ್ಲಾ ಮಿಂಚುವಂತೆ ಛಾಯೆಯಾದೊಡೆ ಕಲ್ಗಳ್ ಬೆಳ್ಗಲ್ಗಳಾಗಿರ್ದೊಡೆ ಮರಂಗಳೊಳಗೊಂದು ಕೊಂಬು ಉದ್ದವಾಗಿ ನೆಲನಂ ಮುಟ್ಟಿ ಬೆಳೆಯುತ್ತಿರ್ದೊಡೆ ಈ ಕುಱುಹುಳ್ಳ ಠಾವಿನಲ್ಲಿ ತೋಡಿಸಲ್ ಎರಡು ಪುರುಷಪ್ರಮಾಣಿನಲ್ಲಿ ನೀರ್ (ಬಹುಳವಾಗಿ) ಪುಟ್ಟುವುದು—೧೩.

ಟೀ॥ ಉದಕವಿಲ್ಲದಂತಹ ಠಾವಿನಲ್ಲಿ ನೇಱಿಲಮರನಿರ್ದು ಆ ಮರನಿಂದಂ ಮೂಡಲ್ ಪುತ್ತು ಪುಟ್ಟಿರಲ್ ಆ ಪುತ್ತ ತೆಂಕಲ್ ಎರಡು ಹಸ್ತ ಪ್ರಮಾಣಿನಲ್ಲಿ ಭೂಮಿಯಂ ತೋಡಿಸಲ್ ಎರಡು ಪುರುಷಪ್ರಮಾಣಿನಲ್ಲಿ ಉದಕಂ ಬಹುಳವಾಗಿ ಪುಟ್ಟುವುದು—೧೪.

ಟೀ॥ ಪಿಂದೆ ಪೇಳ್ದ ಕುರುಹನುಳ್ಳ ಠಾವಿನಲ್ಲಿ ತೋಡಿದಲ್ಲಿ ಒಂದು ಆಳುದ್ದದಿಂ ಕೆಳಗೆ ಕಪ್ಪು ಮಣ್ಣು ಮರವೊಱಸಿನ ಹಕ್ಕಿಯ ಛಾಯೆಯನುಳ್ಳ ಕಲ್ಲುಂ ಮೀನ್ಗಳುಂ ಕಾಣಬರ್ಪುವು—೧೫.

ಟೀ॥ ಆವುದೊಂದು ಠಾವಿನಲ್ಲಿ ಲೊಕ್ಕಿಯಮರಂ ಬೆಳೆದಿರ್ದ ಸಮೀಪದಲ್ಲಿ ಪುತ್ತುಮಿರಲ್[3] ಆ ಪುತ್ತಿಂದಂ ತೆಂಕಲ್ ಮೂಱುಹಸ್ತ ಭೂಮಿಯಂ ಬಿಟ್ಟು ತೋಡಿಸಲ್ ಎರಡು ಪುರುಷಪ್ರಮಾಣಿನಲ್ಲಿ ಒಳ್ಳಿತಹ ಸ್ವಾದುಜಲಂ ಪುಟ್ಟುವುದು—೧೬.

ಟೀ॥ ಆವುದೊಂದು ಠಾವಿನಲ್ಲಿ ಕಂಚಿಬದಣೆಯಗಿಡು, ಕಿಱುದೆಂಗಿನಗಿಡು, ನೆಲ್ಲಿಯ

1 ನೋಡುವೊಡಂ. 2 ಮರಪೊಱ. 3 ಇರ್ದು ಆ ಹುತ್ತಿನಿಂದ.



ಕಂ॥ ಕಂಟಕಕುಜವನದೊಳ್ ನಿ ।
ಷ್ಕಂಟಕ ಕುಜಮಾಗೆ ಮೇಣ್ ವಿಕಂಟಕ ವನದೊಳ್ ॥
ಕಂಟಕಮಹೀಜ[1]ಮಾದೊಡ ।
ಮುಂಟೆಂದಱ ಪಡುವ[2]ಲಯ್ದು ಪುರುಷದೊಳುದಕಂ ॥ ೧೮ ॥

ಕಂ॥ ಎರನುಂ ಮುತ್ತಮುಮೊಡವೆಳೆ ।
ದಿರೆ ಪಡುವಲದಲ್ಲದಂದು ಮಾರುಡಮೌದುಂ ॥
ಬರಮುಂ ಪೆಣೆದಿರೆ ಬಡಗಲ್ ।
ದೊರೆಕೊಳ್ಗುಂ [3](ಪುರುಷ)ಪ್ರಮಾಣದೊಳ್ ಬಹುಳ ಜಳಂ ॥ ೧೯ ॥

ಕಂ॥ ಪುರುಷತ್ರಿತಯದ ಲತ್ತಿಯ ।
ಮರನಿಂದಂ ಪಡುವ ಮೂಱು ಕೆಯ್ಯಂತರದೊಳ್ ॥
ಪಿರಿದಕ್ಕುಂ ಜಳಮಗುೞ್ವೊಡೆ ।
ನಿರುತಂ ಕರ್ಗಲ್ಲನುರಗಪತಿಯಂ ಕಾಣ್ಬರ್ ॥ ೨೦ ॥

ಕಂ॥ ಎಸೆದಿರೆ ನಾಯತ್ತಿಯ ಸಂ ।
ಧಿಸಿ ಸರ್ಪನ ಗೃಹಮುಮಾಗೆ ಪಡುವಣ ದೆಸೆಯೊಳ್ ॥
ನಿಪದಂ ಪುರುಷತ್ರಯದೊ ।
ಳೊಸರ್ಗುಂ ಜಲಮಲ್ಲಿ ಕೂಡೆ ಬೆಳ್ಸಿಲೆ ನೆಗೆಗುಂ ॥ ೨೧ ॥

ಗಿಡು, ಈ ಗಿಡುಗಳ್ ಚೆನ್ನಾಗಿ ಬಿಳಿದಾಗಿ ತಳೆರ್ತಿರಲ್ ಆ ಗಿಡುಗಳ ಮೊದಲಿಂದಂ ಎರಡು ಹಸ್ತ ಪ್ರಮಾಣಮಂ ಬಿಟ್ಟು ತೆಂಕದಿಕ್ಕಿನಲ್ಲಿ ತೋಡಿಸಲ್ ಮೂಱು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು—೧೭.

ಟೀ॥ ಮುಳ್ಳುಗಳುಳ್ಳಂತಹ ಮರಂಗಳ ಮೆಳೆಗಳ ನಡುವೆ ಮುಳ್ಳಿಲ್ಲದಂತಹ ಮರಂ ಪುಟ್ಟಿರ್ದೊಡೆ ಅಲ್ಲಾ ಮುಳ್ಳಿಲ್ಲದಂತಹ ಮರಂಗಳ ನಡುವೆ ಮುಳ್ಳುಳ್ಳ ಮರಂ ಪುಟ್ಟಿದೊಡೆ ಆ ಮರಂಗಳಿಂದಂ ಪಡುವಲ್ ತೋಡಿದೊಡೆ ಅಯ್ದು (ಮೂಱು?) ಪುರುಷಪ್ರಮಾಣಿನಲ್ಲಿ ಉದಕಂ ಪುಟ್ಟುವುದು—೧೮.

ಟೀ॥ ಎರನ ಮರನುಂ ಮುತ್ತದ ಮರನುಮೆರಡುಂ ಕೂಡಿ ಒಂದಾಗಿ ಆವುದೊಂದು ಠಾವಿನಲ್ಲಿ ಪುಟ್ಟಿರಲ್ ಆ ಮರನಿಂದೆ ಪಡುವಣದಿಕ್ಕಿನಲ್ಲಿ (ಮೂಱು)ಪುರುಷಪ್ರಮಾಣಿನಲ್ಲಿ ಬಹುಳವಾಗಿ ಉದಕಂ ಪುಟ್ಟುವುದು. ಅಲ್ಲಾ ಬೆಲ್ಲವತ್ತದಮರನುಂ ಮತ್ತಿಯಮರನುಂ ಕೂಡಿ ಒಂದಾಗಿ ಆವುದೊಂದು ಠಾವಿನಲ್ಲಿ ಸೆಯ್ದುಕೊಂಡು ಪುಟ್ಟಿರಲ್ ಆ ಮರದಿಂದೆ ಬಡಗಣದಿಕ್ಕಿನಲ್ಲಿ (ಮೂಱು) ಪುರುಷಪ್ರಮಾಣಿನಲ್ಲಿ ತೋಡಿಸಲ್ ನೀರ್ ಬಹುಳವಾಗಿ ಪುಟ್ಟುವುದು.

ಟೀ॥ ಆವುದೊಂದು ಠಾವಿನಲ್ಲಿ ಮರಂಗಳಿಲ್ಲದೆ ಅತ್ತಿಯಮರಂ ಪುಟ್ಟಿರ್ದೊಡೆ ಆ ಮರನಿಂದಂ ಪಡುವಲ್ ಮೂಱುಹಸ್ತದ ಪ್ರಮಾಣಿನ ಭೂಮಿಯಂ ಬಿಟ್ಟು ತೋಡಿಸಲ್ ಮೂಱು ಪುರುಷಪ್ರಮಾಣಿನಲ್ಲಿ ಬಹುಳಮಪ್ಪ ಉದಕಂ ಪುಟ್ಟುವುದು, ಆ ಠಾವಿನಲ್ಲಿ ಕರಿಯ ಕಲ್ಲುಂ ಸರ್ಪನುಂ ಕಾಣ್ಬರ್—೨೦.

ಟೀ॥ ಆವೊಂದು ಠಾವಿನಲ್ಲಿ ನಾಯತ್ತಿಯ ಮರಂ ಪುಟ್ಟಿರ್ದಲ್ಲಿ ಆ ಮರನಂ ಕೂಡಿ

1 ಜಗಳಾದೊ. 2 ಇಲ್ಲಿಅನುಕ್ರಮವಾಗಿ ಮೂರುಪುರುಷಪ್ರಮಾಣವನ್ನು ಹೇಳಿ ನಾಲ್ಕನ್ನುಬಿಟ್ಟು ಐದನ್ನು ಹೇಳಿರುವುದು ಸಂಗತವಾಗಿಲ್ಲ ಅಥವಾ ಪಡುವಮೂಱು ಎಂಬ ಪಾಠವಿರಬಹುದೇ? 3 ಮೂರುಪುರುಷದೊಳ್.

ಕಂ|| ಪುಲಿಗಿಲ ಕೆಲದೊಳ್ ಪನ್ನಗ |
ನಿಲಯಂ ಸಮನಿಸಿದೊಡದಱ ತೆಂಕಣದೆಸೆಯೊಳ್ ||
ಜಲಮಕ್ಕುಂ ಮುನ್ನಂ ಕಾ |
ಣಲಕ್ಕುಮೊಮ್ಮುಂಡ ದನಿತಱೊಳ್ ಕಚ್ಛಪನಂ || ೨೨ ||

ಕಂ|| ಎರನ ಮರದಿಂದೆ ಮೂಡಣ |
ಪೊರೆಯೊಳ್ ಪುತ್ತಾ[1]ದೊಡದಱ ಪಶ್ಚಿಮದೊಳ್ ಮು ||
ಪ್ಪುರುಷದೊಳಕ್ಕುಂ ನೀರರೆ |
ಪುರುಷಮನಗುಟ್ವಲ್ಲಿ ಪಲ್ಲಿ ತೊಟ್ಟನೆ ನೆಗೞ್ಗುಂ || ೨೩ ||

ಚಂ|| ದೊರೆಕೊಳೆ ತಾಱೆಯಿಂ ಪಡುವ ಪುತ್ತಿರೆ ನೀಱದಱಿಂದೆ ತೆಂಕ ಮು |
ಪ್ಪುರುಷದೊಳಾಗಿ ಮೂಱು ಬರಿಸಕ್ಕದು ಪಿಂಗುಗುಮಾ ಮರಕ್ಕೆ ಮೇಣ್ ||
ದೊರೆಕೊಳೆ ಪುತ್ತು ತೆಂಕಲದಱಿಂ ಪಡುವಲ್ ಪುರುಷತ್ರಯಕ್ಕೆ ಯು |
ಚ್ಚರಿಯೆನೆ ಮೂಡಣಿಂದಮೊಸರ್ಗುಂ ಸಲಿಲಂ ಜಯಬಂಧುನಂದನಾ || ೨೪ ||

ಚಂ|| ಅಡವಿಯೊಳಾ[2]ದಮೊಪ್ಪುವ ಮರಂ[3]ಗಳ ಬೇರ್ಗಳ ಸಾರೆ ಕಪ್ಪೆಯಿ |
ರ್ಪೊಡೆ ಬೞಿಕತ್ತ ನಾಲ್ಕು ಮೊೞದೊಳ್ ನೃಚತುಷ್ಕಮಿತಂ ನಿಖಾತಮಾ ||
ದೊಡೆ ಜಳಮಕ್ಕುಮಲ್ಲಿ ಪೆಱತೇಂ ಪಸುರ್ಮಣ್ ಕರಿದಪ್ಪ ಮಣ್ ಕರಂ |
ಕಡುವಿಳಿದಪ್ಪ ಮಣ್ ನಕುಳಮೆಂಬಿವನುಕ್ರಮದಿಂದೆ ತೋಱುಗುಂ || ೨೫ ||

---

ಪುತ್ತು ಪುಟ್ಟಿರಲ್ ಆ ತಾವಿಂದೆ ಪಡುವಣ ದಿಕ್ಕಿನಲ್ಲಿ ತೋಡಿಸಲ್ [4]ಮೂಱು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು, ಆ ಉದಕದ ಕೂಡೆ ಅಲ್ಲಿಯೆ ಬೆಳ್ಗಲ್ಗಳ್ ಪುಟ್ಟುವುವು—೨೧.

ಟೀ|| ಆವುದೊಂದು ತಾವಿನಲ್ಲಿ ಪುಲಿಗಿಲಮರನ [5]ಕೂಡೆ ಪುತ್ತು ಬೆಳೆದಿರಲ್ ಅದಱ ತೆಂಕಣದಿಕ್ಕಿನಲ್ಲಿ ತೋಡಲ್ ಉದಕಂ ಪುಟ್ಟುವುದು, ಅಲ್ಲಿಯೆ ಒಂದು ಮುಂಡಪ್ರಮಾಣಿನಲ್ಲಿ ತೋಡಿದೊಡೆ ಅಲ್ಲಿ ಆಮೆಯುಂ ಕಾಣ್ಬರ್—೨೨.

ಟೀ|| ಆವುದೊಂದು ತಾವಿನಲ್ಲಿ ಎರನ ಮರದ ಸಮೀಪದಲ್ಲಿ ಪುತ್ತು ಪುಟ್ಟಿರ್ಪುದು[6], ಆ ಪುತ್ತದಿಂದಂ ಪಡುವಣ ದಿಕ್ಕಿನಲ್ಲಿ ತೋಡಿಸಲ್ ಅರೆಯಾಳುದ್ದದಲ್ಲಿ ಪಲ್ಲಿಯುಂ ಕಾಣ್ಬರ್, [7]ಮೂಱುಪುರುಷಪ್ರಮಾಣಮಂ ತೋಡಲ್ ಉದಕಂ ಪುಟ್ಟುವುದು—೨೩.

ಟೀ|| ಆವುದೊಂದು ತಾವಿನಲ್ಲಿ ತಾಱೆಯ ಮರನಿರ್ದು ಆ ಮರನ ಪಡುವಣ ದಿಕ್ಕಿನಲ್ಲಿ ಪುತ್ತು ಪುಟ್ಟಿರಲ್ ಆ ಪುತ್ತದಿಂದೆ ತೆಂಕಣದೆಸೆಯಲ್ಲಿ ತೋಡಿಸಲ್ ಮೂಱು ಪುರುಷಪ್ರಮಾಣಿನಲ್ಲಿ ಉದಕಂ ಪುಟ್ಟುವುದು, ಆ ಉದಕಂ [8]ಮೂಱು ವರುಷ ಪರಿಯಂತಮಿರ್ದು ಆಮೇಲೆ ಬತ್ತುವುದು, ಆ ಮರಕ್ಕೆ ತೆಂಕಣದಿಕ್ಕಿನಲ್ಲಿ [9]ಪುತ್ತು ಪೊಸತಾಗಿ ಪುಟ್ಟಿರಲ್ ಆ ಪುತ್ತದಿಂದೆ ಪಡುವಲ್ ತೋಡಿಸಲ್ [10]ಮೂಱು ಪುರುಷಪ್ರಮಾಣದಲ್ಲಿ ಮೂಡಣ ದಿಕ್ಕಿನಿಂದೆ ಉದಕಂ ಪುಟ್ಟುವುದು—೨೪.

ಟೀ|| ಅಡವಿಯೊಳಗೆ ಆವುದೊಂದು ತಳಿತಪ್ಪ ಮರನ ಮೊದಲಲ್ಲಿ ಬೇರ ಸಮೀಪದಲ್ಲಿ

1 ತ್ತಾದದಱ ಪಶ್ಚಿಮದೊಳು ಮೂಱುಪುರುಷದೊಳಕ್ಕುಂ ನೀರದೆರೆ. 2 ಳಾವುದೊ. 3 ಗಳ ಸಾರೆಯೊಳೊಂದಿ. 4 ಮೂಱಾಳುದ್ದದಲ್ಲಿ ನೀರುಂಟು. 5 ಸಂಗಡ. 6 ಇದ್ದೀತು. 7 ಮೂಱಾಳುದ್ದದಲ್ಲಿ. 8 ಮೂಱಾಳುದ್ದಕ್ಕೆ ಉದಕಮುಂಟು. 9 ಪೊಸಪುತ್ತು. 10 ಮೂಱಾಳುದ್ದಕ್ಕೆ ಉದಕಂ ಮೂಡಲ್ ಸೆರೆ ಪುಟ್ಟಿ ಉದಕಂ ಬಹುಳಮುಂಟು.



ಕಂ|| ಭ್ರಾಂತೇಂ ಫಣಿನಿಳಯುಂ ತಾ |
ೞಂ ತೆಂಗಿನಮರನನಡದು(ದ)ರ್ಮ(ದ)ದಱಿಂದಱುಗೆ ||
ಯ್ಯಂತರದೊಳ್ ಬಡಗಲ್ ನಿಱು |
ತಂ ತೋಡುಗೆ ನಾಲ್ಕುಪುರುಷದೊಳ್ ನೀರಕ್ಕುಂ || ೨೬ ||

ಮ|| ತಿಳ[1]ಕಾಮ್ರಾತ(ಪ)ಕ ಬಿಲ್ವ(ಪ)ವತ್ತ [2]ಸಿರಿಸಾಂಕೋಲಾಖ್ಯಭಲ್ಲಾತಕಾ |
ಮಳಕಾದ್ಯಂಘ್ರಿಪಮೂಳಮಂ ಬಳಸಿ ಪುತ್ತಾದಂದು ನಿರ್ವ್ಯಾಜದಿಂ ||
ಜಳಮಕ್ಕುಂ ಬಡಗೊತ್ತಿ ಮೂಱುಮರೆಗೆಯ್ಯಿಂದಂ ಬೞಿಕ್ಕತ್ತಲ |
ಸ್ಖಳಿತಂ ಸಾರ್ಧಚತುರ್ನರಪ್ರಮಿತದೊಳ್ ಶ್ರೀಶಿಷ್ಟಕಲ್ಪದ್ರುಮಾ || ೨೭ ||

ಮ|| ಧರೆಯಂ ಭಾವಿಸಿ ಕೂಡೆ ನೋಡುವೊಡಣಂ ಮತ್ತೆತ್ತಲುಂ ಪುತ್ತು ಪಾ |
ಲ್ಮರನೊಂದಿಲ್ಲದ ತಾಣದೊಳ್ ತಿಗಡೆ ಪರ್ಥ್ಯೋರ್ವೀರುಹಾಶೋಕೆ ಪಾ |
ದರಿ ನೇಱಿಲ್ ಕುಶೆ ಕಾಶೆ ಯೆಂಬಿವಱೊಳಾದಂದಂತದರ್ಕ್ಕುತ್ತರಲು |
ತ್ತರದೊಳ್ ಹಸ್ತಯುಗಕ್ಕೆ ಪಂಚಪುರುಷಂ ಗುಣ್ಪಾದೊಡಕ್ಕುಂ ಜಳಂ || ೨೮ ||

---

ಕಪ್ಪೆಯಿರ್ದೊಡೆ ಆ ಮರನಿಂದೆ [3]ತೆಂಕಲ್ ನಾಲ್ಕು ಹಸ್ತ ಪ್ರಮಾಣಮಂ ಬಿಟ್ಟು ತೋಡಿದೊಡೆ [4]ನಾಲ್ಕು ಪುರುಷಪ್ರಮಾಣಿನಲ್ಲಿ ಉದಕಂ [5]ಪುಟ್ಟುವುದು, ಅಲ್ಲಿ ತೋಡುವಲ್ಲಿ ಪಸುರ್, ಕಪ್ಪು, ಒಳ್ಳೆಯ ಬಿಳ್ಪುವರ್ಣದ ಮಣ್ಣುಂ ಮುಂಗುರಿಯುಂ ಅನುಕ್ರಮದಿಂ ತೋಱುವುವು—೨೫.

ಟೀ|| ವಿಚಾರವಿಲ್ಲದೆ ತಾಟಿಮರಂ, ತೆಂಗಿನಮರಂ ಇವಂ ಪುತ್ತು ಉದ್ದಮಾಗಿ ಆಡರಿರಲ್ [6]ಆ ಮರಂಗಳಿಂದೆ ಬಡಗಣ ದಿಕ್ಕಿನಲ್ಲಿ ಆಱು ಹಸ್ತಪ್ರಮಾಣಮಂ ಬಿಟ್ಟು ತೋಡಿಸಲ್ [7]ನಾಲ್ಕು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು—೨೬.

ಟೀ|| ತಿಲಕದಮರಂ, [8]ಮಾವಿನಮರಂ, ತಪಸಿಮರಂ, ಬೆಲ್ಲವತ್ತದಮರಂ, [9]ಹೆಬ್ಬೆಯ ಗಿಡು, ಸಿರಿಸದಮರಂ, ಗೇರಮರಂ, ನೆಲ್ಲಿಯಮರಂ, ಈ ಮರಂಗಳ್ ಮೊದಲಾದ ಮರಂಗಳ ಮೊದಲ್ಲಿ ಹುತ್ತು ಹುಟ್ಟಿರಲ್ [10]ಆ ಮರಂಗಳಿಂದೆ ಬಡಗಣದಿಕ್ಕಿನಲ್ಲಿ ಮೂಱುಮರೆ ಹಸ್ತ[11]ಪ್ರಮಾಣಮಂ ಬಿಟ್ಟು ತೋಡಿಸಲ್ ಸಂದೇಹಮಿಲ್ಲದೆ ನಾಲ್ಕು ಪುರುಷಪ್ರಮಾಣಿನಲ್ಲಿ ನೀರ್ ಪುಟ್ಟುವುದು—೨೭.

ಟೀ|| ಭೂಮಿಯಂ ವಿಚಾರಿಸಿ ನೋಡುತ್ತಿರಲ್ ಪುತ್ತು ಪಾಲ್ಮರಂಗಳ್ ಎಲ್ಲಿಯುಮಿಲ್ಲದಿರ್ದ ತಾವಿನಲ್ಲಿ [12]ತಿಗಡೆಯಮರಂ, ಅಣಲೆಯಮರಂ, ಅಶೋಕೆ, ಪಾದರಿಯಮರಂ, ನೇಱಿಲಮರಂ, ಕುಶೆಯ ದರ್ಭೆ, ಕಾಚಿಪುಲ್ [13]ಇವುಗಳೊಳಗೆ ಆವುದೊಂದುಮಿರ್ದ ತಾವಿನಲ್ಲಿ ಆ ಮರನ ಬಡಗಣ ದಿಕ್ಕಿನಲ್ಲಿ ಎರಡು ಹಸ್ತಪ್ರಮಾಣಿನಲ್ಲಿ ಭೂಮಿಯಂ ಬಿಟ್ಟು ತೋಡಿಸಲ್ ಅಯ್ದು ಪುರುಷಪ್ರಮಾಣದಲ್ಲಿ [14]ಉದಕಂ ಪುಟ್ಟುವುದು—೨೮.

1 ಕಾಮ್ರಾತಕ. 2 ಗರಿಸಾಂಕೋಲಾಖ್ಯ. 3 ಕೆಲದೊಳ್. 4 ನಾಲ್ಕಾಳುದ್ದಕ್ಕೆ. 5 ಉಂಟು. 6 ಅವೞ. 7 ನಾಲ್ಕಾಳುದ್ದಕ್ಕೆ ನೀರುಂಟು. 8 ಅಂಬಟೆಮರ, ಬೆಲ್ಲವತ್ತ – ಎಂದಿರಬಹುದು. 9 ಬಾಗೆಯ ಮರ (ಟೀಕಾಕಾರನು ಬಿಲ್ವ, ವೇತ – ಎಂದು ಪದಚ್ಛೇದದಲ್ಲಿ ಭ್ರಾಂತಿಗೊಂಡಿರುವನು). 10 ಅಲ್ಲಿಂದೆ. 11 ಪ್ರಮಾಣಿನಲು ಭೂಮಿಯಂ, ತೋಡಿಸಲ್ ನಾಲ್ಕಾಳುದ್ದ. 12 ಕಾಸರಕನ ಮರಂ. 13 ಈ ಮರಂಗಳೊಳಗೆ ಆವುದೊಂದು ವೃಕ್ಷಮಿಲ್ಲದ. 14 ನೀರುಂಟು.

ಮ || ತರದಿಂ ಬಾಗೆಸವಿಪ್ಪೆಯುಂ ಬಡಗ ಪುತ್ತಿತ್ತಾದಂದು ವಾಯುವ್ಯದೊಳ್ |
ಕರಪಟ್ಕಾಂತರದಿಂದಮಯ್ದುಪುರುಷಂ ಗುಣ್ಪಾದೊಡಂತಲ್ಲಿ ನೀರ್ ||
ದೊರೆಕೊಳ್ಗುಂ ಬಿಳಿದಪ್ಪಮಣ್ಣನಹಿಯುಂ ಕರ್ಗಲ್ಲುಮಂ ಕಾಣ್ಗೆಯೊ |
ವ್ಪುರುಷಂಬೋದೊಡೆ ಮೂಡಣಿಂದೆ ಸೆಲೆಯಕ್ಕುಂ [1]ಶಿಷ್ಟಕಲ್ಪದ್ರುಮಾ || ೨೯ ||

ಪೃಥ್ವಿ|| ಕಪಿತ್ಥ ಕುಜದಿಂದೆ ತೆಂಕದಿಸೆಯೊಳ್ ಕರಂ ಸಾರ್ಕೆವೆ |
ತ್ತ ಪುತ್ತು ದೊರೆಕೊಂಡೊಡುತ್ತರದೊಳೇೞುಕೆಯ್ಯಂತರ ||
ಕ್ಕೆ ಪಂಚ ಪುರುಷಪ್ರಮಾಣದೊಳೆ ತೇಱುವಕ್ಕುಂ ಸಮಂ |
ತು ಪಶ್ಚಿಮದ ಪೂರ್ವದುತ್ತರದೆ ಧಾರೆಗಳ್ ಪುಟ್ಟುಗುಂ || ೩೦ ||

ಚಂ|| ಫಣಿನಿಲಯಂ ಪರೀಕ್ಷಿಸುವೊಡಾಲದ ಮೂಡಣಮೆಯ್ಯೊಳಾಗೆ ತೆಂ |
ಕಣದೆಸೆ ಯತ್ತಲಯ್ದು ಪುರುಷಂ ಬರೆಗಂ ನೆಱೆ[2] ತೋಡುಗುಪ್ಪುನೀರ್ ||
ಮಣಲೊಱವಾಗಿ ಬರ್ಪುದಱೊಳ್ ಪ[illegible]ವೇಡುಗಳಪ್ಪ ಬಣ್ಣದಾ |
ಫಣಿ ದೊರೆಕೊಳ್ಗು ಮೊಪ್ಪುರುಷಮಾದೆಡೆಯೊಳ್ ಜಯಬಂಧುನಂದನಾ || ೩೧ ||

ಮಾಳಿನಿ|| [3]ಉಗುನಿಯ ಮರ[4]ನಿಂದೀಶಾನ್ಯದಿಗ್ಭಾಗದೊಳ್ ಪು |
ತ್ತೊಗೆಯೆ ಪಡುವಲಯ್ಗೆಯ್ಯಂತರಂ ಪೋಗಿ [5]ಕೆಯ್ಯೊಂ ||
ಡಗುೞೆ[6] ಪುರುಷ ಷಷ್ಠಾಕಾರದೊಳ್ ತೋಯಮಕ್ಕುಂ |
ಪೊಗೆಯನಿಱಿಪ ಮಣ್ಣುಂ ಕಪ್ಪೆಯುಂ ಮುನ್ನ ಮಿರ್ಕ್ಕುಂ || ೩೨ ||

ಟೀ|| [7]ತಱುವಾಯಿಂಗೊಂಡು ಒಪ್ಪುವಂತಹ (ಬಾಗೆ) ಇಪ್ಪೆಯುಮರಂಗಳುಮಿರ್ದ [8]ತಾವಿನಲ್ಲಿ ಆ ಮರಂಗಳಿಂದೆ ಬಡಗಲ್ ಪುತ್ತು ಪುಟ್ಟಿರಲ್ ಆ ಪುತ್ತಿನ ವಾಯುವ್ಯ ದಿಕ್ಕಿನಲ್ಲಿ ಆಱು ಹಸ್ತಪ್ರಮಾಣದ ಭೂಮಿಯುಂ ಬಿಟ್ಟು ತೋಡಿಸಲ್ [9]ಅಯ್ದು ಪುರುಷಪ್ರಮಾಣದಲ್ಲಿ ಉದಕಂ ಪುಟ್ಟುವುದು, ಅಲ್ಲಿ ಒಂದುಪುರುಷಪ್ರಮಾಣಿನಲ್ಲಿ ಬಿಳಿಯ ಮಣ್ಣುಂ ಪಾವುಂ ಕರ್ಗ್ಗಲ್ಗುಂ ಕಾಣ್ಗುಂ, ಮೂಡಣದಿಕ್ಕಿನಿಂದ ನೀರ ಸೆಲೆ ಪುಟ್ಟುವುದು—೨೯.

ಟೀ|| ಆವುದೊಂದು ತಾವಿನಲ್ಲಿ ಬೇವಿನಮರವಿರ್ದಲ್ಲಿ ಆ ಮರದ ತೆಂಕದೆಸೆಯಲ್ಲಿ ಸಮೀಪದಲ್ಲಿ ಪುತ್ತು ಪುಟ್ಟಿರಲ್ ಆ ಪುತ್ತಿಂಬಡಗಲ್ ಏೞುಕೆಯ್ಯಂತರವಂ ಬಿಟ್ಟು ತೋಡಿಸಲ್ ಅಯ್ದು ಪುರುಷಪ್ರಮಾಣದಲ್ಲಿ [10]ಉದಕಂ ಪುಟ್ಟುವುದು. ಮೂಡಲ್ ಪಡುವಲ್ ಬಡಗಲ್ ಈ ಮೂಱು ದಿಕ್ಕುಗಳಲ್ಲಿ ಉದಕದ [11]ಸೆಲೆಗಳ್ ಪುಟ್ಟುವುವು—೩೦.

ಟೀ|| ಆವುದೊಂದು ತಾವಿನಲ್ಲಿ ಆಲದಮರದಿಂದೆ ಮೂಡಣದಿಕ್ಕಿನಲ್ಲಿ ಪುತ್ತು ಪುಟ್ಟಿರ್ದೊಡೆ ಆಪುತ್ತಿಂದೆ ತೆಂಕದೆಸೆಯಲ್ಲಿ ಆಯ್ದುಪುರುಷ ಪ್ರಮಾಣದಲ್ಲಿ ತೋಡಿಸಲ್ ಉಪ್ಪುನೀರಾಗಿ ನಿರ್ಮಲಜಲಂ ಪುಟ್ಟುಗುಂ.ಆ ತಾವಂ ತೋಡಿಸುವಲ್ಲಿ ಒಂದು ಪುರುಷ ಪ್ರಮಾಣಿನಲ್ಲಿ ಹಲವು ಬಣ್ಣದ ಸರ್ಪಂಗಳಂ ಕಾಣಲ್ ಬರ್ಪುದು—೩೧.

ಟೀ|| ಆವುದೊಂದು ತಾವಿನಲ್ಲಿ ಪೊಗನಿಯ ಮರನಿರ್ದು ಆ ಮರನಿಂದೆ ಈಶಾನ್ಯ ಭಾಗದಲ್ಲಿ ಪುತ್ತು ಇರಲ್ ಆ ಪುತ್ತದಿಂದೆ ಪಡುವಲಯ್ದು ಹಸ್ತಪ್ರಮಾಣಿನಲ್ಲಿ ಭೂಮಿಯುಂ ಬಿಟ್ಟು

1 ಸೆರೆಯಕ್ಕಂ ಶ್ರೀಶಿಷ್ಟ. 2 ವೇಡು. 3 ಪೊಗುನಿಯ. 4 ಚೆನ್ನಾಗಿರ್ದೊಡೀ. 5 ತಾಂ ಕೊಂ. 6 ಟ್ಕಾರದೊಳ್. 7 ಕ್ರಮದಿಂ. 8 ತಾವಿನಿಂ ಬಡಗಲ್. 9 ಅಯ್ದಾಳುದ್ದಕ್ಕೆ ಉದಕಮುಂಟು. 10 ನೀರುಂಟು. 11 ಸೆರೆಗಳ್.



[1]ಪೃಥ್ವಿ|| ಕದಂಬ ಮಹೀಜಾತದಿಂ ಪಡುವಲಾಗೆ ಪುತ್ತಿಂಬಡ |
ಕ್ಕೆ ದಕ್ಷಿಣ[2]ದೊಳಾಗೆ ಮೂಱುಪುರುಷಕ್ಕೆ ನೀರ್ ಲೋಹಗಂ ||
ಧದಿಂ ಹರಿತವರ್ಣಮೃತ್ತಿಕೆಯು ಮಾಲಿಕಲ್ಲಂತುಟ |
ಪ್ಪ ದರ್ದುರಮುಮಿರ್ಕ್ಕುಮೊಂದುಪುರುಷಕ್ಕೆ ನಿವ್ಯಾಜದಿಂ || ೩೩ ||

ಕಂ|| [3]ಪುತ್ತದ ಮೇಲೆಳೆಗಱು[4]ಕೆಯು |
ಮುತ್ತಂ ಕುಶೆಯುಂ ಸಮಂತು ಸಮನಿಸಿದೊಡಮು ||
ತ್ತು[5]ತ್ತರದಿಗ್ಭಾಗದೊಳೆ |
ಪ್ಪತ್ತೊಂದು ನರಪ್ರಮಾಣದೊಳ್ ನೀರಕ್ಕುಂ || ೩೪ ||

ಮೊದಲಡಸಿ ಪುತ್ತು ಕಾಂಚಾ |
ಣ(ಳ)ದ್ಯ ಬಡಗಣ ಮೆಯ್ಯೊಳಾಗೆ ದಕ್ಷಿಣದಿಗ್ಭಾ ||
ಗದೊಳೆರ್ಕೆಯ್ಯಂತರದಿಂ |
ದುದಕಂ ಪದಿನಯ್ದು ಪುರುಷದೊಳ್ ಸಮನಿಸುಗುಂ || ೩೫ ||

ಮರನ ಮೊದ[6]ಲ್ಗಯ್ಗೆಯ್ಯಂ |
ತರಮಂ ಬಿಟ್ಟಗುೞೆ ಪುತ್ತು ಪೆರ್ಚಿದ ದೆಸೆಯೊಳ್ ||
ದೊರೆಕೊಂಡೊಡಮಱಿಗಿಂತಿದೆ |
ಪರಿಮಾಣಂ ಹಸ್ತಸಂಖ್ಯೆನೇೞದ ದೆಸೆಯೊಳ್ || ೩೬ ||

ತೋಡಿಸಲ್ ಅಲ್ಲಿ ಅಯ್ದುಪುರುಷ ಪ್ರಮಾಣಿನಲ್ಲಿ ಉದಕಂ ಪುಟ್ಟುವುದು. ಧೂಮ್ರವರ್ಣದ ಮಣ್ಣುಂ ಕಪ್ಪೆಯುಂ [7]ಮೊದಲಲ್ಲಿ ಕಾಣ್ಬರ್—೩೨.

ಟೀ|| ಆವುದೊಂದು ತಾವಿನಲ್ಲಿ ತೋಡಿಸಲ್ ಕಡವದ ಮರನಿಂದೆ ಪಡುವಣ ದಿಕ್ಕಿನಲ್ಲಿ ಪುತ್ತುಪುಟ್ಟಿರಲ್ ಆಪುತ್ತಿಂದೆ ತೆಂಕಣ ದಿಕ್ಕಿನಲ್ಲಿ ತೋಡಿಸಲ್ ಮೂಱುಪುರುಷ ಪ್ರಮಾಣದಲ್ಲಿ ಕರ್ಬುನದ ಕಿಲುಂಬಿನ ವಾಸನೆಯಾಗಿ ಉದಕಂ ಪುಟ್ಟುವುದು. ಅಲ್ಲಿ ಪಚ್ಚೆಯ ವರ್ಣದ ಮಣ್ಣುಂ ಆಲಿಕಲ್ಲ ವರ್ಣದ ಬಿಳಿಯ ಕಪ್ಪೆಯುಂ ಒಂದು ಪುರುಷ ಪ್ರಮಾಣನಲ್ಲಿ ಸಂದೇಹಮಿಲ್ಲದೆ ಕಾಣ್ಬರ್—೩೩.

ಟೀ|| ಆವುದೊಂದು ತಾವಿನಲ್ಲಿ ಇರ್ದ ಪುತ್ತಿನಮೇಲೆ ಎಳೆಯ ಗಱುಕೆ, ಮುತ್ತದಗಿಡು, ಕುಶೆಯ ದರ್ಭೆ ಇವು ಪುಟ್ಟಿರಲ್ ಆ ಪುತ್ತಿಂದೆ ತೋಡಿಸಲ್ (೨೧) ಇಪ್ಪತ್ತೊಂದು ಪುರುಷ ಪ್ರಮಾಣಿನಲ್ಲಿ ಉದ[8]ಕಂ ಪುಟ್ಟುವುದು—೩೪.

ಟೀ|| ಆವುದಾನೊಂದು ತಾವಿನಲ್ಲಿ ಕಂಚಿಯಾಲ(ಳ)ದ ಬಡಗಣ ಭಾಗದಲ್ಲಿ ಹುತ್ತು ಇರ್ದು ಆ ಹುತ್ತಿಂದೆ ತೆಂಕಣಭಾಗದಲ್ಲಿ ಎರಡು ಕೆಯ್ಯಂತರಮಂ ಬಿಟ್ಟುತೋಡಿಸಲ್ ಪದಿ[9]ನಯ್ದು ಪುರುಷ ಪ್ರಮಾಣದಲ್ಲಿ ಉದಕಂ ಪುಟ್ಟುವುದು—೩೫.

ಟೀ|| ಹಿಂದೆ ಪೇೞ್ದಂತಹ ಕುಱುಹಿನ ಮರಂಗಳ ಸಾರೆ ತೋಡಿಸಲ್ ಕಟ್ಟಳೆಯಂ ಪೇೞ್ದಿರ್ದುವರ್ಕೆ ಆ ಪುಟ್ಟಿರ್ದ ಮರನ ಆ ಪುತ್ತುಗಳ್ಗೆ ಅಯ್ದುಹಸ್ತಪ್ರಮಾಣಂ ಬಿಟ್ಟು ಹುತ್ತು ಮಿಗಿ

1 ಪೃ. 2 ದೊಳಮೂಱು. 3 ಪುತ್ತಿನ. 4 ಕೆಯುಮುತ್ತಂ, 5 ಮುಕ್ಕತ್ತರ. 6 ಲ್ಗಯ್ಯಂತಮಕ್ಕುಂ ಬಿಸುಟಗುೞೆ. 7 ಮೊದಲೆ. 8 ಕಮುಂಟು. 9 ನಯ್ದಾಳುದ್ದಕ್ಕೆ.

ಕಂ|| ¹ಸಿಲೆಯೊಡೆಯಲ್ಪುದು ತುಂಬರ |
ಪಲಾಶದಿಂಧನಮನೊಟ್ಟಿ ಸುಟ್ಟ²ತದಱೊಳ್ ||
ಜಲಮಂ ದುಗ್ಧಮುಮಂ ಸಲೆ |
ತಳಿಯಲೊಡಂ ಸಿಡಿಮೊ(ಲೆಯೊ)ಡೆದು ಪಾಱುಗುಂ ತತ್ಕ್ಷಣದೊಳ್ || ೩೭ ||

ಕುದಿಯಿಸುಗೆ ³ತೋಯದೊಳ್ ಮು |
ತ್ತಗದ ಬೂದಿಯ⁴ನಕ್ಕೆ ಶಿವೆಯ ಬೂದಿಯುನಕ್ಕಂ ||
ತದನುಱೆ ಸುಟ್ಟಱೆಯೊಳ್ ಮೂ |
ಱುದೆವಸಮುಂ ತಳಿಯೆ ಶಿಲೆ ಕರಂ ಮೃದುವಕ್ಕುಂ || ೩೮ ||

ಅಳಿಯಿಂ⁵ಕಳ್ಳಂ ಬದರಿಯ |
ಫಳಮಂ ಗಂಜಿಯುಮನೇೞುದಿನಮಿರಿಸಿ ಶಿಲಾ ||
ತಳಮಂ ಸುಟ್ಟಿಂಬಾಗಿರೆ |
ತಳಿದೊಡೆ ಭೇದಿಸುಗುಮಱೆಯ ಪೊದಲುಱುವಿನೆಗಂ || ೩೯ ||

ರವಿದುಗ್ಧಂ ಪಾರಿವದೆ |
ಚ್ಚವುಂದುರದ ವಿಷ್ಟಿ ತಗಱ ಕೋಡಿನ ಮಷಿ ಯಿಂ ||
ಬಿವ ನೊರಸಿ ಕಾಸಿ ನೀರೂ |
ಡುವುದುಱೆಯಂ ತೈಲತಕ್ರದೊಳ್ ಪವಿಯಕ್ಕುಂ || ೪೦ ||

ಲಾಗಿ ಪೆರ್ಚಿದ ಕಡೆಯಲ್ಲಿ ತೋಡಿಸುವುದು. ಹಸ್ತ ಸಂಖ್ಯೆಯಂ ಪೇೞದಿರ್ದರ್ವರ್ಕೆ ಈ ಕಟ್ಟಳೆಯ ಪ್ರಮಾಣದಲ್ಲಿ ತೋಡಿಸಲ್ ಉದಕಂ ಪುಟ್ಟುವುದು—೩೬.

ಟೀ || ಅವುದೊಂದು ಠಾವಿನಲ್ಲಿ ತೋಡಿಸುವಲ್ಲಿ ಕಲ್ ಅಡ್ಡಂ ಬಿೞ್ದೊಡೆ ಅದರ್ಕೆ ತುಂಬರುಮರನ ಕಟ್ಟಿಗೆ ಮುತ್ತದಮರನ ಕಟ್ಟಿಗೆ ಇವನಡ್ಡಂಬಿಲ್ದ ಕಲ್ಲಮೇಲೆ ಪೊಟ್ಟಿ ಸುಟ್ಟು ಆ ಬಿಸಿಯಾಗಿರ್ದ ಕಲ್ಲಮೇಲೆ ಉದಕಮಂ ಪಾಲಂ ಪೊಯ್ಯಲಾಕ್ಷಣಮಾತ್ರಕ್ಕಾ ಕಲ್ ಸಿಡಿಲ್ದು ಒಡೆವುದು—೩೭.

ಟೀ || ⁶ಉದಕದೊಳಗೆ ಮುತ್ತಗದ ಮರನ ಬೂದಿಯುನಾದೊಡಂ ಅಣಿಲೆಯಮರದ ಬೂದಿಯುನಾದೊಡಂ ಕದಡಿ ಚೆನ್ನಾಗಿ ಬೇಯಿಸಿ ಆ ವುದಕಮಂ ಅಡ್ಡಬಿದ್ದಕಲ್ಲಂ ಸುಟ್ಟು ಆ ಕಲ್ಲಮೇಲೆ ಮೂಱುದಿನಂ ತಳಿಯಲಾ ಕಲ್ ಮೃದುವಪ್ಪುದು—೩೮.

ಟೀ || ಮಜ್ಜಿಗೆ, ಮದ್ಯ, ಎಱನಕಾಯಿ, ಗಂಜಿ, ಇವನೊಂದಾಗಿ ಏೞುದಿನಮೂಱಲಿಟ್ಟು ಅಡ್ಡಂ ಬಿದ್ದ ಅಱೆಗಳಂ ಚೆನ್ನಾಗಿ ಸುಟ್ಟು ಅದಱಮೇಲೆ ಊಱಲಿಟ್ಟ ಉದಕಮಂ ತಳಿಯಲ್ ಆ ಕಲ್ ಭೇದಿಸಿ ಸೆಲೆಗಳ್ ಬಿಟ್ಟು ಆ ಕಲ್ಗಳ್ ಒಡೆವುವು—೩೯.

ಟೀ || ಎಕ್ಕೆಯಪಾಲ್, ಪಾರಿವಾಣದ ಪಕ್ಕಿಯ ವಿಷ್ಟೆ, ಇಲಿಯ ಹಿಕ್ಕೆ ತಗಱಕೋಡಿನ

1 ಸೆಲೆ. 2 ಕಱೊಳ್. 3 ತೋಯ ತೋಯದೊಳ್. 4 ನಲ್ಲದಣಿಲೆಯ ಬೂದಿಯನುಂ || ಉದಕದಲಿ ಕದಡಿ ಬೇಯಿಸಿ । ದುದ ಕಲ್ಲೊಳ್ ತಳಿಯೆ ತ್ರಿದಿನಕಂ ಮೃದುವಕ್ಕುಂ || 5 ಮದ್ಯವ. 6 ಆ ಅಡ್ಡ ಬಿದ್ದ ಕಲ್ಲಿಂಗೆ ಮುತ್ತಕದ ಬೂದಿಯಾಗಲಿ, ಅಣಿಲೆಯ ಬೂದಿಯಾಗಲಿ ಕದಡಿ ಬೇಯಿಸಿ ಆ ಕಲ್ಲಮೇಲೆ ತಳಿ.



ಮಷಿ ಇವನೆಲ್ಲಮಂ ಕೂಡಿ ಉಱೆಯಬಾಯ್ಗೆ ಪೂಸಿ ಕಾಸಿ ನೀರೂಟಮಂ ಎಣ್ಣೆಯಲ್ಲಾದೊಡಂ ಮಜ್ಜಿಗೆಯಲ್ಲಾದೊಡಂ ಕುಡಲ್ ಆಉಱೆ ¹ವಜ್ರದಂತೆ ಬಲ್ಪಾಗಿರ್ಪುದು—೪೦.

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀ ಮ ತ್ಕ ವಿ ತಾ ವಿ ಳಾ ಸ ತ ನೂ ಜಂ
**ಶ್ರೀಮಚ್ಚಾವುಂಡರಾಯ**
ವಿರಚಿತಮಪ್ಪ
**ಲೋಕೋಪಕಾರದೊಳ್**
ಉದಕಾರ್ಗಳಂ
²ಪಂಚಮಾಧಿಕಾರಂ

---

1 ವಜ್ರದ ಮರ್ಯಾದೆಯಲು ಬಹುಪಾಗಿ ಇಪುದು. 2 ಪಂಚಮಾಶ್ವಾಸಂ.

# ಷಷ್ಠಾಧಿಕಾರಂ

## ೬. ವೃಕ್ಷಾಯುರ್ವೇದಂ

ಕಂ|| ಓದುಗಳೊಳ್ ವೃಕ್ಷಾಯು |
ರ್ವೇದಮೆ ಜನನುತಮಶೇಷಹಿತ[1]ಮೆಂದಱಿದಂ |
ತಾದೇಯಮಾಗೆ ಕೀರ್ತಿ |
ಶ್ರೀದಯಿತಂ ಪೇೞ್ಗುಮೆಸೆಯೆ ಕಾವ್ಯವಿವೇಕಂ || ೧ ||

ಶ್ರವಣಂ ಮಘೆ ಮೂಲಂ ಚಿ |
ತ್ರೆ ವಿಶಾಖೆ ಮೃಗಾಂಕನಬ್ಜಜಂ ಹಸ್ತಮೆನಿ ||
ಪ್ಪಿವಱೊಳ್ ವಿಧಿಯಿಂದಂ ಬಿ |
ತ್ತುವುದು ಧಾನ್ಯವನನೂನಮಚಳಿತವಚನಾ || || ೨ ||

ಚಂ || ಉದಕಸಮೃದ್ಧಿಯಪ್ಪ ನೆಲನಂ ನೆಱೆ ಶೋಧಿಸಿ [2]ಕೊಳ್ಳನೇಟಿನಂ |
ತದಱೊಳೆ ಬಿತ್ತಿ ಘಾತಪದದೊಳ್ ಕಡೆಯುತ್ತೆಬಟಿಕ್ಕವಿರ್ಮೊಟಿಂ ||
ಚದುರಸಮಾಗಿ ನಾಲ್ಕುಮೊಟನಾಗಿರೆ ಗುಣ್ಪು ವಿಘಾತದಿಂ ಪೊದ |
ೞ್ದಿದವಿರೆ ತೋಡಿ ಕೂಡೆ ಸುರಿಗಾಗುೞಿ ತೀವಿದ ಗೊಬ್ಬರಂಗಳೊಳ್ || ೩ ||

ಕಂ|| ಒದವಿರ್ದ ಕುೞಿಗಳೆಡೆಯ |
ಪ್ಪುದು ಮರಮರನೊಱಸವಂತು ಸಲೆ ಪದಿನಾಱುಂ ||
ಪದಿನಾಲ್ಕುಂ ಪತ್ತುಂ ಹ |
ಸ್ತದೊಳುತ್ತಮ ಮಧ್ಯಮಾಧಮಸ್ಥಿತಿಯಿಂದಂ || ೪ ||

---

ಟೀ|| ಸಮಸ್ತ ಜ್ಞಾನಂಗಳೊಳಗೆ ವೃಕ್ಷಾಯುರ್ವೇದಮೆ ಸಕಲ ಪ್ರಾಣಿಗಳ್ಗೆ ಹಿತಮಾಗೆ ಅಱಿಯಲ್ವೇೞ್ಪುದಾಗಿ ವಿದ್ವಾಂಸರ್ಕಳಿಂದುಪಾದೇಯಮಾಗಿರ್ಪುದಾಗಿ ಆ ವೃಕ್ಷಾಯುರ್ವೇದಮಂ ಪೇೞ್ವೆಂ—೧.

ಟೀ || ಶ್ರವಣಂ, ಮಘೆ, ಮೂಲಂ, ಚಿತ್ರೆ, ವಿಶಾಖೆ, ಮೃಗಶಿರೆ, ರೋಹಿಣಿ, ಹಸ್ತಂ, ಈ ನಕ್ಷತ್ರಂಗಳಲ್ಲಿ ಶಾಸ್ತ್ರಯುಕ್ತಮಾಗಿ ಬೀಜಂಗಳಂ ಬಿತ್ತುವುದು, ಸಿಂಗರದೋಂಟಮಂ ಮಾಡಿಸುವುದು—೨.

ಟೀ || ಜಲಸಮೃದ್ಧಿಯಾಗಿರ್ದಂತಹ ಭೂಮಿಯಂ ನೋಡಿ ತೆಮರ್ಗುೞಿಗಳಂ ಸಮಭೂಮಿಯಂ ಮಾಡಿಕೊಂಡು ಬೀಜಮಂ ಬಿತ್ತಿ ಘಾತವಾಗಿ ಪೂೞ್ವುದು, ಮರಂಗಳಂ ಬಿತ್ತುವೊಡೆ ಎರಡುಮೊಟನಗಲಂ ನೀಳಂ ಗುಣ್ಪು ನಾಲ್ಕುಮೊಟ ಮಿಾವುಯರ್ದೆಯೊಳ್ ಕುೞಿಗಳಂ ನಯಮಾಗಿ ತೋಡಿ ಆಗುೞಿಗಳಲ್ಲಿ ಗೊಬ್ಬರಮಂ ತುಂಬಿಸುವುದು—೩.

ಟೀ|| ಈ ತೋಡಿದ ಗುೞಿಗಳ ಮಧ್ಯಮಧ್ಯದಲ್ಲಿ ಮರಮರಂಗಳಂ ಮುಟ್ಟದಂತೆ ಪದಿನಾಱು, ಪದಿನಾಲ್ಕು ಪತ್ತು ಈ ಪ್ರಮಾಣಿನಲ್ಲಿ ಮಧ್ಯಮಂ ಬಿಟ್ಟು ಉತ್ತಮ ಮಧ್ಯಮ ಅಧಮ ಈ ಪ್ರಕಾರದಿಂದಂ ವೃಕ್ಷಂಗಳಂ ಬಿತ್ತುವುದು—೪.

---

1 ಮೆಂಬುದುಪಾದೇಯಮಾಗಿ, 2 ಕೊಳನೆಳನಂ.



ಕಂ|| ಪವಣಱಿದು ಗುೞಿಗಳೊಳ್ ತೀ |
ವುವುದಯ್ದುಂ ತೆಱದ ಮಣ್ಣುಮಂ ಗೊಬ್ಬರಮಂ ||
ಸಮನಾಗಿ ಕೂಡಿ ಬುಧ ಕ |
ಲ್ಪವೃಕ್ಷನನುಮತದೆ ಭೂಮಿಸಂಸ್ಕಾರಮಿದುಂ || ೫ ||

ಪೃಥ್ವಿ|| ಸ್ವಯಂಪತಿತ ಸಾರಪಕ್ವಫಳಬೀಜಮಂ ಕೊಂಡು ಗೋ |
ಮಯಂಬೆರೆದು ಪಂಚರಾತ್ರಿಯೊಳೊಣಂಗೆ ಸಪ್ತಾಹಮಂ ||
ಪಯಃಪ್ರಯುತಮಾಗೆ ಮಾಡಿ ಬೃಹತೀತ(ಫ)ಳ ಕ್ಷೀರ ವಾ |
ರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ ತುಪ್ಪದಿಂ || ೬ ||

ಕಂ|| ಅವನಿಂಬಾಗಿರೆ ಪರಮೋ |
ತ್ಸವದಿಂ ಶುಭಲಗ್ನಮೊಂದಿ ಬರೆ ಕುೞಿಯೊಳ್ ಬಿ ||
ತ್ತುವುದೊಯ್ಯನೆ ತಳಿವುದು ಮಾಂ |
ಸವಾರಿಯಂ ಸಸಿಗಳೊದವಿ ದಾಂಗುಡಿ ವಿಡುಗುಂ || ೭ ||

ನಿಯತಂ ಬೇಸಗೆಯೊಳ್ ಬ |
ಯ್ಗಯುಮಾ ಪಗಲುಮೊಂದು[1]ದೆವಸಮಂತರಿಸದೆ ಮಾ ||
ಗಿಯೊಳಬ್ದಕಾಲದೊಳ್ ಭೂ |
ಮಿಯೊಳಂ ಪದನಱಿತು ನೀರನೆತ್ತುಗೆ ಬಲ್ಲರ್ || ೮ ||

---

ಟೀ|| ಆ ಕುೞಿಗಳ ಪವಣಱಿತು ಅಯ್ದುಂತೆಱದ ಮಣ್ಣಂ ಗೊಬ್ಬರಮಂ ಸಮನಾಗಿ ಕೊಂಡು ಆ ಗುೞಿಗಳಲ್ಲಿ ತುಂಬುವುದು. ಇದು ಹಿರಿಯರ ಅನುಮತದಿಂದೆ ಭೂಮಿಸಂಸ್ಕಾರಮೆನಿಸಿ ಕೊಳ್ವುದು—೫.

ಟೀ|| ಬೀಗಿ ಬೆಳೆದು ತನ್ನಿಂದೆ ತಾವೆ ಉದಿರಿ ಬಿಟ್ಟ ಪಣ್ಗಳ ಬೀಜಮಂ ಸೆಗಣಿಯಲ್ಲಿ ಕಲಸಿ ಅಯ್ದುದಿನವೊಣಗಿಸಿ ಅಯ್ದುದಿನ ಪರಿಯಂತಂ ಪಾಲ ನೀರಲ್ಲಿ ನನೆಯಿಕ್ಕಿ ಗುಳ್ಳದ ಪಣ್ಣ ರಸಂ, ಎಳನೀರ್ ಇವೆರಡನಿವಱಲ್ಲಿ ಕಲಸಿ ಆ ಬೀಜಕ್ಕೆ ವಾಯುವಿಳಂಗಂ, ತುಪ್ಪಂ ಇವಱಿಂದೆ ಧೂಪಮಂ ಕುಡುವುದು—೬.

ಟೀ|| ಆ ಧೂಪಿಸಿದಂತಹ ಬೀಜಂಗಳಂ ಅನೇಕೋತ್ಸಾಹದಿಂದೆ ಶುಭಲಗ್ನಂಗಳ್ ಕೂಡಿದಾಗಳ್ ಆ ಬೀಜಂಗಳ್ ನೋಯದಂತೆ ಗುೞಿಗಳೊಳಗೆ ಬಿತ್ತಿ ಮಾಂಸೋದಕಮಂ ತಳಿಯಲ್ ಆ ಸಸಿಗಳ್ ಕುಡಿವರಿದು ಚೆನ್ನಾಗಿ ಬೆಳೆವುವು—೭.

ಟೀ|| ದಿನಂ ತಪ್ಪದೆ ಬೇಸಗೆಯ ಕಾಲದೊಳ್ ಉದಯಾಸ್ತಮಯಂ ತಪ್ಪದೆ ನೀರಂ ಪೊಯ್ವುದು [ಮಾಗಿಯ ಕಾಲದಲ್ಲಿಯುಂ ಮೞೆಗಾಲದಲ್ಲಿಯುಂ ಭೂಮಿಯಲ್ಲಿ ನೀರಪದನಂ ನೋಡಿಕೊಂಡು ನೀರಂ ಪೊಯ್ವುದು]—೮.

---

1 ದೇವಮುಂ.

ಕಂ|| ಸಸಿಯ ಕೆಲಗೆಲದೊಳೊದವಿದ |
ಕಸಮಂ ಕಿೞ್ತಾಲಿಕಲ್ ಸಿಡಿಲ್ ಮುಗಿಲುಂ [1]ಕೂ ||
ರ್ವಿಸಿಲುೞ್ಕು ವಹ್ನಿ ಪುೞು ವಾ |
ಯುಸಮೆಂಬಿವನೆಯ್ದೆ ಕಾವುದಬ್ದಂಬರೆಗಂ || ೯ ||

ಮ|| ಮೊಸಗರ್ೞಿಂ ವಿಧಿಯಿಂದೆ ಸೂಸೆ ಭರದಿಂ ಬೀೞ್ವಾಲಿಕಲ್ಲಂ ನಿವಾ |
ರಿಸುಗುಂ ಪೆರ್ಮರನಂ ಸಿಡಿಲ್ಪೊಡೆದೊಡಂತಾ ಬೂದಿಯಂ ಕೊಂಡು ವ ||
ಹ್ನಿಸಮೇತಂ [2]ಪೊಗೆಯಿಕ್ಕೆ ಮಂಜಿನೊದವಂ ಕಾಗುಂ ಮರಕ್ಕೆಯ್ದೆ ಧೂ |
ಪಿಸೆ ಮತ್ಸ್ಯಾಮಿಷ [3]ಸರ್ಷಪಾಜ್ಯಕದಳೀಪತ್ರಂಗಳಿಂ ಕೊರ್ವುಗುಂ || ೧೦ ||

ಕಂ|| ಹಿಂಗು ವಚಾದ್ವಯ ಮರಿಚ ವಿ |
ಳಂಗಾರುಷ್ಕರ ಪಠಾಕಮಳ ? ಸರ್ಷಪ ಗೋ ||
ಶೃಂಗ ಪಶುಮೂತ್ರದಿಂ ವೃ |
ಕ್ಷಂಗಳನಿಂಬಾಗಿ ಪೊರೆಯೆ ಕೀಟಾಪಹರಂ || ೧೧ ||

ಸವನಾಗಿ ಕೊಂಡು ಧೂಪಿಸು |
ಗೆ ವಿಳಂಗಂ ಮಹಿಷಿ ಮತ್ಸ್ಯಮಾಂಸಂ ನಿಶೆ ಸಾ ||
ಸಿವೆಯಂ ಮತ್ತಿಯ ಪೂವೆಂ |
ಬಿವಱಿಂ ತರು [4]ನಿರುಜಮಾಗಿ ಫಳದೊಳ್ ನೆರೆ(ಱೆ)ಗುಂ || ೧೨ ||

ಟೀ|| ಆ ಸಸಿಗಳ ಸುತ್ತಂ ಪುಟ್ಟಿದ ಕಸಂಗಳಂ ಕಿೞ್ತು, ಆಲಿಕಲ್ಲುಂ, ಸಿಡಿಲುಂ, ಬಿಸಿಲುಂ, ಅಗ್ನಿಯುಂ, ಪುೞುವುಂ, ವಾಯುಸಂಗಳುಂ ಇವು ಮೊದಲಾದುವೊಂದು ವರ್ಷಕಾಲಂ ಆ ಸಸಿಗಳಂ ಮುಟ್ಟಿ ಬಾಧಿಸದಂತೆ ರಕ್ಷಿಸುವುದು—೯.

ಟೀ|| ಆ ಸಸಿಗಳಂ ರಕ್ಷಿಸವೇೞ್ಕುವಾದೊಡೆ ಮೊಸರೋಗರವುಂ ಆ ಸಸಿಗಳ್ಗೆ ವಿಧಾನದಿಂದೆ ತಳಿಯಲ್ ವರ್ಷಪರ್ಯಂತವುಂ ತನ್ನೊಳ್ ಬಿಟ್ಟ ಆಲಿಕಲ್ಲ ಬಾಧೆಗಳಂ ಬಿಡಿಸುವುದು, ಪಿಂತೆ ಪೞುಮರಕ್ಕೆ ಸಿಡಿಲ್ ಬಡಿದಿರ್ದೊಡೆ ಅದಱ ಬೂದಿಯಂ ಕೊಂಡುಬಂದು ಬಂಕೆಯಂ ಬೆರಸಿ ಕೊಂಡು ಪೊಗೆಯಿಕ್ಕಲ್ ಮಂಜಿನ ಬಾಧೆಯಂ ಕಾವುದು, ಆ ಸಸಿಗಳ್ಗೆ ಮೀನಮಾಂಸಂ, ಸಾಸಿವೆ, ತುಪ್ಪಂ, ಬಾೞೆಯೆಲೆ ಇವಱ ಪೊಗೆಯಂ ಕುಡಲ್ ಆ ಸಸಿಗಳ್ ಸೊರ್ಕ್ಕಿ ಚೆನ್ನಾಗಿ ಬೆಳೆವುವು—೧೦.

ಟೀ|| ಇಂಗು, ಬಜೆ, ಅತಿಬಜೆ, ಮೆಣಸು, ವಿಳಂಗಂ, ಕೇಱಬೀಜಂ, ಗುಬ್ಬಿಬಳ್ಳಿ, ಸಾಸಿವೆ, ಆಕಳಕೊಂಬು ಇವಂ ಗೋಮೂತ್ರದಲ್ಲಿ ಕೊಳಸಿ ವೃಕ್ಷಂಗಳ ಮೊದಲ್ಗೆ ಸುತ್ತಿ ಹಾಕಲ್ ಆ ವೃಕ್ಷಂಗಳಂ ಬಾಧಿಸುವ ಪುೞುಗಳಂ ಕಿಡಿಸುವುವು—೧೧.

ಟೀ|| ವಿಳಂಗಂ ಮಹಿಷಾಕ್ಷಿ,(ಧೂಪಂ,) ಮೀನಮಾಂಸಂ, ಅರಿಸಿನ, ಸಾಸಿವೆ, ಮತ್ತಿಯ ಹೂ, ಇವಂ ಸಮನಾಗಿ ಕೊಂಡು ಮರಂಗಳ್ಗೆ ಧೂಪಿಸಲ್ ರೋಗಮಿಲ್ಲದೆ ಫಲಂಗಳೊಳ್ಳಿತಪ್ಪುವು—೧೨.

1 ಕಡುವಿಸಿ. 2 ತಲೆಯಿಕ್ಕೆ. 3 ವರ್ಷದಾಜ್ಯ, ಶೃಷದಾಜ್ಯ. 4 ನೀರುಮಾ



ಚಂ|| ಕುಡಿ ಮುಱಿದಿರ್ದೊಡಂ ಕೊನೆ ಮುಱುಂಟಿದೊಡಂ ನಱುಕಿರ್ದೊಡಂ ಬೆಳ |
ತಿರ್ದೊಡ ಮೊಣಗಿರ್ದೊಡಂ ಸರುಜ[1]ಮಿಪ್ಪ್ಯಮ ಮೆಂದಱಿದಲ್ಲಿ ಕುತ್ತಮು ||
ಳ್ಳಿಡೆಯನೆ ನೋಡಿ ತೋಡಿ ಕಳೆದಾಯೆಡೆಯೊಳ್ ಬಿಸಿಯುಪ್ಪ ತುಪ್ಪಮಂ |
ತೊಡೆದು ವಿಳಂಗಮಂ ಕರಿಯಮಣ್ಣುಮನೊಟ್ಟುಗೆ ಬಾೞ್ಗುಮಾ ಮರಂ || ೧೩ ||

ಕಂ|| ಕಸರಿಯ ನೀರಿಡುವುದು ಸ |
ಬ್ಬಸಿಗೆಯ ನರೆದಿಕ್ಕೆ ಮರನ ಮೊದಲೊಳದಂ ಸೇ ||
ಕಿಸುವುದು ಮೇಣಜಮಾಂಸದ |
ರಸಮಂ ತಳಿವುದು ತಳಿರ್ತು ನುಣ್ಪಂ ಪಡೆಗುಂ || ೧೪ ||

ಕಂ|| ಜವೆ ಪೆಸಱುದ್ದೆಂಬಿವಸಾ |
ಡುವ ಪಾಲೊಳಗಟ್ಟು ಕುಜದ ಮೂಲಂಗಳೊಳ ||
ಕ್ಕುವುದಾ ಮರನೊಪ್ಪುವೆ ಪ |
ಲ್ಲವದಿಂ ಪುಷ್ಪಂಗಳಿಂ ಫಲಂಗಳನೆಸೆಗುಂ || ೧೫ ||

ಕಂ|| ಕೊನೆ ನನೆ ಪೂ ಮಿಡಿ ಕಾಯ್ ಪಣ್ |
ತನಿವಣ್ಣೆಂಬಿವನೆ ಪುದಿದು ಸಾರ್ವತ್ರ್ತುಕಮಾ ||
ಯ್ತೆನಿಸಿ ವಿಳಾಸಂ ಬೆತ್ತುವ |
ನನೂನವನ ಮನಮನಾದೊಡಂ ರಂಜಿಸುಗುಂ || ೧೬ ||

ಟೀ|| ಆವುದೊಂದುವೃಕ್ಷಕ್ಕೆ ಕುಡಿಗಳ್ ಮುಱಿದೊಡೆ, ಕೊನೆಗಳ್ ಮುಱುಂಟಿದೊಡೆ. ನಱುಕಿದೊಡೆ ಬೆಳತಿಗೆಗೊಂಡೊಡೆ, ಒಣಗಿದೊಡೆ ಇಂತಿವಾದೊಡೆ ಆ ಮರಕ್ಕೆ ರೋಗಮುಂಟೆಂದಱಿವುದು, ಆ ರೋಗಂ ಪುಟ್ಟಿದ ತಾವಂ ತೋಡಿ ಆ ತಾವಿಗೆ ಬಿಸಿಯುಪ್ಪು ತುಪ್ಪಮಂ ತೊಡೆದು ವಿಳಂಗಂ ಕರಿಯಮಣ್ಣಂ ಕೂಡಿ ತುಂಬಲ್ ಆ ಮರಂಗಳ್ ನೀರುಜಮಾಗಿ ಬೆಳೆವುವು—೧೩.

ಟೀ|| ಸಬ್ಬಸಿಗೆಯನರೆದು ಕಷಾಯಮಂ ಮಾಡಿ ಆ ರಸದಿಂದೆ ಮರನ ಮೊದಲಿಂಗೆ ಸೇಕಂ ಮಾಡುವುದು, ಅಲ್ಲಾ ಆಡಿನ ಮಾಂಸದ ರಸಮಂ ತಳಿವುದು ಆ ವೃಕ್ಷಂಗಳ್ ತಳಿರ್ತು ನಯಮಾಗಿ ಬೆಳೆವುವು—೧೪.

ಟೀ|| ಜವೆ, ಪೆಸಱು, ಉದ್ದು, ಇವನಾಡಿನ ಪಾಲಲ್ಲಿ ಅಟ್ಟು ಮರದ ಮೊದಲಲ್ಲಿಕ್ಕಲ್ ಆಮರಂಗಳ್ ಅಂಕುರಂ ಪಲ್ಲವಂ ಪುಷ್ಪಂ ಫಲಂಗಳಿಂದೆ ಒಪ್ಪುವುವು—೧೫.

ಟೀ|| ವೃಕ್ಷಂಗಳ್ ಈ ಪೇೞ್ದ ಮಾೞ್ಕೆಯೊಳ್ ಬಿತ್ತಿ ರಂಜಿಸಲ್ ಆರಕ್ಷಿಸಿದಾತಂಗೆ ಕುಡಿಯಿಂದಂ, ನನೆಗಳಿಂದಂ, ಮಿಡಿಗಾಯ್ಗಳಿಂದಂ, ಕಗ್ಗಾಯ್, ತನಿವಣ್ಗಳಿಂದೆ ತುಱುಗಿ ಎಲ್ಲಾ ಋತುಗಳಲ್ಲಿಯುಂ ಫಲಮಾಯ್ತೆನಿಸಿ ಎಲ್ಲರಮನಸ್ಸಿಗೆ ರಂಜಿಸಿ ಸುಖಕರಮಾಗಿರ್ಪುದು—೧೬.

1 ಮರ.

ಮ॥ ಬಗೆ ಮುಟ್ಟಿರ್ದೆಡೆಯೊಳ್ ತಳಿರ್ತ ಮರನಂ ಹೇಮಂತದೊಳ್ ಕಿೞ್ತು ನಾಂ |
ಟುಗೆ ಮೇಘಾಗಮದೊಳ್ ಫಲಾನ್ವಿತಕುಜವ್ರಾತಂಗಳಂ ಕಿೞ್ತು ನಾಂ ||
ಟುಗೆ ಬಿತ್ತಿರ್ದ ಮರಂಗಳಂ ಶಿಶಿರದೊಳ್ ಬೇರಿಂದೆ ಕಿೞ್ತೊಯ್ದು ನಾಂ |
ಟುಗೆ ಮುನ್ನಂ ನೆಲಸಿರ್ದ ಮಾಟ್ಕೆಯೊಳೆ ಲೋಕಾಶ್ಚರ್ಯಮಪ್ಪನ್ನೆಗಂ || ೧೭ ||

ಮ॥ ವಿಧಿಯಿಂ ವೃಕ್ಷಮನರ್ಚಿಸಿಟ್ಟು ಸೆಗಣಂ ದುಗ್ಧಂ ವಿಳಂಗಂ ಘೃತಂ |
ಮಧು ಬಾಳಂ ತಿಳಮೆಂಬಿವಂ ಸಮನೆಗೊಂಡಾವೃಕ್ಷಮಂ ಪೂಸಿ ಕಿ ||
ೞ್ತಧಿಕಂ ಮಂಗಳತೂರ್ಯಮುಣ್ಮೆ ನಯದಿಂದಂ ನಾಂಟೆ ಮುಂ ಪೂಸಿದಾ |
ಪಥಮಂ ಮತ್ತೆಯುಮೆಯ್ದೆ ಪೂಸಿ ಬೞಿಯಂ ನಿತ್ಯರ್ತುನಿರ್ಬಂಧದಿಂ || ೧೮ ||

ಕಂ॥ ಪುಲ್ಲೆಯ ಪಂದಿಯ ನೆಣನಂ |
ಕೊಲ್ಲಜಲಂ ಮಧು ಘೃತಂಗಳೆಂಬಿವನೆಱೆ ಬೇ ||
ರೊಳ್ಲಿರಲಾ[1] ತರು ಸದ್ಯಃ |
ಪಲ್ಲವದಿಂ ಪುಷ್ಪದಿಂ ಫಲಂಗಳನೆಸೆಗುಂ || ೧೯ ||

ಕಂ॥ ನೆಱೆ ಬಣ್ಣಿಸಲಬ್ಜಭವಂ |
ನೆಱೆಯಂ ಪೆಱರಳವೆ ಪೊಳೆವ ತರುಗಳಂ ಪ ||
ಣ್ಗೊಲೆಗಳ ನೆಱವಿಂದಂ ಬಗೆ |
ಗೞ್ಪೋಲ್ ನಳನಳಿಸುತೊಱಗಿ ತುಱುಗಿದ ಬನಮಂ || ೨೦ ||

ಟೀ॥ ಇಟ್ಟೆಡೆಯಾಗಿರ್ದ ಮರಂಗಳಂ ಕಿೞ್ತು ನಡಬೇಕಾದೊಡೆ ತಳಿರ್ತಹ ಬಲ್ಮರಂಗಳಂ ಹೇಮಂತರ್ತುವಿನಲ್ಲಿ (ಮಾರ್ಗಶಿರ ಪುಷ್ಯಂಗಳಲ್ಲಿ) ಕಿೞ್ತು ನಡಿಸುವುದು, ಫಲಿತಂಗಳಾಗಿರ್ದ ವೃಕ್ಷಂಗಳಂ ಕಿೞ್ತು ನಡಬೇಕಾದೊಡೆ ವರ್ಷಾಕಾಲ (ಶ್ರಾವಣ ಭಾದ್ರಪದ ಮಾಸಂಗಳಲ್ಲಿ) ಕಿೞ್ತು ನಡಿಸುವುದು, ಎಳಮರಂಗಳಂ ಕಿೞ್ತು ನಡಬೇಕಾದೊಡೆ ಶಿಶಿರರ್ತುವಿನ(ಮಾಘಫಾಲ್ಗುಣ ಮಾಸಂಗಳ)ಲ್ಲಿ ಕಿೞ್ತು ನಡಿಸುವುದು, ಈಕ್ರಮದಲ್ಲಿ ವೃಕ್ಷಂಗಳಂ ನಡಿಸಲ್ ಮುನ್ನಿರ್ದ ಠಾವಿನಿಂದಂ ಪೆರ್ಚ್ಚಿ ಚೆನ್ನಾಗಿ ಬೆಳೆವುವು—೧೭.

ಟೀ॥ ಶಾಸ್ತ್ರೋಕ್ತಮಾಗಿ ಮರಂಗಳಂ ಪೂಜಿಸಿ, ಸಗಣಿ ಪಾಲ್, ವಿಳಂಗಂ, ತುಪ್ಪಂ, ಜೇನತುಪ್ಪಂ, ಲಾಮಂಚಂ, ಎಳ್ಳು ಇವಂ ಸಮನೆಗೊಂಡು ಅರೆದು ಆವೃಕ್ಷಕ್ಕೆ ಲೇಪನಂಮಾಡಿ ಆಮರನಂ ಬೇರ್ಸಹಿತಂ ಕಿೞ್ತು ಮಿಗಿಲಾಗಿ ಮಂಗಳವಾದ್ಯಂಗಳಿಂದಮುತ್ಸಾಹಂಮಾಡಿ ಆ ವೃಕ್ಷಮಂ ಮನೋಹರಮಾದ ಠಾವಿನಲ್ಲಿ ನಟ್ಟು ಈ ಮುನ್ನಿನೌಷಧಂಗಳಂ ಮತ್ತೆ ತೊಡೆದು ತಱುವಾಯಲ್ಲಿ ದಿನಂಪ್ರತಿಯಲ್ಲಿಯುಂ ನೀರನೆಱೆಯುವುದು—೧೮.

ಟೀ॥ ಪುಲ್ಲೆಯ ಪಂದಿಯ ಮಾಂಸಂ(ನೆಣಂ)ಅಂಕೋಲೆಯ ಬೀಜದರಸಂ, ಜೇನತುಪ್ಪಂ, ತುಪ್ಪಂ ಇವನೊಂದಾಗಿ ಕೂಡಿ ಆವುದೊಂದುಮರನ ಬೇರ್ಗಳಲ್ಲಿ ಪೊಯ್ಯುತ್ತಂಬರಲಾಮರಂಗಳ್ ಸದ್ಯಃಪಲ್ಲವಪುಷ್ಪಫಲಂಗಳಿಂದಪ್ಪೊಪ್ಪುವುವು—೧೯.

ಟೀ॥ ಇಂತು ಪೇೞ್ದಂತೆ ಮಾಡಿದ ವೃಕ್ಷಂಗಳ ಫಲಂಗಳಂ ವರ್ಣಿಸುವೊಡೆ ಬ್ರಹ್ಮದೇವಂಗಮರಿದು. ಪೆಱಂಗೆಂತು ಸಾಧ್ಯಮಪ್ಪುದು ?—೨೦.

1 ಲ್ಲಿರಲಾಮರಸದ್ಯಂ.



ಚಂ॥ ಸೊಗಯಿಪ ದಾಡಿಮಂ ಪಲಸು ಪಾದರಿ ನೇಱಲಶೋಕೆ ಜಾಜಿ ಮ |
ಲ್ಲಿಗೆ ಯದಿರ್ಮುತ್ತೆ ಮಾದುವ ಫಲಂಗಳುಮಾಗಿರೆ ಕೊಂಬು ಬೀಜಮಂ ||
ಸೆಗಣದೊಳಲ್ದು ಬಿತ್ತುಗೆ ಕದಂಬ್ರಿಪಮಂ ಕುಱಿದೋಡಿ ಬೀಜರಾ |
ಜಿಗಳನೆ ಬಿತ್ತುಗಲ್ಲಿ ಕಡಿಗೊಂಬನದಂ ನಡುಗಲ್ಲಿ ನಾಂಟುಗುಂ || ೨೧ ||

ಕಂ॥ ಸಮನಾಗಿರೆ ಶಾಖಾಬೀ |
ಜಮನೆರಡಂ ಕೊಂಡು ಸೀೞ್ದು ಸಂಧಿಸಿ ಮಧುವಾ ||
ಜ್ಯಮನಲ್ಲಿ ತೊಡೆದು ನಡುಗೊಂ |
ದೆ ಮೊದಲ್ ಪಿರಿದಾಗಿ ತತ್ಫಳಂ ಬೇಱಕ್ಕುಂ || ೨೨ ||

ಜಲಜಾತ ಕುಮುದ ನೀಲೋ |
ತ್ಪಲ ಕಂದಮನಾಜ್ಯಮಧುಗಳಿಂ ಸಂಧಿಸಿ ಬಿ ||
ತ್ತಲೊಡಂ ತಳಿ ಹರಿಣಾಮಿಷ |
ಜಲಮಂ ಮೊದಲೊಂದೆ ಪೂಗಳವು ಬೇಱಕ್ಕುಂ || ೨೩ ||

ಕ್ರಿಯೆಯಿಂ ಬೀಜಂಗಳ ನ |
ಲ್ಲಿಯ ಮಣ್ಣೊಳ್ ಬಿತ್ತಿ ತಳಿಗೆ ತುಳ(ಳ)ಯಿಸಿ ಪಾಲ್ ಪಂ ||
ದಿಯ ನೆಣಗಳುಮೆಂಬಿವನಸು |
ನಯದೆ ಮೊದಲ್ಗೆಱೆಯೆ ಸದ್ಯಫಲದೊಳ್ ನೆಱೆಗುಂ || ೨೪ ||

ಟೀ॥ ಒಪ್ಪುತ್ತಿರ್ದಂತಹ ದಾಳಿಂಬಂ, ಪಲಸು, ಪಾದರಿ, ನೇಱಲ್, ಅಶೋಕೆ, ಜಾಜಿ, ಮಲ್ಲಿಗೆ, ಆದಿರ್ಗಂತಿ, ಮಾದಲ. ಇವು ಮೊದಲಾಗಿರ್ದ ವೃಕ್ಷೌಷಧಿಬಳ್ಳಿಗಳ್ಗೆ ಅವಱ ಶಾಖೆಗಳಂ ಅಲ್ಲಾ, ಬೀಜಂಗಳಂ ಸಗಣಿಯಂ ಪೂಸಿ ಬಿತ್ತುವುದು. ಅಲ್ಲಾ, ಆಮರಂಗಳ ಕೊಂಬೆಗಳಂ ಕಡಿದು ನಡುವುದು. ಹೀಗೆ ಬಿತ್ತಿದೊಡೆ ಅವು ಬಳ್ಳಿವರಿದು ನಾಂಟಿ ಚೆನ್ನಾಗಿ ಬೆಳೆವುವು—೨೧.

ಟೀ || ಆವುದೊಂದು ವೃಕ್ಷದ ಎರಡುಂ ಪ್ರಕಾರದ ಶಾಖೆಗಳನಾದೊಡಂ ಅಲ್ಲಾ, ಬೀಜಂಗಳನಾದೊಡಂ ಕೊಂಡು ಸಮನಾಗಿ ನೇಱು ಆವಂ ಮರಳಿ ಸಂಧಿಸಿ ಅವರ್ಕೆ ಜೇನತುಪ್ಪಂ ತುಪ್ಪಮಂ ತೊಡೆದು ಪೊಂದು ಠಾವಿನಲ್ಲಿ ಸಂಧಿಸಿ ಬಿತ್ತಲ್ ಆವೃಕ್ಷದ ಮೊದಲೊಂದಾಗಿ ಬೆಳೆವುದು, ಫಲಂಗಳ್ ಬೇಱೆ ವೇಱೆಯಪ್ಪುವು—೨೨.

ಟೀ॥ ತಾವರೆಗಡ್ಡೆ ನೈದಿಲೆಗಡ್ಡೆಗಳಂ ಸಂಧಿಸಿ ಜೇನತತುಪ್ಪಮಂ ಕೂಡಿ ಪೂಸಿ ಪೊಂದಱೊಳೊಂದು ಗಡ್ಡೆಗಳಂ ಸಂಧಿಸಿ ಬಿತ್ತಿ ಪುಲ್ಲೆಯ ಮಾಂಸದ ರಸಮಂ ತಳಿಯುತ್ತೆ ಬರಲ್ ಮೊದಲೊಂದೆಯಾಗಿ ಪೂಗಳ್ ಬೇಱೆ ಬೇಱೆಯಾಗಿ ಬೆಳೆವುವು—೨೩.

ಟೀ॥ ಆವುದೊಂದು ವೃಕ್ಷಂಗಳಂ ಅಲ್ಲಿಯ ಮಣ್ಣಂ ಚೆನ್ನಾಗಿ ಅಗೆದು ಭೂಮಿಯುಂ ಸಸಿನಮಾಗಿ ಮಾಡಿಕೊಂಡು ಬಿತ್ತಿ ಹಂದಿಯಮಾಂಸದ ರಸಮಂ ಪಾಲಂ ಬೆರಸಿ ಕಲಿಸಿ ಮೊದಲಿಗೆ ಪೊಯ್ಯಲ್ ಅಕ್ಷಣದಲ್ಲಿ ವೃಕ್ಷಂಗಳ್ ಪುಟ್ಟಿ ಪುಷ್ಪಫಲಂಗಳಿಂದೆ ಚೆನ್ನಾಗಿ ಪೊಪ್ಪುವುವು—೨೪.

ಕಂ|| ಪಂದಿಯ ನೆಣನಂಕೋಲಜ |
ಲಂ ದುಗ್ಧಂ ಮಧು ಘೃತಂಗಳಂಬಿವ ನೆಱೆ ಮಾ ||
ಕಂದದ ಮೂಲದೊಳೆಂದುಂ |
ಕುಂದದೆ ಫಳದಿಂದಮೊಂದಿ ಗೊಂದಳಿಸಿರ್ಕುಂ || ೨೫ ||

ವೃಕ ಸೂಕರ ಮೃಗ ವೃಷ ಜಂ |
ಬುಕ ವಸೆಯಂ ಪಂಚಪಲ್ಲವಪ್ರಯುತಂ ಕಾ ||
ಸಿ ಕಷಾಯತೋಯಮಂ ತಳಿ |
ಯೆ ಕರಂ ಪುಳಿಯಪ್ಪ ಮಾವುಮಿಮ್ಮಾವಕ್ಕುಂ || ೨೬ ||

ಜಳಜಂ ಬಾಳಂ ಜಂಬೂ |
ಫಳಮೆಂಬಿನಿತಱ ಕಷಾಯತೋಯಮನೆಱೆ ಬಂ ||
ದೆಳ ಮಾವಿನ ಮೊದಲೊಳ್ ತ |
ತ್ಫಳಚಯಮಾಮೋದಸುರಭಿಗಂಧಮನಾಳ್ಗುಂ || ೨೭ ||

ಕುದುರೆಯ ಪಂದಿಯ ವಿಷ್ಠೆಯೊ |
ಳೊದವಿದ ಕಿರ್ಚಿಂದೆ ಸೂಜಿಯಂ ಕಾಸಿ ಬೞ ||
ಕ್ಕದಱೊಳ್ ಬಾೞೆಯ ಗೊನೆ ಪು |
ಟ್ಟಿದೆಡೆಯನಱದೂಱೆ ಪಿರಿಯ ಬಿಣ್ಗೊನೆಯಕ್ಕುಂ || ೨೮ ||

ಟೀ|| ಎಳೆಮಾವಿಗೆ ಪಂದಿಯ ಮಾಂಸಂ ಅಂಕೋಲೆಯ ಬೀಜದರಸಂ, ಪಾಲ್, ಜೇನು ತುಪ್ಪಂ, ತುಪ್ಪಂ ಇವಂ ಕೂಡಿ ಆಮರದ ಮೊದಲಲ್ಲಿ ತಪ್ಪದೆ ಯೆಱೆಯಲ್ ಎಲ್ಲಾ ದಿನಂಗಳಲ್ಲಿಯುಂ ಫಲಮಪ್ಪುದು—೨೫.

ಟೀ|| ತೋಳಂ ಹಂದಿ ಸಾರಂಗಂ ಎತ್ತು ನರಿ ಇವಱ ಮಾಂಸಮಂ (ವಪೆಯಂ) ಅತ್ತಿ ಆಲ ಹಲಸು ಬಸಿರಿ ಅರಳಿ ಇವಯ್ದುಮರಂಗಳ ಪಲ್ಲವಂಗಳಂ ಕೂಡಿ ಉದಕದಲ್ಲಿ ಕಷಾಯಂಮಾಡಿ ಹುಳಿಯಪ್ಪ ಮಾವಿನಮರನ ಮೊದಲಲ್ಲಿ ಪೊಯ್ಯಲ್ ಅದು ಸಿಹಿಮಾವಿನ ರಸಮಪ್ಪುದು—೨೬.

ಟೀ|| ಭದ್ರಮುಸ್ತೆ ಲಾವಂಚಂ ನೇಱಿಲಪಣ್ ಇವಂ ಉದಕದೊಳಗೆ ಇಕ್ಕಿ ಕಷಾಯಮಂ ಕಾಸಿ ಯೆಳೆಯ ಮಾವಿನಸಸಿಯ ಮೊದಲೊಳ್ ಪೊಯ್ಯುತ್ತೆ ಬರಲ್ ಆಮರದಲ್ಲಾದ ಮಾವಿನಪಣ್ಗಳ್ ಒಳ್ಳಿಯಸುಗಂಧಪರಿಮಳದಿಂದಮೊಪ್ಪುವುವು—೨೭.

ಟೀ|| ಕುದುರೆಯ ಲದ್ದಿ, ಕಾಡಹಂದಿಯ ಲದ್ದಿ ಇವೆರಡಱ ಲದ್ದಿಯ ಕಿಚ್ಚಂ ಪೊತ್ತಿಸಿ ಸೂಜಿಯಂ ಕಾಸಿ ಆಸೂಜಿಯಂ ಬಾೞೆಯ ಗೊನೆಪುಟ್ಟುವ ಠಾವನಱದು ನಡಲ್ ಆಗೊನೆ ದೊಡ್ಡಿಯಗೊನೆಯಕ್ಕುಂ—೨೮.



ಕಂ|| ಕದಳಿಯ ಮೂಲದೊಳಿಡು ಗಜ |
ಮದಮಂ ಕಪಿಶಿರದೊಳಕ್ಕೆ ಮೇಣ್ ಸೂಕರದಂ ||
ತದೊಳಕ್ಕೆ ಕೀವಿ ತಾನಂ |
ತದಱ ಫಲಂ [1]ರದನಿ ರದನದಾಕೃತಿಯಕ್ಕುಂ || ೨೯ ||

ಮೊದಲ್ಲಿ ಬಾೞೆಗಂಕೋ |
ಲದ ಜಲಮಂ [2]ಕ್ರೋಡವಸೆಯುಮಂ ರುಧಿರಮುಮಂ ||
ಕುದಿಯಿಸಿ ಪೊಯ್ದೊಡೆ ದಾಳಿಂ |
ಬದ ಫಲದಾಕೃತಿಯ ಫಲಮನದು ತಳೆದಿರ್ಕುಂ || ೩೦ ||

ಸಾರತರಮಪ್ಪ ಪನಸೋ |
ರ್ವೀರುಹಮಂ ಕೂಡೆ ಸೆಲ್ಲ ಪುಲ್ಲಿಂದಮಲಂ ||
ಕಾರಮನೆ ಮಾಡಿ ಕಟ್ಟಿಗೆ |
ಬೇರಿಂ ಕಾಯ್ಗುಂ ಸರಸ್ವತೀಮುಖತಿಲಕಾ || ೩೧ ||

ತಿಲಮಗಸೆ ವಿಳಂಗಂ ಸಿಂ |
ಧು ಲವಣಮಿವನರೆದು ಜೇನ ಘೃತಮದ್ಯಮುಮಂ ||
ಕಲಸಿ ನಿಶಾಮುಖದೊಳ್ ಮೂ |
ಲಲೇಪನಂಗೆಯ್ಯೆ ತೆಂಗು ಬಹುಫಲಮಕ್ಕುಂ || ೩೨ ||

ಕುದಿಯಿಸಿ ಮೊದಲೊಳ್ ಗುಡಮಾಂ |
ಸದುಗ್ಧಮಂ ತಳಿದೊಡಕ್ಕೆ ಶಶಮಲಮಂ ಪೂ ||
ಸಿದೊಡಂ ಧೂಪಿಸಿದೊಡದ |
ಕ್ಕೊಗದವಿದ ಫಲದಿಂದ [3]ವಿಬಾೞೆ ಲೀಲೆಯನಾಳ್ಗುಂ || ೩೩ ||

ಟೀ|| ಬಾೞೆಯಸಸಿಯ ಮೊದಲಲ್ಲಿ ಆನೆಯುಮದಮಂ (ತೊಡೆದು) ಕಪಿಯ ಕಪಾಲದೊಳಾಗಲಿ ಅಲ್ಲಾ ಹಂದಿಯಪಲ್ಗಳಲ್ಲಾಗಲಿ ತುಂಬಿ ಆಬಾೞೆಯ ಮೊದಲಲ್ಲಿ ಇರಿಸಲ್ ಆಬಾೞೆಯ ಮರದಲ್ಲಿ ಜನಿಸಿದ ಪಣ್ಗಳ್ [4]ಆನೆಯದಂತದಂತನಿತು ಪಿರಿದಪ್ಪುವು—೨೯.

ಟೀ|| ಬಾೞೆಯಮರದ ಮೊದಲಲ್ಲಿ ಅಂಕೋಲೆಯಬೀಜದ ರಸ(ಕೋಡಗದ ಮಾಂಸ) ಹಂದಿಯಮಾಂಸಂ, ರಕ್ತಂ ಇವಂ ಕುದಿಸಿ ಆರಸಮಂ ಪೊಯ್ಯಲ್ ಆ ಬಾೞೆಯ ಮರನ ಕಾಯ್ಗಳ್ ದಾಳಿಂಬದ ಕಾಯಂತೆ [5]ಬಟ್ಟಿದುವಾಗಿ ಅಪ್ಪುವು—೩೦.

ಟೀ|| ಉತ್ತಮವಾದಂತಹ ಹಲಸಿನಮರಕ್ಕೆ ಬಿಳಿಯಹುಲ್ಲಿನ ಸರವಿಯಂ ಮೊದಲಿಂದೆ ತುಂಬಿ ಸುತ್ತಿಕಟ್ಟಲ್ ಆಮರದಬೇರಿಂದೆ ತೊಡಗಿ ಫಲಪೂರ್ಣಮಪ್ಪುದು—೩೧.

ಟೀ|| ಎಳ್ಳು, ಅಗಸೆಬಿತ್ತು, ವಿಳಂಗಂ, ಸೈಂಧಲವಣಂ, ಇವಂ ವೊಂದಾಗಿ ಅರೆದು ಜೇನ ತುಪ್ಪ, ಮದ್ಯಮಂ ಕಲಸಿ ತೆಂಗಿನಮರದ ಮೊದಲಿಂಗೆ ಲೇಪನಂಮಾಡಲ್ ಆ ಮರಂ ಬಹುಳ ಫಲಮಪ್ಪುದು—೩೨.

ಟೀ|| ಬೆಲ್ಲಂ, ಮಾಂಸಂ, ಪಾಲ್ ಇವನೊಂದಾಗಿ ಕುದಿಸಿ ಕಿ[6]ತ್ತೀೞೆಯ ಮರಕ್ಕೆ

1 ರಜನಿ. 2 ಕೋಡ. 3 ನೀಳ. 4 ಅಂಸಿನದಂತೆ ಬಣ್ಣವಹವು. 5 ಬುರವಾಗಿ. 6 ತ್ತಳಿಯ.

ಕ॥ ತ್ರಿಗಪಿ ಮೊದಲಲ್ಲಿ ಮತ್ಸ್ಯಂ |
ಬು ಗವಾಮಿಷಮಗುರು; ಪಿಂಡಿಯೆಂಬಿನಿತುಮನಿ ||
ಕ್ಕುಗೆ ಜಂಬುಕಮಾಂಸಮನಿ |
ಕ್ಕುಗೆ ಮೊದಲೊಳ್ ಮಾದುಫಳದ ಕಾಯ್ ತುಱುಗಿರ್ಕುಂ ||೩೪||

ದಾಡಿಮ ಮೂಲದಸುತ್ತಮು |
ಮಾದಿನ ಮಲಮಂ ಸೃಗಾಲಮೇಷಾಮಿಷಮಂ ||
ಕೂಡಿ ಮಿಡಿದಲ್ಲಿ ಪಿಂಡಂ |
ಮಾಡುಗೆ ಸುಫಲಂಗಳೊದವಿ ದೊಡ್ಡಿದುವಕ್ಕುಂ ||೩೫||

ಅಗೆಯಿಕ್ಕುಗೆ ಪುಣಿಸೆಯ ಬೀ |
ಜಗಳನವಂ ಕಿೞ್ತು ನಾಂಟೆ ನೆಲ್ [1]ಜವೆ ತಿಲ ಮು ||
ದ್ಗಗಳೆಂಬಿವ ನಾಮಿಷದೊಳ್ |
ತೆಗೆದಿಕ್ಕುಗೆ ಪುಣಿಸೆ ಕೊ(ವಿ)ಂಬೆ ನುಣ್ಪಂ ಪಡೆಗುಂ ||೩೬||

ಬದರಿಯ ವೃಕ್ಷದ ಮೂಲದೊ |
ಳುದಕಂ ಮಧು ಮಧುಕ ವೆಳ್ಗಳೆಂಬಿವನರೆದಿ ||
ಕ್ಕಿದೊಡದು ಸಾರ್ವರ್ತುಕಮೆನೆ |
ಪುದಿದೊದವಿದ ಮಧುರಫಲದಿನೆಸಗುಗು ಮಧಿಕಂ ||೩೭||

ಮೊದಲೊಳ್ ಪೊಯ್ವುದು. ಮೊಲನಹಿಕ್ಕೆಯುಂ ತಂದು ಆಮರದ ಮೊದಲಿಂಗೆ ಕಲಸಿ ಪೂಸುವುದು. ಅಲ್ಲಾ ಅವಱ ಧೂಪಮಂ ಕುಡುವುದು, ಮುನ್ನಂ ಫಲವಾಗದಿರ್ದ ಕಿತ್ತೀಳಿಯ ಮರಂ ಚೆನ್ನಾಗಿ ಫಲಗಳಿಂದವೊಪ್ಪುವುದು—೩೩.

ಟೀ॥ ಮೀನಬಸೆ, ಕಾಡಆಕಳಮಾಂಸ, ಅಗಿಲು, ಹಿಂಡಿದಿ ಇವಂ ಮಾದಲದ ಮೊದಲಿಂಗೆ ಯಿಕ್ಕುವುದು, ಅಲ್ಲಾ ನರಿಯಮಾಂಸಮನಿಕ್ಕಿದೊಡೆ ಆಮಾದಲಫಲಂಗಳ್ ಬಹುಳಮಪ್ಪುವು-೩೪.

ಟೀ॥ ದಾಳಿಂಬದ ಮರದ ಸುತ್ತಂ ಆಡಿನ ಹಿಕ್ಕೆ, ನರಿಯ ಮಾಂಸಂ, ತಗಱ ಮಾಂಸಂ ಇವಂ ಕೂಡಿದು ಉಂಡೆಗಳಂ ಮಾಡಿ ಆಮರನ ಮೊದಲಿಂಗೆ ಇಕ್ಕಲ್ ಆಮರನಫಲಂ ಘನಗಾತ್ರಮಾಗಿ ಚೆನ್ನಾಗಿ ಅಪ್ಪುವು—೩೫.

ಟೀ॥ ಪುಣಿಸೆಯ ಬೀಜಮುಂ ಅಗೆಯಂ ಪೊಯ್ದು ಅಪುಟ್ಟಿದ ಸಸಿಗಳಂ ಬೇಱೆವೇಱೆ ನಟ್ಟು ಅವಱ ಮೊದಲಿಂಗೆ ನೆಲ್ಲು ಜವೆ ಎಳ್ಳು ಉದ್ದು ಇವಂ ಮಾಂಸದಲ್ಲಿ ಕಲಸಿ ಇಕ್ಕಲ್ ಆಮರಂ ಚೆನ್ನಾಗಿ ಕೊರ್ವಿ ಬೆಳೆವುದು—೩೬.

ಟೀ॥ ಎಱನಮರದ ಮೊದಲಲ್ಲಿ ಉದಕಂ ಜೇನುತುಪ್ಪಂ, ತುಪ್ಪಂ, ನೆಷ್ಟಿಮಧುಕಂ, ಎಳ್ ಇವನೊಂದಾಗಿ ಅರೆದಿಕ್ಕಲ್ ಎಱನಮರಂ ಎಲ್ಲಾ ಋತುಗಳಲ್ಲಿಯುಂ ಸ್ವಾದುಪುಟ್ಟಿ ಬಹುಳಫಲಂಗಳಪ್ಪುವು—೩೭.

1 ಜಲವೆ.



ಕಂ॥ ಗುಡ ಮಧುದುಗ್ಧಾಜ್ಯಂಗಳ |
ನೊಡಗೂಡಿ(ಡ)ಟ್ಟಿಱಿಗೆ ಬೇವಿನ ಮೊದಲೊಳ್ ಪೋಜ್ ಮಾ ||
ಱುಡದ ಮರದೊಳ್ ಫಲಂಗಳ್ |
ಕಡುದೊಡ್ಡಿದುವಾಗಿ ಸಂತತಂ ಸೊಗಯಿಕ್ಕುಂ ||೩೮||

ಪಲಕಾಲದೊಳಱತಿರ್ದಾ |
ಮಲಕದ ಪಣೆಯಂ ಕುಠಾರದಿಂ ಸೀೞ್ದ ದಱೊಳ್ ||
ತಿಲ ಮಧು ಘೃತಮಂ ಪೂರಿಸೆ |
ಫಲಮಾ ಮರದೆಲೆಗಳಿಂದಮವು ಪಿಂದಕ್ಕುಂ ||೩೯||

[illegible]ಧುಕಂ ಮಧೂಕಪುಷ್ಪಂ |
ಮಧು ಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪೂ||
ಟ್ಟಿಧಿಕಫಲಮಾಗಿ ಪಡೆಗುಂ |
ಮಧುರತೆಯಿಂ ಬೀಜವಾಗದಾವಫಲಂಗಳ್ ||೪೦||

ಉ॥ ಭಾಗದ ತೋವಲಕ್ಕೆ ಕಡುಕರ್ಪೆಸೆವೆೞ್ತಿನ ಗಂಗೆದೊವಲ |
ಕ್ಕಾಗಳೆ ಕೊಂಡು ಪುಣ್ಯದಿನದೊಳ್ ಮಹಿಜಾತದ ಕೊಂಬನೇಱಿಸು||
ತ್ತಾಗಿರೆ ಸುತ್ತಿಕಟ್ಟೆ ಫಲಕಾಲದೊಳಾತರು ಪಣ್ತೊಡೆಯ್ದೆ ಪ |
ಣ್ಣಾಗಲದೊಂದು ಕೊಂಬಿನೊಳೆ ಕಾಯ್ದು ಱುಗಿರ್ಕುಮದಾವ[1]ಕಾಲಮುಂ ||೪೧||

ಟೀ॥ ಬೆಲ್ಲಂ, ಜೇನತುಪ್ಪಂ, ಪಾಲ್, ಇವನೊಂದಾಗಿ ಕೂಡಿ ಬೇವಿನಮರನಮೊದಲಲ್ಲಾದೊಡಂ ಅಲ್ಲಾ ಬೆಲ್ಲವತ್ತದ ಮರನ ಮೊದಲ್ಲಲ್ಲಾದೊಡಂ ಇಕ್ಕಿದೊಡೆ ಆ ಮರಂಗಳ ಫಲಂಗಳ್ ದೊಡ್ಡಿದುವಾಗಿ ಎಲ್ಲಾಗಳುಂ ಫಲಂಗಳಿಂ ಸೊಗಯಿಸುವುವು—೩೮.

ಟೀ॥ ಪಲವುಕಾಲಂ ಫಲಮಿಲ್ಲದಂತಹ ನೆಲ್ಲಿಯಮರಕ್ಕೆ ಆ ಮರನಕೊಂಬಂ ಕೊಡಲಿಯಲ್ಲಿ ಸೀೞ್ದು ಎಳ್ಳು, ಜೇನುತುಪ್ಪಂ, ತುಪ್ಪಂ, ಇವಂಕೂಡಿ ಕಲಸಿ ಆ ಸೀೞ್ದ ತಾವಿನಲ್ಲಿ ತುಂಬಲ್ ಆ ಮರಕ್ಕೆ ಬಹುಳ ಫಲಮಪ್ಪುವು—೩೯.

ಟೀ॥ ಯಷ್ಟಿ ಮಧುಕಂ ಇಪ್ಪೆಯಪೂ, ಜೇನತುಪ್ಪಂ ಸಕ್ಕರೆ, ಕೋಷ್ಠಂ ಈ ಔಷಧಗಳ, ನೊಂದುಗೂಡಿ ಆವುದಾನೊಂದು ವೃಕ್ಷಂಗಳ ಮೊದಲಲ್ಲಿ ಹಾಯ್ಕಿ ಪೂಱಲ್ ಆ ವೃಕ್ಷಂಗಳ ಫಲಂಗಳ್ ಸಿಹಿಯಾಗುವುವು. ಆ ಮರಂಗಳ ಫಲಂಗಳ್ಗೆ ಬೀಜಂಗಳಾಗವು—೪೦.

ಟೀ॥ ಆವುದೊಂದು ಫಲವಾಗಿರ್ದಂತಹ ವೃಕ್ಷದಲ್ಲಿ ಕಾಯ್ಗಳಾಗಿರ್ದಾಗಳ್ ಅದಱೊಳೊಂದುಕೊಂಬಂ, ಆಡಿನ ತೊಗಲಿನಿಂದಾದೊಡಂ ಕಬ್ಬಸಿನ ಎೞ್ತಿನ ಗಂಗೆದೊಗಲಿಂದಾದೊಡಂ ಈ ಎರಡಱೊಳಗೆ ದೊರಕಿದುದನೊಂದಂ ಪುಷ್ಯ ನಕ್ಷತ್ರದಲ್ಲಿ ಆ ಕೊಂಬಿಗೆ ಏಱಿಸುತ್ತಾಗಿ ಸುತ್ತಿದೊಡೆ ಕಾಯ್ಗಳ್ ಪಣ್ಣಾಗದೆ ಬಹುದಿನಂ ಕಾಯ್ಗಳಾಗಿಯೇ ಇರ್ಪುವು—೪೧.

1 ಕಾಲದೊಳ್.

ಮ|| ಸುಪತೀಪಾಮಪಪಪ್ರಹಾರದಿನಶೋಕಂ ಪೂತು ನಿಲ್ಕುಂ ವಧೂ|
ವದನೋತ್ಪೂರಿತ ಮದ್ಯಸೇಚನದಿನಾ ನಾಗಾಂಘ್ರಿಪಂ ಪೂತು ಚಿ ||
ಲ್ಪೊದವಿಕ್ಕುಗಂ ವರಕನ್ಯಕೇಕ್ಷಣದಿನಾ ಪುನ್ನದ್ರುಮಂ ಕಾಯ್ಗುಮಾ |
ಡಿಪ ವೈವಾಹಕದಿಂ ಪ್ರಿಯಂಗು ಫಲಮುಕ್ಕುಂ ಶಿಷ್ಟಕಲ್ಪದ್ರುಮಾ || ೪೨ ||

ಕಂ|| ತಿಲಚೂರ್ಣಮನಾಸವದೊಳ್|
ಕಲಸಿಟ್ಟುದ ನೆಱೆದು ಮಧುಪ್ರಮಂ|ಮದ್ಯಮುಮಂ ||
ಕಲಸಿ ಬೞಿಕ್ಕೆಱೆವೊಡಶೋ |
ಕಲತೆ ಪೊದಱ್ದೊದವಿ ಪೂತು ದಾಂಗುಡಿವಿಡುಗುಂ || ೪೩ ||

ಸಪಳದೆ ದುಗ್ಧಾಮಯರುಧಿ |
ರವಸಾನ್ವಿತಮಾಗಿ ಪಂಚಪಲ್ಲವಜಲಮಂ ||
ಪವಣಱಿದೆಱೆದೊಡೆ ಪುನ್ನಾ |
ಗವಕುಳವೃಕ್ಷಂಗಳಾವಗಂ ಕುಸುಮಿಸುಗುಂ|| || ೪೪ ||

ಅಕ್ಕರಂ|| ಸುರಕುಜದಬೀಜಂ ಮದ್ಯಂ ರಜನಿ ಮಾಗಧ ಕೌಂಗು ಪ್ರೋ |
ದ್ಧುರ ಸಿದ್ಧಾರ್ಥಂ ನಿಂಬಫಲಂ ಬಜೆ ಗುಂಜಾಫಳಮಿವಂ ||
ಪರಿಕ್ಲಿನ್ನಂ ಮಾಡಿಟ್ಟೊರಸಿ ಮೊದಲೊಳ್ ಪಾಲನೆಱೆಗೊ |
ಯ್ದಿರುಳೆ ಪೂಗೊಂಚಲಿಂದೆಸೆಗುಗುಂ ಚಂಪಕಕುಜಂ || ೪೫ ||

---

ಟೀ|| ಉತ್ತಮರಾದ ಸ್ತ್ರೀಯರ್ ತಮ್ಮ ಎಡಗಾಲಿಂದೆ ಅಲತೆಗೆ ಸಹಿತಂ ಅಶೋಕಮರನ ನೊದೆಯುತ್ತುಂ ಬರಲಾಮರಂ ತಳಿರ್ತು ಚೆನ್ನಾಗಿ ಫಲಂಗಳಪ್ಪುವು ಆ ಉತ್ತಮ ಸ್ತ್ರೀಯರ್ ತಮ್ಮ ಬಾಯೊಳಗೆ ಮದ್ಯಮಂ ತುಂಬಿಕೊಂಡು ಬಕುಳದ ಮರನಮೇಲೆ ಉಗುೞುತ್ತುಮಿರಲ್ ಆ ಮರಂ ಪೂತು ಫಲಂಗಳಿಂದೊಪ್ಪುವುದು. ಉತ್ತಮರಾದ ಕನ್ನಿಕೆಯರ ಕಡೆಗಣ್ಣ ನೋಟದಿಂದೆ ನಾಗಕೇಸರದ ಮರಂ ಚೆನ್ನಾಗಿ ಕಾಯ್ವುದು, ಮಾವಿನ ಮರಕ್ಕಂ ಪ್ರಿಯಂಗುವಿನ ಬಳ್ಳಿಗೆಯುಂ ಕ್ರಿಯೆಯಿಂದೆ ವಿವಾಹಮಂ ಮಾಡಲ್ ಆ ವೃಕ್ಷಂಗಳ್ ಚೆನ್ನಾಗಿಫಲಂಗಳಿಂದೊಪ್ಪುವುವು—೪೨.

ಟೀ|| ಎಳ್ಳ ಚಿಗುಳಿಯಂ ಮದ್ಯದಲ್ಲಿ ಕಲಿಸಿ ಅಶೋಕೆಯ ಮರನ ಮೊದಲಿಂಗೆಱೆವುದು ಮತ್ತೆ ಮದ್ಯಂ ಜೇನುತುಪ್ಪಂ ಇವಂ ಸರಿಯಾಗಿ ಕೂಡಿ ಕದಡಿ ಆ ಮೊದಲಿಂಗೆ ಎಱೆಯಲ್ ಆ ಮರಂ ಪೂತು ಎಲ್ಲಾದೆಸೆಯಲ್ಲಿಯುಂ ಪಲ್ಲವಂಗಳಿಪ್ಪುದು—೪೩.

ಟೀ|| ಉದಯಕಾಲದಲ್ಲಿ ಪಾಲಂ, ಮಾಂಸಮಂ, ರಕ್ತಮಂ, ಪಂಚಪಲ್ಲವದ ಉದಕಮಂ ಕೂಡಿ ಹವಣಱಿದು ನಾಗಸಂಪಿಗೆ, ಬಕುಳಂ - ಈ ಮರಂಗಳ ಮೊದಲಲ್ಲೆಱೆಯುತ್ತುಂಬರಲ್ ಆ ಮರಂಗಳ್ ಎಲ್ಲಾ ದಿನಂಗಳಲ್ಲಿಯುಂ ಪೂತಿರ್ಪುವು—೪೪.

ಟೀ|| ದೇವದಾರುವಿನ ಬೀಜಂ, ಅರಸಿನಂ, ಮದ್ಯಂ, ಪಿಪ್ಪಲಿ, ಅಡಕೆ,ಬಿಳಿಯ ಸಾಸಿವೆ ಬೇವಿನಕಾಯ್, ಬಜೆ, ಗುಲಗಂಜಿ, ಇವೆಲ್ಲಮನರೆದು ತೊಳಸಿ ಸಂಪಗೆಯಮರದ ಮೊದಲಿಂಗೆ ಲೇಪಿಸುವುದು. ರಾತ್ರಿಯಲ್ಲಿ ಆ ಮರನ ಮೊದಲಿಂಗೆ ಪಾಲಂ ಪೊಯ್ಯುತಿರಲ್ ಆ ಸಂಪಗೆಯ ಮರಂ ಪೂವಿನ ಗೊಂಚಲಿಂ ಒಪ್ಪುತ್ತಿರ್ಪುದು—೪೫.



ಕಂ|| ತೆಗಪಿ ಶುನಕಾಮಿಷಮ ನಿ|
ಕ್ಕುಗೆ ಗಂಧೋದಕಮನೆಱೆಗೆ ಬೞಿಕಂ ಕೇ||
ದಗೆಗಾದ ಪೂಗಳಾಮೋ |
ದಗಂಧಮುಕ್ಕುಂ ಸರಸ್ವತೀ ಮುಖತಿಳಕಾ || ೪೬ ||

ಪುಲ್ಲಂ ಸುಟ್ಟಿಳೆಯೊಳಗಾ |
ಮಲ್ಲಿಗೆ ಗೊನೆ ಯಯ್ದ್ವಾಜನೂೞಲೊಡಂ ತ ||
ಳ್ಪಲ್ಲದೆ ಕುಸುಮಿಸುಗುಂ ಸಲೆ |
ಪಲ್ಲವಿಸುಗುಮದು ಸರಸ್ವತೀಮುಖತಿಳಕಾ || ೪೭ ||

ಅಗರಾಂಬುಜ ಮೆನಿಸುವ ಗ|
ಡ್ಡೆಗಳ ಕಷಾಯಮನೆ ಮೊದಲೊಳಱಿದೆಱೆದೊಡೆ ಮ ||
ಲ್ಲಿಗೆಗಂ ಜಾಜಿಗಮನ್ಯೋ |
ನ್ಯಗಂಧಸಂಕ್ರಮಣ ಮಪ್ಪುದೊಂದಚ್ಚರಿಯೋ || ೪೮ ||

ಹಯಮಾಂಸದೆ ಸಾಸಿಱ ಬಾ |
ೞಿಯ ಪೂಗಳ್ ಕುಂದದಿರ್ಕುಮಿರುಳೆಱೆಯೆ ಸಿತೆ ||
ಪ್ರಯುತಾಸವಮಂ ಪೊಯ್ಗೆ |
ಮ್ಮೆಯ ಪಾಲಂ ದಾಸಿವಣದ ಪೂ ಬಿಳಿದಕ್ಕುಂ || ೫೦ ||

ಆಮೋದ ಗಂಧದೊಳ್ ಪೊರೆ |
ದಾ ಮಣ್ಣಂ ತಳಿಯೆ ಪೂತಿಗಂಧದ ಗಿಡುಗಳ್ ||
ಗೋಮಯ ತೋಯಮನೆಱೆಯ |
ಲ್ಕಾಮೋದಸುಗಂಧಪುಷ್ಪಮಾಗಳೆ ಬರ್ಕುಂ || ೫೧ ||

---

ಟೀ|| ಕೇದಗೆಯ ಮರನ ಮೊದಲಿಂಗೆ ನಾಯಮಾಂಸವನಿಕ್ಕುವುದು, ಆ ಬೞಿಕಂ ಸುಗಂಧೋದಕಮನೆಱೆಯಲ್ ಆ ಕೇದಗೆ ಸುಗಂಧ ಪರಿಮಳದಿಂದೆ ಪುಷ್ಪಂಗಳಪ್ಪುವು—೪೬.

ಟೀ|| ಭೂಮಿಯಂ ಚೆನ್ನಾಗಿ ಅಗೆದು ಸೋದಿಸಿ ಮೇಲೆ ಪುಲ್ಲಂ ಸುಟ್ಟು ಹರಗಿಸಿ ಆ ತಾಣದಲ್ಲಿ ಮಲ್ಲಿಗೆಯ ಕೊನೆಗಳಂ ಅಯ್ದಾಜನೊಂದಾಗಿ ನಡಲ್ ಆ ಬಳ್ಳಿಗಳ್ ಬೇಗಂ ಪೂವಪ್ಪುವು—೪೭.

ಟೀ|| ಅಗಿಲ್, ತಾವರೆಗಡ್ಡೆ, ಇದಱ ಕುಸುಮಂ ಇವಂ ಕಷಾಯಮಂ ಮಾಡಿ ಆ ಕಷಾಯದ ನೀರಂ, ಜಾಜಯುಗಿಡುಮಲ್ಲಿಗೆಯ ಬಳ್ಳಿಗಳ ಮೊದಲಲ್ಲೆಱೆಯಲ್ ಆ ಗಿಡಗಳ ಪೂವುಗಳೊಂದಱ ವಾಸನೆ ಪೊಂದಕ್ಕೆ ಹಿಡಿದು ಪರಿಮಳಂ ಪಲ್ಲಟಿಸುಗುಂ—೪೮.

ಟೀ|| ಗೋರಟೆಯ ಗಿಡುವಿಂಗೆ ಕುದುರೆಯ ಮಾಂಸಮಂ ಮೊದಲಲ್ಲಿಕ್ಕಲ್ ಪೂಗಳ್ ಕುಂದದೆಯಿರ್ಪುವು. ಸಕ್ಕರೆಯಂ ಮದ್ಯಮಂ ಎಮ್ಮೆಯಪಾಲಂ ಕೆಂಪು ದಾಸಾಳದ ಗಿಡದ ಮೂಲಕ್ಕೆಱೆಯಲ್ ದಾಸವಾಳದ ಪೂ ಬಿಳಿದಪ್ಪುದು=೫೦.

ಟೀ|| ಸುಗಂಧದ್ರವ್ಯವಾಸನೆಯುಳ್ಳ ಮಣ್ಣಂ ದುರ್ಗಂಧದ ಹೂವಿನ ಗಿಡುವಿನ ಮೊದಲಲ್ಲಿ

ಕಂ|| ಕರಿಹಸ್ತಚರ್ಮಮಂ ಮೇಣ್ |
ಕರಿದಂತವನರೆದು ಬಟ್ಟಗಡಲೆಯ ಪಿಟ್ಟಂ ||
ಬೆರೆಸಿಕ್ಕುಗೆ ಮೊದಲೊಳ್ ತಾ |
ವರೆಯಲರಲ್ಲಾದ ಸುರಭಿಗಂಧಮನಾಳ್ಗುಂ || ೫೨ ||

ದ್ರಾಕ್ಷಾವಲ್ಲಿಯ ಫಲಮನ |
ಪೇಕ್ಷಿಸುವೊಡೆ ಕೋಟಾಯೆ(ಯ)ಚ್ಚವಮಂ ತೊಡೆ ಮೇಣ ||
ಭ್ಯುಕ್ಷಿಸು ಮಾಂಸಕಷಾಯಮ |
ನಕ್ಷೂಣಫಲಂಗಳಕ್ಕು ಮಚಳಿತವಚನಾ || ೫೩ ||

ಸಲೆ ಪಂದಿಯ ನೆಣನುಮನಂ |
ಕೊಲೆಯ ಕಷಾಯನುಮನೆಱಿಗೆ ಮೂಲದೊಳಾವುಂ ||
ಡಲಗೆಗಿದಚ್ಚರಿಯೆನೆ ಪಾ |
ಗಲಕಾಯಕ್ಕುಂ ಸರಸ್ವತೀಮುಖತಿಲಕಾ || ೫೪ ||

ಮಾಲಿನಿ|| ಬದನೆಯ ಪೊಸಬಿತ್ತಂ ತೋಡಿ ಬಯ್ತಿಟ್ಟು ಕೂಷ್ಮಾಂ |
ಡದ ಫಲದೊಳದಂ ಮಧ್ವಾಜ್ಯದಿಂ ಮುಚ್ಚಿಸಲ್ ಪ ||
ಕ್ವೊದವಿದಱೊಳೆ ಬಿತ್ತಂಕೊಂಡು ಬಿತ್ತಲ್ ವಿಚಿತ್ರಂ |
ಬದನೆಯ ಫಲಮಕ್ಕುಂ ಬಳ್ಳಿಕೂಷ್ಮಾಂಡಮಕ್ಕುಂ || ೫೫ ||

---

ಗಿಕ್ಕಿ ಮೇಲೆ ಸಗಣಿನೀರಂ ಪೊಯ್ಯುತ್ತುಂಬರಲ್ ಆ ಪೂಗಳ್ ದುರ್ಗಂಧಮಿಲ್ಲದೆ ಸುಗಂಧವಾಸನೆಯಂ ಕುಡುವುದು—೫೧.

ಟೀ|| ಆನೆಯ ಸೊಂಡಿಲನಾದೊಡಂ, ಆನೆಯ ತೊಗಲನಾದೊಡಂ, ಆನೆಯ ದಂತಮನಾದೊಡಂ ಅರೆದು ಬಟ್ಟಗಡಲೆಯ ಪಿಟ್ಟಂಬೆರಸಿ ತಾವರೆಗಡ್ಡೆಯ ಮೊದಲಿಂಗೆ ಲೇಪನಂಮಾಡಿ ಬಿತ್ತಲ್ ಅವು ಸುಗಂಧವಾಸನೆಯ ಪುಷ್ಪಂಗಳಪ್ಪುವು—೫೨.

ಟೀ|| ದ್ರಾಕ್ಷೆಯಬಳ್ಳಿ ಬಹುಫಲಂಗಳಾಗಬೇಕಾದೊಡೆ ಕೋಟಾಯೆಚ್ಚಮಂ ಆ ಬಳ್ಳಿಗೆ ತೊಡೆವುದು, ಅಲ್ಲಾ ಮಾಂಸರಸಮಂ ಕಷಾಯಂಮಾಡಿ ತೊಡೆಯುತ್ತುಮಿರಲ್ ದ್ರಾಕ್ಷಿ ಸಂಪೂರ್ಣ ಫಲಮಪ್ಪುದು—೫೩.

ಟೀ|| ಕಾಡಹಂದಿಯ ಮಾಂಸಂ, ಅಂಕೋಲೆಯ ಬೀಜಂ ಇವಂ ಕೂಡಿ ಕಷಾಯಮಂ ಮಾಡಿದ ನೀರಂ ಅವುಪಲದ ಗಿಡದ ಮೊದಲಿಂಗೆಱೆಯಲ್ ಅವಱ ಕಾಯ್ಗಳ್ ಹಾಗಲದಕಾಯಂ ತಪ್ಪುವು—೫೪.

ಟೀ|| ಬದನೆಯ ಪೊಸಬೀಜಮಂ ತಂದು ಕುಂಬಳದ ಬಳ್ಳಿಯೊಳಗೆ ಬೆಳೆದ ಕುಂಬಳಕಾಯಂತೋಡಿ ಆ ಬದನೆಯ ಬೀಜಮಂ ಕೂಡಿ ತುಂಬಿ ಮುಚ್ಚಿ ಆ ಪಕ್ವಮಾದ ಕುಂಬಳಕಾಯೊಳಗಣ ಬದನೆ ಬೀಜಮಂ ತೆಗೆದು ಆ ಕುಂಬಳದ ಬೀಜಮಂ ಬಿತ್ತಲ್ ಅದಱಲ್ಲಿ ಬದನೆಕಾಯ್ಗಳಪ್ಪುವು—೫೫.



ಚಂ|| ಒದವಿ ಪೊದಟ್ದು ಬಳ್ಳಿಗಳ ಗಂಟುಗಳಂ ನೆಱೆ ಪೂಟ್ದು ಬೇರ್ಗಳೂ |
ಡಾದೊಱಿದಲ್ಲಿ ಕೊಯ್ದು ಪೆಱಗಂ ಬಳಿಕಾ ಕೆರದಿಂದಮೇಱ ಮಾ ||
ಟ್ಟುದು ತುದಿಯೊಳ್ ನಯಂಬೆರಸು ಪರ್ವಿದ ಬಳ್ಳಿಯ ಬೀಜವೊಂದುಮಿ |
ಲ್ಲದೆ ಫಳಸಂಕುಳಂ ಸಮನಿಕುಂ ಕರಮಚ್ಚರಿ ತಾನಿದೆಂಬಿನಂ || ೫೬ ||

ಕಂ|| ಕುದಿಯಿಸಿ ಮೊದಲ್ಗಳೊಳ್ ತಳಿ |
ವುದು ಮೊದಲಂಕೋಲಿಯ ಧಾತಕೀಪುಷ್ಪದ ಮಾಂ ||
ಸದ ಜಲಮನಿರದೆ ಬಳ್ಳಿಗ |
ಳೊದವಿ ಮಡಲ್ತಾವ ಕಾಲಮುಂ ಫಲಮಕ್ಕುಂ || ೫೭ ||

[1]ಪೊಗೆಯಂ ಗೋಘೃತದಿಂದೊ |
ಟ್ಟುಗೆ ಬೇರೊಳ್ ಚೆಳ್ಳಮುಳ್ಳನೂಱುಗೆ ಮೇಣಿ ||
ಕ್ಕುಗೆ ಪಂದಿಯಿಲಿಯ ನೆಣನಂ |
ಜಗಮೆಲ್ಲಂ ತಣಿಗುವೊಂದು ಬಳ್ಳಿಯ ಕಾಯೊಳ್ || ೫೮ ||

ಅಜಗರ ಗೋಣಾಸವೆಯೊಳ |
ಮಜಾಜಳಕ್ಷೀರಯುಕ್ತಮಾಗೆಱೆಯೆ ಫಳ ||
ವ್ರಜಮೊಂದೆ ಬಳ್ಳಿಯೊಳ್ ಸಕ |
ಲಜನಮುಮಂ ತಣಿಸಲಾರ್ಕುಮಚಳಿತವಚನಾ || ೫೯ ||

---

ಟೀ|| ಆವುದಾನೊಂದು ಬೇರಂ ಬಿಡುವಂತಹ ಬಳ್ಳಿಗ[2]ಳಿರ್ಪುವು, ಅವಱ ಗಂಟುಗಳಂ ನೆಲದೊಳಗೆ ಪೂಟ್ದು ಚೆನ್ನಾಗಿ [3]ಬೇರಂ ಬಿಟ್ಟಬೞಿಯಿಂ ಕೊಯ್ಯುತೆಬರಲ್ ಆ ಮರ್ಯಾದೆಯಲ್ಲಿ ಏೞುಗಂಟುಪರ್ಯಂತಂ ಪೂಟ್ದು ಪಿಂತೆ ಕೊಯ್ಯುತ್ತುಂಬರಲ್ ಆ ಬಳ್ಳಿಗಳಲ್ಲಿ [4]ಕೊನೆಯಲಾವುದು ಅದು ಬೀಜಂಗಳಿಲ್ಲದ ಕಾಯ್ಗಳಪ್ಪುವು—೫೬.

ಟೀ|| ಆವುದಾನೊಂದು ಬಳ್ಳಿಗೆ ಅಂಕೋಲೆಯ ಬೀಜಂ, ಧಾತಕೀಕುಸುಮಂ, ಮಾಂಸಂ ಇವು ಮೂಱಂ ಕಷಾಯಮಂ ಕಾಸಿ ಆ ನೀರಂ ಬಳ್ಳಿಮೊದಲ್ಗೆ ಪೊಯ್ಯುತ್ತುಂಬರಲ್ ಆ ಬಳ್ಳಿಗಳ್ ಎಲ್ಲಾದಿನಂಗಳಲ್ಲಿಯುಂ ಫಲಂಗಳಾಗುವುವು—೫೭.

ಟೀ|| ಆವುದಾನೊಂದು ಬಳ್ಳಿಯ ಮೊದಲ್ಗೆ ಇಲ್ಲಣಂ, ಆವಿನತುಪ್ಪಂ ಇವಂ ಕಲಸಿ ಕೂಡಿಯಿಕ್ಕುವುದು. ಅಲ್ಲಾ ಆ ಬಳ್ಳಿಯ ಮೊದಲಲ್ಲಿ ಚೇಱನ ಮುಳ್ಳನೂಱುವುದು. ಅಲ್ಲಾ ಪಂದಿಯ ಮಾಂಸಂ ಇಲಿಯ ಮಾಂಸಂ ಇವಂ ಕೂಡಿ ಬಳ್ಳಿಯ ಮೊದಲಲ್ಲಿಕ್ಕುವುದು, ವಿಪುಳಫಲಮಪ್ಪುವು.

ಟೀ|| ಹೆಬ್ಬಾವು, ಅರಳಿಗ? ಈ ಎರಡುಪರಿಯ ಮಾಂಸಮಂ ಆಡಿನಮೂತ್ರಂ, ಪಾಲ್ ಈ ನಾಲ್ಕಂ ಕೂಡಿ ಆವುದಾನೊಂದು ಬಳ್ಳಿಯ ಮೊದಲಿಂಗೆಱೆಯಲ್ ಆ ಪೊಂದುಬಳ್ಳಿಯ ಕಾಯ್ಗಳಿಂದಮೆ ಲೋಕಮೆಲ್ಲಂ ತಣಿವುದು—೫೯.

---

1 ಪಗೆಯಂ. 2 ಇದ್ದಾವು. 3 ಬೇರು ಬಿಟ್ಟಬಳಿಕ ಎಂದರೆ. 4 ಅದಱಿದಾವುದು ಅದು.

ಮ|| ತರುಗುಚ್ಛಾಂಘ್ರಿಪವಲ್ಲಿಗಳ್ಗೆ ಜವೆಯೋಳೊಂದೊಬ್ಬಳಂ ನಾಲ್ಗುಳಂ |
ಕರಿಯೆಳ್ಳಿಬ್ಬಳ ಮೇಷವಾದಮಲ ಪೋಳೊಂದೊಕ್ಕಳಂ ಕೂಟಮಾ ||
ಗಿರಿ ಗೋಮಾಂಸಮನಲ್ಲಿ ಕೂಡಿ ತೊಳೆಯಂ ಸಪ್ತಾಹಮಂ ಬಯ್ತು ಬಿ |
ತ್ತರದಿಂದಿಕ್ಕುಗೆ ಸಾರ್ವಕಾಲಫಲಮಕ್ಕುಂ ಶಿಷ್ಟಕಲ್ಪದ್ರುಮಾ || ೬೦ ||

ಟೀ|| ವೃಕ್ಷಂಗಳ್, ಗುಜುರುಗಳಾಗಿ ಬೆಳೆದಿರುವ ಪೊದಱ್, ಬಳ್ಳಿಗಳ್ ಮೊದಲಾದುವಂ ಮೊದಲ್ಗೆ ಜವೆ ಒಬ್ಬಳ, ಕರಿಯೆಳ್ಳು, ನಾಗುಳ, ಆಡಿನಹಿಕ್ಕೆ ಪೊಕ್ಕುಳ ಇವಂ ಕೂಡಿ ಮಾಂಸ ಮೊಂದುತೊಳೆಯಂ ಕೂಡಿ ಏಳುದಿನಪರ್ಯಂತಂ ಕೂಡಿಟ್ಟು ಎಚ್ಚಱದಿಂದೆ ಆ ಬಳ್ಳಿ ಮೊದಲ್ಗೆಱೆ ಯಲ್ ಎಲ್ಲಾ ದಿನಂಗಳಲ್ಲಿಯುಂ ಫಲವಪ್ಪುದು—೬೦.

ಗದ್ಯಂ

ಇದು ಸಮಸ್ತಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀಮತ್ಕವಿತಾವಿಲಾಸತನೂಜಂ
ಶ್ರೀಮಚ್ಚಾವುಂಡರಾಯ
ವಿರಚಿತಮಪ್ಪ
ಲೋಕೋಪಕಾರದೊಳ್
ವೃಕ್ಷಾಯುರ್ವೇದ ವರ್ಣನಂ
[1]ಷಷ್ಠಾಧಿಕಾರಂ

1 ಷಷ್ಠಾಶ್ವಾಸಂ.

## ಸಪ್ತಮಾಧಿಕಾರಂ

### ೭. ಗಂಧಯುಕ್ತಿ ಕ್ರಮಂ[1]

(ಪರಿಮಳಗಂಧ ವಿಧಿ)

ಕಂ|| ವಸುಧಾವಳಯದೊಳುಪಜೀ |
ವಿಸುವಂತಿರೆ ಪಲರ್ಗಮುಚಿತಮೆಂಬೀ ಬಗೆಯಿಂ ||
ದೆಸೆದಿರೆ ಸಂಕ್ಷೇಪದೆ ವಿರ |
ಚಿಸಿದಂ ಬುಧಬಂಧು ಗಂಧಯುಕ್ತಿಕ್ರಮಮಂ || ೧ ||

ಚಂ|| ಮಳಯಜಕೋಷ್ಠದಿಂ ಬಕುಳಗಂಧಮ[2]ನಾಮಯುಪಕ್ಷ್ಯದಿಂದೆ ಪಾ |
ಟಳಗಂಧಮಂ ಮಂಚವಲ್ಕಲದಿಂದೆ ಕದಂಬ ಗಂಧಮಂ ||
ದಳತ್ರುಟಿಯಿಂದೆ ಸಂಪಗೆಯ ಗಂಧಮನಬ್ದದಳಾಂಬುವಿಂದಮು |
ತ್ಪಳಸಮಗಂಧಮಂ ನೆಱೆಯೆ ನೀರ್ ತಳೆಗುಂ ಜಯಬಂಧುನಂದನಾ || ೨ ||

(ಪಲ್ಸುಲಿವ ಚೂರ್ಣಂ)

ಕಂ|| ಸಕಷಾಯಕುಜಂಗಳ ದಂ |
ತಕಾಷ್ಠದೊಳ್ ಬೋಟ ಕೌಂಗುಮಾದ್ಯ (ಚ್ಯ)ಲವಂಗೋ ||
ದಕ ಚೂರ್ಣಮೆಂಬಿವಂ ತೊ |
ಯ್ದುಕೊಂಡು ಪಲ್ಸುಲಿಯೆ ದಂತಬಳಮಂ ಪಡೆಗುಂ || ೩ ||

ಟೀ|| ಭೂಮಂಡಲದಲ್ಲಿ ಪ್ರಾಣಿಗಳ್ಗೆ [3]ಬದುಕಿರಲುಪಾಯವೆನಿಪ ಗಂಧಯುಕ್ತಿಕ್ರಮಮಂ ಎಲ್ಲರ್ಗೆ ಪ್ರಯೋಜನವಾಗಿರ್ಪಂತೆ ಸಂಕೋಚದಿಂ [4]ಪೇೞ್ದಪರ್—೧.

ಟೀ|| ಶ್ರೀಗಂಧಂ, ಕೋಷ್ಠಂ ಇವೆರಡಂ ಒಂದಾಗಿ ತೇಯಲ್ ಬಕುಳಪುಷ್ಪದ ಪರಿಮಳ ಮಪ್ಪುದು. ಕೋಷ್ಠಂ, ನಱುವಲಕೆಚ್ಚು, ಶ್ರೀಗಂಧಂ ಈ ಮೂಱುಂ ಒಂದಾಗಿ ತೇಯಲ್ ಪಾದರಿಯಪೂವಿನ ಪರಿಮಳಮಪ್ಪುದು. ಮೆಣಸು, ಲವಂಗದತಿಗುಡು, ಶ್ರೀಗಂಧಂ ಈ ಮೂಱುಂ ಒಂದಾಗಿ ತೇಯಲ್ ಕಡವದಹೂವಿನ ಪರಿಮಳಮಪ್ಪುದು. ಪಚ್ಚೆ ಕಿಱುವಿಲಕ್ಕಿ ಶ್ರೀಗಂಧಂ ಈ ಮೂಱುಂ ಒಂದಾಗಿ ತೇಯಲ್ ಸಂಪಗೆಹೂವಿನ ಪರಿಮಳಮಪ್ಪುದು. ತಾವರೆಹೂವಿನಕುಸುಮಂ ಪಚ್ಚೆಯೆಲೆ, ಮುಡಿವಾಳಂ, ಶ್ರೀಗಂಧಂ ಇವನೊಂದಾಗಿ ತೇಯಲ್ ನೆಯ್ದಿಲಪೂವಿನ ಪರಿಮಳಮ ಪ್ಪುದು—೨.

ಟೀ|| ಅಣಿಲೆ, ತಾಱೆ, ಹೊಂಬಾಗೆ ಕಿಱಯಹಿಪ್ಪೆ ಇವು ಮೊದಲಾಗೆ ಅವುದೊಂದು ವೃಕ್ಷದ ತಿಗುಡಕೂಡಿಸಿ ಮತ್ತೆ ಅವ ತಿಗುಡಿನರಸಂ ಒಗಱಾಗಿ ಇರ್ಪುವು, ಆ ವೃಕ್ಷದ ತಿಗುಡಿನ ರಸಂ ಬೋಟಂ, ನೆಲಲಮರನ ತಿಗುಡಿನ ರಸಂ, ಬಜೆ, ಲವಂಗದ ತಿಗುಡಿನರಸಂ, ಈ ರಸಂಗಳನೊಂದಾಗಿ ಕೂಡಿ ಪಲ್ಲಂ ಸುಲಿದುಕೊಳ್ವ ಕಾಷ್ಠಂಗಳಂ ಆರಸದಲ್ಲಿ ನನೆಯಿಕ್ಕಿ ಆಕಾಷ್ಠಂಗಳಿಂದೆ ಪಲ್ಲಂ ಸುಲಿದುಕೊಳಲ್ ದಂತಂಗಳ್ [6]ದೃಢಮಪ್ಪುವು—೩.

1 ಸುಗಂಧವಾದಮಂ ಪೇೞ್ವೆಂ. 2 ನಾಮ ಉಪಕ್ಷ್ಯದಿಂದೆ. 3 ಬದುಕಿ ಇಪ, ಬದುಕಿನ. 4 ಪೇೞು ಪಸು, ಪೆಸು. 5 ಲಾವ ಪೊಗರಾಗಿರ್ದ ಮರಂಗಳ. 6 ಪಲ್ಲು ಘಟ್ಟಿಯಹವು.

ಕಂ|| ತ್ರಿಕಟುಕಮಂಬುಧರಂ ಮಾ |
ಕ್ಷಿಕಂ ಸುಗಂಧತ್ರಯಂ [1]ರುಜಾಚೂರ್ಣಂ ಧಾ ||
ನ್ಯಕಮೆಂಬಿವಿನಿತುಮಂ ಸಮ |
ನೆ ಕೊಂಡು ಮುಕ್ಕುಳಿಸೆ ವದನಶುದ್ಧಿಯನೀಗುಂ || ೪ ||

ಘನಮೇಲೆ ಲವಂಗಂ ಚಂ |
ದನಂ ಜಟಾಮಾಂಸಿ ಬಾಳಮಿಭಕೇಸರಮೆಂ ||
ಬಿನಿತಱ ಕಷಾಯ ತೋಯಂ |
ವಿನೂತಗಂಧೋದಕಂ ಸಮಸ್ತ[2]ದೊಳಕ್ಕುಂ || ೫ ||

ಪೊಸತೆನಿಸಿದ ಪೂವಂ [3]ಮೇಣ್ |
ರಸಮುಳ್ಳ ಸುಗಂಧರಾಜಿಯಂಗಳೊಳಂ ಪೋ ||
ಧಿಸಿ ಕಳೆದು ಬೞಯಮುಪಯೋ |
ಗಿಸುವುದು ಪದನಱಿದು ಮೆಯ್ಗೆ ಮೆಚ್ಚಿದ ರಸದೊಳ್ || ೬ ||

ಹಿಮಕರ ಬೋಲಾಮಯ ಕುಂ |
ಕುಮ ಕಸ್ತೂರೀಲವಂಗ ತಕ್ಕೋಲಮ ನಂ ||
ಕಮ್ಮೃಗಾಂಕ ವಹ್ನಿಚಂದ್ರಮ |
ಹಿಮಕೃತ್ಪುರ ಮಿತದೊಳರೆಗೆ ಗಂಧೋದಕದಿಂ || ೭ ||

---

ಟೀ|| ಶುಂಠಿ, ಮೆಣಸು, ಹಿಪ್ಪಲಿ, ಭದ್ರಮುಸ್ತೆ, ಜೇನುತುಪ್ಪಂ, ಲವಂಗದತಿಗುಡು, [4]ಆಎಲೆ, ಏಲಕ್ಕಿ, [5]ರುದಂತಿ, ಕೊತ್ತುಂಬರಿ ಇವೆಲ್ಲಮಂ ಚೂರ್ಣಂ ಮಾಡಿ ಸಮಭಾಗೆಯಾಗಿ ಕೊಂಡು ಉದಕದಲ್ಲಿ ಕದಡಿ ಮುಕ್ಕುಳಿಸಲ್ ಮುಖಶುದ್ಧಿಯಪ್ಪುದು—೪.

ಟೀ|| ಭದ್ರಮುಸ್ತೆ, ಏಲಕ್ಕಿ,ಲವಂಗ, ಶ್ರೀಗಂಧಂ, ಜಟಾಮಾಂಸಿ, ಮುಡಿವಾಳಂ, ನಾಗಕೇಸರಂ ಈ ಪ್ರಸಿದ್ಧಮಪ್ಪ ಸುಗಂಧದ್ರವ್ಯಂಗಳಂ ಸಮನಾಗೆ ಕೊಂಡು ಕಷಾಯಂಮಾಡಿ ಆ ಉದಕಮನೆಲ್ಲಾ ಸುಗಂಧಂಗಳ್ಗಿಯುಂ ಕೂಡಿಕೊಳ್ವುದು—೫.

ಟೀ|| ಪೊಸತಾಗಿ ಅರಳಿದ [6]ಪುಷ್ಪದಪರಿಮಳದಲ್ಲಾದೊಡಂ ಅಲ್ಲಾ [7]ರಸಸಹಿತಮಾದಂತಹ ಸುಗಂಧದ್ರವ್ಯಂಗಳಂ ಆ ಪೂವಿನ ಪರಿಮಳಮಂ ಕೂಡಿಕೊಂಡು ಆಪೂವಿನರಸದಲ್ಲಿ ಶ್ರೀಗಂಧಮಂ ತೇದು ತನಗೆ ಪ್ರಿಯಮುಳ್ಳಹಗೆ ಪವಣಱಿದು ಪೂಸಿಕೊಳ್ವುದು—೬.

ಟೀ|| ಕರ್ಪೂರಂ(೯)ಒಂಬತ್ತುಭಾಗೆ, ಬೋಟ(೧)ವೊಂದುಭಾಗೆ, ಕುಂಕುಮಂ(೩)ಮೂಱುಭಾಗೆ, ಕಸ್ತೂರಿ(೧)ವೊಂದುಭಾಗೆ, ಲವಂಗ(೧)ವೊಂದುಭಾಗೆ, ಕೋಷ್ಠ(೧) ವೊಂದುಭಾಗೆ, ತಕ್ಕೋಳಂ(೩)ಮೂಱುಭಾಗೆ ಈ ಪೇೞ್ದ ಸುಗಂಧದ್ರವ್ಯಂಗಳಂ ಈ ಪೇೞ್ದಭಾಗಸಂಖ್ಯೆಯಲ್ಲಿ ಕೂಡಿಕೊಂಡು ಗಂಧರಸದಲ್ಲಿ ತೇಯಲ್ ಒಳ್ಳಿತಪ್ಪ ಸುಗಂಧಮಪ್ಪುದು—೭.

---

1 ಕುಜಾ. 2 ದಳಕ್ಕಂ. 3 ಮೇಣುರಸ ಉಳ್ಳ ಸುಗಂಧ ಪುಷ್ಪದ ಪರಿಮಳದ ರಾಜಿಯೊಳ್. 4 ಅಣೆಲೆ. 5 ಅದಿರುಗಂತಿ. 6 ಸುಗಂಧದ ಪೂವಿನ. 7 ರಸಯುಕ್ತಮಾದ ಸುಗಂಧ.



(ಖೈರಗುಳಿಗೆ)

ಕಂ|| ಒಳಗಂ ಗಚ್ಚರಿಸಿದ ಮಾ |
ತುಳಂಗಮಂ ನೆಱೆ ಮಗುಳ್ಚಿ ಪುಟದಿಂ ಮಂದಾ ||
ನಿಳನಿಂದೆ ಸುಟ್ಟು ಮುಖದೊಳ್ |
ತಳೆದೊಡೆ ಮುಖವಾಸಮಿಂತಿದತಿಶಯಮಕ್ಕುಂ || ೮ ||

ಸಿರಿಕಂಡಂ ಕುಂಕುಮ[1]ಮಗು |
ರು ರೇಣುಕಂ ಜಾದಿಕಾಯ್ ತವಕ್ಷೀರಂ ಕ ||
ಸ್ತೂರಿ [2]ಸಿತಮಾಸರ ಮೆಂಬಿವು |
ಸರಿಸಂ ನಾಲ್ವಡಿ ಶಶಾಂಕತಕ್ಕೋಲಂಗಳ್ || ೯ ||

ಖದಿರಕಷಾಯದ ತೋಯ್ದುಂ |
ಪದಿನಾರ್ಮಡಿಯಾಗಿ ಕಲಸಿ ಕೊಂಡಾ ಪುಡಿಯಂ ||
ಮಿದಿದು ಸಹಕಾರತೈಲದೊ |
ಳದಱಿಂದಂ ಖೈರಗುಳಿಗೆಯಂ ಮಾೞ್ಕೆ ಬುಧರ್ || ೧೦ ||

(ಪರಿಮಳ ತೈಲಂ)

ಮ|| ಸಮನಪ್ಪಂತಿರೆ ಕೂಡಿ ಲುಂಗಮರನೇಱಲ್ ಬಿಲ್ವ[3]ಮಾಮ್ರಂ ಕಪಿ |
ತ್ಥಮೆನಿಪ್ಪಯ್ದಱ ಪಲ್ಲವತ್ವಚನ[4]ನೆಂಟೊಂದಪ್ಪಿನಂ ಕಾಸಿ ಮ ||
ತ್ತಮವಂ ಸಾಸಿವೆಯೆಣ್ಣೆಯುಂ ಸಮನೆ ಪೊಯ್ದಟ್ಟಂಮ ಭೂತ[5]ದ್ರುಮ |
ದ್ರವಮಿಶ್ರಂ ಸಹಕಾರತೈಲಮೆನಿಕುಂ ತಕ್ಕೋಳಸದ್ಧೂಪದಿಂ || ೧೧ ||

---

ಟೀ|| ಮಾಪಳದ ಹಣ್ಣಿನ ಪೊಳಗಂ ತೋಡಿ ಆ ಪಿಂದೆ ಪೇೞ್ದ ಸುಗಂಧದ್ರವ್ಯಮಂ ಅಕ್ಕಿ ತುಂಬಿ ಬಾಯಂ ಮುಚ್ಚಿ ಮೆಲ್ಗಿರ್ಚಂ(ವೇದ)ಪುಟಮನಿಕ್ಕಿ ತೆಗೆಯಲ್ ಅದು ಮುಖವಾಸಮೆನಿಸಿಕೊಳ್ವುದು. ಮುಖಕ್ಕೆ ಪೂಸಲ್ ಪರಿಮಳಂ ಚೆನ್ನಾಗಿ ವಾಸಿಸುವುದು—೮.

ಟೀ|| ಶ್ರೀಗಂಧಂ, ಕುಸುಮಂ, ಆಗಿಲ್, ರೇಣುಕಂ, ಜಾಯಿಫಳಂ, ತವಕ್ಷೀರಂ, ಕಸ್ತೂರಿ, ಸಕ್ಕರೆ. ಜಾಯಿಪತ್ರೆ, [6]ಈಪೇೞ್ದ ಸುಗಂಧ ದ್ರವ್ಯಂಗಳಂ ಸಮಭಾಗೆಯಾಗಿ ಕೊಳ್ವುದು. ಕಪ್ಪುರಂ, ತಕ್ಕೋಲಂ ಈ ಯೆರಡಂ ನಾಲ್ಕುಭಾಗೆಯಾಗೆ ಕೊಳ್ವುದು—೯.

ಟೀ|| ಈ ಪಿಂದೆ ಪೇೞ್ದ ಸುಗಂಧದ್ರವ್ಯಂಗಳಂ ಪದಿನಾಱುಮಡಿ ಬಿಳಿಯಕಾಚು ಇವೆಲ್ಲಮಂ ಒಂದಾಗಿ ಕೂಡಿ ಅರೆದುಕೊಂಡು ಮಾವಿನಸೊನೆಯಲ್ಲಿ ಕಲಸಿಕೊಂಡು ಖೈರಗುಳಿಗೆಗಳಂ ಮಾೞ್ಪುದು—೧೦.

ಟೀ|| ಮಾದಲಕುಂಗಿ, [7]ನಾಯ್ನೇಱಲ್, ಬಿಲ್ಲಪತ್ರಂ, ಮಾವು, ಬೋಟಂ ಈ ಅಯ್ದು ವೃಕ್ಷಂಗಳತಿಗಡು ಅವಱೆಲೆ ಇವಂ ಸಮಭಾಗೆಯಾಗೆ ಕೊಂಡು ಉದಕದಲ್ಲಿ ಹಾಯ್ಕಿ ಎಂಟಱಲ್ಲೊಂದು ಭಾಗಮಪ್ಪಂತೆ ಕಷಾಯಮಂಮಾಡಿ [8]ಆ ಕಷಾಯದ ಸಮನಾಗಿ ಸಾಸಿವೆಯೆಣ್ಣೆಯಂ ಕೂಡಿಕೊಂಡು ಭೂತಾಂಕುಶದ ಮರದ ತಿಗುಡಿನ ರಸಮಂ ಕೂಡಿಕೊಂಡು ಆ ರಸಕ್ಕೆ ತಕ್ಕೋಲದಿಂದೆ ಧೂಪಿಸಲ್ ಸಹಕಾರತೈಲ ಮೆನಿಸಿಕೊಳ್ವುದು—೧೧.

---

1 ಮಾಗುರುವರ ರೇಣುಕ ಜಾದಿತವ, ಅಗಿಲುರೇ. 2 ಶರ್ಕರೆಯೆಂಬಿವು. 3 ಮಾಮ್ಲಂ. 4 ನೆಂಟೊ. 5 ದ್ರುಮದ್ರವ. 6 ಇವಂ ಸಮಭಾಗಿ. 7 ಕುನ್ನಿನೇಱಲ್. 8 ಅದಱ ಸಮ.

ಗಂಧತೈಲಗಳನ್ನಡುವ ಕ್ರಮ

ಕಂ॥ ಉಚಿತದ್ರವ್ಯಂಗಳ ಎ।
ಣ್ಣೆ ಚತುರ್ಗುಣವೆಣ್ಣೆಯಿಂದ ಮುದಕಂ ತಾನಾ॥
ಗೆ ಚತುರ್ಗುಣಮಿಾಕ್ರಮದಿಂ।
[1]ಪಚಿಯಿಸುವುದು ಪೇಳ್ದ ಗಂಧತೈಲಾದಿಗಳಂ ॥ ೧೨ ॥

ಕುದಿಯಿಸುವು[2]ದೆಣ್ಣೆಯಂ ಮುಂ।
[3]ತದುಕಿಂ ಗುಗ್ಗುಳದಿನಕ್ಕೆ ವನಶಿಗ್ರುಕಷಾ॥
ಯದೆ ಮೇಣಕ್ಕೆ ತವಕ್ಷೀ।
ರದಿನಕ್ಕಾ ತೈಲದೊಂದುಕಾಳಿಕೆ ಕಿಡುಗುಂ ॥ ೧೩ ॥

ವನರುಹ [4]ರೇಣುಕಮಧುಕಂ।
ಕನಕತ್ವಚಮರಿಸಿನಂಗಳೆಂಬಿವ[5]ಱಿಂದಿಂ॥
ಬಿನೊಳಟ್ಟೊಡೆಣ್ಣೆಯಂ ವರ।
ಕನಕಚ್ಛವಿಯಾಗಿ ತೋರ್ಕುಮಂತಾ ತೈಲಂ ॥ ೧೪ ॥

ಅರಗಿಂಗುಲಿಕಂ ಮಂಜಿ।
ಷ್ಠೆ ರಕ್ತಚಂದನದ ಪುಡಿ ನಖಂ ಪೂತಿ ಯಿವೊಂ॥
ದಿರೆ ತೈಲಮನಟ್ಟಂದದು।
ಸರಕ್ತಮುಕ್ಕುಂ ಸರಸ್ವತೀಮುಖತಿಲಕಾ ॥ ೧೫ ॥

ಟೀ॥ ಆವುದೊಂದು ತನಗೆ ಪ್ರಿಯಮಾಗಿರ್ಪ ಸುಗಂಧತೈಲಮನಡುವೊಡೆ ಆ ಸುಗಂಧ ದ್ರವ್ಯಂ ಒಂದು ಭಾಗೆ, ಅದರ ನಾಲ್ಕುಭಾಗೆ ಯೆಳ್ಳೆಣ್ಣೆ, ಆ ಎಣ್ಣೆಯನಾಲ್ಕುಮಡಿ ಉದಕಂ ಈ ಮರ್ಯಾದೆಯ ಭಾಗಸಂಖ್ಯೆಯಲ್ಲಿ ಕೊಂಡು ಸುಗಂಧತೈಲಂಗಳನಡುವುದು.—೧೨.

ಟೀ॥ ಎಣ್ಣೆಯ ಕಾಳಿಕೆಯ ದೋಷಂ ಕಿಡಬೇಕಾದೊಡೆ ತದುಕಿನಮರದ ತಿಗುಡು ಅಲ್ಲಾ ಗುಗ್ಗುಳದ ಮರನ ತಿಗುಡು ಇವಱಲ್ಲೊಂದಂ ಹಾಯ್ಕಿ ಕಾಯಿಸುವುದು ಅಲ್ಲಾ ಕಾಡುನುಗ್ಗಿಯ ಮರನ ರಸಮಂ ಕೂಡಿ ಕಾಯಿಸುವುದು, ಅಲ್ಲಾ ತವಕ್ಷೀರಮಂ ಹಾಯ್ಕಿ ಕಾಯಿಸುವುದು ಇವಱಿಂದೆ ಆ ಎಣ್ಣೆಯ ದೋಷಂ ಕಿಡುವುದು—೧೩.

ಟೀ॥ ತಾವರೆಪೂವಿನಕುಸುಮಂ, ಯಷ್ಟಿಮಧುಕಂ, ಮದ್ದುಗುಣಿಕೆಯ[6]ತಿಗುಡು, ಅರಿಸಿನಂ ಇವಂ ಸಮಭಾಗೆಯಾಗಿಕೊಂಡು ಎಣ್ಣೆಯೊಳ್ ಹಾಯ್ಕಿ ಕಾಯಿಸಲ್ ಆ ಎಣ್ಣೆ [7]ಸುವರ್ಣಚ್ಛಾಯೆಯಾಗಿ ತೋರ್ಪುದು—೧೪.

ಟೀ॥ ಅರಗು, ಇಂಗುಲಿಕಂ, ಮಂಜಿಷ್ಠಿಕೆ, ರಕ್ತಚಂದನದ ಚೂರ್ಣಂ, ನಖಂ, ಹುಲಿಗಿಲಿ ತಿಗುಡು, ಇವೆಲ್ಲಂ ಸಮಭಾಗೆಯಾಗಿ ಕೊಂಡು ಚೂರ್ಣಮಂ ಮಾಡಿ ಎಣ್ಣೆಯೊಳಗೆ ಹಾಯ್ಕಿ ಕಾಯಿಸಲ್ ಆ ಎಣ್ಣೆ ಚೆನ್ನಾಗಿ ಕೆಂಪಾಗಿ ತೋರ್ಪುದು—೧೫.

1 ಪಚ್ಚಬೆ ಇಸು. 2 ಗೆಣ್ಣೆಯುಮ ಮೇಣ್ ಕೇಳ್. 3 ತದುಕಿಂ ಗುಗ್ಗುಳದ ತಿಗುಡರಸಮನುಗ್ಗಿಯ ರಸದಧಿಕ ಕಷಾಯ ತವಕ್ಷೀರದಿನಕ್ಕಾ. 4 ರಜಕ ಮಧುರಂಕನ. 5 ಬಿಂತಿವನಿಂ. 6 ಗಿಡುವಿನತಿಗಡು. 7 ಚಿನ್ನದ ಬಣ್ಣದಂತೆ.



(ಚಂಪಕತೈಲಂ)

ಕಂ॥ ಜಲಕೋಷ್ಠ ಲವಂಗದಳಂ।
ಗಳೆ ವಹ್ನಿ ಮೃಗಾಂಕ ನೇತ್ರ ದಶಸಂಖ್ಯೆಯಿನೊ॥
ಪ್ಪಲಮಾಗೆ ತದಷ್ಟಗುಣಂ।
ತಿಲತೈಲಮನಲ್ಲಿ ಪೊಯ್ದು ಬಱಿಕೇಳುದಿನಂ ॥ ೧೬ ॥

ಬಿಸಿಲೊಳದನಿಟ್ಟು ಚಂಪಕ।
ಕುಸುಮದಿನಿಂಬಾಗೆ ನಿಚ್ಚಲುಂ ವಿಧಿಯಿಂ ವಾ॥
ಸಿಸಿದೊಡೆ ಚಂಪಕತೈಲಂ।
ವಸುಧಾಧಿಪಯೋಗ್ಯಮಕ್ಕು ಮ.ಚಳಿತವಚನಾ ॥ ೧೭ ॥

(ಪಾಟಳತೈಲಂ)

ಕ್ರಮ[1]ವೃದ್ಧಿಯ ತಗರಾಗುರು।
ತಮಾಳದಳ ಶೈಲ ಕೋಷ್ಠ ಗಜಸಹಿತಂ ತೈ॥
ಲಮನಟ್ಟು ಬಿಸಿಲೊಳಿಟ್ಟಿ।
ಕ್ಕುಮಲ್ಲಿ ಪಾದರಿಯನದುವೆ ಪಾಟಳತೈಲಂ ॥ ೧೮ ॥

(ಜಾತಿತೈಲಂ)

ತಗರತ್ವಚಂ [2]ಜಟಾಮಾಂ।
ಸಿ ಗಜಂ ತ್ರುಟಿ ಕೌಂಗು ರೇಣುಕಂ ಕುಷ್ಠ[3]ಮಿವೊಂ॥
ಮಿಗಲೇಕಗುಣಂ ಜಳಮ।
ಷ್ಟಗುಣಂ ಸುರದಾರುವಾಗೆ ಕೊಂಡೀಕ್ರಮದಿಂ ॥ ೧೯ ॥

ಟೀ॥ ಮುಡಿವಾಳಂ (೩) ಮೂಱುಭಾಗೆ, ಕೋಷ್ಠಂ (೧) ಒಂದುಭಾಗೆ, ಲವಂಗದ ತಿಗುಡು (೨) ಎರಡು ಭಾಗೆ, ಲವಂಗಪೆಲೆ (೧೦) ಪತ್ತುಭಾಗೆ [4]ಈ ಮರ್ಯಾದೆಯಲ್ಲಿ ಭಾಗಸಂಖ್ಯೆಯಿಂ ಕೊಂಡು ಒಂದು ಪಲಮಪ್ಪಂತೆ ಕೂಡಿಕೊಂಡು ಅದಱ ಎಂಟು (೮) ಮಡಿ ಎಳ್ಳೆಣ್ಣೆಯಂ ಕೂಡಿ ಕೊಂಡು ಏೞುದಿನ ಪರ್ಯಂತಮಿರಿಸುವುದು—೧೬.

ಟೀ॥ ಆ ಇರಿಸಿದ ತೈಲಮಂ ಬಿಸಿಲೊಳಗಿರಿಸಿ ಸಂಪಗೆಯ ಹೂಗಳಂ ತಂದು ವಿಧಾನದಿಂದೆ ಪ್ರತಿದಿಸಂ ಪ್ರತಿವಾಸನೆಗುಡಲ್ ಅದು ಚಂಪಕತೈಲಮೆನಿಸಿಕೊಳ್ವುದು. ಆ ತೈಲಂ ಅರಸುಗಳ್ಗೆ ಯೋಗ್ಯಮಪ್ಪುದು—೧೭.

ಟೀ॥ ತಗಲಮೂಲ (೧) ಒಂದುಭಾಗೆ, ಅಗಲು (೨) ಎರಡುಭಾಗೆ, ತಮಾಳಪತ್ರಂ (೩) ಮೂಱುಭಾಗೆ, ಪಚ್ಚೆಯೆಲೆ (೪) ನಾಲ್ಕುಭಾಗೆ, ಕಲ್ನಾರ್ (೫) ಅಯ್ದುಭಾಗೆ, ಕೋಷ್ಠಂ (೬) ಆಱುಭಾಗೆ ದಂತಿ (೭) ಏೞುಭಾಗೆ, ಇವೆಲ್ಲಮಂ ಕೂಡಿ ಎಳ್ಳೆಣ್ಣೆಯೊಳಗೆ ಹಾಯ್ಕಿ ಕಲಸಿ ಬಿಸಿಲಲ್ಲಿ ಒಣಗಿಸಿ ಅದರ್ಕೆ ಪಾದರಿಯ ಪೂವಿನ ವಾಸನೆಯಂ ಕುಡಲ್ ಆ ತೈಲಂ ಪಾಟಳತೈಲಮೆನಿಸಿಕೊಳ್ವುದು—೧೮.

ಟೀ॥ ತಗರಮೂಲಂ, ಲವಂಗದ ತಿಗುಡು, ಜಟಾಮಾಂಸಿ, ಮುಡಿವಾಳಂ, ಕಿಱು ಏಲಕ್ಕಿ, ನೆಟ್ಟಿಲ್, ನಾಯ್ಕಣಸು, ಕೋಷ್ಠಂ, ಇವೆಲ್ಲಮಂ ಸಮಭಾಗೆಯಾಗಿಕೊಂಡು (೧) ಒಂದುಭಾಗೆ ಜಳಂ ದೇವದಾರು ಈ ಎರಡಂ ಎಂಟು (೮) ಭಾಗಮಾಗೆ ಕೊಳ್ವುದು—೧೯.

1 ವೃದ್ಧಿಗತರಾಗಮ. 2 ಬಳಂ ಮಾಂಸಿ ಜಟ್ಟಂ, ಜಳಂ ಮಾಂಸಿ ಅಟ್ಟಂ. 3 ಮಿಮೇಕಗುಣಂ ಜಳಮಷ್ಟಗುಣಂ. 4 ಈ ಬಗೆಯಲ್ಲಿ.

ಕಂ|| ತಿಲತೈಲದೊಳದ ಮಂದಾ |
ನಲನಿಂದಟ್ಟೆಱಪಿ ಬೞಿಕೆ [1]ಜಾತಿಯ ಪೊಸವೂ ||
ಗಳನಿಕ್ಕಿ ಕಳೆದೊಡಂ ಕೇ |
ವಳ [2]ಮಪ್ಪಾಹ್ಲಾದಕಾರಿ ಜಾತಿಯತೈಲಂ || ೨೦ ||

(ಮಲ್ಲಿಕಾತೈಲಂ)

ತರಳ|| ಪ್ಲವಗ ಕುಷ್ಠ ಲವಂಗ ರೇಣುಕದೇವಿಕಾತ್ರುಟಿತೋಯಮಂ |
ಬಿವಱನಿಮ್ಮಡಿಕೌಂಗು ಮೂವಡಿ ಮಾಂಸಿ ವಕ್ರದಳಂಗಳಂ ||
ಬಿವಱೊಳೆಣ್ಣೆಯನಟ್ಟು ಕಾಯಿಸಿ (ವೇಧಿಸೆ) ಮಲ್ಲಿಕಾಕುಸುಮಂಗಳಿಂ |
ಪ್ರವರಗಂಧಮೆನಿಪ್ಪ ಮಲ್ಲಿಗೆತೈಲಮಕ್ಕುಮದುತ್ತಮಂ || ೨೧ ||

(ಪರಿಪರಿಯ ಪುಷ್ಪತೈಲಂ)

ಕಂ|| ತಿಳಮಂ ಪರಿಕಿಸಿ ವಾಸಿಸು |
ಬೞಿಕ್ಕದಂ ಫುಲ್ಲಪುಷ್ಪಸಂಕುಲದಿಂದಂ ||
ಪಿೞಿದೆಣ್ಣೆಯೊಳಾ ಪೂವಂ |
ಪೞಿಯಂದದೆ ವಾಸಿಸೆಣ್ಣೆಗಾ ಪೆಸರಕ್ಕುಂ || ೨೨ ||

(ಮೃಗಮದತೈಲಂ)

ತೊಗಡುಗಳೆದೆಳ್ಳುಗಳ ಕೇ |
ದಗೆಯಿಂ [3]ವಾಸಿಸಿ ತುರುಷ್ಕ ಲಘು ಖಚರಂ ಮಾಂ ||
ಸಿ ಗಭಸ್ತಿತ್ರುಟಿಗಳಿನದ |
ಪೊಗೆಗೊಳಿಸಿ ಬೞಿಕ್ಕೆ ಕಪ್ಪುರದೆ [4]ಗಾಣದೊಳಂ || ೨೩ ||

---

ಟೀ|| ಈ ಭಾಗಸಂಖ್ಯೆಯಿಂ ಕೂಡಿದಂತಹ ಸುಗಂಧ ದ್ರವ್ಯಗಳಂ ಎಳ್ಳೆಣ್ಣೆಯೊಳಗೆ ಹಾಯ್ಕಿ ಮೆಲ್ಲಗ್ನಿಯಿಂದೆ ಕಾಸಿ ಇೞಿಸಿ ತಱುವಾಯಲ್ಲಿ ಹೊಸಜಾಜಿಯ ಪೂಗಳಂ ತಂದು ಹವಣಱಿತು ವಾಸನೆಯಂ ಕುಡಲ್ ಆ ತೈಲಂ ಸುಗಂಧವುಳ್ಳ ಜಾತಿತೈಲವೆನಿಸಿಕೊಳ್ವುದು,—೨೦.

ಟೀ|| ನಸುಗುನ್ನಿ, ಕೋಷ್ಠಂ, ಲವಂಗದ ತಿಗುಡು, ನಾಯ್ಕೊಣಸು, ಸಹದೇವಿಯಗಿಡು, ಏಲಕ್ಕಿ, ಮುಡಿವಾಳಂ ಇವೆಲ್ಲವಂ ಕೂಡಿ (೧) ಒಂದುಭಾಗೆ ಇವಱೊಳಿಮ್ಮಡಿ (೨) ನೆೞಲ ಮರದ ತಿಗುಡು (೩) ಮೂಱುಮಡಿ ಜಟಾಮಾಂಸಿ, ತಗರಮೂಲಂ ಇವೆಲ್ಲಮಂ ಕೂಡಿ ಒಳ್ಳಿಹ ಎಣ್ಣೆಯೊಳ್ ಹಾಯ್ಕಿ ಕಾಸಿ ಇೞಿಸಿ ಆ ತೈಲಕ್ಕೆ ಪೊಸತಾಗಿರ್ಪ ಒಳ್ಳೆಯ ಮಲ್ಲಿಗೆಹೂವಿನ ವಾಸನೆಯಂ ಕುಡಲ್ ಆ ತೈಲಮುತ್ತಮಮಪ್ಪ ಮಲ್ಲಿಕಾತೈಲಮೆನಿಸಿಕೊಳ್ವುದು—೨೧.

ಟೀ|| ಎಳ್ಳಂ ಚೆನ್ನಾಗಿಮಾಡಿಕೊಳ್ದು ಬಿಳಿಯ ಎಳ್ಳಂಮಾಡಿ ಒಣಗಿಸಿ ಆವುದೊಂದು ಸುಗಂಧ ಪುಷ್ಪಂಗಳ ವಾಸನೆಯಂಕೊಟ್ಟು ಆ ಎಳ್ಳಂ ಗಾಣಮನಾಡಿಸಿ ತೈಲಮಂ ಕೊಂಡು ಮರಳಿ ಆ ತೈಲಕ್ಕೆ ಆ ಸುಗಂಧ ಪುಷ್ಪಂಗಳ ವಾಸನೆಯಂ ಕುಡಲ್ ಆ ತೈಲಂ ಆ ವಾಸನೆಯಂ ಕೊಟ್ಟ ಪೂವಿನ ಪೆಸರ ತೈಲವೆನಿಸಿಕೊಳ್ವುದು—೨೨.

ಟೀ|| ಎಳ್ಳಂ[5]ತೊಳೆದು ಬಿಳಿದಪ್ಪಂತೆ ಮಾಡಿಯೊಣಗಿಸಿ ಅದರ್ಕೆ ಕೇದಗೆ ಹೂವಿನ ವಾಸ

---

1 ಜಾಜಿಯ. 2 ಮಕ್ಕಾಹೊದಕಾದಿ ಜಾತಿತೈಳಂ. 3 ಕಾಸಿಸ. 4 ಗಾಣದೊಳ್ ಪೊಯ್ಪುವಱೊಳ್. 5 ಬಿಳಿಯೆಳ್ಳಂಮಾಡಿ.



ಕಂ|| ಬೆರಸಿ ಶಶಿಕುಂಕುಮಂ ಕ |
ಸ್ತೂರಿ ಗಂಧಂ ಶ್ರೀಫಳೆ ಲೋಧ್ರವೆಂಬಿವನಿಂಬಾ ||
ಗಿರೆ ಪಿೞಿದು ಬಿಸಿಲೊಳೆಡೆ ಸ |
ಪ್ತರಾತ್ರಮಂ ತಾನದಕ್ಕೆ ಮೃಗಮದತೈಲಂ || ೨೪ ||

(ಕರ್ಪೂರತೈಲಂ)

ಪರಿಪಕ್ವ ಬಿಲ್ವಬೀಜಮಂ |
ನರೆದೆಣ್ಣೆಯೊಳಿಕ್ಕಿ ನೆೞಲೊಳೊಣಗಿಸಿ ಜಲದಿಂ ||
ದಿರದಡರಿಗೊಂಡು ತಳಿ[1]ಹಿಮ |
ಕರನಂ ಕರ್ಪೂರತೈಲ ಮುತ್ತಮಮಕ್ಕುಂ || ೨೫ ||

ಸುರದಾರು ಮಾಕ್ಷಿಕಂ ಶ |
ರ್ಕರೆ ಶೈಲಜಮಗುರು ಬಿಲ್ವಮಿವಱಿಂ ಪೊಗೆಗೊಳ್ ||
ಭರಣಮನಂತದಱೊಳ್ ಪೊ |
ಯ್ದಿರಿಸೆಣ್ಣೆಯ[2]ನದು ವಿಶೇಷಗಂಧಮನೀಗುಂ || ೨೬ ||

(ಸುಗಂಧಾಮಳಕ ತೈಲಂ)

ಮ|| ಮುರೆ ಚೋಟಂ ರುಜೆ ಮಾಂಸಿ [3]ಪೂತಿಜಫಳಂ ತಾಮಿಂತಿವೊಂದಂಶಮಾ |
ಗಿರೆ ಧಾತ್ರೀಫಳಮಾಗೆ ತತ್ತ್ರಿಗುಣಿತಂ ಸೌವೀರದಿಂ ಸಣ್ಣಮಾ ||
ಗರೆದೇಳಾತ್ವಚಮೆಂಬಿವೊಂದಿ ನಿಲೆ ವೇಧಂಗೆಯ್ದೊಡಕ್ಕುಂ ಮನೋ |
ಹರಗಂಧಾಮಳಕಂ [4]ಗುಡಾನ್ವಿತಮಭಿಪ್ರೋದ್ಭೂತ ಸದ್ಧೂಪದಿಂ || ೨೭ ||

---

ನೆಯಂಕೊಟ್ಟು ತದುಕಿನ ಧೂಪಂ, ಕಾಸೀಸಂ, ಖಚೋರಂ, ಜಟಾಮಾಂಸಿ ಕಂಗುವೆಯ ಬೀಜ ಕಿಱಿಯ ಏಲಕ್ಕಿ, ಈ ಸುಗಂಧದ್ರವ್ಯಂಗಳಿಂದೆ ಆ ಎಳ್ಳಿಗೆ ಧೂಪಿಸಿ ಕರ್ಪೂರದ ವಾಸನೆಯಂಕೊಟ್ಟು ಆ ಎಳ್ಳಂ ಗಾಣದೊಳ್ ಪೊಯ್ದು[5]—೨೩.

ಟೀ|| ಕಪ್ಪುರಂ, ಕುಂಕುಮಂ, ಕಸ್ತೂರಿ, ಶ್ರೀಗಂಧಂ, ಅಣಿಲೆಯಕಾಯ್, ತಾರೆಕಾಯ್, ನೆಲ್ಲಿಕಾಯ್, ಲೋಧ್ರಂ ಇವೆಲ್ಲವಂ ಕೂಡಿ ಗಾಣದಲ್ಲಿ ಬೆರಸಿ ಗಾಣಮಾಡಿ ಆ ತೈಲವಂ ತೆಗೆದು ಕೊಂಡು, ಆ ತೈಲವಂ ಏೞುದಿನ ಪರ್ಯಂತಂ ಬಿಸಿಲಲ್ಲಿರಿಸಿ ತೆಗೆಯಲ್ ಆ ತೈಲಂ ಮೃಗಮದ ತೈಲ ಮೆನಿಸಿಕೊಳ್ವುದು—೨೪.

ಟೀ|| ಒಳ್ಳಿತಾಗಿ ಬೆಳೆದ ಬಿಲ್ಲಪತ್ರದ ಹಣ್ಣಿನ ಬೀಜಮನರೆದು ಎಣ್ಣೆಯಲ್ಲಿ ಕಲಿಸಿ ಉಂಡೆಗಳಂಮಾಡಿ ನೆೞಲಲ್ಲಿ ಒಣಗಿಸಿ ಅನನುದಕದಲ್ಲಿ ಅಡರಿಗೊಂಡು ಆ ತೈಲಮಂ ತೆಗೆದುಕೊಂಡು ಕರ್ಪೂರದಲ್ಲಿ ವೇಧಿಸಲ್ ಅದು ಕರ್ಪೂರ ತೈಲ ಮೆನಿಸಿಕೊಳ್ವುದು—೨೫.

ಟೀ|| ದೇವದಾರು, ಜೇನತುಪ್ಪಂ, ಸಕ್ಕರೆ, ಕಲ್ನಾರ್ ಅಗಿಲು ಬಿಲ್ಲಪತ್ರಂ, ಈ ಸುಗಂಧ ದ್ರವ್ಯಗಳಿಂದೆ ಭರಣಿಯ ಒಳಯಿಂಕೆ ಧೂಪಿಸಿ ಆ ಭರಣಿಯೊಳಗೆ ಒಳ್ಳಿಹ ಎಣ್ಣೆಯಂ ಪೊಯ್ದಿಡಲ್ ಆ ಎಣ್ಣೆ ಒಳ್ಳಿಹ ಸುಗಂಧ ಪರಿಮಳಮುಳ್ಳ [6]ತೈಲಮಪ್ಪುದು—೨೬.

ಟೀ|| ಮುರೆ, ಚೋಟಂ, ರುಜೆ, ಜಟಾಮಾಂಸಿ, ತೊಱೆಹುಲಿಗಿಲಬೀಜಂ, ಇವಂ ಸಮನಾಗಿ ಕೂಡಿಕೊಂಡು ಒಂದುಭಾಗೆ, ಇವಱ ಮೂಱುಮಡಿ ನೆಲ್ಲಿಯಸಟ್ಟು, ಇವಂಕೂಡಿ ಅಂಬಿಲ

---

1 ಶಶಿಯುಮನದು. 2 ನಡು. 3 ಪೂತಿಚಫಳಂ. 4 ಗುಡಾರಾನ್ವಿತನಗೆ. 5 ಆದಿಷುಪುದು, ಆಮೇಲೆ. 6 ಎಣ್ಣೆಯಹುದು.

ಕಂ|| ಮರುಗ ದವ[1]ನಂ ದಳಂ ಕೈ |
ಲರುಹಂ ತಗರಂ ಖಚೋರವೇಲೆ ಯಿವಂ ಕೊಂ ||
ಡರೆ ನೆಲ್ಲಿ ಮೂಱುಮಡಿ ಯಾ |
ಗಿರೆ ಪೂರ್ವಕ್ರಮದಿನದು ಸುಗಂಧಾಮಳಕಂ || ೨೮ ||

(ದೇಹಧೂಪಂ)

ಕರಜಂ ಕುಂದುರು ಜಟಿಮಾಂ |
ಸಿ ರುಜೆ ಯಿವಂ ಸವನೆಗೊಂಡು ದೇಹಮನಿಂಬಾ ||
ಗಿರೆ ಧೂಪಿಸಿದಂದು ಮನೋ |
ಹರಗಂಧಂ ಕಾನದಕ್ಕುಮಚಳಿತವಚನಾ || ೨೯ ||

(ವಸ್ತ್ರಧೂಪಂ)

ಸಿರಿ ಖಂಡಮಗರು ಶರ್ಕರೆ |
ಕರಜಂ ಪೂತಿಫಳ ಕೋಷ್ಠಮೆಂಬಿವಱಿಂದೊಂ ||
ದಿರೆ ಧೂಪಮಕ್ಕುವಸ್ತ್ರಂ |
ಕರಮಚ್ಚರಿಯಾಗಿ ಸುರಭಿ ಗಂಧಮನಾಳ್ಗುಂ ||೩೦ ||

(ಧೂಪವರ್ತಿ)

ದ್ವಿಗುಣವಿವರ್ಧಿತ ಮೃಗಮದ |
ಮೃಗಲಾಂಛನ ಲಘು ತುರುಷ್ಕಮಳಯೋದ್ಭವಮಾಂ ||
ಸಿಗಳಂ ಸಿತಜಳದಿಂ ಮಾ |
ಡುಗೆ ಬತ್ತಿಯನೆಸೆವ ಧೂಪವರ್ತಿಯದಕ್ಕುಂ || ೩೧ ||

---

ದಿಂದೆ ಸಣ್ಣನಾಗಿ ಅರೆದು, ಏಲಕ್ಕಿ, ಲವಂಗದ ತಿಗುಡು ಈ ಎರಡಱಿಂದೆ ಒಂದುದಿನ ಪರ್ಯಂತ ವೇಧಿಸಿ ಅದರ್ಕೆ ಬೆಲ್ಲದ ಧೂಪಮಂ ಕುಡಲ್ ಅದು ಸುಗಂಧಾಮಳಕವೆನಿಸಿ ಕೊಳ್ವುದು—೨೭.

ಟೀ|| ಮರುಗಂ, ದವನಂ, ಪಚ್ಚೆ, ಕಲ್ಹಾರ್, ತಗರಮೂಲಂ, ಖಚೋರಂ, ಏಲಕ್ಕಿ, ಈ ಸುಗಂಧದ್ರವ್ಯಂಗಳಂ ಸಮಭಾಗೆಯಾಗೆಕೊಂಡು ಇದೊಂದುಭಾಗೆ, ಇವೆಲ್ಲರ ಮೂರ್ಮಡಿ ನೆಲ್ಲಿಯ ಸಪ್ಪು ಇವಂಕೂಡಿ ಅರೆದು ಏಲಕ್ಕಿ ಲವಂಗದ ತಿಗುಡಂಕೂಡಿ ವೇಧಿಸಿ ಬೆಲ್ಲದ ಧೂಪಮಂ ಕುಡಲ್ ಅದು ಸುಗಂಧಾಮಳಕ ತೈಲವೆನಿಸಿಕೊಳ್ವುದು—೨೮.

ಟೀ|| ನಖಂ,ಕುಂದುರು,ಜಟಾಮಾಂಸಿ, ರುಜೆ ಈ ಸುಗಂಧದ್ರವ್ಯಂಗಳಂ ಸಮಭಾಗೆಕೊಂಡು ದೇಹಕ್ಕೆ ಚೆನ್ನಾಗಿ ಧೂಪಿಸಲ್ ಆ ದೇಹಂ ಸುಗಂಧಪರಿಮಳವಾಗಿ ವಾಸನಿಸುವುದು—೨೯.

ಟೀ|| ಶ್ರೀಗಂಧಂ, ಅಗಿಲು, ಸಕ್ಕರೆ, ತೊಱೆಹುಲಿಗಿಲಬೀಜಂ, ಹುಲಿಗಿಲಬೀಜಂ, ಕೋಷ್ಠಂ ಈ ಸುಗಂಧದ್ರವ್ಯಂಗಳಂ[2]ಸಮಭಾಗೆಯಾಗಿಕೊಂಡು ಕೂಡಿವಸ್ತ್ರಂಗಳ್ಗೆ ಧೂಪಿಸಲ್ ಆ ವಸ್ತ್ರಂಗಳ್ ಒಳ್ಳಿತ್ತಾದ ಮನೋಹರಮಪ್ಪ ಸುಗಂಧಪರಿಮಳಮಪ್ಪುದು—೩೦.

ಟೀ|| ಎರಡುಭಾಗೆ ಕಸ್ತೂರಿ, ಕರ್ಪೂರ, ಪುಷ್ಪಕಾಸೀಸಂ, ತುರುಷ್ಕಂ ಶ್ರೀಗಂಧಂ, ಜಟಾಮಾಂಸಿ,ಈ ಸುಗಂಧ ದ್ರವ್ಯಗಳಂ ಸಮಭಾಗೆಯಾಗಿಕೊಂಡು ಒಂದುಭಾಗೆ, ಈ ಎರಡುಭಾಗೆ ಸಕ್ಕರೆ ಸೀರಿನಲ್ಲಿ ಅರೆದು ಬತ್ತಿಯಾಗಿಮಾಡಿ ಆ ಬತ್ತಿಗೆ ತೊಡೆದು ಒಣಗಿಸಿ ಎಳ್ಳೆಣ್ಣೆಯಂ ಎಱೆದು ಆ ಬತ್ತಿಯಂ ಹೊತ್ತಿಸಲ್ ಅದು ಸುಗಂಧವರ್ತಿಯೆನಿಸಿಕೊಳ್ಳುವುದು,—೩೧.

1 ನಂಗಳಂ. 2 ಸಮಾನಿಸಿ.



ಕಂ|| ಮಳಯರುಹಂ ಕುಂದುರು ಕಪಿ |
ಜಳದನಖಂ [1]ಪೂತಿ ಕಾಂಗು ಜೋಟಿ ಲವಂಗಂ ||
ಜಳಮನರೆದೂಡಿ ಮಾಡುಗೆ |
ವಿಳಾಸದಿಂ ಧೂಪವರ್ತಿಯಂ ಬುಧಬಂಧು || ೩೨ ||

ಸುರದಾರು ಪೂತಿ ಮುರೆ ಸ |
ಜ್ಜರಸಂ ಲಘು ಲಾಕ್ಷೆ ಯಿವಱ ಚೂರ್ಣಮನಿಂಬಾ ||
[2]ಗರಳೆಯೊಳೆ ಪುದಿದು ಪೊತ್ತಿಸೆ |
ಸುರಭಿಕೃತಂ ಧೂಪವರ್ತಿಯಿದು ಕೇವಳಮೇ || ೩೩ ||

ಮಳಯೋದ್ಭವ ಶೈಲೋದ್ಭವ |
ಸಲಿಲಂ ಸಿತ[3]ಮಗುರು ಕುಷ್ಠ ಚೂರ್ಣದಿನಿಂಬಾ ||
ಗಿರೆ ಮಾಡಿ ಬತ್ತಿಯಂ ಸೊಡ |
ರ್ಗಳಗುಗೆ ಮನೆಯೊಳಗೆ ಕಂಪು ಪೊಂಪುಳಿಯಕ್ಕುಂ || ೩೪ ||

(ದಶಾಂಗಧೂಪಂ)

ಘನಮಗುರು ಶೈಲಜಂ ಮಾಂ |
ಸಿ ನಖಂ ರುಜೆ ಪೂತಿ ವಾನರಂ ಸಲಿಲಂ ಚಂ ||
ದನಮೆಂಬಿವಱೊಳ್ ಮಧುಸಿತ |
ಮೆನಿಪ್ಪಿವಂ ಕಲಸುಗದು ದಶಾಂಗಂ ಧೂಪಂ || ೩೫ ||

---

ಟೀ|| ಶ್ರೀಗಂಧಂ, [4]ಕಣ್ಣಿಗೆಯ ಹುಲ್ಲಬೇರ್, ಭದ್ರಮುಸ್ತೆ, ನಖಂ, ತೊಱೆಹುಲಿಗಿಲಬೀಜಂ, ನೆಟಿಲಮರನಬೇರ್, ಬೋಳಂ, ಲವಂಗದ ತಿಗುಡು, ಮುಡಿವಾಳಂ, ಇವೆಲ್ಲಮನೊಂದಾಗಿ ಅರೆದು ಬತ್ತಿಯಂಮಾಡಿ ಆ ಬತ್ತಿಗೆ ಊಡಿ ಒಣಗಿಸಿ ಎಳ್ಳೆಣ್ಣೆಯನೆಱೆದು ದೀವಿಗೆಯಂಹೊತ್ತಿಸಲ್ ಅದು ಧೂಪವರ್ತಿಯೆನಿಸಿಕೊಳ್ವುದು—೩೨.

ಟೀ|| ದೇವದಾರು, ತೊಱೆಹುಲಿಗಿಲಬೀಜಂ, ಮುರೆ, ಸಜ್ಜರಸಂ, ಪುಷ್ಪಕಾಸೀಸಂ, ಅರಗು, ಇವಂ ಸಮನಾಗಿಕೊಂಡು [5]ಚೂರ್ಣಮನಿಂಭಾಗರೆದು ಹತ್ತಿಯೊಳಗೆ ಆ ಚೂರ್ಣಮಂ ತುಂಬಿ ಬತ್ತಿಯಂ ಮಾಡಿ ಹೊತ್ತಿಸಲ್ ಒಳ್ಳಿಯದಾದ ಸುಗಂಧಮಪ್ಪ ಧೂಪವರ್ತಿಯಪ್ಪುದು—೩೩.

ಟೀ|| ಶ್ರೀಗಂಧಂ, ಕಲ್ಹಾರ್, ಮುಡಿವಾಳಂ, ಸಕ್ಕರೆ, ಅರಗು (ಅಗುರು) ಕೋಷ್ಠಂ ಇವಂ ಸಮಭಾಗೆಯಾಗಿ ಕೊಂಡು ಚೂರ್ಣಮಂಮಾಡಿ ಅದಂ ಹತ್ತಿಯೊಳಗೆ ತುಂಬಿ ಬತ್ತಿಯಂಮಾಡಿ ಹೊತ್ತಿಸಲ್ ಮನೆಯೊಳಗೆ ಸುಗಂಧ[6]ವಾಸನೆಯು ಪರಿಮಳಮಪ್ಪುದು—೩೪.

ಟೀ|| ಭದ್ರಮುಸ್ತೆ, ಅಗಿಲ್ ಕಲ್ಹಾರ್, ಜಟಾಮಾಂಸಿ, ನಖಂ, ರುಜೆ, ಹುಲಿಗಿಲಬೀಜ ತಿಗುಡು, ನಸುಗುನ್ನಿಯಬೇರ್, ಮುಡಿವಾಳಂ, ಶ್ರೀಗಂಧಂ ಈ ಸುಗಂಧ ದ್ರವ್ಯಂಗಳಂ ಸಮಭಾಗೆಯಾಗಿಕೊಂಡು ಚೂರ್ಣಮಂಮಾಡಿ ಜೇನತುಪ್ಪ ಸಕ್ಕರೆಗಳಂ ಕೂಡಿಕೊಂಡು ಕಲಸಲ್ ಅದು ದಶಾಂಗ ಧೂಪವೆನಿಸಿಕೊಳ್ವುದು—೩೫.

1 ಸೂತಿ. 2 ಗರೆವಳೆಯೊಳು. 3 ಮರಗು. 4 ಕಣಲಿಗೆ. 5 ಇವಱ ಚೂರ್ಣಮಂ ಕೂಡಿ ಹತ್ತಿಯ. 6 ವಸಂತ.

(ಗೊಜ್ಜುಗೆಕಂಪು)

ಕಂ|| ಸಂಯೆಸಿಪ ರುಜಾತ್ವಚದಿಂ |
ತುರಷ್ಕಮಿರ್ಪುಡಿಯುದಕ್ರ್ಕಮಿರ್ಪುಡಿ ಕೊತ್ತುಂ ||
ಬರಿಯಾಗಿ[1]ತಳಿಗೆ ಪುಷ್ಪೋ |
ತ್ಕರದೊಳ್ ಗೊಜ್ಜುಗೆಯುಕಂಪನವು ತಳೆದಿರ್ಕ್ಕುಂ || ೪೪ ||

ಕಂ|| ಕ್ರಮವೃದ್ಧಿಕ (ವರ್ಧಿತ) ತಗರಾಗರು |
ತಮಾಳ ಪತ್ರತ್ವಚಂಗಳಿಂ ಧೂಪಿಸೆ ಪು[2] ||
ಷ್ಪಮನಿಂತು ಜಾತಿಗಂಧಮ |
ನಮರ್ಚುಗುಂ ಕ್ರಮದೆ ಮಲ್ಲಿಕಾಸೌರಭಮಂ || ೪೫ ||

ಕಂ|| [3]ಸುರಹೊನ್ನೆಯ ಬೀಜಂ ಮುನಿ |
ತರುಕುಸುಮಂ ಯಷ್ಟಿ ಟಂಕಣಂ ಬೋಳಂ ಕ ||
ರ್ಪೂರಮೆಂಬಿವಱಿಂ ಪೂವಂ |
ಪೊರೆದೊಡೆ ಪುಷ್ಪದ್ರವಂ ಮನೋಹರಮಕ್ಕುಂ || ೪೬ ||

ಕಂ|| [4]ಹವಣಱಿದು ಮಧುವುಮಂ ಹಿ |
ಕ್ಕವತ್ತಿಗೆಯ ಬೇರ ರಸಮಂ ಶಶಿಯುಮನೊಂ[5] ||
ದುವಿನಂ ತೊಡೆದೊಡೆ ಪುಷ್ಪಂ |
[6]ದ್ರವಮಂ ಮಾಳ್ಕುಂ ಸರಸ್ವತೀ ಮುಖತಿಲಕಾ || ೪೭ ||

ಟೀ|| ರುಜೆ, ಲವಂಗದ ತಿಗುಡು ಇವೊಂದುಭಾಗೆ, ತರುಕಿನಭಾಗೆ [7]ಇರ್ಪುಡಿ, ಆದಱ ಇರ್ಪುಡಿ ಕೊತ್ತುಂಬರಿ ಇವನೊಂದಾಗಿ ಕೂಡಿ ಚೂರ್ಣಮಂಮಾಡಿ ಆವುದೊಂದು ಕಂಪನುಳ್ಳ ಪೂಗಳಮೇಲೆ ತಳಿಯಲ್ ಅವು ಗೊಜ್ಜುಗೆಯಪೂವ [8]ಕಂಪನುಳ್ಳ ಪೂಗಳಪ್ಪುವು—೪೪.

ಟೀ|| ತಗರಂ (೧) ಒಂದುಭಾಗೆ, ಅಣಿಲೆಕಾಯಿ (೨) ಎರಡುಭಾಗೆ, ತಮಾಳಪತ್ರಂ (೩) ಮೂಱುಭಾಗೆ, ಲವಂಗದ ತಿಗುಡು (೪) ನಾಲ್ಕುಭಾಗೆ, [9]ಇವೆಲ್ಲಮಂನೊಂದುಗೂಡಿ, ಆವುದೊಂದು ಪೂಗಳ್ಗೆ ಧೂಪಿಸಲ್ ಆ ಪೂಗಳ್ ಮಲ್ಲಿಗೆಯ ಪೂವಕಂಪನುಳ್ಳ ಪೂಗಳಪ್ಪವು—೪೫.

ಟೀ|| ಸುರಹೊನ್ನೆಯಬೀಜಂ ತುಂಬರುವೂ, ಯಷ್ಟಿಮಧುಕಂ, ಟಂಕಣಂ, ಖಾರಂ, ಕರ್ಪೂರಂ, ಬೋಳಂ, ಇವಂ ಸಮಭಾಗೆಯಾಗಕೊಂಡು [10]ಚೂರ್ಣಂಮಾಡಿ, ಪರಿಮಳಮುಳ್ಳ ಪೂಗಳ ಮೇಲೆ ತಳಿಯಲ್ ಆ ಪುಷ್ಪಂರಸಂಗುಂದದೆ ಇರ್ಪುದು—೪೬.

ಟೀ|| ಹವಣಱಿತು.ಜೇನತುಪ್ಪಂ, ಹಿಕ್ಕವತ್ತಿಗೆಯಬೇರರಸಂ, ಕರ್ಪೂರಂ ಇವನೊಂದಾಗಿ ಕೂಡಿ ಆವುದೊಂದು ಕಂಪುಳ್ಳ[11]ಪೂಗಳಮೇಲೆ ತೊಡೆಯಲ್ ಆ ಪೂಗಳ್ ದ್ರವಿಸಿ ಪರಿಮಳಂ [12]ಗಿಡದೆ ಕಂಪಪ್ಪುವು—೪೭.

1 ತಳಿಯೆ ಪುಷ್ಪೋತ್ಕರದೊಳ್. 2 ಪುಷ್ಪಮನಿಷ್ಟಮನಿಂತು ಜಾತಿಗಂಧಮನದಿರ್ಚಕುಂ ಕ್ರಮದೆ. 3 ಸುರಬೀಜಂ ಸುರಮುನಿತರುಕುಸುಮಂ. 4 ಕ್ರಮವಱಿತು. 5 ನೊಂದುದಿನಂ. 6 ದ್ರವಂಮಾಳ್ಕುಂ. 7 ಎರಡುಮಡಿ. 8 ಕಂಪಂ ಬೀಱುವುವು. 9 ಈ ರೀತಿಯಿಂದಿವೆಲ್ಲಮನೊಂದುಗೂಡಿ. 10 ಚೂರ್ಣಿಸಿ. 11 ಪೂಗಳ್ಗೆ. 12 ಕೆಡದೆ ಅಹುದು.



ಚಂ|| ಕುದಿಯಿಸಿ ಶಿಗ್ರುಮೂಳರಸಮಂ ಪದಿನಾಱಱೊಳೊಂದುಭಾಗೆಯಂ |
ತದು ನಿಲೆ ಕೂಡಿತ್ತಿನಾಕ್ಷಿಕಮನಿಂದುವನೊಂದಿರೆ ಪೂಸಿ ಬಟ್ಟಲೊಳ್ ||
ಸದಮಳಕೇತಕೀದಳಮನಿಕ್ಕಿರದಿಂಬಿನೊಳಂ ವಿಶಿಷ್ಟದಿಂ |
ಮೃದುತರವಹ್ನಿಯೊಳ್ ಮಿದಿ(ವಿಧಿ)ಯನಿಕ್ಕಲೊಡಂ ದ್ರವಿಸಕ್ಕುಮಾವಗಂ || ೪೮ ||

ಕಂ|| ಅಗರು ಸಿರಿಖಂಡಮರುಣಂ |
ಮೃಗೋದ್ಭವಂ ಗ್ರಂಥಿಪರ್ಣಮಿವನೊಂದಿರೆ ಸ ||
ಣ್ಣಗೆಯೊಳರೆದಿದ್ದು ಧೂಪಿಸೆ |
ಮೃಗನಾಭಿಯಿನಧಿಕಗಂಧಕಳಭಮದಕ್ಕುಂ || ೪೯ ||

ವನಜಂ ಕೋಷ್ಠಂ ಬಿಲ್ವಾ |
ರ್ಜುನಕುಸುಮಂ ಗೋಜಳಂ ಗಜಕ್ಷಾದ್ರಮಿವಂ ||
ದಿನವಷ್ಟಿವರಂ ಜತುಭಾ |
ಜನದೊಳ್ [1]ಪೊಯ್ದುರಿಸೆ ಸಾದಿನಾಸವಮಕ್ಕುಂ || ೫೦ ||

ಪರಿಪರಿಯ ಸಾದುಗಳ್

ಗುಡಸುರದಾರುಗಳಿಂ ನಾ |
ಲ್ವಡಿ ನುಗ್ಗೆಯಬೇರ ರಸಮ [2]ನೂಷ್ಮದೊಳಟ್ಟಾ ||
ಗಡೆ ಗಂಧತ್ರಯಮಂ ತಳಿ |
ದೊಡೆ ಸೊಗಯಿಪಸಾದಿನಾ[3]ಸವಂ ತಾನಕ್ಕುಂ || ೫೧ ||

ಟೀ|| ನುಗ್ಗೆಯಬೇರಂ ತುಱಿದು [4]ಎಸಱಂಕೊಂಡು ಪದಿನಾಱಱಲ್ಲೊಂದುಭಾಗೆಯಷ್ಟಂ ಕಾಯಿಸಿ, ಜೇನತುಪ್ಪಂ, ಕರ್ಪೂರಂ ಇವನೊಂದಾಗಿಕೂಡಿ ಆ ರಸಮಂ ಬಟ್ಟಲೊಳಗೆ ಪೂಸಿ ಆ ಬಟ್ಟಲೊಳಗೆ [5]ಕೇದಗೆಪೂಗಳನಿಕ್ಕಿ ಅದಂ ಮಲ್ಲಿಚ್ಚಿನಲ್ಲಿ ಕಾಯಿಸಲ್ ಆ ಪುಷ್ಪಂ [6]ಬಾಡದೆ ದ್ರವಿಸಿರ್ಪುದು—೪೮.

ಟೀ|| ಅಗಿಲ್, ಶ್ರೀಗಧಂ, ಕುಂಕುಮಂ, ಕಸ್ತೂರಿ, ಗಿಣಿಮೂಗಂ ಇವಂ ಸಮಭಾಗೆಯಾಗಿ ಕೊಂಡು ಅರೆದು ಗುಳಿಗೆಯಂಮಾಡಿ ನೆಟಲೊಳೊಣಗಿಸಿ ಆವುದೊಂದು ವಸ್ತುವಿಗೆ ಧೂಪವಾಸನೆಯಂಕುಡಲ್ ಅದು ಕಸ್ತುರಿಯಿಂದಂ ಮಿಗಿಲಪ್ಪಪರಿಮಳಮುಳ್ಳುದಪ್ಪುದು—೪೯.

ಟೀ|| ತಾವರೆಯೊಳಗಣಕುಸುಮಂ, ಕೋಷ್ಟಂ, ಬೆಲ್ಲವತ್ತದಬೇರ್, ಮತ್ತಿಯಪೂ, ಗೋಮೂತ್ರಂ, ಗಜಂ, ಜೇನುತುಪ್ಪಂ ಇವನೊಂದಾಗಿ ಅರೆದು ಅರಗಿನಭಾಜನದಲ್ಲಿ ತುಂಬಿ ಎರಡುತಿಂಗಳವರೆಗಂ ಭೂಮಿಯವೊಳಗೆ ಪೊಳ್ದಿರಿಸಿತೆಗೆಯಲದು ಒಳ್ಳಿತಪ್ಪ[7]ಸಾದಿನ ಮರ್ಯಾದೆಯಲ್ಲಿರ್ಪುದು—೫೦.

ಟೀ|| ಬೆಲ್ಲಂ, ದೇವದಾರುಮರದ ಕೆಚ್ಚಿನತೈಲಂ, ಇವೆರಡುವೊಂದುಭಾಗೆ ಇವಱನಾಲ್ಕುಮಡಿನುಗ್ಗೆಯಬೇರ ರಸಮಂಕೂಡಿ ಬೇಯಲಿಟ್ಟು ಏಕರಸಮಂ ಮಾಡಿ ಲವಂಗದತಿಗುಡು, ಆಯಿತೆ, ಏಲಕ್ಕಿ ಈ ಮೂಱುಮಂ ಚೂರ್ಣಂಮಾಡಿ ಆ ರಸದೊಳಗೆ ತಳಿಯಲ್ ಅದು ಸಾದಿನ ಮರ್ಯಾದೆಯಲ್ಲಿ ಪರಿಮಳಮಪ್ಪುದು.—೫೧.

1 ಪೂರಿಸೆ ಸಾಧಿವಾಸನ, ಸಾದಿವಾಸಮ. 2 ನೂಷದೊ. 3 ಸಮಂ. 4 ರಸಮಂಕೊಂಡು. 5 ಕೇದಗೆ ಹೂವಿನ ಎಸಳ. 6 ದ್ರವಗುಂದದೆ ಇಹವು. 7 ಸಾಧಿನಂತಹುದು.

(ಪಂಚಾಂಗಧೂಪಂ)

ಕಂ|| ಕ್ರಮದೆ ನಖಮೊಂದು ಕರ್ಪೂ|
ರಮೆರಡು ಮೂಱಗುರು ನಾಲ್ಕು ಮಳಯರುಹಂ ಬೆ||
ಲ್ಲಮಮಯ್ದುಂ ಕೂಡಿದೊಡು|
ತ್ತಮಮದು ಪಂಚಾಂಗ ಧೂಪಮಕ್ಕುಂ ಪೆಸರಿಂ ||೩೬||

(ದೇವತಾಪ್ರೀತಿಕರಧೂಪಂ)

ಮಯುರುಹಂ ಶೈಲೋದ್ಭವ |
ಸಲಿಲಂ ಸಿತಮಗುರು ಕೋಷ್ಠಮಿವಱೊಳ್ ಗುಡಮಂ ||
ಕಲಸಿದೊಡೆ ಧೂಪಮದು ಕೇ |
ವಲಮಲ್ತು ಸಮಸ್ತದೇವತಾಪ್ರೀತಿಕರಂ ||೩೭||

(ಆಮೋಧಗಂಧಿಧೂಪಂ)

ಅರಗು ಘನಂ ಶೈಲರುಹಂ |
ಹರೀತಕೀಗುಡ ಮಧೂಕ ಪುಷ್ಪ[1]ಮಿವಂ ಮೇ ||
ಣರಗು ಗುಡಂ ತಾಱೆಯಿವಂ |
ಬೆರಸಿದೊಡಾಮೋದಗಂಧಿಯಕ್ಕುಂ ಧೂಪಂ ||೩೮||

(ತಿಗುಣೆಮೊದಲಾದುವು ಪೋಗಲ್‌ಧೂಪಂ)

ಗುಡಮಾಕ್ಷಿಕ ಮಳಯಜ ಲಘು |
ವಿಡಂಗ ಕಕುಭಪ್ರಸೂನ ಮೆಂಬವ[2]ನಿಂಬಾ ||
ಗೊಡಗೂಡಿ ಧೂಪಿಸುಗೆ ಚಿ |
ಕ್ಕಡು ನೊಱಜುಂ ತಗುಣೆ ಬಾವಲೆಂಬಿವು ಕಿಡುಗುಂ ||೩೯||

ಟೀ|| ನಖವೊಂದುಭಾಗೆ ಕಪ್ಪುರಮೆರಡುಭಾಗೆ, ಅಗಿಲ್ ಮೂರುಭಾಗೆ, ಶ್ರೀಗಂಧಂ ನಾಲ್ಕುಭಾಗೆ. ಬೆಲ್ಲವತ್ತದ ಕಾಯತಿರುಳ್ ಅಯ್ದುಭಾಗೆ, ಈ ಅಯ್ದುಂ [3]ಕೂಡಿಕೊಂಡು ಚೂರ್ಣಮಂ ಮಾಡಿ ಕುಡಲ್ ಅದು ಪಂಚಾಂಗಧೂಪಮೆನಿಸಿಕೊಳ್ವುದು—೩೬.

ಟೀ|| ಶ್ರೀಗಂಧಂ, ಕಲ್ನಾರ್, ಮುಡಿವಾಳಂ, ಸಕ್ಕರೆ, ಅಗಿಲ್, ಕೋಷ್ಠಂ, ಇವೆಲ್ಲಮಂ ಸಮಭಾಗೆಯಾಗಿಕೊಂಡು[4]ಚೂರ್ಣಮಂಮಾಡಿ ಬೆಲ್ಲದಲ್ಲಿ ಕಲಸಲ್ ಅದು ಸಮಸ್ತದೇವತಾಪ್ರಿಯವಹಂತಹ ಧೂಪಮೆನಿಸಿಕೊಳ್ವುದು—೩೭.

ಟೀ|| ಅರಗು, ಭದ್ರಮುಸ್ತೆ, ಕಲ್ನಾರ್, ಅಣಿಲೆಕಾಯತೊಪ್ಪೆ, [5]ಇಪ್ಪೆಯಪೂ, ಇವಂ ಸಮಭಾಗೆಯಾಗಿಕೊಂಡು, [6]ಚೂರ್ಣಮಂಮಾಡಿ ಕೂಡುವುದು. ಅಲ್ಲಾ ಅರಗು, ಬೆಲ್ಲಂ, ತಾಱೆಯಕಾಯ [7]ತಿಗುಡು ಇವಂ ಸಮಾನಿಸಿ ಚೂರ್ಣಮಂಮಾಡಿ ಕುಡಲ್ ಅದು ಸುಗಂಧಪರಿಮಳಮಪ್ಪ ಧೂಪಮೆನಿಸಿಕೊಳ್ವುದು—೩೮.

ಟೀ|| ಬೆಲ್ಲಂ, ಜೇನುತುಪ್ಪಂ, ಶ್ರೀಗಂಧಂ, ಪುಷ್ಪಕಾಸೀಸಂ. ವಿಳಂಗಂ, ಮತ್ತಿಯಪೂ, ಇವೆಲ್ಲಮಂ ಅರೆದು ಒಂದಾಗಿಕೂಡಿ ಅರೆದು ಮನೆಯೊಳಗೆ ಧೂಪಿಸಲ್ ಚಿಕ್ಕಡು, ನೊಱಜು, ತಗುಣೆ, ಬಾವಲ್ ಇವು ಕಿಡುವುವು—೩೯.

1 ಮಿಂತಿವುಮಂ. 2 ನಿಂಬಾಗದ. 3 ಸಮಭಾಗೆಯಾಗಿ. 4 ಚೂರ್ಣಿಸಿ. 5 ಮಧೂಕ ಪುಷ್ಪಂ. 6 ಬೆಲ್ಲಗೂಡಿ ಚೂರ್ಣಮಾಡುವುದು ಅಲ್ಲವೆ. 7 ತಿರುಳ್ ಇವನೊಂದಾಗಿ.



(ಇಚ್ಛೆಯಪ್ಪ ಕಂಪಂಪಡೆವುದು)

ಕಂ|| ಮೊರಿಕೊಳೆ ಗದುಗಿನ ಬೇರೊಳ್ |
ತಿರುಳೊಳ್ ಮೇಣ್ ಕರ್ಚಿ ಪುಷ್ಪಗಂಧಮನಿಂಬಾ ||
ಗಿರೆ ಕಳೆದು[1]ಧೂಪಮಿಕ್ಕುಗೆ |
ಹರೀತಕಿ[2]ಯೊಳಿಚ್ಚೆಯಪ್ಪ ಕಂಪಂ ಪಡೆಗುಂ ||೪೦||

(ವಕುಳದಕಂಪು)

ಸಿರಿಕಂಡಂ ನೇಱಲ್ ಬೆ |
ಲ್ಲರಸಂ ಸಬಗುಪ್ಪೆ ಯಣಿಲೆ ಯೆಂಬಿವನಿಂಬಾ ||
ಗಿರೆ ಗಂಧಮನಿಱಪಿದ ಪು |
ಷ್ಪರಜೆಯೊಳಂ ತಳಿಯೆ ವಕುಳಗಂಧಮನಾಳ್ಗುಂ ||೪೧||

(ಸಂಪಗೆಕಂಪು)

ತಗರಂ ಮಳಯರುಹಂ, ಜಳ |
ಮಗುರುಕ ಮಿವಱಂ ಚತುರ್ಥಭಾಗಂ [3]ಬೋಟಿಂ ||
ಬುಗೆ ತಳಿವುದು ಮಚ್ಚಿದಪೂ[4] |
ವುಗಳೊಳ್ ಸಂಪಗೆಯ ಕಂಪುಮಂ ತಳೆದಿಕ್ಕುಗುಂ ||೪೨||

(ಕೇದಗೆಯಕಂಪು)

ಮಲಯರುಹಂ ನುಗ್ಗಿಯಬೇರ್ |
ಜಲಮಂಬುದಮಣಿಲೆ ಮಾಂಸಿ ಚಳಮೇಲೆಯಿವಂ ||
ತಳಿವುದು ವಿಧಿಯಿಂದಂ ಪೂ |
[5]ಗಳೊಳವು ಕೇದಗೆಯ ಕಂಪನಾವರಿಸಿಕ್ಕುಗುಂ ||೪೩||

ಟೀ|| ಗದುಗಿನ ಬೇರ್, ಆ ಬೀಜದ ತಿರುಳ್ ಇವಂ[6]ಕೊಂಡು ಚೆನ್ನಾಗಿತೊಳೆದು, ಒಪ್ಪಿತಪ್ಪ ತನ್ನ ಮನಸ್ಸಿಗೆ ಬಹಂತಹ ಸುಗಂಧಪುಷ್ಪಂಗಳ ವಾಸನೆಯಂಕೊಟ್ಟು ಅಣಿಲೆಯಕಾಯಪೊಗೆಯಂ ಕುಡಲ್ ತನ್ನ ಮನಸ್ಸಿಗೆ ಬಂದಂತಹ ಪರಿಮಳಮಂ ಕುಡುವುದು—೪೦.

ಟೀ|| ಶ್ರೀಗಂಧಂ, ನೇಱಲತಿಗುಡು, ಬೆಲ್ಲವತ್ತದತಿಗುಡು, ಸಬ್ಬಸಿಗೆ, ಅಣಿಲೆಯಕಾಯ ತಿಗುಡು – ಇವಂ ಕೂಡಿ ಚೂರ್ಣಮಂ ಮಾಡಿ [7]ಸುಗಂಧಿಯಪ್ಪ ಕಂಪನಾಳ್ವ ಪುಷ್ಪಂಗಳಮೇಲೆ ತಳಿಯಲ್ ಆ ಪೂಗಳ್ ಬಕುಳಪೂವಿನ ಪರಿಮಳಮಪ್ಪುವು—೪೧.

ಟೀ|| ತಗರಂ ಶ್ರೀಗಂಧಂ, ಮುಡಿವಾಳಂ ಅಗಿಲ್ ಇವೆಲ್ಲಮಂ ಸಮಭಾಗೆಯಾಗಿಕೊಂಡು ವೊಂದುಭಾಗೆ, ಇವಱ ನಾಲ್ಕುಮಡಿ ಬೋಟಿಂ ಇವಂಕೂಡಿ ಚೂರ್ಣಮಂ ಮಾಡಿ ಮನಸ್ಸಿಗೆ ಬಂದ ಕಂಪನುಳ್ಳ ಆವುದೊಂದು ಪರಿಮಳದ ಪೂಗಳಮೇಲೆ ತಳಿಯಲ್ ಆ ಪೂಗಳ್ ಸಂಪಗೆಯ ಪೂವ ಪರಿಮಳಮಪ್ಪುವು—೪೨.

ಟೀ|| ಶ್ರೀಗಂಧಂ ನುಗ್ಗಿಯಬೇರ್, ಮುಡಿವಾಳಂ, ಭದ್ರಮುಸ್ತೆ, ಅಣಿಲೆಕಾಯ ತಿಗುಡು, ಜಟಾಮಾಂಸಿ ಚಳ (ಬೆಲ್ಲ) ಏಲಕ್ಕಿ ಇವೆಲ್ಲಮಂ ಸಮಭಾಗೆಯಾಗಿಕೊಂಡು [8]ಚೂರ್ಣಮಂ ಮಾಡಿ ಆವುದೊಂದು ಕಂಪನುಳ್ಳ ಪೂಗಳಮೇಲೆ ತಳಿಯಲ್ ಅವು [9]ಕೇದಗೆಯ ಹೂವಿನ ಕಂಪನುಳ್ಳ ಪೂಗಳಪ್ಪುವು—೪೩.

1 ಮಾತ್ತಮಿಕ್ಕು. 2 ಯೊಳಗರ್ಚಿ 3 ಬೋಳಂ. 4 ಪೂಗಳೊಳಾಸಂಪಗೆ, 5 ಪೂಪೂಳಪಾಕಂ. ಗಳೊಳಾ. 6 ಬಾಪಾಗಿ. 7 ಗಂಧಮನುಳ್ಳ. 8 ಚೂರ್ಣಿಸಿ. 9 ಕೇದಗೆಯ ಕಂಪಂ ಬೀರುವುವು.

ಕಂ|| ಎರಡುತ್ತರಮಾಗಿರೆ ಕ |
ಸ್ತುರಿ ಕಪ್ಪುರಮಗುರು ಬಿಲ್ವರಸಂ ತಾವೊಂದಾ ||
ಗಿರೆ ಹಂಸಪಾದಿಯುಂ ಮಳ |
ಯರುಹಮುಮಿವನರೆವುದುಷ್ಣಮಪ್ಪಾ ಜಳದೊಳ್ || ೫೨ ||

ಪರಿಪಕ್ವಮಾತುಳುಂಗೋ |
ತ್ಕರಮಂ ಪೊಳಗಾಗೆ ಮಾಡಿ ಪುಟದಿಂ ಸುಡೆ ಬಂ ||
ಧುರಗಂಧಂ ಮೆಲ್ಲೊಡೆ ಕ |
ಪ್ಪುರ ಪೂಸು[1]ವೊಡದುವೆ ಸಾದೆನಿಸಿಕ್ಕುಂ || ೫೩ ||

(ಉದಯಭಾಸ್ಕರ ಸಾದು)

ಮೃಗಮದಮಳಯರುಹಂ ಜಳ |
ಮಗುರು ನಖಂ ಕ್ರಮದೆ ಪೆರ್ಚಿಕೊಂಡರೆದಾ ವ ||
ಸ್ತುಗಳಂ ಮಧುಸಿತಯುತ ಮಿ |
ಕ್ಕುಗೆ ಧೂಪಮುದಯಭಾಸ್ಕರಂ ತಾನಕ್ಕುಂ || ೫೪ ||

(ಮಹಿಷೀದಳ ಸಾಧು)

ಚಂ|| ದೊರೆಕೊಳೆ ಬೋಳ[2]ಶಾಲಿ ಮಳಯಪ್ರಭವಾಗುರು ರಕ್ತದೇವಿಕಾ |
ಗಿರುಗಿರುಕೇಸರಂಗಳನನುಕ್ರಮದಿಂ ಮಿಗೆ ಕೊಂಡು ಸಣ್ಣನಾ ||
ಗರೆದೊಣಗಿಟ್ಟು ಕೂಡಿ ಮಿದಿದಾಸವದಿಂ ಮೃಗನಾಭಿಯಿಂದೆ ಬಿ |
ತ್ತರದೊಳೆ ವೇಧಿಸಾರ್ದ್ರಮಹಿಷೀದಳಮಕ್ಕುಮುದಾತ್ತರೂಪದಿಂ || ೫೫ ||

---

ಟೀ|| ಎರಡುಭಾಗೆ ಕಸ್ತೂರಿ, ಕರ್ಪೂರವೊಂದುಭಾಗೆ [3]ಅಗಿಲೊಂದುಭಾಗೆ ಬೆಲ್ಲವತ್ತದ [4]ಕೆಚ್ಚಿನತೈಲವೊಂದುಭಾಗೆ ಹಂಸಪಾದಿಯರಸಂ, ಶ್ರೀಗಂಧಂ ಇವೆಲ್ಲವಂ ಒಂದಾಗಿ ಬಿಸುನೀರಲ್ಲರೆವುದು—೫೨.

ಟೀ|| ಚೆನ್ನಾಗಿಪಣ್ಣಾಗಿರ್ದ ಮಾದಲದಪಣ್ಣ ಒಳಗಿನ ಕೇಸರಮಂ ತೋಡಿತೆಗೆದು [5]ಆ ಅರೆದ ಸುಗಂಧದ್ರವ್ಯಮಂ ಅದರಲ್ಲಿ ತುಂಬಿ ಅದಂ ಪುಟಮನಿಕ್ಕಿತೆಗೆಯಲ್ [6]ಮೆಲ್ಲೊಡೆ ಕರ್ಪೂರ ಸಮನಾಗಿರ್ಪುದು, ಮೆಯ್ಗಂಪೂಸುವೊಡೆ ಸಾದಿಗೆ ಸಮನಾಗಿರ್ಪುದು—೫೩.

ಟೀ|| ಕಸ್ತೂರಿ ಒಂದುಭಾಗೆ, ಶ್ರೀಗಂಧಂ, ಎರಡ ಭಾಗೆ, ಮುಡಿವಾಳಂ ಮೂರುಭಾಗೆ, ಅಗಿಲ್ ನಾಲ್ಕುಭಾಗೆ, ನಖಂ ಆಯ್ದುಭಾಗೆ ಈ ಅಯ್ದುಮಂ ಕ್ರಮವೃದ್ಧಿಯಿಂ ಪೆರ್ಚಿಸಿ ಆ ಭಾಗೆಯಂ ಕೊಂಡು ಅರೆದು ಪುಟವನಿಕ್ಕಿ ಜೇನತುಪ್ಪ ಸಕ್ಕರೆಗಳಂ ಕೂಡಿ ಧೂಪಂಗುಡಲ್ ಉದಯಭಾಸ್ಕರನೆಂಬ ಸಾದಪ್ಪುದು—೫೪.

ಟೀ|| ಬೋಳಂ, ಕಟವೆಯಕ್ಕಿ, ಶ್ರೀಗಂಧಂ, ಅಗಿಲ್, ಕುಂಕುಮಂ ಸಹದೇವಿಯಗಿಡು, ಕಲ್ಹಾರ್, ನಾಗಕೇಸರಂ ಇವಂ ಕ್ರಮದಿಂ ಪೆರ್ಚಿಸಿ, (ಒಂದುಭಾಗೆ, ಎರಡುಭಾಗೆ, ಮೂರುಭಾಗೆ, ಈ ಮರ್ಯಾದೆಯಲ್ಲಿ ಪೆರ್ಚಿಸಿ) ಕೊಂಡು ಇವೆಲ್ಲವುನೊಂದಾಗಿಕೂಡಿ ಅರೆದು ಉರುಳಿಗಳಂಮಾಡಿ

1 ವುದದು ಸಾದೆನಿಸಿತಾನಿಕ್ಕುಂ. 2 ಶಾಲಿ, ಸಾಲಿ. 3 ಅಗಿಲು ತೈಲವೊಂ. 4 ಕೆಂಚಿನ. 5 ಹಿಂದೆ ಪೇಳ್ದ ಬಿಸಿನೀರಲ್ಲರೆದ ಸುಗಂಧದ್ರವ್ಯಮಂ ಈ ತೋಡಿದುದರ ಪೊಳಗೆ ತುಂಬಿ. 6 ಮೇಲೆ.



ಕಂ|| ಮರದರಿಸಿನದ ಕಪಿತ್ಥದ |
ವರುಣದ[1] ಪದ್ಮಕದ ಛಲ್ಲಿಯೊಳ್ ಸಮನಿಪುದಂ ||
ಪರಿಶೋಷಿಸಿ ನೆಲಲೊಳ್ ಬಿ |
ತ್ತರದಿಂದಂ ತೆಗೆಪಿ ಪಂಚಪಲ್ಲವಜಲದೊಳ್ || ೫೬ ||

ಅರೆದಾಸವದಿಂದಂ ಬೋ |
ಳರಸಂ ಲಘು ಪಿಕ್ಕೆಯೆಂಬಿವಂ ಬೆರಸಿ ಮನೋ ||
ಹರಮಾಗಿ ಧೂಪಮಂ ಕುಡೆ |
ಪರಿಭಾವಿಸಿ ಪುಷ್ಪಚಯದಿನದು ಸಾದಕ್ಕುಂ || ೫೭ ||

ಸಿವೆ ರುಜೆ ಸರಳಂ ಶ್ರೀವಾ |
ಸವಗುರು ಸುರದಾರು ಗುಗ್ಗುಳಂ[2]ಕುಂದುರು ಸ ||
ಜ್ಜವೆನಿಪ್ಪೊಂದೊಂದನೆ ಬೇ |
ಱೆವೇಱೆ ಗುಡದೊಡನೆ ಧೂಪಮಿಕ್ಕುಗೆ ವಿಧಿಯಿಂ || ೫೮ ||

ದ್ವಿಗುಣಂ ಗುಡಮಾಗಿರೆ ಬೇ |
ಸಗೆಯೊಳ್ ಮಳೆ[3]ಗಾಲದೊಳ್ ಚತುರ್ಗುಣಯುತ ಮ ||
ಷ್ಟಗುಣಂ ಮಾಗಿಯೊಳೆಂಬಿನೆ |
ಪೊಗೆಗೆಡೆಗೊಟ್ಟಂದು ಸಾದು ತಾಂ ಲೇಸಕ್ಕುಂ || ೫೯ ||

---

ಒಣಗಿಸಿ ಅವಂ ಪುಷ್ಪರಸದಲ್ಲಿ ಕಲಿಸಿ ಮಿದಿದು ಪಿಂದೆ ಪೇಳ್ದ ಮರ್ಯಾದೆಯಲ್ಲಿ ಪುಟಮನಿಕ್ಕಿ ಆದರ್ಕೆ ಕಸ್ತೂರಿಯ ವಾಸನೆಯಿಂ ಚೆನ್ನಾಗಿ ವೇಧಿಸಲ್ ಅದು ಮಹಿಷೀದಳವೆಂಬ ಹೆಸರನುಳ್ಳ ಸಾದಪ್ಪುದು—೫೫.

ಟೀ|| ಮರದರಿಸಿನಂ, ಬೇಲದಕಾಯತಿರುಳ್, ವರುಣಂ, ತಾವರೆಗೆಂಡೆ ಇವಂ ಕತ್ತರಿಸಿ ನೆಲಲ್ಲಿ ಒಣಗಿಸಿ ಹಲಸಿನೆಲೆ, ಅತ್ತಿಯೆಲೆ, ಆಲದೆಲೆ, ಅರಳಿಯೆಲೆ, ಬಸರಿಯೆಲೆ, ಇವಂ ತಂದು ಉದಕದಲ್ಲಿ ಕಷಾಯಂಕಾಸಿ ಆ ಒಣಗಿಸಿದ ದ್ರವ್ಯಂಗಳಂ ಬೇಯಿಸುವುದು—೫೬.

ಟೀ|| ಆ ಬೇಯಿಸಿದುದಂ ತೆಗೆದುಕೊಂಡು ಪುಷ್ಪರಸದಿಂದೆ ಸಣ್ಣನಾಗರೆದು ಪುಟವನಿಕ್ಕಿ ಸಾರಮಂಕೊಂಡು, ಬೋಳರಸಂ, ಪುಷ್ಪಕಾಸೀಸಂ, ಪಿಕ್ಕೆ ಈ ಸುಗಂಧದ್ರವ್ಯಂಗಳಂ ಬೆರಸಿಕೊಂಡು ಚೆನ್ನಾಗಿ ಧೂಪಿಸಿ ಒಳ್ಳಿಯ ಸುಗಂಧಪುಷ್ಪಂಗಳಿಂದೆ ವಾಸನೆಯಂಕುಡಲ್ ಅದು ಒಳ್ಳಿತಪ್ಪ ಸಾದಪ್ಪುದು—೫೭.

ಟೀ|| ಅಣಿಲೆಕಾಯ್, ರುಜೆ, ಸಜ್ಜರಸಂ, ಬೆಲ್ಲವತ್ತಂ, ಅಗಿಲ್, ದೇವದಾರು, ಗುಗ್ಗುಳಂ, ಕಣ್ಣಿಗೆಯಪುಲ್ಲಬೇರ್ ಸುರಹೊನ್ನೆ ಈ ಪೇಳ್ದ ವೃಕ್ಷಂಗಳ ಕೆಚ್ಚಿನತೈಲಮಂ ಬೇಱೆವೇಱೆಕೊಂಡು ಆ ತೈಲಕ್ಕೆ ಕ್ರಮದಿಂದೆ ಬೆಲ್ಲಮಂ ಬೆರಸಿಕೊಂಡು ಧೂಪವಾಸನೆಯಂ ಕುಡುವುದು—೫೮.

ಟೀ|| ಬೇಸಗೆಯಕಾಲದಲ್ಲಿ ಬೆಲ್ಲಮನಿಮ್ಮಡಿಯಾಗಿ ಬೆರಸಿಕೊಳ್ವುದು ಮಳೆಗಾದಲ್ಲಿ ನಾಲ್ಕು

1 ಪದಕದ ಛಲ್ಲಿ. 2 ಕುಂದುರು ಸಜ್ಜವೆನಿಪ್ಪೊಂದನೆವೇಱೆವೇಱೆ. 3 ಕಣ್ಣಗಿಲೆಯ.

ಕಂ|| *ಅರಗಣಿಲೆ ಗುಗ್ಗುಳಂ ಮಾಂ |
ಸಿ ರುಜೆ ನಖಂ ಸಜ್ಜಮಗುರು ಮಳಯರುಹಂ ಕುಂ ||
ದುರು ಜಳಮಿಂದು ಮೃಗಂ ಶ |
ರ್ಕರೆ ಮಧುವಿಂ ಧೂಪಮಿಕ್ಕುಗೆಲ್ಲಾ ದಳಕಂ || ೭೦ ||

(ಕುಂಕುಮಕೇಸರಿಮಾಳ್ಪಕ್ರಮ)

[1]ಕುಸುಮರಸಾರ್ದ್ರಂ ಮತ್ತಿಯ |
ಕುಸುಮಂ ಜಳಮೆಂಬಿವಾಗೆ ಘರ್ಮದೊಳಟ್ಟಂ ||
ದಿಸಲೊಪ್ಪೆ ಕಾಸಿ [2]ಮಳಯರು |
ಹಸಂಭವಾರುಣದೆ ಕುಂಕುಮಂ ಸಮನಿಕ್ಕುಂ || ೭೧ ||

[3]ಮೊಸರ ರಸದೊಳ್ ಕುಸುಂಬೆಯ |
ಪೊಸಪೂವಂ ಕರ್ಚಿ ಗಂಧಮಂ [4]ತೆಗೆದಿರದಾ ||
ಱಸಿ ಖದಿರದ ಸೇವಾಳದ |
ರಸದೊಳ್ ಕುದಿಯಿಸೆ ಬಟುಕ್ಕದಂ ಪುಟವಿಧಿಯಿಂ || ೭೨ ||

---

ಮಡಿಯಂ ಬೆರಸಿಕೊಳ್ವುದು, ಮಾಗಿಯಕಾಲದಲ್ಲಿ ಎಂಟುಮಡಿಯಂ ಬೆರಸಿಕೊಳ್ವುದು, ಒಳ್ಳಿಯ ಪರಿಮಳ[5]ದ್ರವ್ಯಮಂಧೂಪವಾಸನೆಗುಡುವುದು. ಅದು ಉತ್ತಮವಪ್ಪ ಸಾದಪ್ಪುದು—೬೯.

ಟೀ|| ಅರಗು, ಅಣಿಲೆಕಾಯ್, ಗುಗ್ಗುಳಂ ಜಟಾಮಾಂಸಿ, ರುಜೆ, ನಖಂ, ಸಜ್ಜರಸಂ, ಅಗಿಲ್ ಶ್ರೀಗಂಧಂ ಕಣ್ಣಿಗೆಯಪುಲ್ಲಬೇರ್ ಮುಡಿವಾಳಂ ಕರ್ಪೂರಂ ಕಸ್ತೂರಿ, ಸಕ್ಕರೆ, ಜೇನುತುಪ್ಪಂ ಈ ಸುಗಂಧದ್ರವ್ಯಂಗಳಿಂದೆ ಪಿಂದೆ ಪೇೞ್ದ ಪುಟದ ತೈಲಂಗಳ್ಗೆ ಧೂಪವನಿಕ್ಕಲ್ ಒಳ್ಳಿತಪ್ಪ ಸುಗಂಧವಾಸನೆಗಳಪ್ಪುವು—೭೦.

ಟೀ|| ಪುಷ್ಪರಸಂ (೨) ಎರಡುಭಾಗೆ ಮತ್ತಿಯ ಪೂವೊಂದುಭಾಗೆ, ಮುಡಿವಾಳಂ ಒಂದು ಭಾಗೆ, ಇವನೊಂದಾಗಿಕೂಡಿ ಬಿಸಿಲಲ್ಲಿ ಒಣಗಿಸಿ ಶ್ರೀಗಂಧರಜಕುಸುಮಂಗಳಂ ಕೂಡಿ ಸರಿಭಾಗೆಯಾಗಿ ಬೆರಸಿ ಕುಡಲ್ ಅದು ಕುಂಕುಮಮಪ್ಪುದು—೭೧.

ಟೀ|| ಒಳ್ಳೆಯ ಮೊಸರರಸದೊಳ್ ಕುಸುಂಬೆಯ ಪೊಸಪೂವಂ ತಂದು ಚೆನ್ನಾಗಿತೊಳೆದು ಆ ಪೂಗೆ ಒಳ್ಳೆಯ ಪರಿಮಳದ್ರವ್ಯಂಗಳ ವಾಸನೆಯಂಕೊಟ್ಟು ಆ ಪೂವಂ ಒಣಗಿಸಿ ಅದಂ ಖದಿರದ, ಪಾವಸೆಯ ರಸದಲ್ಲಿ ಕುದಿಯಿಂಸಿ ಅದಂ[6]ಪುಟವಿಡುವುದು—೭೨.

---

1 ಈ ಕಂದದ ಹಿಂದೆ ನಿರಂತರವಾಗಿ ಒಂದು ಪ್ರತಿಯಲ್ಲಿ "ಕ್ರಮವೃದ್ಧಿಯಾಗೆ ತಕ್ಕೊ। ಳಮರಿಚಜಾತಿ ಫಳಂಗಳೊಳ್" ಎಂಬ ಕಂದ ಭಾಗವಿದೆ, ಈ ಕಂದದ ಉಳಿದ ಭಾಗವು ಲುಪ್ತವಾಗಿರುವುದು. 2 ಮಳಯ ಸಂಭವ ಸಂಭವ. 3 ಮೊಸರಸದೊಳ್. 4 ತಳಿದಿಱಿಸಿ, ತಳೆದಿರದಾ. 5 ದ್ರವ್ಯಂಗಳ. 6 ಪುಟವನಿಕ್ಕುವುದು.

* ಈ ಧೂಪದಲ್ಲಿ ಹೇಳಿರುವ ಒಂದೆರಡು ಸುಗಂಧದ್ರವ್ಯಗಳ ಮಾರ್ಪಾಡಿನಿಂದ "ಕಾಮಶರ" ವೆಂಬ ಧೂಪವಾಗುವುದೆಂದು ಸಂಸ್ಕೃತ ;ನೈಷಧಕಾವ್ಯದ (೧೮-೩೨)ರ ವ್ಯಾಖ್ಯಾನದಲ್ಲಿ ಹೇಳಿದೆ- ಪುರಸಜಾಭಯಾಲಾಕ್ಷಾನಖಾಬ್ಜಾದಿ ಜಟಾಂಗದ್ಯೈಃ ॥ ಸರ್ವೈಸ್ಸಮಧುಭಿರ್ಧೂಪೋಮತಃ ಕಾಮಶರಾಭಿಧಃ ॥



ಕಂ|| ಮೂರುಡದ ಕರಟದೊಳ್ ಸಂ |
ಚಾರಿಸಿ ಸುಟ್ಟವಱ ಷೋಡಶಾಂಶಾನ್ವಿತ ಕಾ ||
ಶ್ಮೀರರಜಮಾದೊಡಂತದು |
ಸಾರತರಂ ತಾನೆಸಪ್ಪ ಕೇಸರಮಕ್ಕುಂ || ೭೩ ||

ಹಿಮಕರಮೃಗ ಕಾಳಾಗುರು |
ತಮಾಳಜಾತೀ ಫಳಂಗಳೊಂದಂಶಂ ತ ||
ತ್ಸಮಮಾಗೆ ಪೂತಿಕರುಪ |
ಪ್ರಮಿತಾಗುರುವಾಗಿರರೆದು ಮಧುವಿಂದಮದಂ || ೭೪ ||

(ಕಸ್ತೂರಿಯಂ ಮಾಳ್ಪುದು)

ಕುಸುಮರಸಂ ಕಾಡುನುಗ್ಗೆಯ |
ರಸಮುಜಮೂತ್ರಂಗಳೆಂಬಿವಂಕುದಿಯಿಸಿ ಭಾ ||
ವಿಸಿ ಕೇದಗೆಯೆಸಳೊಳ್ ವಾ |
ಸಿಸೆ ಧಾನ್ಯಸ್ಥಾಯಿಮಾಡೆ ಕತ್ತುರಿಯಕ್ಕುಂ || ೭೫ ||

(ಪಚ್ಚಕರ್ಪೂರಮಂ ಮಾಳ್ಪುದು)

ಟಂಕಣಮಂ ಬಿಸಿನೀರಿಂ |
ದಂ ಕಟವೆಯ ಗಂಜಿಯಿಂದಮೆಮ್ಮೆಯ ಪಾಲಿಂ ||
ದಂ ಕೇದಗೆಯಂಕುರದಿಂ |
ದಂ ಕರ್ಚಿ ಬಟುಕ್ಕಂ ಬಿಸಿಲೊಳೊಣಗಿಸಿ ವಿಧಿಯಿಂ || ೭೬ ||

---

ಟೀ|| ಬೆಲ್ಲವತ್ತ್ರದಕಾಯಸಂಪುಟದ ಕರಟದವೊಳಗೆ ಅದಂ ತುಂಬಿ ಮೆಲ್ಲಿರ್ಚಿಂದೆ ಮತ್ತೆ ಪುಟವನಿಕ್ಕಿತೆಗೆದು ಆ ದ್ರವ್ಯದ (೧೬) ಪದಿನಾಱಱಲ್ಲಿ ಒಂದುಭಾಗೆ ಕುಂಕುಮಂ ಬೆರಸಿಕೊಳಲ್ ಅದು ಒಳಿತಪ್ಪ ಕುಂಕುಮಕೇಸರಮಪ್ಪುದು—೭೩.

ಟೀ|| ಕರ್ಪೂರಂ, ಕಸ್ತೂರಿ ಕರಿಯಗಿಲ್, ಕರ್ದಾಳಂ, ಜಾಯಿಫಳಂ ಇವೆಲ್ಲಮಂ ಸಮನಾಗಿಕೊಂಡು ಒಂದುಭಾಗೆ, ಇದಱ ಸಮಾನ ತೊಱೆಹುಲಿಗಿಲಬೀಜಂ ಇವೆರಡಂ ನಾಲ್ಕುತೊಲೆಕ ಪ್ರಮಾಣಮಂ ಮಾಡಿಕೊಂಡು ಅದಂ ಜೇನತುಪ್ಪದಿಂದರೆವುದು—೭೪.

ಟೀ|| ಆ ಅರೆದುದಂ ಕೊಂಡು ಪುಷ್ಪರಸಂ, ಕಾಡುನುಗ್ಗೆಯರಸಂ, ಆಡಿನಮೂತ್ರಂ ಇವಂ ಕೂಡಿಕೊಂಡು ಕುದಿಸಿ ಅದರ್ಕೆ ಕೇದಗೆಯ ಪೂವಿನ ವಾಸನೆಯಂಕೊಟ್ಟು ಕರಡಿಗೆಯಲ್ಲಿ ತುಂಬಿ ಧಾನ್ಯದ ರಾಶಿಯೊಳಗೆ ಕೆಲವುದಿನಮಿರಿಸಿ ತೆಗೆಯಲ್ ಅದು ಕಸ್ತೂರಿಯಪ್ಪುದು—೭೫.

ಟೀ|| ಟಂಕಣದ ಕಾರಮಂ ಬಿಸುನೀರಿಂದೆ ತೊಳೆಯುವುದು ಕಟವೆಯಕ್ಕಿಯ ಗಂಜಿಯಲ್ಲಿ ತೊಳೆವುದು, ಎಮ್ಮೆಯಪಾಲಲ್ಲಿ ತೊಳೆವುದು. ಕೇದಗೆಯ ಬೇರರಸದಲ್ಲಿ ತೊಳೆವುದು ಈ ಪೇೞ್ದ ವಱಿಂದೆ ಬೇಱೆ ಬೇಱೆ ತೊಳೆದು ಬಿಸಿಲಲ್ಲಿ ಒಣಗಿಸುತ್ತುಂ ಬರ್ಪುದು—೭೬.

ಕಂ|| ಪುದಿದೆಯ್ದೆ ಭೂರ್ಜದೊಳ್ ಕುದಿ |
ವ ಬಂಗ್ಡದೊಳ್ ಪಿಱಾಯೆ ನೆಟ್ಟನಾವರ್ತಿಸಿದಂ ||
ತದೞಿೊಳ್ ಕೂಡು ಚತುರ್ಥಾಂ |
ಶದನಿತು ಕರ್ಪೂರವಂನನುಪಮಂ ತಾನಕ್ಕುಂ || ೬೭ ||

(ಇಂಗು ಮಾಡುವಕ್ರಮ)

ಎರಡುಳ್ಳಿ ಹಿಂಗು ನಿಂಬದ |
ತಿರುಳಾಡಿನ ಬೆಣ್ಣೆ ಬೇವಿನೆಣ್ಣೆಯುಂ ಬಿ ||
ತ್ತರದಿಂ ನೆಯ್ ನಿಲೆ ಕುದಿಯಿಸು |
ಗೆ ರಾಮಠಕ್ಕೆ[1]ಲ್ಲ ಮಿಂತಿದುಂ ಸಮನಕ್ಕುಂ || ೬೮ ||

ಪುರಮಿಂಗು ವಿಶ್ವವೊಂದೊಂ |
ದೆರೆಡುಗುಡಂ ಪಂಚಭಾಗಮೇರಂಡಫಳಂ ||
ದೊರೆಕೊಳೆ ಭಾಗಕ್ಷೀರದೊ |
ಳರೆದಾಸವದಿಂದಂ ಪೊರೆಯೆ ಸೆರೆಯಿಂಗಕ್ಕುಂ || ೬೯ ||

ಲಶುನಂ ನಿಂಬಫಳಂ ಹಿಂ |
ಗು ಶುಂಠಿ ಬಿಲ್ವಂ ಪುರಂ ಗುಡಂ ಮಾಷ ಮಿವ ||
ಕ್ಷಿಸಮುದ್ರ ನೇತ್ರ ಹಿಮಕರ |
ರಸ[2]ಸಸಿಚಂದ್ರಾಪ್ತಸಂಖ್ಯೆಯಾಗಿರೆ ತರದಿಂ || ೭೦ ||

ಟೀ|| ಈ ಕ್ರಮದಿಂದೆ ತೊಳೆದು ಒಣಗಿಸಿದ ಆ ಟಂಕಣದ ಕಾರಮಂ ಭುಜಪತ್ರದತೊಪ್ಪೆಯೊಳಗೆ ಕಟ್ಟಿಕುದಿವ ಪಾಲೊಳಗೆ [3]ಅದನಿಕ್ಕಿ ಚೆನ್ನಾಗಿಕಾಸಿ ಅದಂ[4]ತೆಗೆದು ಅದರಲ್ಲಿ (೪) ನಾಲ್ಕಱವೊಂದು [5]ಭಾಗೆ ಒಳ್ಳಿಹಕರ್ಪೂರಂ ಬೆರಸಿಕೊಳಲ್ [6]ಅದು ಶುದ್ಧ ಕರ್ಪೂರವಪ್ಪುದು—೬೭.

ಟೀ|| (೨) ಎರಡುಭಾಗೆ ಬೆಳ್ಳುಳ್ಳಿ, ಇಂಗು ಒಂದುಭಾಗೆ ಕಹಿಬೇವಿನಹಗಿನವೊಂದುಭಾಗೆ ಆಡಿನಬೆಣ್ಣೆ ಒಂದುಭಾಗೆ, ಬೇವಿನೆಣ್ಣೆ ಒಂದುಭಾಗೆ [7]ಇವೆಲ್ಲವಂ ಕೂಡಿಕೊಂಡು ಅವೞವೞತೈಲ [8]ಮಾಱುವನ್ನಂ ಕುದಿಯಿಸಲ್ ಅದು ಒಳ್ಳಿತಪ್ಪ ಇಂಗಿಗೆ ಸಮಾನಮಪ್ಪುದು—೬೮.

ಟೀ|| (೩) ಮೂಱುಭಾಗೆ ಇಂಗು, ಒಂದು ಭಾಗೆ ಶುಂಠಿಯ ಚೂರ್ಣಂ, (೨) ಎರಡುಭಾಗೆ ಬೆಲ್ಲಂ (೫) ಅಯ್ದುಭಾಗೆ ಔಡಲಕನಬೀಜದ ತಿರುಳ್, ಇವಂ ಕೂಡಿ ಆಡಿನ ಪಾಲಿನಲ್ಲಿ ಅರೆದು [9]ಅದಂ ಪುಷ್ಪರಸದಿಂದೆ ಕಲಸಿ ಬೇಯಿಸಲ್ ಅದು ಅಡುಗೆಯ ಇಂಗಪ್ಪುದು—೬೯.

ಟೀ|| ಉಳ್ಳಿ (೨) ಎರಡುಭಾಗೆ, ಶುಂಠಿಯಚೂರ್ಣಂ ಒಂದುಭಾಗೆ, ಬೆಲ್ಲವತ್ತದ ಕಾಯ ತಿರುಳ್, (೬) ಆಱುಭಾಗೆ, ಕರ್ಪೂರವೊಂದುಭಾಗೆ, ಬೆಲ್ಲವೊಂದುಭಾಗೆ, ಉದ್ದಿನಹಿಟ್ಟು ಎಂಟು ಭಾಗೆ ಈ ಪ್ರಮಾಣಿನ ಭಾಗಸಂಖ್ಯೆಯಿಂಕೂಡಿಕೊಂಡು—೭೦.

1 ಮಿಗಿಲಿಂಗಿಂತಿದುಂ ಸಮನಕ್ಕುಂ. 2 ಚಂದ್ರಾಪ್ತವಾಪಂದು. 3 ಅದಂ ಹಾಯ್ಕಿ. 4 ಇೞಿಹಿ. 5 ಪಾಲ್. 6 ಅದೆಲ್ಲಂ. 7 ಇವಂ ಕೂಡಿ. 8 ತೈಲಮಾಱುವಂತೆ, ತೈಲಮಾಱುವನ್ನೆವರಂ. 9 ಮದ್ಯರಸ.



ಕಂ|| ಅರೆದಾಡಿನ ಪಾಲೊಳದಂ |
ಪೊರೆದಾಸವದಿಂದೆ ತೀವಿ ಸೂರೆಯೊಳ್ ತಿಂಗ ||
ಳ್ವರೆಗಂ ಧಾನ್ಯದ ರಾಸಿಯೊ |
ಳಿರಿಸುಗೆ ವಾಣಿಜದ ಹಿಂಗು[1]ಕಡುಲೇಸಕ್ಕುಂ || ೭೧ ||

ಟೀ|| ಅದಂ ಆಡಿನ ಹಾಲಿನಲ್ಲಿ ನುಣ್ಣಗಾಗಿ ಅರೆದು ಪುಷ್ಪರಸದಲ್ಲಿ ಕಲಸಿ ಸೋರೆಯಕಾಯ ಗುಂಡಿಗೆಯೊಳಗೆ ತುಂಬಿ ಅದಂ ಧಾನ್ಯದರಾಶಿಯೊಳಗೆ ತಿಂಗಳ್ವರೆಗಂ ಪೂೞ್ದಿರಿಸಿ ತೆಗೆಯಲ್ ವಾಣಿಜ್ಯದ ಹಿಂಗು ಚೆನ್ನಪ್ಪದು—೭೧.

*ಗದ್ಯಂ

ಇದು ಸಮಸ್ತಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀಮತ್ಕವಿತಾವಿಲಾಸತನೂಜಂ
ಶ್ರೀಮಚ್ಚಾವುಂಡರಾಯ
ವಿರಚಿತಮಪ್ಪ

## ಲೋಕೋಪಕಾರದೊಳ್

ಗಂಧಯುಕ್ತಿ ಕ್ರಮಂ
[2]ಸಪ್ತಮಾಧಿಕಾರಂ

1 ಖರ. 2 ಸಪ್ತಮಾಶ್ವಾಸಂ.

*ಒಂದು ಓಲೆಯಪ್ರತಿಯಲ್ಲಿ ಈ ವಿಷಯವಿದೆ- ಶ್ರೀಪಾರ್ಶ್ವನಾಥಾಯನಮೋಸ್ತು, ಗುರುಭ್ಯೋನಮಃ ಶ್ರೀಮತುಶಾಲಿವಾಹನಶಕ ೧೫೫೪ನೆಆಂಗಿರಸ ಸಂವತ್ಸರ ವೃಶ್ಚಿಕಮಾಸ ೧೬ನೆಯ ಪೂರ್ಣಿಮೆಯ ಶುಕ್ರವಾರದಲ್ಲಿ ಜ್ಯೋತಿಷರ ಅಪ್ಪಯ್ಯನು ಅಭ್ಯಾಸನಿಮಿತ್ತವಾಗಿ ಬರೆದ ಜನೋಪಕಾರ, ಪ್ರಸ್ತಕಕ್ಕೆ ಮಂಗಲಮಸ್ತು ಭದ್ರಂಭೂಯಾತ್ ಶ್ರೀ ಶ್ರೀ ಶ್ರೀ. ಭಗ್ನಪೃಷ್ಠಕಟಿ ಗ್ರೀವಾಬದ್ಧದೃಷ್ಟಿರಧೋಮುಖಂ। ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯೇತ್ ॥ ತಪ್ಪಿದ್ದೊಡೆ ತಿದ್ದಿಕೊಂಬನುತ್ತಮಪುರುಷನು.

# ಅಷ್ಟಮಾಧಿಕಾರಂ

## ೮. ಸೂಪಶಾಸ್ತ್ರಂ

ಕಂ|| ಭುವನದೊಳನ್ನಮಯಂ ಪ್ರಾ |
ಣವೆಂಬ ಪೂರ್ವೋಕ್ತಮಾರ್ಗದಿಂ ಪ್ರಾಣಿಹಿತಾ ||
ರ್ಥವಿದೆಂದು ಸೂಪಶಾಸ್ತ್ರ |
ಪ್ರವೀಣ(ಣ)ದನೆಸೆಯೆ ಪೇಳ್ದ ಕಾವ್ಯವಿಳಾಸಂ | || ೧ ||

ಕ್ರಮಮಱಿದಕ್ಕಿಯನಿಂಬಾ |
ಗಿ ಮೂಱುಸೂೞ್ ಕರ್ಚಿ ಪೊಯ್ದೊಡೆ[ಕುದಿವೆ]ಸಱೊಳು ||
ತ್ತಮಮಕ್ಕುಂ ಪದದೊಪ್ಪಲ್ |
ಸಮರಸನಾಗಿರ್ಕು ಕಟಿಯನೆಱೆಯಲ್ಕನ್ನಂ || ೨ ||

ತುಲಸಿಯ ಲುಂಗಕಷಾಯದ |
ಜಲದೊಳ್ ಗೋವನಧಿಕಬೂದಿಯ ಜಲದೊಳ್ ||
ಕಲವೆಯ ಸಮನಿಸು ತಾಂ ಮೊಸ|
ರೊಳೆ ಮೇಣ್ ಕಲಸಿದೊಡೆ ಪಲವುದೆವಸಂ ನಿಲ್ಕುಂ || ೩ ||

ಉ|| ತಾವರೆಯಕ್ಕಿಯಂ ಕಟವೆಯಕ್ಕಿಯುಮಂ ಸಮನಾಗಿ ಕೂಡಿಕೊಂ |
ಡಾವಿನ ದುಗ್ಧದಿಂ ಪಧಿಸಿ ಪಾಯ್ಸಲನಾ ಘಟಮಂ ಕೊರಲ್ವರಂ ||
ತೀವಿದ ನೀರೊಳಿಟ್ಟನಿಬಕಾಲಮುಮಿರ್ದೊಡದಿರ್ದನಿತ್ತು ಕಾ |
ಲಾವಧಿಯಾಗಿ ಉಂಡ ಮನುಜಂಗಿನಿತುಂ ಪಸಿವಾಗದಾವಗಂ || ೪ ||

---

ಟೀ|| ಲೋಕದಲ್ಲಿ ಅನ್ನಮೇ ಪ್ರಾಣವೆಂದು ಪೂರ್ವಾಚಾರ್ಯರ್ ಪೇಳುತ್ತಿರಲಾಗಿ ಪ್ರಾಣಿಹಿತಾರ್ಥಮಾಗಿ ಸೂಪಶಾಸ್ತ್ರಮಂ ಪೇಳ್ವುದೆಂದು ಕಾವ್ಯವಿಳಾಸಂ ಪೇಳತೊಡಗಿದಂ—೧.

ಟೀ|| ಚೆನ್ನಾಗಿಭಳಸಿದ ಅಕ್ಕಿಯಂ ತಿಳಿನೀರಲ್ಲಿ ಮೂಱು ಬಾರಿ ತೊಳೆದು ಮರಳಿಕಾಯ್ದ ಎಸಱೊಳಗಾ ಅಕ್ಕಿಯಂ ಪೊಯ್ದು ಪದದಲ್ಲಿ ಬಾಗುವುದು. ಓಗರಮೊಳ್ಳಿತ್ತಪ್ಪುದು, ಪದದಪ್ಪಿ ಮೆಲ್ಲಿತ್ತಾಗಲ್ ಅಂಬಿಲವನೆಱೆದು ಬಾಗಿದೊಡೆ ಓಗರಂ ಪದನಾಗಿ ಚೆನ್ನಪ್ಪುದು—೨.

ಟೀ|| ತೊಳಸಿಯಪತ್ರೆ, ಮಾದಲದಯೆಲೆ ಇವಂ ಉದಕದೊಳ್ ಹಾಯ್ಕಿ ಕಷಾಯಂಕಾಸಿ ಆ ಕಷಾಯದ ಉದಕವಾಗಲಿ, ಅಲ್ಲವಾದೊಡೆ ಗೋವನಮರದ ತಿಗುಡಂತಂದು ಸುಟ್ಟಬೂದಿಯಂ ಮಾಡಿ ಆ ಬೂದಿಯಂ ಉದಕದಲ್ಲಿ ಕದಡಿ ತಿಳಿಯಲಿಟ್ಟುಶೋಧಿಸಿ ಆ ಉದಕವಾಗಲಿ ಈ ಯೆರಡಱೊಳಗೆ ದೊರಕಿದ ಉದಕಮಂ ಎಸಱನಿಟ್ಟು ನಿಚ್ಚಳಿಸಿದ ಅಕ್ಕಿಯಂತೊಳೆದು ಆ ಯೆಸಱಲ್ಲಿ ಪೊಯ್ದು ಹದದಲ್ಲಿ ಓಗರಮಂಮಾಡಿ ಆ ವೋಗರಕ್ಕೆ ಒಳ್ಳಿತ್ತಾದ ಮೊಸರಂ ಸರಿಭಾಗೆಯಲ್ಲಿ ಕಲಸೋಗರಮಂ ಕಲಸಿದೊಡೆ ಆ ಕಲಸಿದೋಗರಂ ಪಲವುದಿನಮಿರ್ದೊಡಂ ಚೆನ್ನಾಗಿರ್ಪುದು—೩.

ಟೀ|| ತಾವರೆಯಕ್ಕಿ ಕಟವೆಯ (ಭಕ್ತದ) ಕ್ಕಿ ಈ ಎರಡಂ ಚೆನ್ನಾಗಿ ಭಳಿಯಿಸಿ ಸರಿಮಾಡಿಕೊಂಡು ಪಸುವಿನಪಾಲಲ್ಲಿ ಪಾಯಸವನಟ್ಟು ಆ ಅಟ್ಟಂತಹ ಮಡಕೆಯಂ ಕಂಠಪ್ರಮಾಣದ ತಣ್ಣೀರಿನೊಳಿರಿಸಿ ಆ ವುದಕದೊಳದು ಎಷ್ಟುದಿನಮಿರ್ಪುದು ಅಷ್ಟುದಿನಪರ್ಯಂತಂ ಪಸಿವಾಗದು—೪.



(ಸತ್ವಕಾರಿಯಾಹಾರಂ)

ಮ|| ಜವೆಯಂ ಕ್ಷೀರವಿಮಿಶ್ರಮಾಗಿರಿಸಿ ಮುನ್ನಂ ನಿಸ್ತುಷಂಮಾಡಿ ಕೊಂ |
ಡವನಿಂಬಾಗಿ ಬಳಿಕ್ಕೆ ಮೆಲ್ಪಿರಿದು ಚಾತುರ್ಜಾತಕಂಗೂಡಿ ಸ |
ಣ್ಣವದಪ್ಪಂತಿರೆ ಪಿಟ್ಟುಗುಟ್ಟಿ ಸಿತದೊಳ್ ಮೇಣ್ ತುಪ್ಪದೊಳ್ ತಿಂಗೆ ಸ |
ತ್ವವದತ್ಯುತ್ತಮಸತ್ವಕಾರಿಯೆನಿಕುಂ ಶ್ರೀ ಶಿಷ್ಟಕಲ್ಪದ್ರುಮಾ || ೫ ||

(ಘೃತಪೂರಿತಂ)

ಕಂ|| ಪದನಱಿದುಮ್ಮಗೆಯಂ ಕಾ |
ಸಿದ ಪಾಲೊಳಗಿಕ್ಕಿ ತೆಗೆದು ಕೊಂಡವನರೆದಾ ||
ಜ್ಯದೊಳಡುವುದು ಘೃತಪೂರಿತ |
[1]ಮದಲ್ತೆ ಸಂಸಾರಸಾರಮಮೃತಾಹಾರಂ || ೬ ||

ಮ|| ಮೃದುವತ್ಯುಷ್ಣಮೆನಿಪ್ಪ ಮಂಡಗೆಯ[2]ನರ್ಧಾವರ್ತಿಯಾಗಿರ್ದುದು |
ಗ್ಧದೊಳಾಜ್ಯಂ ಬೆರಸಿಕ್ಕಿದಂ(ಥಾ)ಬಳಿಕೆ ಚಾತುರ್ಜಾತಕಂ ನಾಳಿಕೇ ||
ರದ ತೋಯಂ ಸಿತಮೆಂಬಿವಂ ಕಲಸಿ ಮಣ್ಣೊಳ್ ಭಾಂಡವಂ ಮೆತ್ತಿ ಸು |
ತ್ತಿದ ಕಿರ್ಚಿಂ ಸುಡೆ ತಾನೆ ಖಂಡಘೃತಪೂರಂ ಸಾರಮಾ ಮಾಲ್ಕಿಯಿಂ || ೭ ||

(ಪೂರಿಗೆ)

ಕಂ|| ಮಿದಿದಿಂಬಾಗಿರೆ ಖರ್ಜೂ |
ರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ||
ಪುದಿದಡುಗೆ ಕಣಿಕದೊಳ್ ತು |
ಪ್ಪದೊಳದು ರಸಭರಿತಮಪ್ಪ ಪೂರಿಗೆಯಕ್ಕುಂ || ೮ ||

---

ಟೀ|| ಜವೆಯಂ (ವು)ಉರ್ಯ್ತವುಡುಮಿಲ್ಲದಂತೆ ಭಳಸಿ ಆ ಅಕ್ಕಿಯಂ ಪಾಲೊಳಗೆ ನನೆಯಿಕ್ಕಿ ಅವಂ ಒಣಗಿಸಿ ಪುರಿದು ಕೇಸರಂ, ಲವಂಗದಿಗುಡು, ಆ ಯೆಲೆ, ಏಲಕ್ಕಿ ಇವನೆಲ್ಲಂ ಕೂಡಿಕೊಂಡು ಸಣ್ಣನಾಗಿ ಹಿಟ್ಟುಗುಟ್ಟಿ ಆ ಹಿಟ್ಟಂ ಸಕ್ಕರೆಯಲ್ಲಾಗಲಿ, ತುಪ್ಪದಲ್ಲಾಗಲಿ ಕಲಸಿಕೊಂಡು ಮೆದ್ದೊಡೆ ಬಹು ಸತ್ವಮಪ್ಪುದು—೫.

ಟೀ|| ಜವೆಯಂ ಚೆನ್ನಾಗಿ ಭಳಸಿಕೊಂಡು ಒಳ್ಳಿತ್ತಾಗಿ ಕಾದ ಪಾಲೊಳಗೆ ನನೆಯಿಕ್ಕಿ ಅವಂ ತೆಗೆದು ಸಣ್ಣನಾಗಿ ಅರೆದು ತುಪ್ಪದೊಳಗೆ ಉಂಡೆಯಂಮಾಡಿಹಾಯ್ಕಿ ಬೇಯಿಸಲ್ ಅವು ಘೃತಪೂರಿತಮೆನಿಸಿಕೊಳ್ವವು, ಅವು ಸಂಸಾರದೊಳಗೆ ಅಮೃತಾಹಾರಮೆನಿಸಿಕೊಳ್ವವು—೬.

ಟೀ|| ಮೃದುವಾಗಿ ಚೆನ್ನಾಗಿ ಬಿಸಿಯಾಗಿರ್ದ ಮಂಡಿಗೆಯಂ ಒಳ್ಳಿತ್ತಾಗಿ ಕಾದ ಪಾಲೊಳಗೆ ತುಪ್ಪಮಂ ಬೆರಸಿ ಅದಱೊಳಾ ಮಂಡಿಗೆಯಂ ನನೆಯಿಕ್ಕಿ, ನಾಗಕೇಸರಂ, ಲವಂಗದತಿಗುಡು, ಆಯೆಲೆ, ಏಲಕ್ಕಿ ಇವಂ ಚೂರ್ಣಂಮಾಡಿ ಎಳನೀರಂ ಸಕ್ಕರೆಯಿಂ ಕಲಸಿ ಮಡಕೆಯೊಳಗೆ ತುಂಬಿ ಆ ಮಡಕೆಯ ಸುತ್ತಂ ಮಣ್ಣಂ ಮೆತ್ತಿ ಸುತ್ತಂ ಕಿರ್ಚನೊಟ್ಟಿ ಪದನಾಗಿ ಬೇಯಿಸಿ ತೆಗೆಯಲ್ ಅದು ಖಂಡಘೃತಪೂರಮೆನಿಸಿಕೊಳ್ವದು—೭.

ಟೀ|| ಖರ್ಜೂರದ ಹಣ್ಣಿನೊಳಗೆ ತೆಂಗಿನಕಾಯಂ ಸಣ್ಣನಾಗೊರೆದು ಕುಸರಿಯಂಮಾಡಿ ಆ ಕುಸರಿ,ಸಕ್ಕರೆ, ಆ ಖರ್ಜೂರದಪಣ್ ಇವಂ ಚೆನ್ನಾಗಿ ಮಿದಿದು ಕಲಸಿಕೊಂಡು ಅದಂ ಕಣಿಕಮೊ

---

1 ಮದಲ್ತು ಸಂಸಾರಸಾರಕಮೃತಾ. 2 ನರ್ಧಾನ್ವಿತಿ.

(ಪಾಲವುಗು)

*ಕಂ|| ನೆಱೆವೊರಸುಗೆ ಕಾವಲಿಯಂ |
ಕಿಱುಕುಸಲೆಯ ಬೇರೊಳಕ್ಕೆ ಕೊಳಗುಳಿಕೆಲೆಯೊಳ್ ||
ತಱುಪೆರ್ಮ್ಮೆಯ ಪಾಲಂ ಬೞಿ |
ಕೆಱೆದಟ್ಟೊಡೆ ಮೃದುವೆನಿಪ್ಪ ಪಾಲವುಗಕ್ಕುಂ || ೯ ||

(ಕ್ಷೀರದುಂಡೆ)

ಚಂ||[1] ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮುವುರ್ದ್ಧಮಪ್ಪಿನಂ |
ಮಱುಗಿಸಿ ಬಂಧಮಾಗೆ ಸಿತಮಂ ಘೃತಮಂ ಬೆರಸಿಟ್ಟು ಮತ್ತದಂ ||
ಪೆಱವಱೊಳೇಂ ತ್ರಿಜಾತಕದೊಳೊಂದಿರೆ ವೇಧಿಸಿ ಕಮ್ಮಿತಾಗೆ ಪಾಂ |
ಗಱೆದಮೃತೋಪಮಾನಮಿದು ತಾನೆನೆ ಮಾಳ್ಪುದು ಕ್ಷೀರದುಂಡೆಯಂ || ೧೦ ||

*ಕಂ|| ಅರೆದುದ್ದಿನ ಬೇಳೆಯ ನೊಂ |
ದಿರೆ ಮೊಸರಧಿ(ಡಿ)ನೀರೊಳಿಂಗು ಜೀರಗೆ ಕೊತ್ತುಂ ||
ಬರಿ ಮೆಣಸಲ್ಲಮಿವಿನಿತಂ |
ಬೆರಸಿಡ್ಡಲಿಗೆಯ[2]ನಡಲ್ಕೆ ಕಂಪಂ ಕುಡುಗುಂ || ೧೧ ||

ಳಗೆ ಹೂರಣಮಾಗಿ ತುಂಬಿ ತುಪ್ಪಮಂ ತೊಡೆಸು ಪೂರಿಗೆಯನಡಲ್ ಅದು ರಸಭರಿತಪೂರಿಗೆಯೆನಿಸಿಕೊಳ್ವುದು—೮.

ಟೀ|| ಕಾವ[3]ಲಿಯಂ ಕಿಱುಕುಸಾಲೆಯ [4]ಬೇರನಾದೊಡಂ ಕೊಳುಗುಳಿಕೆಯ ಸೊಪ್ಪನಾದೊಡಂ ಚೆನ್ನಾಗಿ ಒರಸಿ ಕಡೆಗಂದಿಯೆಮ್ಮೆಯ ಪಾಲಂ ಕಾದ ಕಾವಲಿಯಮೇಲೆ ಪೊಯ್ದು ಅಡಲು [5]ಅದು ಮೃದವಾಗಿ ಹಾಲವುಗಪ್ಪುದು—೯.

ಟೀ|| (ಕಱೆವೆಮ್ಮೆಯ) ಕಡೆಗಂದಿಯೆಮ್ಮೆಯ ಪಾಲೊಳಗೆ ತುಱುವೆಯ ಬೇರಂ ತಂದು ಕುಟ್ಟಿಹಾಯ್ಕಿ ಆ ಪಾಲಂ ಅರ್ಧಮಪ್ಪಪರ್ಯಂತಂ ಕಾಸಿ ಬಂಧವಾದದಱೊಳಗೆ ತುಪ್ಪಮಂ ಸಕ್ಕರೆಯಿಂ ಬೆರಸಿಕೊಂಡು ಅದಱೊಳಗೆ ಲವಂಗದ ತಿಗುಡು, ಆ ಪತ್ರೆ, ಏಲಕ್ಕಿ ಇವು ಮೂಱಂ ಚೂರ್ಣಮಂ ಮಾಡಿಕೊಂಡು ಆ ಗಟ್ಟಿಯಾದ ಪಾಲೊಳಗೆ ಕಲಸಿ ಪರಿಮಳವಾದುದಂ ತೆಗೆದು ಉಂಡೆಗಳಂ ಮಾಡಲ್ ಅವು ಅಮೃತಕ್ಕೆ ಸಮಾನವಾದ ಪಾಲುಂಡೆಗಳಪ್ಪುವು—೧೦. .

ಟೀ|| ಉದ್ದಿನ ಬೇಳೆಯಂ ಚೆನ್ನಾಗಿ ತೊಳೆದು ಅರೆದು ಮೊಸರ ತಿಳಿನೀರಲ್ಲಿ ಕಲಸಿ ಇಂಗು ಜೀರಗೆ, ಕೊತ್ತುಂಬರಿ, ಮೆಣಸು, ಅಲ್ಲಂ ಇವಂ ತದಕುಟ್ಟಿ ಹಾಯ್ಕಿ ಕಲಸಿ ಇಡ್ಡಲಿಗೆಯನಡಲ್ ಪರಿಮಳವಾಗಿ ಸ್ವಾದುವಪ್ಪುದು—೧೧.

1 ಮುಱುವೆಯ...... ಪೆರ್ಮ್ಮೆಯ ದುಗ್ಧಮನರ್ಧ...... ಪಾಲೊಳುಂಡೆಯಂ. 2 ನಡೆಕಂಪಮಿಂಪುಮಂ ತಳೆದಿರ್ಕುಂ. 3 ಲೆಗೆ. 4 ಬೇರನಾಗಲಿ. 5 ಅವು.

* ಈ ಗುರ್ತಿಸಿರುವ ಪದ್ಯಗಳು ಮಾತ್ರ ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥದ ಆದಿಯಲ್ಲಿವೆ, ಬಳಿಕ ಅದರಲ್ಲಿ ಸ್ವತಂತ್ರವಾದ ಸೂಪಶಾಸ್ತ್ರದ ಗದ್ಯಭಾಗವಿದೆ.



(ಲಡ್ಡುಗೆ)

*ಉ|| ಕಾಸಿದಪಾಲೊಳಿಕ್ಕಿ ಮೊಸರಂ ನೆಱೆ[1] ಪೊಟ್ರಿರೆ ಮತ್ತಮಿತ್ರೆಯಂ |
ಕಾಸಿ ಘೃತಾನ್ವಿತಂ ಕಲಮಚೂರ್ಣಮನಿಕ್ಕಿ ಬಱಿಕ್ಕೆ ಸೀರೆಯೊಳ್ ||
ಮಾಸರಮಾಗೆ ಸೇವಗೆಯನೊತ್ತಿ ಸಿತೋಕದಿಂದೆ ಮತ್ತದಂ |
ಕಾಸಿಸಿ ಮಾಱ್ಕೆ ಲಡ್ಡುಗೆಯನೀಕ್ಷಜದಿಂ ಜಯಬಂಧುನಂದನಾ || ೧೨ ||

ಕಂ|| ಬದರಿಯ ಫಲಮಂ ಮೇಣ್ ಚಿಂ |
ಚದ ಚಿಗುರಿಂ ಕೂಡಿ ಪುದಿದ ಸಜ್ಜಿಗೆಯಿಂ ಮಾ ||
ಡಿದ ಸೇವಗೆಯಂ ಘೃತಶೀ(ಸಿ) |
ತದಿ ನೊಯ್ಯನೆ ತೆಗಪಿ ಮಾಡುವುದು ಲಡ್ಡುಗೆಯಂ || ೧೩ ||

ಮ|| ಅರೆದಿಂಬಾಗಿರೆ ಬೆಂದ ಪೋಳಿಗೆಗಳಂ ತಚ್ಚೂರ್ಣಪಂಚಾಂಶಮಾ |
ಗಿರೆ ಖರ್ಜೂರಮನಲ್ಲದಂದೆಱದ ಪಣ್ಣಂ ದ್ರಾಕ್ಷೆಯಂ ಮತ್ತೆ ಶ||
ರ್ಕರೆಯಂ ಪೊಯ್ದು ಸಿತಾಂಬುವಿಂ ತೆಗಪಿ ಚಾತುರ್ಜಾತಕಂಗೂಡಿ ಕ |
ರ್ಪ್ಪುರದಿಂ ವೇಧಿಸಿ ಖಂಡಲಡ್ಡುಗೆಗಳಂ ಮಾಳ್ಕೆಂದುಮಿಾ ಮಾಳ್ಕೆಯಿಂ || ೧೪ ||

ಚಂ|| ಕಣಿಕಮನಾಜ್ಯದಿಂ ತೊಡೆದು[2]ವೋದಿಸಿ ದಿದ್ದವಮವಾಗೆ ಪೊಯ್ದು ಬ |
ಲ್ಕಣಿತನದಿಂದಮೊತ್ತಿ ಮಿದಿದಾಮಿಷದಾಕೃತಿಯಾಗಿಕೂಡಿ ಕೊಂ ||
ಡೊಣಗಿಸಿದಿಂಬಱಿಕ್ಕೆ ಚಣಕೋದಕದಿಂ ತೆಗಪಿಟ್ಟನೊಂದು ಬಿ |
ನ್ನಣಮೆನಲಯ್ದೆ[3]ಮೆಚ್ಚೊಡಡುಗಾಗದು? ಗಂತದಱಿಂದಮುಗ್ಗಳಂ || ೧೫ ||

ಟೀ|| ಕಾಸಿದ ಪಾಲೊಳಗೆ ಮೊಸರಂ ಹಾಯ್ಕಿ ಅದು ಕೂಡಿ ಮೊಸರಂತಾದೊಡೆ ಅದಱೊಳಗೆ ಒಳ್ಳೆಯ ತುಪ್ಪಮಂ ಕಾಸಿಪೊಯ್ದು ಕಲವೆಯ ಅಕ್ಕಿಯಹಿಟ್ಟುಮಂ ಬೆರಸಿಕೊಂಡು ಬೇಯಿಸಿ ಒಳ್ಳಿತ್ತಾದ ಮಡಿಸೀರೆಯಮೇಲೆ ಆ ಬೆಂದ ಹಿಟ್ಟಂ ಸೇವಗೆಯನೊತ್ತಿ ಸಕ್ಕರೆಯನೀರಿಂದೆ ಪಾಕಮಂ ಮಾಡಿಕೊಂಡು ಆ ಸೇವಗೆಯಂ ಹಾಯ್ಕಿ ಕಲಸಿಕೊಂಡು ಲಡ್ಡುಗೆಯಂ ಮಾಡುವುದು—೧೨.

ಟೀ|| ಎಱನಕಾಯ ರಸಮನಾದೊಡಂ, ಹುಣಿಸೆಯ ಚಿಗುರ ರಸಮನಾದೊಡಂ ಪೊಯ್ದು ಸಜ್ಜಿಗೆಯಂ ಕುಟ್ಟಿ ಸೇವಗೆಯಂ ಪೊಸೆದು ಮುಂಚಿತವಾಗಿ ತುಪ್ಪದಲ್ಲಿ ಬೇಯಿಸಿ ಸಕ್ಕರೆಯಿಂದೆ ಪಾಕಂಮಾಡಿ ಸೇವಗೆಯಂ ಕಲಸಿ ಲಡ್ಡುಗೆಯಂ ಮಾಡುವುದು—೧೩.

ಟೀ|| ಒಳ್ಳೆಯ ಸೊಜ್ಜಿಗೆಯಂ ಮಿದಿದು ಮಾಡಿದ ರೊಟ್ಟಿಗಳಂ ಅರೆದು ಚೂರ್ಣಂಮಾಡಿ ಆ ಚೂರ್ಣದ ಅಯ್ದಱಲ್ಲಿ ಒಂದುಭಾಗೆ ಖರ್ಜೂರದ ಹಣ್ಣಾದೊಡಂ ಅಲ್ಲಾ ಎಱದಹಣ್ಣು ಬಂತ ನಾದೊಡಂ ಅಲ್ಲಾ ದ್ರಾಕ್ಷೆಯ ಹಣ್ಣನಾದೊಡಂ ಬೆರಸಿ ಸಕ್ಕರೆಯ ನೀರಿಂದಂ ಹದಮಾಡಿಕೊಂಡು ನಾಗಕೇಸರಂ, ಲವಂಗದತಿಗುಡು, ಆ ಪತ್ರಂ, ಏಲಕ್ಕಿ(ಇವು ಚಾತುರ್ಜಾತಕಂ)ಇವಂ ಕೂಡಿ ಚೂರ್ಣಂ ಮಾಡಿ ಕಲಸಿ ಕರ್ಪೂರಮಂ ವಾಸಿಸಿ ಉಂಡೆಗಳಂ ಮಾಡಲ್ ಅವು ಖಂಡ ಲಡ್ಡುಗೆಗಳೆನಿಸಿಕೊಳ್ಳುವು—೧೪.

ಟೀ|| ಕಣಿಕಮಂ ತುಪ್ಪದಲ್ಲಿ ಕಲಸಿಕೊಂಡು ಚೆನ್ನಾಗಿ ಗಟ್ಟಿಯಾಗಿ ಕುಟ್ಟಿ ಆ ಕಣಿಕಮಂ ಕೆಯ್ಯಲ್ಲಿ ಚೆನ್ನಾಗಿ ಮಿದಿದು ಮಾಂಸದಾರಮಂ ಮಾಡಿ ಅದನೊಣಗಿಸಿಟ್ಟು ಮತ್ತೆ ಅದಂ ಕಡ

1 ಪೊಟ್ರಿಸಿಮಂತಮತ್ರೆಯಂ. 2 ನೋಹಿಸಿ. 3 ಮೇಲೊಗರ ಮಾಗಡುಗಂತದ?

*ಈ ಗುರ್ತಿರುವ ಪದ್ಯ ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥದಾದಿಯಲ್ಲಿದೆ.

ಕಂ|| ಹುರಿದಿಟ್ಟ ಬಟ್ಟಗಡಲೆಯು |
ನರೆದ[1]ಲ್ಲಂದುದ್ದ ನರೆದು ಮತ್ಸ್ಯಾಕೃತಿಯಿಂ ||
ವಿರಚಿಸಿ ಸರ್ಷಪತೈಲದೊ |
[2]ಳರಿದಾಳದೊಳಿಕ್ಕೆ ಮಾನಸರಿಯಂ ಪಡೆಗುಂ || ೧೬ ||

(ಸಂಡಗೆಗಳ್)

ಎರವುರಿಯಂ ಮೂಱುದಿನಂ |
ಬಱಗಂ [3]ಕೇಳ್ ಕೞಯಲಿಕ್ಕಿ ಜವೆ ತಿಲಮುದ್ದಿಂ ||
ಗರಿಸಿನಮೆಂಬಿವನಿಂಬಾ |
ಗರೆದಿಕ್ಕಿ ಬೞಕ್ಕೆ ಮಾಟ್ಕೆ ಸಂಡಗೆ[4]ಗಳುಮಂ || ೧೭ ||

ಮೊಳೆಯುಲ್ಲಮನುಪ್ಪಿನೊಳಂ |
ಪುಳಿಯೊಳಮಲೆದಿಟ್ಟು ದಾಸವಣದರಲಂ ತಂ ||
ದಳೆಯೊಳರೆದಲ್ಲಿ ಕಲಸಿದೊ |
ಡೆಳಸುಗುಮುದು ಚೆಲ್ವುವೆತ್ತ ಪವಳದ ಕುಡಿಯಂ || ೧೮ ||

(ಬಾಡನಡುವುದು)

ದೊರೆಕೊಳೆ ಬಾೞೆಯ ದಿಂಡಿನ |
ತಿರುಳೊಳ್ ಮತ್ಸ್ಯಾಕ್ಷಿ ಮೂಲಮಂ ಸುಣ್ಣಮುಮಂ ||
ಬೆರಸಿ ಹದನಱದು ಕುದಿಯಿಸೆ(ಸಿ) |
ಪರಿಕಿಸುವೊಡೆ ಪೆಱವು ಬಾಡುಮೋಂಗೆಯ್ದಪುವೋ || ೧೯ ||

ಲೆಯ ಉದಕದಲ್ಲಿ ನನೆಯಿಕ್ಕಿ ತೆಗೆದು ಮನಸ್ಸಿಗಿಚ್ಛೆಯಾದಂತೆ ಮೇಲೋಗರಮಂ ನಡಲ್ ಮಾಂಸದಂತೆ ದೇಹಕ್ಕೆ ಬಲಮಂ ಕುಡುವುದು—೧೫.

ಟೀ|| ಬಟ್ಟಗಡಲೆಯಂ ಪುರಿದು ಮಾಡಿದ ಚೂರ್ಣಮಂ ಕಲಸಿಯಾದೊಡಂ ಅಲ್ಲಾ ಉರ್ದ ನರೆದಾದೊಡಂ ಇವಱಲ್ಲಿ ಮತ್ಸ್ಯಾಕೃತಿಯಂ ಮಾಡಿ ಸಾಸಿವೆಯೆಣ್ಣೆಯಲ್ಲಿ ಬೇಯಿಸಲ್ ಅವು ಮತ್ಸ್ಯದ ಗುಣಮಂ ಕುಡುವುದು—೧೬.

ಟೀ|| ಎಲಹುರಿಯ ಸೊಪ್ಪಂ ಮೂಱುದಿನಮಂಬಲಿಯಲ್ಲಿ ನನೆಯಿಕ್ಕಿ ಜವೆ, ಎಳ್ಳು, ಉದ್ದು ಈ ಮೂಱಂ ಅಂಬಿಲದ ತಿಳಿಯಲ್ಲಿ ಅರೆದು ಇಂಗು, ಅರಿಸಿನದ ಚೂರ್ಣಮಂ ಕಲಸಿಕೊಂಡು ಅವಱಲ್ಲಿ ಸಂಡಗೆಯಂ ಮಾಡುವುದು—೧೭.

ಟೀ|| ಎಳೆಯುಲ್ಲಮಂ ಸೊ(ತೊ)ಪ್ಪೆಯಂ ಸುಲಿದು ಉತ್ತರಿಸಿ ಉಪ್ಪು ನಿಂಬೆಯಹಣ್ಣಿನ ರಸದಲ್ಲಿ ಹರವೊತ್ತಿ ಕೆಂಪಿನದಾಸವಾಳದ ಹೂವಂ ತಂದು ಮಜ್ಜಿಗೆಯಲ್ಲರೆದು ಆ ಅಲ್ಲದೊಳಗೆ ಕಲಸುವುದು. ರುಚಿಯಾಗಿ ಹವಳದಕುಡಿಯಂತೆ ವರ್ಣಮಾಗಿ ಚೆನ್ನಾಗಿ ಅಪ್ಪುದು—೧೮.

ಟೀ|| ಎಳೆಬಾೞೆಯದಿಂಡಂ ಉತ್ತರಿಸಿ ಹೊನ್ನಗನ್ನೆಯಬೇರಂ, ಸುಣ್ಣಮಂ ಹಾಯ್ಕಿ ಹದನಱತು ಬೇಯಿಸಿ ಸಂಬಾರವನಿಕ್ಕಲ್ ಚೆನ್ನಾಗಿ ಮೃದುವಾಗಿ ರುಚಿಯಪ್ಪುದು—೧೯.

1 ನಲ್ಲದುದ್ದ. 2 ಪುರಿದೋಳಿಯೊಳಿಕ್ಕೆ ? 3 ಕೇಳ್ ಉಳಿಯ. 4 ಗಳನುಂ.



ಕಂ|| ಅಳೆಯೊಳ್ ತೆಗೆಪಾದರಳೆಯ |
ತಳಿರಂ ಮಾರುತದ ಪತ್ರಿಯೊಳ[1]ಗಾಯುಮುಮಾ ||
ಜಳದೊಳ್ ಗೋಕ್ಷೀರಾನ್ವಿತ ಮಾ |
ಮಳಕಾಮ್ರ ಫಳಂಗಳಾವಗಂ ಮೃದುವಕ್ಕುಂ || ೨೦ ||

ತೆಗಟ ಪೊಸಸುಣ್ಣದೊಳ್ ಮು |
ನ್ನುಗುರ್ವಲ್ಲಿ(ರ್ವೇಲಿ)ಯನೆಳೆಯ ಪುಣಿಸೆಯೆಲೆಗಳ ನಾವುಂ ||
ಡಗೆಯಂ ಮುತ್ತಗದ ಹೂವಂ |
ಒಗೆದಂದಾ ಬಾಡನಡುಗೆ ಬೞಕಂತವಱೊಳ್ || ೨೧ ||

ಅರಿಸಿನದ ಕಷಾಯದೊಳಾ |
ವರೆಯೆಲೆಯಂ ಮುಗುಳನಕ್ಕೆ ಕಿಱುಸಾಲೆಯ ಬೇ ||
ರ್ವೆರಸು ಕುದಿಯಿಸಿ ಬೞಕ್ಕದ|
ನರೆದಡುಗೆರವುರಿಯ ಬಾಷ್ಪಮಂ ಮಸುಳಿಸುಗುಂ || ೨೨ ||

(ವಿಷಂಗಳಂ ತೆಗೆವುದು)

ಹುಲಿಗಿಲ ಬೀಳೆಗಳಂ ನೇ |
ಱಲ ಬೀಜಂ ಕಡಸಿಗೆಯನ ಬೇರಂ ಸುಣ್ಣಂ ||
ಜಲಮಿವಱಂ ತೆಗೆಯಲ್ ವಿಷ |
ಮಱಗುಂ ಬೞಕವಱ ತೊವ್ವೆಯಡೆ ಸವಿವಡೆಗುಂ || ೨೩ ||

ಟೀ|| ಮಜ್ಜಿಗೆಯೊಳಗೆ ಅರಳಿಯ ತಳಿರಂ ನನೆಯಿಕ್ಕಿ ಕದಡಿ ಆ ರಸದಲ್ಲಿ ಬೆಲ್ಲವತ್ತ್ರದ ಎಳೆಗಾಯಂ ಉಪ್ಪುಗೂಡಿ ಪೊಯ್ವುದು. ಉದಕದೊಳಗೆ ಆವಿನಪಾಲಂ ಬೆರಸಿಕೊಂಡು ನೆಲ್ಲಿಯಕಾಯ್, ಮಾವಿನಕಾಯ್, ಉಪ್ಪು ಸಹ ಎಸಱಲ್ಲಿ ಪೊಯ್ಯಲ್ ಅವು ವರ್ಣಂಗಿಡದೆ ಮೃದುವಾಗಿ ಸ್ವಾದಪ್ಪುವು—೨೦.

ಟೀ|| ಬೆಳ್ಳಡಕಿಲ ಸೊಪ್ಪಂ, ಪುಣಿಸೆಯೆಳೆಯ ಚಿಗುರಂ, ಅವುಡಲದೆಳೆಯ ಚಿಗುರಂ, ಮುತ್ತ ಪೂವಂ ಇವಂ ಮೇಲೋಗರಮನಡುವೊಡೆ ಪೊಸಸುಣ್ಣಮನುದಕದಲ್ಲಿ ಕದಡಿ ಆ ನೀರೊಳಗೆ ಆ ಸೊಪ್ಪುಗಳಂ ಬೇಱಬೇಱ ಹಾಯ್ಕಿ ಕುದಿಸಿ ಆ ನೀರಂ ತೆಗೆದು ಆ ಸೊಪ್ಪಂ ಒಳ್ಳೆಯ ನೀರಲ್ಲಿ ತೊಳೆದು ಅವಂ ಹುಳಿ ಸಿಹಿ ಮೊದಲಾಗಿ ಮನಸ್ಸಿಗೆ ಬಂದ ಮೇಲೋಗರಂಗಳಂ ಮಾಡುವುದು—೨೧.

ಟೀ|| ಅರಿಸಿನಮಂ ನೀರಲ್ಲಿ ಕದಡಿ ಕಷಾಯಮಂಮಾಡಿ ಆ ವುದಕದೊಳಗೆ ಅವರೆಯ ಸೊಪ್ಪಾದೊಡಂ ಅಲ್ಲಾ ಅದಱ ಮುಗುಳನಾದೊಡಂ ಹಾಯ್ಕಿ ಪೊರಸಿ ತೊಳೆದು ಆ ಸೊಪ್ಪಂ ಮುಗುಳುಮಂ ಕಿಱುಕುಸಾಲೆಯ ಬೇರಂ ಹಾಯ್ಕಿ ಕುದಿಸಿ ಅವಂ ತೆಗೆದುಕೊಂಡು ಅರೆದು ಮೇಲೋಗರಮನಡಲ್ ಆ ಯೆಲಹುರಿಯ ಮೇಲೋಗರದ ಮರ್ಯಾದೆಯಲ್ಲಿ ಸ್ವಾದಪ್ಪುದು—೨೨.

ಟೀ|| ಹುಲಿಗಿಲ ಬೀಜಂ, ನೇಱಲಬೀಜಂ, ಕಡಸಿಗೆಯ ಬೇರ್, ಸುಣ್ಣಂ ಇವಂ ಉದಕದೊಳಗೆ ಹಾಯ್ಕಿ ಆ ಬೀಜಂಗಳಂ ಸಹಿತಂ ಕುದಿಸಿಕೊಂಡು, ಆ ವುದಕಮಂ ತೆಗೆದು ಆ ಬೀಜಂಗಳಂ ಒಳ್ಳೆಯ ಉದಕದಲ್ಲಿ ತೊಳೆದು ಅರೆದು ತೊವ್ವೆಯನಡಲ್ ಅವಱ [2]ಪಮ್ಮುದಂಬೋಗಿ ಸ್ವಾದಪ್ಪುದು—೨೩

1 ಗಾಯಂಮಾಜಳ. 2 ಪದಹೋಗಿ, ಮುದಂಪೋಗಿ.

(ಕೈಪ ತೆಗೆವುದು)

ಕಂ|| ಮಿಗಿಲೆನಿಸುವ ಪೊಸಸುಣ್ಣದೊ |
ಳುಗುರ್ವಲ್ಲಿಯ ಬೇರನಿಕ್ಕೆ ಗರ್ದುಗಿನ ಕೊನೆಯಂ ||
ತೆಗಪಿ ಪುಳಿಯಡುಗೆ ಮೇಣ್ ಸಂ |
ಡಗೆಯಿಡುಗಾತೆಱದಿನವಱ ಬೀಜಂಗಳುಮಂ || ೨೪ ||

ಸಮನಿಸೆ ವಕುಳದ ಬೇರಿಂ |
ದವಕ್ಕೆ ಮೇಣ್ ಗುಂಜೆ ನುಗ್ಗೆ ಯಜ್ಜುಗೆಯೆಂಬಿಂ ||
ತಿವಱಿಂದವಕ್ಕೆ ಬೇವಿನ |
ತೊವಱಿಂ ತೆಗಪಿದೊಡೆ ಕೈಪೆಗೆಟ್ಟನಿದಕ್ಕುಂ || ೨೫ ||

ನಿಯತ ಮೊಡಗೂಡಿ ನಿಶೆ ಪ |
ತ್ರಿಯ ಬೇರ್ ಪೊಸಸುಣ್ಣಮೆಂಬಿವಿನಿತಱೊಳ್ ಲೊ ||
ಕ್ಕಿಯ ಕೊನೆಯನಕ್ಕೆ ಮೇಣ್ ಕ |
ಳ್ಳಿಯ ಕೊನೆಯುಂ ತೆಗಪಿ ಪುಳಿಯನಡೆ ಸವಿಯಕ್ಕುಂ || ೨೬ ||

*ಚಂ|| ದರಸಿಗೆ ಸೆಳ್ಳನಾರಮುದುವಳ್ಳಿಗೆ ಬಾೞೆ(ಗೆ)ಯ ಸೊಪ್ಪು ಕಳ್ಳಿಗಾ |
ವರೆ ಲಶುನದ್ವಯಕ್ಕವರೆ ಗೋಳುವೆಗುಪ್ಪು ಶತಾವರೀಫಲ ||
ಕ್ಕೆರದೆಲೆ ಸೂರಣಕ್ಕೆಲೆ ಕುಮಾರಿ(ಗೆ)ಯ ಕಳ್ಳಿಯ ಬೂದಿ ಯ(ಯೆ)ಕ್ಕೆಗೆ |
ಳ್ಳೆರದೆಳಗಾಯ್ಗೆ ಪಥ್ಯೆ ಲವಣಕ್ಕೆ ತೊಳಂಚೆ ವಿಷಾಪಹಾರಕಂ || ೨೭ ||

ಟೀ|| ಹೊಸಸುಣ್ಣಂ, ಬೆಳ್ಳಡಕಿಲ ಬೇರ್ ಇವಂ ಉದಕದಲ್ಲಿ ಹಾಯ್ಕಿ ಎಸಱನಿಟ್ಟು ಗರ್ದುಗಿನ ಕೊನೆಯಂ, ಅವಱ ಬೀಜಮಂ ಹಾಯ್ಕಿ ಕುದಿಸಿ ಆ ಕುಡಿಯಂ, ಬೀಜಮಂ ತೆಗೆದುಕೊಂಡು ಚೆನ್ನಾಗಿ ಉದಕದಲ್ಲಿ ತೊಳೆದು ಆ ಕುಡಿಯಂ ಹುಳಿಯಾಗಿ ಮೇಲೋಗರಮಂ ಅಡುವುದು. ಆ ಬೀಜಮಂ ಅರೆದು ಸಂಡಗೆಯನಿಡಲ್ ಅವಱ ಮದಂಗಳ್ ಕೆಟ್ಟು ಚೆನ್ನಾಗಿ ಅಪ್ಪುವು—೨೪.

ಟೀ|| ಬೇವಿನಸೊಪ್ಪಿನ ಕಹಿ ಹೋಗುವುದಕ್ಕೆ ವಕುಳದ ಉದಕದೊಳ್ ಹಾಯ್ಕಿ ಸಂಗಡ ಕುದಿಸಿದೊಡೆ ಅವಱ ಕಹಿ ಕಿಡುವುದು, ಮತ್ತಂ ಗುಂಜೆಯಬೇರಂ, ಅಜ್ಜುಗೆಯ ಬೇರನಾದೊಡಂ ಆ ಬೇವಿನ ಸೊಪ್ಪಿನೊಡನೆ ಹಾಯ್ಕಿ ಕುದಿಸಿದೊಡೆ ಅವಱ ಕಹಿ ಕಿಡುವುದು—೨೫.

ಟೀ|| ಅರಿಸಿನ, ಹತ್ತ್ರಿಯಬೇರ್, ಹೊಸಸುಣ್ಣಂ ಇವಱ ಕೂಡೆ ಲೊಕ್ಕಿಯ ಕುಡಿಯನಾದೊಡಂ ಹಾಯ್ಕಿ ಕುದಿಸಿ ತೆಗೆದುಕೊಂಡು ಉದಕದಲ್ಲಿ ಚೆನ್ನಾಗಿ ತೊಳೆದು ಹುಳಿಮೇಲೋಗರಮಂ ಅಡಲ್ ಅವಱ ಮದಗೆಟ್ಟು ಸ್ವಾದುವಪ್ಪುದು—೨೬.

ಟೀ|| ದರಸಿಗೆ ಸೊಪ್ಪಿಗೆ ಚೆಳ್ಳನಾರ್, ಅಮರದುವಳ್ಳಿಗೆ ಬಾೞೆ(ಗೆ)ಯ ಸೊಪ್ಪು, ಕಳ್ಳಿಯ ಕೊನೆಗೆ ಅವರೆ ಸೊಪ್ಪು, ಬೆಳ್ಳುಳ್ಳಿ ನೀರುಳ್ಳಿಗೆ ಅವರೆಸೊಪ್ಪು, ಕಿಱುಗೋೞಿಗೆ ಉಪ್ಪು, ಅಸಡಿಯ ಕಾಯ್ಗೆ ಎಱದದೆಲೆ, ಸೂರಣಕ್ಕೆ ಮೀಳೆಯದೆಲೆ, ಲೋಯಿಸರಕ್ಕೆ ಕಳ್ಳಿಯಬೂದಿ, ಎಕ್ಕೆಗೆ ಎಳ್ಳು, ಎಱದದ ಎಳಗಾಯ್ಗೆ ಅಂಬಿಲಂ, ಉಪ್ಪಿಗೆ ತೊಳಸಿ. ಇವಕ್ಕೆ ಈ ಪ್ರಕಾರದಲ್ಲಿ ಔಷಧಂಗಳಂ ಹಾಯ್ಕಿ ಕುದಿಸಲ್ ಅವಱ ಮದಕೆಚ್ಚು(ಟ್ಟು) ಚೆನ್ನಾಗಿ ಪೋಪುದು—೨೭.

* ಈ ಗುರ್ತಿರುವ ಪದ್ಯ ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥದಾದಿಯಲ್ಲಿದೆ.



ಕಂ|| ಸೂರಣದ ಗಡ್ಡೆಯಂ ಸೌ |
ವೀರದೆ ಮೇಣ್ ಕಲಸಿಕೊಂಡು ಪುಳಿಸೆಯ ಚಿಗುರಿಂ ||
ನೀರೊಳ್ ಕುದಿಸಲ್ಕದು ಸಂ |
ಹಾರಿಕುಮಂತದಱ ವಿಷಮನಾಕ್ಷಣದಿಂದಂ || ೨೮ ||

ಜಲರುಹಕಂದಾನ್ವಿತಮಿರು |
ಳೆಲೆಯೊಳ್ ಸಲೆ ಕತ್ತ್ರಿಗಿರಿಯ ಬೂದಿಯ ತಳಿದೂ ||
ಱಲೊಳಂಬಿನೆ ಕುದಿಯಿಸೆ ನಾಂ |
ಗುಲಿಕಮನಡುಗಾಜ್ಯದಿಂ ರಸಾಯನಮಕ್ಕುಂ || ೨೯ ||

*ಕುದಿಯಿಸುಗೆ ಸುಣ್ಣದಿಂ ಕೈ |
ಪೆದೊಂಡೆಯಂ ಕೋಕಿಲಾಕ್ಷಿವೆರಸು ಸಿತೇರಂ ||
ಡದ ತೊಟ್ಟಯಿಲೆಗಳಿಂ ಱಡ |
ಲದ ಕಾಯಂ ತೆಗಪುಗವಱ ಕೈಪೆಗಳಱಿಗುಂ || ೩೦ ||

*ಚಂ|| ಕನಕದ ಕಾಯನೊಂದುದಿವಸಂ ತಿಱಿದಟ್ಟುಱೆ ಸುಣ್ಣದೂಱಲೊಳ್ |
ದಿನಮಿರಿಸಿಟ್ಟು ಕರ್ಚಿ ಗುರುಗುಂಜೆ ಪುನರ್ನವಿ ಪದ್ಮಪತ್ರಮೆಂ ||
ಬಿನಿತುಮನಿಕ್ಕಿ ಸುಣ್ಣದೊಳವಂ ಪದಪಿಂ ತೆಗಪುತ್ತೆ ಮತ್ತಮಾ |
ವಿನ ಘೃತದಿಂದೆ ತಾಳಿಸಿ ರಸಾಯನಮಾಗಡುಗಾವ ಬಾಡನಂ || ೩೧ ||

ಟೀ|| ಸೂರಣದ ಗಡ್ಡೆಯನುತ್ತರಿಸಿ ಅಂಬಿಲದೊಳಗೆ ನನೆಯಿಕ್ಕಿ ತೆಗೆದು ಹುಣಿಸೆಯ ಚಿಗುರಂ ಕೂಡಿಸಿ ಕುದಿಸಿದೊಡೆ ಸೂರಣದ ತುಱಿಸು ಪೋಪುದು—೨೮.

ಟೀ|| ಕತ್ತ್ರಿಗಿರಿಯ ಬಳ್ಳಿಯಂ ಸುಟ್ಟು ಬೂದಿಯಂ ನೀರೊಳ್ ಕದಡಿ ಊಱಲಿಟ್ಟು ತಾವರೆಯಗಡ್ಡೆಯಂ ಆ ವುದಕದೊಳ್ ಎಸಱನಿಟ್ಟು ಯಿಂದಿನಗಡ್ಡೆಯಂ ಹಾಯ್ಕಿ ಕುದಿಯಿಸಿ ತೆಗೆದು ತುಪ್ಪದಲ್ಲಿ ಬೇಯಿಸಿ ಮೇಲೋಗರಮಂ ಮಾಡಲ್ ಅವಱ ವಿಷಂ ಕೆಟ್ಟು ಚೆನ್ನಾಗಿ ಅಪ್ಪುದು—೨೯

ಟೀ|| ಕಹಿ ದೊಂಡೆಯಕಾಯನುತ್ತರಿಸಿ ಸುಣ್ಣದ ನೀರಿನಲ್ಲಿ ಕುದಿಸಿದೊಡೆ ಅದಱ ವಿಷಂ ಕಿಡುಗುಂ, ಕೊಳಗುಳಿಕೆ, ಅವುಡಲದ ಸೊಪ್ಪು, ತೊಟ್ಟಯಿಲೆ ಇವಂ ಕೂಡಿ ಉದಕದಲ್ಲಿ ಎಸಱಿಟ್ಟು ಆ ಯೆಸಱೊಳಗೆ ಕಹಿಪಡವಲದ ಕಾಯಂ ತದಗುಟ್ಟಿ ಹಾಯ್ಕಿ ಕುದಿಸಲ್ ಕಹಿ ಕಿಡುವುದು—೩೦.

ಟೀ|| ಮದ್ದು ಗುಣಿಕೆಯ ಕಾಯುಮಂ ತದಕುಟ್ಟಿ ಸುಣ್ಣದನೀ(ರೊಳ್)ರಂ ಕದಡಿ ಒಂದು ದಿನಮೂಱಲಿಟ್ಟು ತೆಗೆದು ಚೆನ್ನಾಗಿ ತೊಳೆದು ಗುರುಗುಂಜಿಯ ಸೊಪ್ಪು, ಬಿಳಿಯ ಗಣಜಿಲೆ ಸೊಪ್ಪು, ತಾವರೆಯ ಸೊಪ್ಪುಮಂ ತಂದು ಸುಣ್ಣದನೀರಲ್ಲಿ ಕದಡಿ ಆ ಸೊಪ್ಪುಮಂ ಕಾಯುಮಂ ಹಾಯ್ಕಿ ಕುದಿಸಿ ಕಾಯಂ ತೆಗೆದು ಆಕಳ ತುಪ್ಪದಿಂದೆ ತಾಳಿಸಿ ಮನಸ್ಸಿಗೆ ಬಂದ ಮೇಲೋಗರಮು ನಡುವುದು. ಅದು ಸ್ವಾದುವಾಗಿರ್ಪುವು—೩೧.

* ಈ ಗುರ್ತಿರುವ ಪದ್ಯಗಳು ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥವಾದಿಯಲ್ಲಿವೆ.

(ಫಲರಸಂಗಳ ದ್ರವಣಂ)

ಕಂ|| ಕಸುಗಾಯಂ ಘೃತದೊಳ್ ಗುಡ |
ರಸದೊಳ್ ಮೇಣ್ ಮಧುವಿನೊಳಗೆ ತನಿವಣ್ಣಂ ನೋ ||
ಯಿಸದೆ ಕಿಱಿದಿರಿಸೆ ಚೂತಾ |
ದಿ ಸಮಸ್ತ ಫಲಂಗಳೆನಿತುಕಾಲಮುಮಿರ್ಕುಂ || ೩೨ ||

ಗುಡಮಾ ಮರಿಚಮುಮಂ ತೊಡೆ |
ದಿಡು ಮಾವಿನಕಾಯನದಱ ಪಣ್ಣಂ ಬಿಸಿಲೊಳ್ ||
ತೊಡೆದಿಡು ಸೈಂಧವಮಂ ತಾ |
ನೊಡಗರಗಿ ನವೀನಚೂತರಸಮಾಗಿರ್ಕುಂ || ೩೩ ||

ವಿಸರಿಃ ಟಂಕಣ ಪೋಲೆಯ |
ಮಸಿಯೆಂಬಿವನೊರಸಿ ಮಾತುಲುಂಗದ ಪಣ್ಣಂ ||
ಬಿಸಿಲೊಳ್ ಪಸರಿಸೆ ತದ್ದ್ರವ |
ಮೊಸರ್ಗುಮಶೇಷಂ ಸರಸ್ವತೀಮುಖತಿಲಕಾ || ೩೪ ||

*ಪಲಸಿನ ತೊಳೆ(ಳೆ)ಗಳ ನಱಸೇ |
ರಿಲ ಕೊನೆ ಕರ್ಪೂರಮೆ[1]ಣ್ಣೆಯೆಂಬಿನಿತಿವಱಿಂ ||
.ಕಲಸಿ ಕಡುಬಿಸಿ[2]ಲೊಳವನಿರಿ |
ಸಲೊಡಂ ದ್ರವಿಯಿಸುಗುಮಚ್ಚರಸಮಪ್ಪಿನೆಗಂ || ೩೫ ||

*ಚಂ|| ಸುಲಲಿತ ಚಂಚಪುಷ್ಪಮನದಲ್ಲದೊಡೊಂದಿರೆ ಚಿತ್ರಮೂಲಮಂ |
ಮೆಳಸುಮನಲ್ಲ ದೊಂ(ದ)ದೆಳಯ ಬಾಟೆಯ [3]ಕಾಯನದಲ್ಲದಂದು ಮೇ ||
ಣೆಳಯ ಕಱಂಕೆ ನೇಱಲೆಲೆ ಯೆಂಬಿವ[4]ನಿಂಬಿನೆ ಪೂಸಿ ಘರ್ಮದೊಳ್ |
ಕಳೆದೊಡೆ ಬೆಚ್ಚರಂ ಸುಲಿದ ಬಾಟೆಯ ಪಣ್ ದ್ರವಿಯಿಕ್ಕುಮಾವಗಂ || ೩೬ ||

ಟೀ|| ಆವುದೊಂದು ಮಾವು ಮೊದಲಾದ ಮಿಡಿಗಾಯ್ಗಳಂ ತುಪ್ಪದೊಳಗೆ ಹಾಯ್ಕಿ ಇಡುವುದು. ಮಾವಿನ ತನಿವಣ್ಣಂ ಬೆಲ್ಲದ ನೀರೊಳಾದೊಡಂ ಜೇನತುಪ್ಪದೊಳಾದೊಡಂ ಇವಱೊಳಗೆ ಹಾಯ್ಕಿ ಇಡಲ್ ವರ್ಣಸ್ವಾದುಗಿಡದೆ ಪಲವುದಿನಂ ಚೆನ್ನಾಗಿರ್ಪುದು—೩೨.

ಟೀ|| ಮಾವಿನಕಾಯಂ ಕೆತ್ತಿ ಬೆಲ್ಲಮಂ ಮೆಣಸಂ ಕೂಡಿ ತೊಡೆದು ಬಿಸಿಲೊಳಿಟ್ಟೊಡೆ ಅದಱ ರಸಂ ಕರಗುವುದು. ಅದೇ ಮಾವಿನ ಪಣ್ಣಂ ಸುಲಿದು ಸೈಂಧವಲವಣಮಂ ತೊಡೆದು ಬಿಸಿಲೊಳಿಡಲ್ ಅದು ದ್ರವಿಸಿ ರಸಂ ಚೆನ್ನಾಗಿ ಬರ್ಪುದು—೩೩.

ಟೀ|| ಮಾದಳದ ಕಾಯಂ ಎರಡು ಪೋಳಾಗಿ ಕುಯ್ದು ಟಂಕಣಖಾರಂ ಓಲೆಯ ಮಸಿಯುಮಂ ಕೂಡಿಕೊಂಡು ತೊಡೆದು ಬಿಸಿಲಲ್ಲಿ ಇಡಲ್ ಆ ಕಾಯಲ್ಲಿ ರಸಮೆಲ್ಲಂ ದ್ರವಿಸಿ ರಸಮಾಗಿರ್ಪುದು—೩೪.

ಟೀ|| ಹಲಸಿನ ಹಣ್ಣಿನ ತೊಳೆಗಳಂ ಬಿಡಿಸಿ ನಾಯ್ನೇಱಿಲ ಕೊನೆ, ಕರ್ಪೂರಂ, ಎಳ್ಳೆಣ್ಣೆಯಂ ಕೂಡಿ ಕಲಸಿ ಬಿಸಿಲಲ್ಲಿ ಇಡಲ್, ಆ ತೊಳೆಗಳೆಲ್ಲಂ ಕರಗಿ ರಸಮಪ್ಪುದು—೩೫.

ಟೀ|| ಸುಲಿದ ಬಾಟೆಯ ಪಣ್ಗೆ ಪುಣಿಸೆಯ ಪೂವನರೆದು ತೊಡೆವುದು, ಚಿತ್ರಮೂಲದ

1 ಣ್ಣೆಯೆಂದಿಂತಿವಱಿಂ. 2 ಲೊಳಿರಿಸೆ ವ। ಹಿಲಕಮುದ್ರವಿ. 3 ಕಾಯುಮನಲ್ಲ. 4 ನೊಂದಿರೆ.
* ಈ ಗುರ್ತಿರುವ ಪದ್ಯಗಳು ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥದಾದಿಯಲ್ಲಿವೆ.



*ಕಂ|| ಅರನೇಱಲ ಪಣ್ಗಳ ನಿ |
ಕ್ಷುರಸದೊಳಂಬಾಗಿ ತೊಡೆ(ಳೆ)ದು ಘರ್ಮದೊಳಿಡುಗ ||
ಚ್ಚರಿಯೆನೆ ತತ್ಕ್ಷಣದಿಂದವ |
ಱ ರಸಂ ದ್ರವಿಯಿಸುಗುಮಾವಗಂ ಬುಧಬಂಧೂ || ೩೭ ||

*ಟಂಕಣ ಖಾರಂ ಕರ್ಪೂ |
ರಂ ಕನಕದ [1]ಬಿತ್ತು ಜಾದಿಯೆಲೆ ಯಿವನರೆದೆ ||
ತ್ತಂ ಕೂಡಿದೊಡ(ತೊಡೆ)ದು ತತ್ಫಲ |
ಸಂಕುಲಮಂ ಬಿಸಿಲೊಳಿಡಲೊಡಂ ದ್ರವಿಯಿಸುಗುಂ || ೩೮ ||

(ಶರ್ಕರೆ ಮಾಡುವ ಕ್ರಮಂ)

ವರ ನೀಲೋತ್ಪಲಕಂದಮ |
ನರೆದವಱೊಳ್ ಪಂಚಭಾಗದನಿತಂ ಗುಡಮಂ ||
ಬೆರಸಿ ಕುದಿಯಿಸಿದೊಡದು ಶ |
ರ್ಕರೆಯಕ್ಕುಂ ವಿಬುಧ ಕಲ್ಪವೃಕ್ಷನ ಮತದಿಂ || ೩೯ ||

(ಸುವಾಸನೆ ತುಪ್ಪ ಮಾಡುವ ಕ್ರಮಂ)

ಕುದಿಸಿ ಕೊಳೆದುಪ್ಪಮಂ ಕುದಿ |
ದ ದುಗ್ಧದೊಳ್ ಬೆಣ್ಣೆಗೊಂಡು ಕಾಸಿದೊಡಂ ಮೇಣ್ ||
ಸದಗುಪ್ಪೆ ಬೆರೆದದಂ ಕಾ |
ಸಿದೊಡಂ ಕಸ್ತೂರಿಯ ಗಂಧಮಂ ಗೆಲಲಕ್ಕುಂ || ೪೦ ||

ಬೇರಂ ಮೆಣಸನರೆದು ತೊಡೆವುದು. ಎಳೆಯ ಬಾಟೆಯ ಕಾಯನರೆದು ತೊಡೆವುದು. ಎಳೆಯ ಗಱಿಕೆ ನೇಱಲ ಎಲೆಯ ನರೆದು ತೊಡೆವುದು. ಇವಱೊಳ್ ದೊರಕಿದುದಂ ಪಣ್ಗೆ ತೊಡೆದು ಬಿಸಿಲೊಳಗೆ ಇಡಲ್ ಅವು ಕರಗಿ ರಸಮಪ್ಪುವು—೩೬.

ಟೀ|| ನೇಱಲಪಣ್ಗಳ್ಗೆ ಕಬ್ಬಿನಪಾಲಂ ತೊಡೆದು ಬಿಸಿಲಲ್ಲಿಡಲ್ ದ್ರವಿಯಿಸಿ ರಸಂ ಬರ್ಪುದು—೩೭.

ಟೀ|| ಅರನೇಱಲ ಪಣ್ಗಳ್ಗೆ ಟಂಕಣ ಖಾರಂ, ಕರ್ಪೂರಂ, ಮದ್ದುಗುಣಿಕೆಯ ಕಾಯ ಬೀಜಂ, ಜಾದಿಯೆಲೆ ಇವನರೆದು ಆ ಪಣ್ಗಳ್ಗೆ ತೊಡೆದು ಬಿಸಿಲೊಳೊಣಗಿಸಲ್ ಅವು ದ್ರವಿಸಿ ರಸಮಪ್ಪುವು—೩೮.

ಟೀ|| ಕರಿಯ ನೆಯ್ದಿಲ ಗಡ್ಡೆಗಳಂ ತಂದು ಅರೆದು ಅದಱ ಅಯ್ದು (ಅಲ್ಲ ಒಂದು) ಭಾಗೆ ಬೆಲ್ಲಮಂ ಬೆರಸಿಕೊಂಡು ಅಡಲ್ ಸಕ್ಕರೆಯಪ್ಪುದು—೩೯.

ಟೀ|| ನಾಱುವ ತುಪ್ಪಮಂ ಕರಗಿಸಿ ಕುದಿವ ಪಾಲೊಳ್ ಪೊಯ್ದು ಹೆಪ್ಪಂ ಕೊಟ್ಟು ಮೊಸರಂ ಕಡೆದು ಬೆಣ್ಣೆಯಂ ತೆಗೆದುಕೊಂಡು ಕಾಸಲ್ ತುಪ್ಪಂ ಚೊಕ್ಕನಪ್ಪುದು. ಅಲ್ಲವೆ ನಾಱುವ ತುಪ್ಪದೊಳಗೆ ಸಬ್ಬಸಿಗೆ(ಯಂ)ಯೊಳ್ ಹಾಯ್ಕಿ ಕಾಸಲ್ ಆ ತುಪ್ಪದ ನಾತಂ ಕೆಟ್ಟು ಕಸ್ತೂರಿಯ ವಾಸನೆಯಂತಹ ತುಪ್ಪಂ ಅಪ್ಪುದು—೪೦.

1 ಬೀಜ, ಗೊಟ್ಟೆ.

*ಕಂ|| ಸಮನಾಗಿ ಕೂಡಿ ಪೊಸತು |
ಪ್ಪಮೆಣ್ಣೆ ಮೊಸರಳೆಗಳೆಂಬಿವಂ ಧಾನ್ಯಕಚೂ ||
ರ್ಣಮನಿಕ್ಕಿ ಕಾಸಿದಂದು |
ತ್ತಮಗಂಧಂ ತಾನೆ ನಿಪ್ಪ ತುಪ್ಪಮದಕ್ಕುಂ || ೪೧ ||

ಗುಡದಿಂದೆಳ್ಳೆಣ್ಣೆಯ ನರೆ |
ಗುದಿಯಿಸಿ ಬೆಳೆದಿರ್ದ ಬೆಟಿಲ ತಿರುಳೊಳ್ ಬಱಕಂ ||
ತದಱ ಸಮನಾಜ್ಯಮಂ ಕೂ |
ಡಿದೊಡದು ಲೇಸಪ್ಪ ತುಪ್ಪಮಪ್ಪುದು ಪುಸಿಯೇ || ೪೨ ||

(ಒಳ್ಳೆ ಬೆಣ್ಣೆ ಮಾಡುವ ಕ್ರಮಂ)

ಎರಡೊಂದಪ್ಪಿನಮಿಂಬಾ |
ಗಿರೆ ಪಾಲಂ ಕಾಸಿ ಬಱಕೆ ಮತ್ತದಱೊಳಗು ||
ತ್ತರಣೆಯ ಪುಡಿವೆರಸಿಕ್ಕುಗೆ |
ಪಿರಿದಕ್ಕುಂ ಬೆಣ್ಣೆ ಬೆಣ್ಣೆಗರುಗನ ಬೇರಿಂ || ೪೩ ||

ಕೊಸಗಿನ ಪೂವೆರಸಿರೆಕುದಿ |
ಯಿಸಿ ಪಾಲಿನಿದಲ್ಲದಂತು ನಿಸ್ತುಷತೈ ||
ಲಸಮನ್ವಿತಮಾಗಿರೆ ಮಱು |
ಗಿಸೆ ಪಡೆಗುಂ ಘೃತಸಮೃದ್ಧಿಯಂ ಬುಧಬಂಧೂ || ೪೪ ||

(ಗಟ್ಟಿಪಾಲಂ ಮಾಡುವ ಕ್ರಮಂ)

*ಕಡಲೆಯ ಬೇಳೆಯ ಶುಂಠಿಯ |
ಪುಡಿಯಂ ಮೇಣ್ ಕೋಕಿಲಾಕ್ಷಿಬೀಜಮನಿಂಬಾ ||
ಗೊಡಗೂಡಿ ಕಾಸೆ ಪಾಲಂ |
ಪಡೆಗುಂ ಕಠಿಣತೆಯನಿರಿಸೆ ಶೀತಳಜಳದೊಳ್ || ೪೫ ||

---

ಟೀ|| ಹೊಸ ತುಪ್ಪಂ, ಎಣ್ಣೆ, ಮೊಸರ್, ಮಜ್ಜಿಗೆ, ಈ ನಾಲ್ಕಂ ಸಮನಾಗಿಕೊಂಡು ಕೊತ್ತುಂಬರಿಯ ಚೂರ್ಣಮಂ ಮಾಡಿ ಹಾಯ್ಕಿ ಕಾಯಿಸಿದೊಡೆ ಅದೆಲ್ಲಮಂ ಕೂಡಿ ಪರಕಲಿಸಿ ಒಳ್ಳೆಯ ತುಪ್ಪಮಪ್ಪುದು—೪೧.

ಟೀ|| ಎಳ್ಳೆಣ್ಣೆಯೊಳಗೆ ಬೇಟಿಲ ತಿರುಳಂ ಹಾಯ್ಕಿ ಒಪ್ಪಚಿ ಕಾಸಿ ಅದಱ ಸಂಭಾಗೆ ಒಳ್ಳೆಯ ತುಪ್ಪಮಂ ಬೆರಸಿದೊಡೆ ಅದೆಲ್ಲಮಂ ತುಪ್ಪಮಪ್ಪುದು—೪೨.

ಟೀ|| ಪಾಲನರ್ಧಮಪ್ಪಂತೆ ಕಾಸಿ ಅದಱೊಳಗೆ ಉತ್ತರಣೆಯ ಚೂರ್ಣಮನಾದೊಡಂ ಅಲ್ಲಾ ಬೆಣ್ಣೆಗರುಗನ ಬೇರನಾದೊಡಂ ಹಾಯ್ಕಿ ಹೆಪ್ಪುಗೊಟ್ಟು ಆ ಮೊಸರಂ ಕಡೆಯಲ್ ಬೆಣ್ಣೆ ಘನಮಪ್ಪುದು—೪೩.

ಟೀ|| ಪಾಲೊಳಗೆ ಕೊಸಗಿನ ಪೂಗಳಂ ಹಾಯ್ಕಿ ಚೆನ್ನಾಗಿ ಕಾಸುವುದು, ಅಲ್ಲಾ ಬೆರಕೆಯಲ್ಲದಂತಪ್ಪ ಎಳ್ಳೆಣ್ಣೆಯಂ ಪೊಯ್ದು ಪಾಲಂ ಕಾಸಿ ಹೆಪ್ಪುಗೊಟ್ಟು ಮೊಸರಂಮಾಡಿ ಕಡೆದು ಬಂದ ಬೆಣ್ಣೆಯಂ ಕಾಸಲ್ ತುಪ್ಪಂ ವೆಗ್ಗಳಮಪ್ಪುದು—೪೪.

ಟೀ|| ಕಡಲೆಯ ಬೇಳೆಯಂ ಶುಂಠಿಯ ಪುಡಿಯುಂ ಕೂಡಿ ಪಾಲೊಳಗೆ ಹಾಯ್ಕಿ ಕಾಸಿ ಆ ಮಡಕೆಯಂ ತಣ್ಣೀರೊಳಗೆ ಯಿಡಲ್ ಆ ಪಾಲ್ ಗಟ್ಟಿಯಪ್ಪುದು—೪೫.



(ಪಾಲಂ ಮಾಡುವ ಕ್ರಮಂ)

ಕಂ|| ಕರಮಿದು ಚಿತ್ರಂ ತೆಂಗಿನ |
ತಿರುಳಂ ಪಿಪ್ಪಲಿಯ ನೀರೊಳರೆದಡ ನಿಂಬಾ ||
ಗಿರೆ ಪಿಱಿದು ಕಳೆಯೆ ದುಗ್ಧ |
ಸ್ವರೂಪಮಂ ತಳೆದು ವಿಮಳರುಚಿಯಾಗಿರ್ಕುಂ || ೪೬ ||

*ಪೊರೆದಿರ್ಪತ್ತೊಂದು ದಿನಂ |
ಬರೆಗಂ ಪಾಲೊಳಗೆ ಬೆಟಿಲ ತಿರುಳಂ ನೆಱಲೊಳ್ ||
ಪರಿಶೋಷಿಸಿ ಬಯ್ತಿಟ್ಟ |
ಕ್ಷುರಸದೊಳಿಕ್ಕಿದೊಡೆ ಸದ್ಯಮದು ಪಾಲಕ್ಕುಂ || ೪೭ ||

(ಸುವಾಸನೆಯ ಮೊಸರಂ ಮಾಡುವ ಕ್ರಮಂ)

ಚಂ|| ಮಡಕೆಯನುರ್ದಿ ಕರ್ಚಿ ಸಹಕಾರದ ಪಕ್ವಫಲಂಗಳಿಂದದಂ |
ತೊಡೆದರೆಕಾದ ಪಾಲನೆಱೆದಂದು ಮೊಸರ್ ಸಹಕಾರಗಂಧಮಂ ||
ಪಡೆಗುಮದಲ್ಲದಂದೊರಸಿ ಚಿತ್ರಕಮಂ ತನಿಪಾಲಿನಲ್ಲಿ ಪೊ |
ಯ್ದೊಡೆ ಪೆಱತೇನೊ ಸಂಪಗೆಯ ಗಂಧಮನೀಲ್ಕೊಳಕೊಳ್ಗುಮಾ ಮೊಸರ್ || ೪೮ ||

(ಗಟ್ಟಿಮೊಸರಂ ಮಾಡುವ ಕ್ರಮಂ)

*ಕಂ|| ಪಸಿಯ ಕಲಡೊಳಗೆ ನೆಲ್ಲಿಯ |
ರಸಮಂ ಮೇಣ್ ಬೆಟಿಲ ರಸಮನೊರಸಿ ಬಱಕ್ಕಾ |
ಱಸಿ ಪಾಲನಲ್ಲಿ ಪೊಯ್ದೊಡೆ |
ಮೊಸರಾ ಮಡಕೆಯನೆ ಪೋಲ್ಗುಮದನೊಡೆಯಲೊಡಂ || ೪೯ ||

---

ಟೀ|| ತೆಂಗಿನಕಾಯಂ ಹೆರೆದು ಹಿಪ್ಪಲಿಯಂ ನೀರೊಳಗೆ ನನೆಯಿಕ್ಕಿ ಆ ವುದಕದಲ್ಲಿ ಆ ತಿರುಳಂ ಅರೆದು ಪಿಂಡಿಕೊಳಲ್ ಅದು ಪಾಲ ಮರ್ಯಾದೆಯಲ್ಲಿ ಸ್ವಾದುವಪ್ಪುದು—೪೬.

ಟೀ|| ಬೆಟಿಲ ಪಣ್ಣ ತಿರುಳಂ ಪಾಲೊಳಗೆ (೨೧) ಇರ್ಪತ್ತೊಂದುದಿನಂ ನನೆಯಿಕ್ಕಿ ಆ ಪಣ್ಣಂ ನೆಱಲೊಳೊಣಗಿಸಿ ಅದನಿಟ್ಟುಕೊಂಡಿರ್ದು ಕಬ್ಬಿನ ಪಾಲೊಳಗೆ ಹಾಯ್ಕಿದೊಡೆ ಅದು ಪಾಲ ಮರ್ಯಾದೆಯಲ್ಲಿ ಸ್ವಾದುವಪ್ಪುದು—೪೭.

ಟೀ|| ಮಡಕೆಯಂ ಚೆನ್ನಾಗಿ ವೊರಸಿ ತೊಳೆದು ಮಾವಿನ ತನಿವಣ್ಣಂ ಮಡಕೆಯೊಳಗೆ ಪೂಸಿ ಆ ಮಡಕೆಯೊಳಗೆ ಒಳ್ಳಿತಾಗಿ ಕಾವ ಪಾಲಂ ಪೊಯ್ದೊಡೆ ಅದು ಮಾವಿನಪಣ್ಣ ವಾಸನೆಯ ಮೊಸರಪ್ಪುದು. ಅಲ್ಲಾ ಚಿತ್ರಮೂಲದ ಬೇರಂ ಕೀಡು ತೊಳೆದ ಮಡಕೆಗೆ ತೊಡೆದು ತನಿಪಾಲಂ ಚೆನ್ನಾಗಿ ಕಾಸಿ ಆ ಮಡಕೆಯೊಳಗೆ ಪೊಯ್ದೊಡೆ ಆ ಮೊಸರ್ ಸಂಪಗೆಯ ಪೂವಿನ ವಾಸನೆಯಪ್ಪುದು—೪೮.

ಟೀ|| ಬೆಂದ ಹೊಸಮಡಕೆಯೊಳಗೆ ಹಸಿಯ ನೆಲ್ಲಿಯ ಕಾಯ ರಸಮನಾದೊಡಂ ಅಲ್ಲಾ ಬೇಟಿಲ ಹಣ್ಣ ತಿರುಳನಾದೊಡಂ ಚೆನ್ನಾಗಿ ಪೂಸಿ ಒಣಗಿಸಿ ಆ ಮಡಕೆಯೊಳಗೆ ಕಾಸಿದ ಪಾಲಂ ತುಂಬಿ ಪೊಯ್ಯಲ್ ಮೊಸರ್ ಗಟ್ಟಿಯಾಗಿರ್ಪುದು—೪೯.

ಕಂ|| ಬಿದಿರ ಪೊಸನಾಳಿಯೊಳ್ ಕಾ |
ಸಿದ ಪಾಲಂ ಪೊಯ್ದು ಮತ್ತೆ ಕೊಗ್ಗೆಸಱೊಳ್ ಮೂ ||
ಱು ದಿನಂಬರಮಿರಿಸಿ ಬಳಿ |
ಕ್ಕದ ನೊಡೆದೊಡೆ ನಾಳಿಯಂದದಿಂ ಮೊಸರಕ್ಕುಂ || ೫೦ ||

(ಮೊಸರಂ ಮಾಡುವ ಕ್ರಮಂ)

*ಮೊಸಱೊಳ್ ಪೊರೆದಿರ್ಪತೊಂ |
ದು ಸೂಳ್ವರಂ ಬೆಟಲಪಣ್ಣ ತಿರುಳಂ ಬಳಿಯಂ ||
ಪೊಸಮಡಕೆಯೊಳೊಯ್ದಿಕ್ಕುಗೆ |
ಮೊಸರಾಕೃತಿಯಾಗಿ ನಾಡೆಯುಂ ಸವಿಯಕ್ಕುಂ || ೫೧ ||

ಕ್ಷೀರದೊಳೆಸೆವಂತಿರೆ ಕಾ |
ಶ್ಮೀರಮನೊಡಗೂಡಿ ಪೆಪ್ಪನಿಟ್ಟಾ ಮೊಸರಂ ||
ಸೀರೆಯೊಳಗಿಕ್ಕಿ ಪಿೞಿದಂ |
ದಾ ರಸಮದು ಚೂತರಸಮನನುಕರಿಸಿರ್ಕುಂ || ೫೨ ||

(ಮಜ್ಜಿಗೆ ಮಾಡುವ ಕ್ರಮಂ)

*ಚಂ|| ಪದನಱಿದಾರ್ದ್ರಕಂ ಮೆಳಸು ಜೀರಗೆ ಶರ್ಕರೆ ಶುಂಠಿ ಮಾತುಳುಂ |
ಗದ ಪುಳಿಯೆಂಬಿವಂ ಮೊಸರೊಳಿಕ್ಕಿ ಸಿತಾಂಬರದಿಂದೆ ಗಾಳಿಸಿ ||
ಟ್ಟದಱೊಳಗಿಂಗು(ಗಿಂಡು) ಕೇಸರ ಲವಂಗದಳಂಗಳನಿಕ್ಕಿದಿಂ ಬಳಿ |
ಕ್ಕದಱೊಳೆ ಸದ್ಗುಡಂ ನೆಱೆಯೆ ಧೂಪಿಸೆ ಮಜ್ಜಿಗೆಯಕ್ಕುಮುತ್ತಮಂ || ೫೩ ||

---

ಟೀ|| ಪೊಸ ಬಿದಿರ ನಾಳಿಯೊಳಗೆ ಚೆನ್ನಾಗಿ ಕಾದ ಪಾಲಂ ತುಂಬಿ ಬಾಯಂ ಮುಚ್ಚಿ ಕೊಗ್ಗೆಸಱಂ ಮಾಡಿ ಆ ನಾಳಿಯಂ ಕೆಸಱೊಳಗೆ ಮೂಱುದಿನಂಬರಂ ಪೂೞ್ದಿರ್ದು ಆ ನಾಳಿಯಂ ತೆಗೆದು ನೋಡಿದೊಡೆ ಆ ನಾಳಿಯನೊಡೆದೊಡಂ ಆ ಮೊಸರ್ ನಾಳಿಯ ಮರ್ಯಾದೆಯಲ್ಲಿ ಪ್ಪುರ್ದು—೫೦.

ಟೀ|| ಒಳ್ಳೆಯ ಗಟ್ಟಿಯ ಮೊಸರ್ಗೆ ಬೇಟಲ ಹಣ್ಣ ತಿರುಳಲ್ಲಿ (೨೧) ಇಪ್ಪತ್ತೊಂದುಬಾರಿ ಭಾವನೆಯಂ ಕೊಟ್ಟು ಆ ಬೇಟಲಹಣ್ಣಂ ಹೊಸಮಡಕೆಯೊಳಗಿರಿಸಿ ದಿನಂಪ್ರತಿ ಉಣ್ಬಾಗಳ್ ತೆಗೆದು ನನೆಯಿಕ್ಕಿ ಕಲಸಿಕೊಳುತ್ತಂ ಬಂದೊಡೆ ಮೊಸರಂತೆ ಸ್ವಾದುವಾಗಿರ್ಪುದು.—೫೧.

ಟೀ|| ಪಾಲನೊಳ್ಳಿತ್ತಾಗಿ ಕಾಸಿ ಅದಱೊಳಗೆ ಒಳ್ಳೆಯ ಕುಂಕುಮಮಂ ಹಾಯ್ಕಿ ಹೆಪ್ಪುಗೊಟ್ಟು ಮೊಸರಂ ಮಾಡಿ ವಸ್ತ್ರದೊಳ್ ಹಿಂಡಿ ರಸಮಂ ಕೊಳಲ್ ಅದು ಮಾವಿನಪಣ್ಣ ಮರ್ಯಾದೆಯಲ್ಲಿ ಸ್ವಾದುವಾಗಿರ್ಪುದು—೫೨.

ಟೀ|| ಮಜ್ಜಿಗೆಯಂ ಮಾಡುವೊಡೆ ಮೆಣಸು, ಜೀರಗೆ, ಸಕ್ಕರೆ, ಮಾದಲಪಣ್ಣ ಪುಳಿ, ಶುಂಠಿ, ಇವಂ ತದಗುಟ್ಟಿ ಮೊಸರೊಳಗೆ ಪದನಱಿದುಹಾಯ್ಕಿ ಆ ಮೊಸರಂ ಸಾಲೆಯವಸ್ತ್ರದಿಂ ಶೋಧಿಸಿ



(ಶಿಖರಿಣಿ ಮೊಸರಂ ಮಾಡುವ ಕ್ರಮಂ)

ಶಿಖರಿಣಿ || ಲವಂಗಂ ನಾಗೋರ್ವೀರುಹ ಕುಸುಮ ಮಲ್ಲಂ ಮೆಣಸು ಸೈಂ |
ಧವಂ ಬೆಲ್ಲಂ ಪತ್ರಂ ತ್ರುಟಿ ಯಿನಿತುಮಂ ಕೂಡಿ ಮೊಸರೊಳ್ ||
ಶಿವಾಲಾಕ್ಷಾ ಕ್ಷ್ವೇಡ್ರೇಕ್ಷು ರಸಮಿವಱಿಂ ಧೂಪಿಸಿ ಹಿಮಾಂ |
ಶುವಿಂದಂ ವೇಧಂಗೆಯ್ಗೆ †ಶಿಖರಿಣಿಯಕ್ಕುಂ ಪೆಸರೊಳಂ || ೫೪ ||

(ಅಂಬಿಲ ಪಳಿದ್ಯಂ)

ಕಂ|| ಎಲೆ ಜೀರಗೆ ಸಾಸಿವೆ ಮೆಣ |
ಸು ಲವಂಗಂ ಧಾನ್ಯಕಂಗಳೆಂಬಿವನರೆದಂ ||
ಬಿಲದೊಳೊಡಗೂಡೆ ನಿರುತಂ |
ಕಳೆದೊಗ್ಗರಿಸಿದೊಡೆ ತಳಿ(ಳೆ) ಕರಂ ಸವಿಯಕ್ಕುಂ || ೫೫ ||

ಬದರಿಯ ನೆಲ್ಲಿಯ ದಾಳಿಂ |
ಬದ ಪುಣಿಸೆಯ ಮಾದುಫಲದ ಪುಳಿಗಳೊಳೊಂದಂ ||
ಕುದಿಯಿಸಿ ಶರ್ಕರೆವೆರಸಂ |
ತದನುಜ್ಜ್ವಳವಸ್ತ್ರದಿಂದೆ ಗಾಳಿಸಿ ಬಳಿಯಂ || ೫೬ ||

---

ಕೊಂಡು ಆ ರಸದೊಳಗೆ ಇಂಗು, ನಾಗಕೇಸರಂ, ಲವಂಗಂ, ಆ ಪತ್ರೆ ಇವಂ ಚೂರ್ಣಂಮಾಡಿ ಇಕ್ಕಿ ಬೆಲ್ಲದ ಧೂಪವಾಸನೆಗುಡಲ್ ಅದು ಮಜ್ಜಿಗೆಯಂತೆ ಸ್ವಾದುವಪ್ಪುದು—೫೩.

ಟೀ|| ಲವಂಗದ ತಿಗುಡು, ನಾಗಕೇಸರದ ಕುಸುಮಂ, ಅಲ್ಲಂ, ಮೆಣಸು, ಸೈಂಧವಂ, ಬೆಲ್ಲಂ, ಲವಂಗಪತ್ರಂ, ಕಚೋರಂ, ಇವಂ ಚೂರ್ಣಂಮಾಡಿ ಪದನಱಿದು ಮೊಸರೊಳ್ ಹಾಯ್ಕಿ ಆನೆಲೆಯ ಕಾಯ್, ಅರಗು, ಜೇನತುಪ್ಪಂ, ಕರ್ವಿನಪಾಲ್ ಇವಱಿಂದಂ ಧೂಪಮನಿಕ್ಕಿ ಕರ್ಪೂರದ ವಾಸನೆಯಂ ಕುಡಲ್ ಆ ಮೊಸರ್ ಶಿಖರಿಣಿಯಪ್ಪುದು—೫೪.

ಟೀ|| ಏಲಕ್ಕಿ, ಜೀರಗೆ, ಸಾಸಿವೆ, ಮೆಣಸು, ಲವಂಗದ ತಿಗುಡು, ಕೊತ್ತುಂಬರಿ ಇವಂ ಉದಕದಲ್ಲರೆದು ಅಂಬಿಲದೊಳಗೆ ಕದಡಿ ಕಾಸಿ ಒಗ್ಗರಿಸಲ್ ಅಂಬಿಲದ ಪಳಿದ್ಯಂ ಸ್ವಾದುವಪ್ಪುದು—೫೫.

ಟೀ|| ಎರ(ಱ)ನ ಪಣ್ಣರಸಂ, ಪಸಿಯ ನೆಲ್ಲಿಯಕಾಯರಸಂ, ದಾಳಿಂಬದಪಣ್ಣರಸಂ, ಪುಣಿಸೆ ಪಣ್ಣರಸಂ, ಮಾದಲದ ಪಣ್ಣರಸಂ ಇವಂ ಬೇಱೆವೇಱೆಯಾಗಿ ಕುದಿಸಿ, ಆ ರಸಮಂ ಬಿಳಿಯ ವಸ್ತ್ರದಲ್ಲಿ ಶೋಧಿಸಿಕೊಂಡು—೫೬.

---

†ಇದು ಮುದ್ರಾಲಂಕಾರ. ಕವಿಯು 'ಶಿಖರಣಿ' ಎಂಬ ಮೊಸರನ್ನು ಮಾಡುವ ವಿಧಾನವನ್ನು ಹೇಳುವ ಈ ಪದ್ಯಕ್ಕೆ 'ಶಿಖರಿಣಿ' ವೃತ್ತವನ್ನು ಬಳಸಿರುವನು. 'ಶಿಖರಿಣಿ' ಎಂಬ ಶಬ್ದವು ಸಂಸ್ಕರಿಸಲ್ಪಟ್ಟ ಮೊಸರನ್ನು ವಾಚ್ಯವಾಗಿ ಹೇಳಿ, ಇದು 'ಶಿಖರಿಣಿ'ವೃತ್ತವೆಂಬುದನ್ನೂ ಸೂಚಿಸುವುದರಿಂದ ಮುದ್ರಾಲಂಕಾರವೆನಿಸಿಕೊಳ್ಳುವುದು. "ಸೂಚ್ಯಾರ್ಥಸೂಚನಂ ಮುದ್ರಾ ಪ್ರಕೃತಾರ್ಥಪರೈಃ ಪದೈಃ" ಎಂಬುದು ಈ ಅಲಂಕಾರ ಲಕ್ಷಣವು.

ಸಿತಮಗುರು ಜಳಂ ಹಿಮದೀ |
ಧಿತಿಯೆಂಬಿವಱಿಂದೆ ಧೂಪಮಂ ಕುಡೆ [1]ಮಱಿಚಾ ||
ಮೃತರುಚಿ ಜಾತುಜಾತಕ |
ಯುತವಾಗೆ [2]ಸುಧೋಪಮಾನಮಕ್ಕುಂ ಪಾನಂ || ೫೭ ||

ಟೀ॥ ಬಲಾಕಂ ಬಿಳಿಯಗಿಲ್, ಭದ್ರಮುಸ್ತೆ, ಕರ್ಪೂರಂ ಇವಱಿಂದೆ ಧೂಪಮಂಕೊಟ್ಟು ಮೆಣಸು, ನಾಗಕೇಸರಂ, ಲವಂಗದತಿಗುಡು, ಆಪತ್ರಂ, ಏಲಕ್ಕಿ ಇವಂ ಚೂರ್ಣಂ ಮಾಡಿ ತಳಿಯಲ್ ಅಮೃತಕ್ಕೆ ಸಮಾನಮಪ್ಪ ಪಾನಮಪ್ಪುದು—೫೭.

ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀ ಮ ತ್ಕ ವಿ ತಾ ವಿ ಳಾ ಸ ತ ನೂ ಜಂ
ಶ್ರೀಮಚ್ಚಾವುಂಡರಾಯ
ವಿರಚಿತಮಪ್ಪ
ಲೋಕೋಪಕಾರದೊಳ್
ಸೂಪಶಾಸ್ತ್ರಂ
[3]ಅಷ್ಟಮಾಧಿಕಾರಂ

1 ಮಱಿಚಾ. 2 ಸಧೂಪೋಪಮಾನ. 3 ಅಷ್ಟಮಾಶ್ವಾಸಂ.
* ಈ ಗುರ್ತಿರುವ ಪದ್ಯಗಳು ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ಸೂಪಶಾಸ್ತ್ರವೆಂಬ ಗ್ರಂಥದಾದಿಯಲ್ಲಿವೆ.

# ನವಮಾಧಿಕಾರಂ

## ೯. ನರಾದಿವೈದ್ಯಪ್ರಕರಣಂ

ಕಂ॥ ಸಮನಿಸುಗುಂ ದೃಷ್ಟಾದೃ |
ಷ್ಟವೆಂಬ ಫಲವಿದಱೊಳೆಂದು ವರವೈದ್ಯಕದಂ ||
ಬಮನಖಿಳಜೀವರಕ್ಷಣ |
ನಿಮಿತ್ತದಿಂ [1]ಪೇೞ್ದಮೆಸೆಯೆ ಕಾವ್ಯವಿಳಾಸಂ || ೧ ||

ಪದದಿಂ ನಾಭಿವರಂ ವಾ |
ತದ ತಾಣಂ ನಾಭಿಯಿಂ [2]ದುರಂಬರೆಗಂ ಪಿ ||
ತ್ತದ ತಾಣಮುರದಿನಾ[3]ಮ |
ಸ್ತದವರೆಗಂ [4]ಕಫದ ತ್ತಾಣಮಕ್ಕುಂ ನಿರುತಂ || ೨ ||

ಉದಯಿಸುಗುಂ ಶೂಲಂ ವಾ |
ತದಿನುರಿಪಂ ಪಿತ್ತದೇೞ್ಗೆಯಿಂ ದುಱುದುಱುವಿಂ ||
ಬುದು ಕಫದಿನಾ ತ್ರಿದೋಷದ |
ಪುದುವಿಂದಾಮಿಶ್ರಮಾಗಿ ತೋರ್ಕುಂ ತಮ್ಮೊಳ್ || ೩ ||

ಮ॥ ವನಿತಾಸೇವನೆ ರೂಕ್ಷಮಕ್ಕೆ [5]ಪಸಿವಾಗುೞ್ ಚಿಂತೆ [6]ವಿಣ್ಮೂತ್ರವೇ |
ಗನಿರೋಧಂ ಶ್ರಮಮತ್ಯಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ |
ಜನಿಯಿಕ್ಕುಂ ಗುರು[7]ವೃಷ್ಯಲೌಲ್ಯಲವಣಾಮ್ಲ ಸ್ವಾದುವಿಂದಂಗಮ |
ರ್ದನದಿಂ ಸ್ನಾನದಿನಗ್ನಿಯಿಂ ಬಿಸಿಲಿನಿಂ ವಾತಾಖ್ಯಮುಂ ಪಿಂಗುಗುಂ || ೪ ||

ಟೀ॥ ಎಲೆ ಕಾವ್ಯವಿಳಾಸನೇ, ವೈದ್ಯಗ್ರಂಥಂ ಲೋಕೋಪಕಾರದಲ್ಲಿ ದೃಷ್ಟಾದೃಷ್ಟ [8]ಫಲಂಗಳಂ ಕುಡುವುದಱಿಂ ನರವೈದ್ಯಮಂ ಎಲ್ಲಾ ಜೀವ[9]ರಕ್ಷಣಾರ್ಥವಾಗಿ ಪೇೞ್ದೆನು—೧.

ಟೀ॥ ಪಾದಂ ಮೊದಲಾಗೆ ಪೊಕ್ಕುೞಪರ್ಯಂತಂ ವಾಯುಸ್ಥಾನಂ, ಪೊಕ್ಕುೞಿಂದೆ ಎದೆಯಪರ್ಯಂತಂ ಪಿತ್ತದತಾಣಂ, ಎದೆಯಿಂದಂ ಮಂಡೆಯುಪರ್ಯಂತಂ ಶ್ಲೇಷ್ಮದ ಸ್ಥಾನಂ—೨.

ಟೀ॥ ಈ [10]ದೇಹದಲ್ಲಿ ವಾತಾಧಿಕ್ಯದಿಂ ಶೂಲೆ ಪುಟ್ಟುವುದು, ಪಿತ್ತಾಧಿಕ್ಯದಿಂದೆ ಉಷ್ಣಮಪ್ಪುದು, ಶ್ಲೇಷ್ಮಾಧಿಕ್ಯದಿಂ ತಿಮಿರಂ ಪುಟ್ಟುವುದು, ಈ ಮೂಱುದೋಷಂಗಳುಂ ದೇಹದಲ್ಲಿ [11]ಕೂಡಿದೊಡೆ ಶೂಲೆಯು ಉಷ್ಣಮುಂ ತಿಮಿರಂಗಳುಂ ಪುಟ್ಟುವುವು—೩.

ಟೀ॥ ಸ್ತ್ರೀಸಂಗಂ, ರೂಕ್ಷಂ, ದೀಪನಂ, ಆಗುೞಿಕೆ, ಚಿಂತೆ, ಮಲಮೂತ್ರಂಗಳತಡೆ, ಬಳಲ್ಕೆ ಅಜೀರ್ಣಂ ಈ ದೋಷಗಳಿಂದಂ ವಾತಂ ಪುಟ್ಟುವುದು, ಅದರ್ಕೆ ಪ್ರತೀಕಾರಂ [12]ವೀರ್ಯವರ್ಧನಮಪ್ಪವಸ್ತುಗಳೆನಿಪ ಗೋಧುಮೆ, ಉದ್ದು, ಪಾಲ್, ಸಕ್ಕರೆ ನೆಲದಾೞ್ ಮೊದಲಾದ ಸಿಹಿಪ್ರವ್ಯಂಗಳಂ ಭುಂಜಿಸುವುದಱಿಂದಂ ಉಪ್ಪುಪುಳಿಗಳಂ [13]ವೆಗ್ಗಳವಾಗಿ ಕೊಳ್ವುದಱಿಂದಮುಂ, ಅಂಗಮರ್ದನಂ, ಅಗ್ನಿಸೇವೆ, ಸ್ನಾನಂ ಬಿಸಿಲತಾಪಂ ಈ ಕ್ರಿಯೆಗಳಿಂದಮುಂ ವಾತಂ ಕಿಡುವುದು—೪.

1 ಟೀಕೆಯ ಅರ್ಥಕ್ಕನುಸಾರವಾಗಿ ಮೂಲದಲ್ಲಿ "ಪೇೞ್ವೆನೆಸೆಯೆ ಕಾವ್ಯವಿಳಾಸಾ" ಎಂದಿರಬೇಕು. 2 ದುರಂಬರಂ. 3 ಮಸ್ತಕದವರಂ, ಮಸ್ತದತಾಣಮೆ, ಮಸ್ತಕದವರಂ. 4 ಖಪದ. 5 ಪಸಿವಾ[illegible], ಪಸುವೈಕಿಲ್. 6 ಮೇಣ್ಮೂತ್ರ. 7 ವಿಪ್ರಜಾಲೆ, ವಿಪ್ರಾಲೆ. 8 ಫಲಗಳುಂಟಾಗಿ. 9 ರಕ್ಷಣಾರ್ಥನಿಮಿತ್ತವಾಗಿ. 10 ಪುಟ್ಟದೊಡೆ. 11 ದೇಹದಾಗಲು. 12 ವರ್ಧವಾಹಂಥ. 13 ಮಿಗಿಲಾಗಿ.

ಮ|| ಲವಣೋ[1]ಷ್ಣಾಮ್ಲ ಪರಿಶ್ರಮಾತಪ [2]ನಿಜಕ್ರೋಧೋಗ್ರರೂಕ್ಷಾ[3]ಸವಾ |
ಸವದಿಂ ಕೋಪಿಸುಗುಂ ಶರತ್ಸಮಯದೊಳ್ ಪಿತ್ತಂ ಪಯಃಪಾನದಿಂ ||
ಯುವತೀಸ್ಪರ್ಶನಮಾಪ್ತ ತಿಕ್ತಮಧುರದ್ರವ್ಯಂ[4]ಗಳಿಂ ಸೇವ್ಯ ಶೀ |
ತವಿಧಾನಾದಿಗಳಿಂ ವಿರೇಚನದಿನಂತಾ ತಿಕ್ತಮುಂ [5]ಪಿಂಗುಗುಂ || ೫ ||

ಮ|| ತಿಳದೊಳ್ ಶೀತಲದೊಳ್ ಪಯೋವಿಕೃತಿಯೊಳ್ ನೀರೊಳ್ ದಿವಾ[6]ಸ್ವಾಪದೊಳ್ |
ಪುಳಿಯೊಳ್ ತುಪ್ಪದೊಳುಪ್ಪಿನೊಳ್ ಜನಿಯಿಕುಂ ಶ್ಲೇಷ್ಮಂ ವಸಂತಾಗ್ರದೊಳ್ ||
ಸಲಿಲಕ್ರೀಡೆಯಿನುಷ್ಣದಿಂ ವಮನದಿಂ ನಿಷ್ಠೀವದಿಂ ನಸ್ಯದಿಂ |
ಲಲನಾಸೇವೆಯಿನಾವಗಂ ಪ್ರಶಮಿಕುಂ ವ್ಯಾಯಾಮದಿಂ ಮೇಣ್ ಕಫಂ || ೬ ||

ಕಂ|| †ಸವಳದೆ [7]ಸಿತಘೃತಮಿಶ್ರಿತ |
ಮವುಂಗುರುಂ ಸೂಸಲೆಂಬಿವಂ ಸೇವಿಸೆ ಪು ||
ಷ್ಟಿವಿವರ್ಧನಮಕ್ಕುಂ ಶೀ |
ತವಾತಮಂ ಕೆಟ್ಟು ನಿರುಜನಕ್ಕುಂ ಮನುಜಂ || ೭ ||

ಟೀ|| ಉಪ್ಪುಪುಳಿಗಳ ಆಧಿಕ್ಯದಿಂದಂ, ಬಳಲ್ಕೆಯಿಂ, ಬಿಸಿಲಕಾಯುವುದರಿಂದಂ ತನ್ನ ಕ್ರೋಧದಿಂದಂ, ಉಷ್ಣಮಪ್ಪದ್ರವ್ಯಂಗಳನಧಿಕಮಾಗಿ ಕೊಳ್ವುದಱಿಂದಂ, ಪ್ರವಾಸದಿಂದಂ, ಶರತ್ಕಾಲದ(ಆಶ್ವಯುಜ ಕಾರ್ತಿಕಮಾಸಂಗಳ)ಲ್ಲಿ ಪಿತ್ತಂಅಧಿಕಮಪ್ಪುದು, ಅದರ್ಕೆ ಪ್ರತೀಕಾರಂ–ರಾತ್ರಿಯಲ್ಲಿ ಪಾಲಂಕುಡಿಯುವುದಱಿಂದಂ, ಸ್ತ್ರೀಯರ ಆಲಿಂಗನದಿಂದಂ, ಪುಳಿ, ಕಹಿಪಡವಲ್ ಬೇವು ಮೊದಲಾದ ಕಹಿದ್ರವ್ಯಂಗಳಂ ಕೊಳ್ವುದಱಿಂದಂ ಸೊಗ[8]ಸಪ್ಪ ಶೈತೋಪಚಾರದಿಂದಂ ಮೃದುವಪ್ಪ ವಿರೇಚನದಿಂದಂ ಆ ಪಿತ್ತಂ ಕಿಡುವುದು —೫.

ಟೀ|| ಎಳ್ಳು, ಶೈತ್ಯಂ, ಕೆಟ್ಟಪಾಲಿಂದಂ, ಉದಕಂ, ಪಗಲ್‌ನಿದ್ರೆ, ಪುಳಿಯಿಂದಂ, [9]ತುಪ್ಪದಿಂದಂ, ಉಪ್ಪಿಂದಂ ಈ ವಸ್ತುಗಳಂ ವಸಂತಕಾಲದ (ಚೈತ್ರಮಾಸಂಗಳ) ಲ್ಲಿ ಆಧಿಕಮಾಗಿ ಕೊಳ್ವುದಱಿಂದಂ ಶ್ಲೇಷ್ಮಂ–ಪೆರ್ಚುವುದು, ಅದೇ ಪ್ರಕಾರಂ–ಜಲಕ್ರೀಡೆ, ಉಷ್ಣದ್ರವ್ಯಸೇವನೆ, ವಮನಂ, ಗಂಡೂಷಂ, ನಸ್ಯಂ, ಸ್ತ್ರೀಸಂಗಂ, ಅಲ್ಪವಾಗಿ ನಡೆಪಾಡುಹ, ಇವಱಿಂದಂ ಶ್ಲೇಷ್ಮದುದ್ರೇಕಂ ಕಿಡುವುದು—೬.

ಟೀ|| ಉದಯಕಾಲದಲ್ಲಿ ಸಕ್ಕರೆ, ತುಪ್ಪಂ, ಅಂಗುರದಚೂರ್ಣಂ, ಎಳ್ಳಸೂಸಲ್ ಈ ನಾಲ್ಕುಂ ಸಮಭಾಗವಾಗಿ ಕಲಸಿ ಸೇವಿಸಲ್ ದೇಹಪುಷ್ಟಿಯಪ್ಪುದು. ಸಿ(ಶಿ)ೀತವಾತಂಗಳ್ ಕೆಟ್ಟು ನೀರೋಗಿಯಪ್ಪಂ—೭.

1 ಷ್ಣಾಂಬ್ಲ. 2 ನಿರಕ್ರೋ. 3 ಆಸವಾಸವದಿಂ-ಎಂಬುದಕ್ಕೆ ಪ್ರವಾಸವೆಂಬ ಟೀಕೆಯು ವಿಚಾರಾರ್ಹವು. 4 ಗಳಂ. 5 ಪಿಣಸುಗುಂ. 6 ಸ್ವಪ್ನ. 7 ಶಿಗ್ರುಕಮಿಶ್ರಿತಮು ಉಂಗುರಂ, ಸಿತಘೃತಮಿಶ್ರಿತ। ಮುವಂಗುರು. 8 ಸಾಹಂಘಾ. 9 ತುಪ್ಪಂ.

† ಒಂದು ಪ್ರತಿಯಲ್ಲಿ ಈ ಕಂದವು ಹೀಗೆಮಾರ್ಪಟ್ಟಿದೆ—
ಪ್ರಾತಃಕಾಲದೆ ಸಿತಘೃತ ।
ಶ್ವೇತಾಂಗುರ ತಿಲದ ಚೂರ್ಣಮೆಂಬಿವ ಸೇವಿಸೆ ॥
ಧಾತುವಿವರ್ಧನಮುಂ ಶೀತ ।
ವಾತಂಗಳ್‌ಕೆಟ್ಟು ನಿರುಜನಕ್ಕುಂ ಮನುಜಂ ॥



(ಶೂಲೆಗೆ)

ಕಂ|| ಬಿಸುನೀರೊಳ್ ಕುಡಿಯಿಸು ಹಿಂ |
ಗು ಸುಂಟಿ [1]ಸಂವರ್ಚಲಂಗಳಂ ತತ್ಕ್ಷಣದೊಳ್ ||
ಮಸಗಿದ ಶೂಲೆಯನದು ತ |
ಗ್ಗಿಸುಗುಂ [2]ಮಲ್ಗಿಸುವತೆಱದಿನುದಕಂ ಶಿಖಿಯಂ || ೮ ||

(ಪಿತ್ತಶಾಂತಿಗೆ)

ಉರಗಿಯ ಮತ್ಸ್ಯಾಕ್ಷಿಯ ಭಿ |
ನ್ನರುಹದ ಕೊಳುಗುಳಿಕೆಯ ರಸದೊಳೊಂದನೆ ಸ ||
ಕ್ಕರೆವೆರಸು ಕುಡಿಯೆ ಕರಮು |
ಬ್ಬರಿಸಿದ ಪಿತ್ತಪ್ರಕೋಪಮಿರದುಪಶಮಿಕುಂ || ೯ ||

ಸಿತಮಂ ದ್ರಾಕ್ಷೆಯುಮಂ ಮಧು |
ಯುತಮಾಗಿರೆ ತಿಂದು ಬೞಿಕೆ [3]ತಣ್ಣೀರ್ಗುಡಿಯಲ್ ||
ಹತಿಯಿಸುಗುಮಧಿಕಪಿತ್ತ ಮ |
ನತಿಶಯಮಿವಱಿಂದಮೌಷಧಂ ಪೆಱತೊಳವೇ || ೧೦ ||

(ಕಾಮಲಿ, ಪಾಂಡುರೋಗ, ಪಿತ್ತಕ್ಕೆ)

ಪಿಂದು ಪಳಾಳದೊಳೇನಾ |
ಟರೂಷಕಂ ಮಧುಕಮೆಂಬಿವಂ [4]ಕುಡಿ ಮಧು ಶ ||
ರ್ಕರೆಯೊಳ್ ಕಾಮಳೆಯುಂ ಪಾಂ |
ಡುರೋಗಮುಂ ರಕ್ತಪಿತ್ತಮುಂ ಪ್ರಶಮಿಸುಗುಂ || ೧೧ ||

ಟೀ|| ಇಂಗು, ಶುಂಠಿ, ಸಂವರ್ಚಲವಣಂ ಈ ಮೂಱುಮಂ ಬಿಸಿನೀರಲ್ಲಿ ಅರೆದು ಕುಡಿಯಲ್ [5]ಅಗ್ನಿಜ್ವಾಲೆಯನುದಕಂ [6]ಎಹಗೆ ಕಿಡಿಸುವುದು ಅಹಗೆ ಶೂಲೆಯಂ ಕಿಡಿಸುಗುಂ—೮.

ಟೀ|| ಒಂದೆಲಗ, ಹೊನಗನ್ನೆ, ಅಮರ್ದುವಳ್ಳಿ, ಕೊಳುಗುಳಿಕೆ ಈ ಔಷಧಿಗಳಲ್ಲಿ ದೊರಕಿದ ಒಂದೊಂದಱ ರಸಮಂ ಕೊಂಡು ಸಕ್ಕರೆಯಂ ಬೆರಸಿ ಕುಡಿಸಿದೊಡೆ ಪಿತ್ತಂ ಕಿಡುವುದು—೯.

ಟೀ|| ಸಕ್ಕರೆ, ದ್ವೀಪದ್ರಾಕ್ಷೆಹಣ್ಣು ಈ ಎರಡುಮಂ ಜೇನತುಪ್ಪದಲ್ಲಿ ಕಲಸಿಮೆದ್ದು ತಱುವಾಯೊಳ್ ತಣ್ಣೀರಂ ಕುಡಿಯಲ್ ಪಿತ್ತಂ ಕಿಡುವುದು, [7]ಪೈತ್ಯಕ್ಕೆ ಇದಱಿಂದಮೊಳ್ಳಿತ್ತಪ್ಪ ಔಷಧವಿಲ್ಲ—೧೦.

ಟೀ|| ಆಡುಸೋಗೆ, ಯಷ್ಟಿಮಧುಕಂ ಇವೆರಡನರದು ಜೇನುತುಪ್ಪಸಕ್ಕರೆಗಳಂಕೂಡಿ ಕುಡಿಯಲ್ ಕಾಮಾಲೆ, ಪಾಂಡುರೋಗಂ, ರಕ್ತಪಿತ್ತಂ ಇವು ಕಿಡುವುವು—೧೧.

1 ಸಂವರ್ಚ. 2 ಮಗ್ಗಿಸುಗು ಸಿಖಿಯಸುದಕಂ ಕಳಿವೊಲ್, ಸುದಳಂ ಸಿಕೆಯಂ. 3 ತಣ್ಣೀರ್. 4 ಕೂಡಿದುದಕ, ಕುಡಿವುದು. 5 ಬೆಂಕಿಯಂ ನೀರು ಕಿಡಿಸುವಂತೆ. 6 ಜಿಂಗೆಕೆಡಿಸುವುದು ಅಹಾಂಗೆ. 7 ಪೈತ್ಯಕ್ಕೆ ನಾಯಕೌಷಧಂ.

(ಕಾಮಾಲೆಗೆ)

ಕಂ|| ಆಳಿಯೊಳ್ ಕುಡಿಯಿಸು ನೀಲಿಯ |
ದಳಮಂ ಮೋಣಲ್ಲದಾಗಳೆಕ್ಕೆಯ[3] ಬೇರಂ || .
ಕಳಿಯೊಳ್ ನಸ್ಯಂಗೆಯೆ ಕಾ |
ಮಳೆ ದಿವಸತ್ರಯದಿನಗ್ಗಳಂ ನೀಂದಪುದೇ || ೧೨ ||

(ಖಘ—ಶ್ಲೇಷಕ್ಕೆ)

ಓವುಮುಮಂ ಶರ್ಕರೆಯುಮ |
ನೋವುಮುಂ ಮಗಧರುಹಮುಮಂ ಪೆಱವೞಿಕೊಳೇಂ ||
ಓವುಮುಮಂ ಶುಂಠಿಯುಮಂ |
ಸೇವಿಸೆ ಪೞಪಡುಗು[1]ಮಾವಗಂ ಖಪರೋಗಂ || ೧೩ ||

(ತ್ರಿದೋಷಕ್ಕೆ)

ಲವಣಯುತಂ ವಾತಮನಾ |
ಜ್ಯವಿಮಿಶ್ರಂ ಪಿತ್ತಮಂ ಸವಿಶ್ವಂ ಖಪಮಂ ||
ವಿವಿಧಾಮಯಮಂ ಗುಡಸಹಿ |
ತವಣಿಲೆ ನಿಶ್ಚಯದಿನೊಂದೆ ಕಿಡಿಸಲ್ ನೆಱೆಗುಂ || ೧೪ ||

(ಬವಣಿಮುಖ ರೋಗಕ್ಕೆ)

ಬವಣಿ ತಲೆ[2]ಬೇನೆಗಳ್ ಸ್ವೇ |
ದವೃದ್ಧಿ ಮುಖರೋಗಮಕ್ಷಿರೋಗಂ ಕಫವಾ ||
ತವಿಕಾರಂ ಪಿಂಗುಗು ವಾ |
ದವೆ ನಸ್ಯಂಗೆಯ್ಯೆ ಶುಂಠಿಯುಂ ಬೆಲ್ಲಮುಮಂ || ೧೫ ||

ಟೀ|| ನೀಲಿಯ ಸೊಪ್ಪಂ ಮಜ್ಜಿಗೆಯೊಳರೆದು ಕುಡಿಯಲ್ ಕಾಮಲೆ ಕಿಡುಗುಂ, ಎಕ್ಕೆಯ ಬೇರಂ ಅಂಬಿಲದೊಳ್[3]ರೆದು ನಸ್ಯಮಂಮಾಡಲ್ ಮೂಱು[4]ದಿನಕ್ಕೆ ಕಾಮಾಲೆ ಮಾಣ್ಗುಂ—೧೨.

ಟೀ|| ಶ್ಲೇಷ್ಮಂ ಕಿಡವುದರ್ಕ್ಕೆ ಓವುಮುಮಂ ಸಕ್ಕರೆಯುಮಂಕೂಡಿಮೆಲುಹ, ಓವುಮುಮಂ ಪಿಪ್ಪಲಿಯುಮಂ ಚೂರ್ಣಂಮಾಡಿಮೆಲುಹ, ಓಮುಮುಮಂ ಪಿಪ್ಪಲಿಯುಮಂ ಚೂರ್ಣಂ ಮಾಡಿ ಮೆಲುಹ, ಓವುಮುಮಂ, ಶುಂಠಿಯುಮಂ ಚೂರ್ಣಂಮಾಡಿ ಮೆಲುಹ ಈ ಮೂಱು ಔಷಧಮುಮಂ ಪ್ರತ್ಯೇಕಮಾಗಿಕೊಳಲ್ ಶ್ಲೇಷ್ಮಂ ಕಿಡುಗುಂ—೧೩.

ಟೀ|| ಅಣಿಲೆಯ ಚೂರ್ಣಮಂ, ಸೈಂಧವಲವಣಮಂ ಕೂಡಿ ಕೊಳಲ್ ವಾತಂ ಕಿಡುಗುಂ, [5]ಅಣಿಲೆಯಕಾಯ ಚೂರ್ಣಮನೆ ತುಪ್ಪದಲ್ಲಿ ಕಲಸಿ ಕೊಳಲ್ ಪಿತ್ತಂಕಿಡುವುದು, ಅಣಿಲೆಕಾಯ ಚೂರ್ಣಮಂ ಶುಂಠಿಯಚೂರ್ಣಮಂ ಕೂಡಿ ಕೊಳಲ್ ಶ್ಲೇಷ್ಮಂ ಕಿಡುವುದು. ಆ ಅಣಿಲೆಕಾಯ ಚೂರ್ಣಮುಂಬೆಲ್ಲಮಂ ಕಲಸಿಕೊಳಲ್ ಎಲ್ಲಾ ರೋಗಂಗಳುಂ ಕಿಡುವುವು—೧೪.

ಟೀ|| ಶುಂಠಿಯುಂ, ಬೆಲ್ಲಮಂ ಉದಕದಲ್ಲಿ ತೇದು ನಸ್ಯಂಮಾಡಲ್ ತಲೆತಿರುಗುಹ, ಮಂಡೆಯಶೂಲೆ, ಮಿಗಲಾಗಿ ಮುಖಂಬೆಮರುಹ, ಮುಖರೋಗಂ, ಕಣ್ಣ[6]ರೋಗಂ,. ಶ್ಲೇಷ್ಮವಾತಂ, ಈ ರೋಗಂಗಳ್ [7]ಕಿಡುವುವು—೧೫.

1 ಮಾಗದಂ. 2 ಬೇನೆ ಸ್ವೇದ। ಪ್ರವೃದ್ಧಿ. 3 ತೇದು. 4 ದಿನ ಪೆಚ್ಚಿಗೆ ಸಲ್ಲದು. 5 ಆ ಚೂರ್ಣಮನೆ. 6 ಬೇನೆ. 7 ಹೋಹುವು.



(ವಾತಜ್ವರ—ಶೀತಜ್ವರಂಗಳ್ಗೆ)

ಕಂ|| [1]ಜಳದಂ ಶುಂಠಿ ದುರಾಲಭೆ |
ಗುಳೂಚಿ ಯೆಂಬಿನಿತುಮಂ ಕಷಾಯಂಗೊಂಡಾ ||
ಗಳೆ ಕುಡಿಯೆ ವಾತ[2]ದೋಷಂ |
ಸಲೆ ವಿಷಮಜ್ವರಂ ದಿನತ್ರಯಕ್ಕು ಪಶಮಿಕುಂ || ೧೬ ||

(ಪಿತ್ತಜ್ವರಕ್ಕೆ)

ಸಿರಿಕಂಡಂ ಮುಷ್ಟಿಗೆ [3]ಯಾ |
ಟರೂಷಕಂ ಕಕ್ಕೆ ಮುಸ್ತೆ ನಿಂಬಂ ಕೊತ್ತುಂ ||
ಬರಿ ಯೆಂಬಿವನೆಂಟೊಂದಾ |
ಗಿರೆ ಮಱುಗಿಸಿ ಕುಡಿಯೆ ಪೈತ್ತಿಕಜ್ವರಹರಣಂ || ೧೭ ||

(ಪಿತ್ತಜ್ವರ—ದಾಹಕ್ಕೆ)

ತೆಗೆಪಿ ಕುಡಿಯಿಸುಗೆ ಶಿವೆ ಕಳ |
ವಿಗೆ ಬಾಳಂ [4]ಕಕ್ಕೆ ಮುಸ್ತೆ ಪರ್ಪಟಕಂ ಮು ||
ಟ್ಟಿಗೆಯೆಂಬಿವಿನಿತುಮಂ ಪೈ |
ತ್ತಿಗಜ್ವರಂ ದಾಹಮುಂ ಪ್ರಳಾಪಮುಮಱಿಗುಂ || ೧೮ ||

(ಶ್ಲೇಷ್ಮಜ್ವರಕ್ಕೆ)

ನೆಲಬೇವು ಚಿತ್ರಕಂ ಪಿ |
ಪ್ಪಲಿ ನಾಗರಮೆಂಬಿವಿನಿತುಮಂ ಕುಡಿಯಿಸು ತ ||
ಜ್ಜಲಮಂ ಬಿಸಿಬಿಸಿಯೆನೆ ಕುಡಿ |
ಯಲೊಡಂ ಶ್ಲೇಷ್ಮರೋಗಶಮನಮದಕ್ಕುಂ || ೧೯ ||

ಟೀ|| ಭದ್ರಮುಸ್ತೆ, ಶುಂಠಿ, ಬಳ್ಳಿದುಱುಚೆ, ಅಮರ್ದುವಳ್ಳಿ ಈ ನಾಲ್ಕುಮಂ ಸಮಭಾಗೆಯಾಗಿಕೊಂಡು [5]ಅಷ್ಟಾವಶೇಷಕಷಾಯಮಂ ಮಾಡಿ ಕೊಳಲ್ ವಾತದೋಷದಿಂದಾದ ವಿಷಮಜ್ವರಂ ಕಿಡುಗುಂ—೧೬.

ಟೀ|| ಸಿರಿಕಂಡಂ, ದೊಡ್ಡಪತ್ರೆ, ಅಡಸೋಗೆ, ಕಕ್ಕೆಯಕುಡಿ, ಭದ್ರಮುಸ್ತೆ, ಬೇವು, ಕೊತ್ತುಂಬರಿ ಈ ಔಷಧಂಗಳಂ ಸಮಭಾಗಿಯಾಗೆಕೊಂಡು ಅಷ್ಟಾವ[6]ಶೇಷ ಕಷಾಯಮಂ ಮಾಡಿ ಕುಡಿಯೆ ಪಿತ್ತಜ್ವರಂ ಕಿಡುವುದು—೧೭.

ಟೀ|| ಅಣಿಲೆಯಕಾಯ್, ಕಳವಿಗೆಯಬೇರ್, ಲಾಮಂಚಂ, ಕಕ್ಕೆಯಕುಡಿ, ಭದ್ರಮುಸ್ತೆ, ಪರ್ಪಟಕಂ, ದೊಡ್ಡಪತ್ರೆ ಈ ಔಷಧಂಗಳಂ ಸಮಭಾಗೆಯಾಗಿಕೊಂಡು ಕಷಾಯಮಂ ಅಷ್ಟಾವಶೇಷಂಮಾಡಿ ಕುಡಿಯೆ ಪಿತ್ತಜ್ವರಂ, ದೇಹದಉಷ್ಣಂ, ಕಳವಳದ [7]ನುಡಿ ಇವೆಲ್ಲಂ ಮಾಣ್ಬುವು—೧೮.

ಟೀ|| ನೆಲಬೇವು, ಚಿತ್ರಮೂಲದಬೇರ್, ಪಿಪ್ಪಲಿ, ಶುಂಠಿ ಇವಂ ಸಮಭಾಗೆಯಾಗಿಕೊಂಡು ಅಷ್ಟಾವಶೇಷಕಷಾಯಂ ಮಾಡಿ ಕೊಳಲ್ ಶ್ಲೇಷ್ಮಜ್ವರಂ ಕಿಡುಗುಂ—೧೯.

1 ಜಳಶುಂಠಿಯಮರ್ದುವಳ್ಳಿ। ಗೋಳೆದುಱುಚೆಯುಮೆಂಬಿವಂ ಕಷಾಯಂ. 2 ರೋಗಂ ವಿಷಮಜ್ವರ ಮೂಱುದಿವಸದಿಂದುಪ. 3 ಯರುಷಕ್ಕಂ. 4 ಭದ್ರಮುಸ್ತೆ. 5 ಕಷಾಯಮನಷ್ಟಾವಶೇಷಮಾಗಿ ಮಾಡಿ. 6 ಶೇಷಮಾಗಿ ಮಾಡಿಕೊಳಲ್. 7 ನುಡಿಹ.

(ಸನ್ನಿಪಾತಕ್ಕೆ)

ಕಂ|| ಜಳದಂ ಕಳವಿಗೆ ಪಡಲಂ |
ಫಳತ್ರಮುಂ ದೇವದಾರು ನಿಶೆ[1] ನಿಂಬಮಿವಂ ||
ಜಳದಿಂ ಮಱುಗಿಸಿ ಕುಡಿಗದು |
ಕಳೆಗುಂ ಬಿಡ[2]ದಲೆವ ಸನ್ನಿಪಾತಜ್ವರಮಂ || ೨೦ ||

(ಅಜೀರ್ಣಶ್ವಾಸಕ್ಕೆ)

ಬರಿವದನೆಯಮೃತಲತೆ ನಾ |
ಗರಮೆಂಬಿವಿನಿತಱ ಕಷಾಯಮಂ ಮಗಧರುಹಂ ||
ಬೆರಸಿ ಕುಡಿಯಿಸುಗಜೀರ್ಣ |
ಜ್ವರಾರುಚಿ ಶ್ವಾಸಕೋಶ ಶೂಲಾಪಹರಂ || ೨೧ ||

(ವಿಷಮಜ್ವರಕ್ಕೆ)

ಭಾಗಕ್ಷೀರಸಮನ್ವಿತ |
ನಾಗರಂ ಮೇಣ್ ಪಯೋಘೃತಕ್ಷೌದ್ರಯುತಂ ||
ಮಾಗಧಮಂ ಮಱುಗಿಸಿ ಕುಡಿ |
ದಾಗಳೆ ವಿಷಮಜ್ವರೋಪಶಮನಮುದಕ್ಕುಂ || ೨೨ ||

(ಶೀತಜ್ವರಕ್ಕೆ) (ಸೂಱ್ಜ್ವರಕ್ಕೆ) ?

ಗುಡಮಂ ತ್ರಿಫಲೀಜಳದೊಳ್ |
ಕುಡಿವುದಪಾಮಾರ್ಗಧೂಪಮಂ ಕುಡುವುದು ಮೇಣ್ ||
ಪೆಡೆಯುಕ್ಕಿಯ ಬೇರಂ ಕ |
ಟ್ಟಿಡುವುದು ಕರ್ಣದೊಳೆ ಪಿಂಗುಗುಂ ಸೂಱ್ಜ್ವರಮುಂ || ೨೩ ||

ಟೀ|| ಭದ್ರಮುಸ್ತೆ, ಕಳವಿಗೆಯಬೇರ್, ಕಹಿಪಡವಲಂಸಮೂಲಂ, ಅಳಿಲೆಕಾಯ್, ನೆಲ್ಲಿಯಚ(ಸೆ)ಟ್ಟು, ತಾರೆಯಕಾಯ್, ದೇವದಾರು, ಅರಿಸಿನಂ [ನೆಲಬೇವು] ಈ ಔಷಧಂಗಳಂ ಸಮಭಾಗೆಯಾಗಿಕೊಂಡು ಅಷ್ಟಾವಶೇಷಮಾಗಿ ಕಷಾಯಂಮಾಡಿಕೊಳಲ್ ಸನ್ನಿಪಾತಜ್ವರಂ ಕಿಡುವುದು—೨೦.

ಟೀ|| ನೆಲಗುಳ್ಳಂ, ಅಮರದುವಳ್ಳಿ, ಶುಂಠಿ ಈ ಮೂಱು ಓಷಧಿ(ಔಷಧಂ)ಗಳಂ ಸಮಭಾಗೆಯಾಗಿ ಕೊಂಡು ಅಷ್ಟಾವಶೇಷಮಾಗಿ ಮಾಡಿ ಪಿಪ್ಪಲಿಯ ಚೂರ್ಣಮಂ ಪ್ರತಿಪಾಕಮಾಗಿಟ್ಟು ಕುಡಿಯಲ್ ಅಜೀರ್ಣಜ್ವರಂ ಅರುಚಿ, ಕೆಮ್ಮು, ಉಬ್ಬಸಂ ಶೂಲೆ ಇವುಗಳಂ ಕಿಡಿಸುವುದು—೨೧.

ಟೀ|| ಆಡಿನಪಾಲೊಳಗೆ ಶುಂಠಿಯಂ ಹಾಯ್ಕಿ ಕಾಯಿಸಿ ಕುಡಿಯುವುದು, ಅಲ್ಲದಿರ್ದೊಡೆ ಪಾಲ್, ತುಪ್ಪಂ, ಜೇನತುಪ್ಪಂ, ಈ ಮೂಱುಮಂಕೂಡಿ ಪಿಪ್ಪಲಿಯಚೂರ್ಣಮಂ ಹಾಯ್ಕಿ ಕಾಯಿಸಿ ಕುಡಿವುದು, ವಿಷಮಜ್ವರಂ [3]ತಗ್ಗುವುದು—೨೨.

ಟೀ|| ಬೆಲ್ಲಂ, ಅಣಿಲೆಕಾಯ್, ನೆಲ್ಲಿಯಸೆಟ್ಟು, ತಾರೆಯಕಾಯ್, ಇವಂ ಬಿಸಿನೀರೊಳರೆದು ಕುಡಿವುದು, ಅಲ್ಲಾ ಉತ್ತರಣೆಯಂ ಸಮೂಲಮಂ ಬೆಂಕಿಯೊಳಗೆ ಹಾಯ್ಕಿ ಪೊಗೆಯಂ ಕುಡಿವುದು, ಅಕ್ಕಿಹೆಡೆಯಬೇರಂ ತಂದು ಕಿವಿಯೊಳ್ ಕಟ್ಟುವುದು, ಇದಱಿಂದೆ ಶೀತ (ಸೂಱ್) ಜ್ವರಂಗಳ್ ಕಿಡುವುವು—೨೩.

1 ಯೆಂಟಿವ ತ | ಜ್ವಳನೊಳ್. 2 ದರವ. 3 ಮಾಣ್ಗುಂ.



(ಶೀತ (ಸೂಱ್?) ಜ್ವರಕ್ಕೆ)

ಕಂ|| ಪೊಸೆದಾತ್ಮ[1] ಜಳದೆ ಬೇಳೆಯ |
ರಸಮಂ ಕಿವಿಯೊಳಗೆ [2]ಪಿಱಿಗೆ ಮೇಣ್ ಕಟ್ಟುಗೆ ವಾ ||
ಯಸಜಂಘೆಯ ಬೇಳೆಯ ಕಿಱು |
ಕುಸಾಲೆ[3]ಬೇರೊಂದನಲ್ತೆ ಸೂಱ್ಜ್ವರಮಱಿಗುಂ || ೨೪ ||

(ಸ್ಫೋಟಕಕ್ಕೆ)

ಸಿರಿಕಂಡಂ ಬ್ರಾಹ್ಮಿಯೆನಿ |
ಪ್ಪೆರಡಂ ನೋಣಲ್ಲದಂದು ತುಂಡಳಜಳದಿಂ ||
ದರಸಿನಮಂ ಪುಣಿಸೆಯ ಬೇ |
ರ ರಸಮುಮಂ ಕುಡಿಯೆ ಕಿಡಿಸುಗುಂ ಸ್ಫೋಟಕಮಂ || ೨೫ ||

(ಸೀವಳಿಗೆಗೆ)

ಸಲಿಲಯುತಂ ಮಧುವಂ ಕುಡಿ |
ಯಲೊಡಂ ಸೀವಳಿಗೆಯಪ್ಪುವುವು ಮಾಣ್ಗುಂ ಮೇ ||
ಣಲಸದೆ ಲೆಕ್ಕಿಸುತುಂ ಸೆ ||
ಳ್ಳಿಲೆಯಂ ಪೆಸೆಗೊಂಡು ಪಱಿದೊಡಾದುವು ಕಿಡುಗುಂ || ೨೬ ||

ಬಾಯಾಱಿಕೆ(ತೃಷೆ)ಗೆ

ಅಂಬುಧರವಂಬು ಪರ್ಪಟ |
ಕಂ ಬಾಳಂ ಶುಂಠಿ ಮಳಯರುಹಮಿವಱ ಕಷಾ ||
ಯಾಂಬುವೆ ಮೇಣ್ ಸಮಮಧುಕಸಿ |
ತಾಂಬುವೆ ಮೇಣ್ ಕುಡಿದೊಡಿರದೆ ಕಳೆಗುಂ ತೃಷೆಯಂ || ೨೭ ||

ಟೀ|| ನರಮೂತ್ರದೊಳ್ [4]ಹರಳೆಲೆಯರಸಮಂ [5]ಕೂಡಿ ಕಿವಿಯೊಳ್ ಹಿಂಡಿವುದು. [6]ಅಲ್ಲದಿರ್ದೊಡೆ ಕಾಗೆದೊಂಡೆಯಬೇರ್, ಹರಳುವೆಲೆಯಬೇರ್, ಕಿಱುಕುಸಾಲೆಯಬೇರ್, ಈ ಔಷಧಂಗಳೊಳಗೆ ದೊಕಿದುದನೊಂದಂ [7]ಕೊಂಡು ಕಿವಿಯಲ್ಲಿ ಕಟ್ಟುವುದು, ಶೀತ (ಸೂಱ್) ಜ್ವರಂಗಳ್ ಕಿಡುವುವು—೨೪.

ಟೀ|| ಶ್ರೀಗಂಧಂ, ಬ್ರಾಹ್ಮಿ ಈ ಎರಡುಮಂ ಅಕ್ಕಿಯಕರ್ಚಿನಲ್ಲಿ ಅರೆದುಕುಡಿವುದು, ಅಲ್ಲಾ ಅರಿಸಿನದ ಚೂರ್ಣಮಂ ಹುಣಿಸೆಯಬೇರರಸಮಂ ಅಕ್ಕಿಯಕರ್ಚಿನಲ್ಲಿ ಕುಡಿವುದು, ಇವಱಿಂದೆ ಮೈಯ್ಯೆಲ್ಲಾದ ಉರಿಯ ಪುಗುಳ್ಗಳ್ ಮಾಣ್ಬುವು—೨೫.

ಟೀ|| ಜೇನತುಪ್ಪಮಂ, ಉದಕಮಂಕೂಡಿ ಕುಡಿಯಲ್ ದೇವಿಯಸಸಿ ಮಾಣ್ಬುದು, ಅಲ್ಲಾ ಮೆಯ್ಯೊಳಾದೊಡೆ ಆ ಪುಗುಳ್ಗಳನೆಣಿಸಿಕೊಂಡು ರೋಗಿಯಪೆಸರ್ಗೊಂಡು ಚಳ್ಳಿಲೆಯುಮಂ ಪಱಿದು ಬಿಸುಡಲ್ [8]ಪುಟ್ಟಿದ ದೇವಿಯಸಸಿ ಮಾಣ್ಬುದು—೨೬.

ಟೀ|| [9]ಭದ್ರಮುಸ್ತೆ, ಮುಡಿವಾಳಂ, ಪರ್ಪಟಕಂ, ಲಾಮಂಚಂ ಶುಂಠಿ, ಶ್ರೀಗಂಧಂ ಈ ಔಷಧಗಳಂ ಕಷಾಯಂ ಮಾಡಿ ಕುಡಿವುದು. ಅಲ್ಲದಿರ್ದೊಡೆ ಯಷ್ಟಿಮಧುಕಂ ಮುಡಿವಾಳಂ

1 ರಸವೆ. 2 ಪಿಱಿಯೆ. 3 ಬೇರನೊಪನಲೆವ ಸೂರಳಮಱಿಗುಂ. 4 ಹರಳು ವೋಲೆಯ. 5 ಕೊಂಡು. 6 ಮತ್ತಂ. 7 ತಂದು. 8 ಮುಟ್ಟಿದ. 9 ಅಂಬುಧರಮೆಂಬುದು ಭದ್ರಮುಸ್ತೆ.

ಕಂ|| ಎಜಡುಂಬಾಳಕ ಪದ್ಮಕ |
ಮೆರಡುಂ ಚಂದನಮೆನಿಪ್ಪವಂ ಕೆಳ್ಗಟಾಯಿಂ ||
ದರೆದು ನಡುನೆತ್ತಿಯೊಳ್ ಪೂ |
ಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ || ೨೮ ||

ಜಳದೊಳರೆದಾಮಯಂ (ನ) ಯ |
ಷ್ಟಿಲತಾಕರ್ಪೂರವಾಲ ಬೀಟಲ್ ನೀಲೋ ||
ತ್ಪಲ ಮೆಂಬಿವನಣಲೊಳ್ [1]ತಾ |
ಳ್ದಲೊಡಂ ನೀರಡಿಕೆಯೊದವನದು ಪಿಂಗಿಸುಗುಂ || ೨೯ ||

(ಪಗಲನಿದ್ರೆಗೆ)

ಮಧುಕಂ ಬೃಹತೀಫಳಮಂ |
ಬುಧರಂ [2]ಸಿಂಧುಪ್ರಸೂತಮೆಂಬೀ ಪೇಟ್ದೌ ||
ಷಧಮಂ ನಸ್ಯಂಗೆಯ್ದಂ |
ದಧಿಕಂ ಬೋಂಪಿಸುವ ನಿದ್ರೆಯಂ ಮಾಣಿಸುಗುಂ || ೩೦ ||

(ಪಲ್ದಿಂಬುದರ್ಕೆ - ನಿದ್ರೆಬರ್ಪುದರ್ಕೆ)

ಎಸಡಿನ ಪಾಲಂ ದುಗ್ಧಾ |
ಜ್ಯಸಮನ್ವಿತಮುಟ್ಟು ತೊಡೆಯೆ ಪಲ್ದಿಂಬುದನೋ ||
ಡಿಸುಗುಂ ನೆತ್ತಿಯೊ[3]ಳಡೆ ವಾ |
ಯಸಜಂಘೆಯ ಬೇರನಧಿಕನಿದ್ರೆಯ [4]ನೀಗುಂ || ೩೧ ||

ಇವಂ ಕೂಡಿ ಕಷಾಯಂ ಮಾಡಿ ಸಕ್ಕರೆಯಂ ಬೆರಸಿ ಕುಡಿವುದು ಇವಱಿಂ ಬಾಯ್ಪ[5]ಱಿಕೆ ಕಿಡುವುದು-೨೭.

ಟೀ|| ಲಾಮಂಚಂ, ಮುಡಿವಾಳಂ, ತಾವರಿಯುಗೆಂಡೆ, ಕೆಂಪಿನತಾವರಿಗೆಂಡೆ, ಶ್ರಿಗಂಧಂ ಇವಂ ಅಕ್ಕಿಯಕರ್ಚಿನಲ್ಲಿ ಅರೆದು ನಡುನೆತ್ತಿಯಲ್ಲಿ ಪೂಸುವುದು, ರೋಗಿಯ ಬಾಯಾಱಿಕೆಯಂ ತಗ್ಗಿಸುವುದು—೨೮.

ಟೀ|| ಯ(ನ)ಷ್ಟಿಮಧುಕಂ, ಕಪ್ಪುರವಳ್ಳಿ, [6]ಆಲದಬೀಟಲ್, ಕನ್ನೈದಿಲೆಯಗೆಂಡೆ ಇವನುದಕದಲ್ಲರೆದು ಅಣಲೊಡಸಿಕೊಳಲ್ ನೀರಡಿಕೆ ಮಾಣ್ಬುದು—೨೯.

ಟೀ|| ಯ(ನ)ಷ್ಟಿಮಧುಕಂ, ಹೆಗ್ಗುಳ್ಳದಕಾಯ್, ಭದ್ರಮುಸ್ತೆ, ಸೈಂಧವಂ ಇವನುದಕದಲ್ಲಿ ಅರೆದು ನಸ್ಯಮಂಮಾಡಲ್ ಆಲಸ್ಯನಿದ್ರೆಕಿಡುವುದು—೩೦.

ಟೀ|| ಕರ್ಕಾಟಕ ಶೃಂಗಿಯಂ ಆ ಪಾಲಲ್ಲಿ ಅರೆದು ಹಾಲುದುಪ್ಪದಲ್ಲಿಟ್ಟು ಮಂಡೆಯಲ್ಲಿ ಪೂಸಲ್ ಪಲ್ತಿಂಬುದು ಮಾಣ್ಬುದು. ಕಾಕಜಂಘೆಯ ಬೇರಂ ಉದಕದಲ್ಲಿ ಅರೆದು ನೆತ್ತಿಯೊಳೊತ್ತಲ್ ನಿದ್ರೆ ಬರ್ಪುದು—೩೧.

1 ತಾಳ್ದಡರದೆ. 2 ಬುಧರಸ. 3 ಳಿದೆ. 4 ನಿಸುಗುಂ. 5 ಱಿಕೆಯ ಕಿಡಿಸುವುದು. 6 ಅದಱ.



(ಬಿಕ್ಕಟ್ ಊರ್ಧ್ವಶ್ವಾಸ ಕಂಠರೋಗಂಗಳ್ಗೆ)

ಕಂ|| ಮೋದಕದಿಂ ಮಧು[1]ಪಿಪ್ಪಲಿಯ |
ಬೂದಿ ಕಣಾಚೂರ್ಣಮೆಂಬಿವಂ ತಿನೆ ರುಜೆಯಿಂ ||
ದಾದಿಕ್ಕಟುಮೂರ್ಧ್ವಶ್ವಾ |
ಸೋದಯಮುಂ ಕಂಠರೋಗಮುಂ ಪ್ರಶಮಿಸುಗುಂ || ೩೨ ||

(ವಮನಕ್ಕೆ)

[2]ಮದನಫಳ ಬೀಜಮಂಕೋ |
ಳದ ಮೂಳಮೆನಿಪ್ಪವೆರಡಮಂ [3]ಪೋಂತಿನ ಮೂ ||
ತ್ರದೊಳರೆದು ಬಿಸಿಯ ನೀರ್ವೆರ |
ಸದನಿನಿಸಂ ಕುಡಿಯಲಂತದಕ್ಕುಂ ವಮನಂ || ೩೩ ||

(ಛರ್ದಿಗೆ)

ತೆಗಪಿದ ಬಿಲ್ವಾಂಬುವನ |
ಕ್ಕೆ ಗುಳೂಚಿಯ ರಸಮನಕ್ಕೆ ಮಧುಮಿಶ್ರಿತ ಮಿಾಂ ||
ಟುಗೆ ಮೇಣೆಳಗಱುಕೆಯಿಾ ನ |
ಕ್ಕಿಗರ್ಚಿನೊಳ್ ಕುಡಿಯೆ [4]ಛರ್ದಿಯಂ ಮಾಣಿಸುಗುಂ || ೩೪ ||

(ವಿರೇಚನಕ್ಕೆ)

*ರಥೋದ್ಧತೆ|| ತಿಗಡೆ ಶುಂಠಿ ಶಿವೆ ಬೆಲ್ಲಮೆಂಬ ಮ |
ರ್ದುಗಳನಕ್ಕೆ [5]ಪುರಿದಿರ್ದ ಕಟ್ಟಿವ ||
ತ್ತಿಗೆಯ [6]ಬಿತ್ತುಗಳನಕ್ಕೆ ತಿಂಗೆ ಮಾ |
ಡುಗುಮದಾರ್ಗಮಧಿಕಂ ವಿರೇಕಮಂ || ೩೫ ||

ಟೀ|| ಅಜಮೋದಂ, [7]ಹಿಪ್ಪಲಿಯಗಱಿಯ ಬೂದಿ, ಹಿಪ್ಪಲಿಯ ಚೂರ್ಣಂ ಇವಂ ಜೇನತುಪ್ಪದಲ್ಲಿ ಕಲಸಿ ಮೆಲಲ್ ಬಿ(ಇ)ಕ್ಕುಟುಂ, ಮೇಲುಬ್ಬಸಮುಂ, ಕಂಠರೋಗಂಗಳುಂ ಮಾಣ್ಬುವು—೩೨.

ಟೀ|| ಮಗ್ಗಾರೆಯ ಬೀಜಂ, ಅಂಕೋಲೆಯ ಬೇರ್ ಈ ಎರಡುಮಂ ಆಡಿನ ಮೂತ್ರದೊಳರೆದು ಬಿಸುನೀರಲ್ಲಿ ಕದಡಿ ಒಪ್ಪಚ್ಚಿಯಂ ಕುಡಿಯಲ್ ವಮನಮಪ್ಪುದು—೩೩.

ಟೀ|| ಬೆಲ್ಲವತ್ತ್ರದ ಬೇರ ಕಷಾಯಮಂ ಜೇನತುಪ್ಪಮಂ ಕೂಡಿ ಕುಡಿವುದು. [illegible] ಅಮರದುವಳ್ಳಿಯ ಕಷಾಯಮಂ ಜೇನುತಪ್ಪಮಂ ಕೂಡಿ [8]ಕುಡಿವುದು. ಅಲ್ಲಾ ಎಳಗಱುಕೆಯ ನಕ್ಕಿ ಗರ್ಚಿನಲ್ಲರೆದು ಕುಡಿಯುವುದು, ಇವಱಿಂದೆ ಛರ್ದಿ ಮಾಣ್ಬುದು—೩೪.

ಟೀ|| ತಿಗಡೆ, ಸುಂಠಿ, ಅಣಿಲೆಕಾಯ್ ಈ ಮೂಱಱ ಚೂರ್ಣಮಂ ಬೆಲ್ಲದಲ್ಲಿ ಕಲಸಿ ಮೆಲಲ್ ವಿರೇಚನವಪ್ಪುದು. ಅಲ್ಲಾ ಕಟ್ಟವತ್ತಿಗೆಯ [illegible]ಮಂ ಮಾಡಿ ಬೆಲ್ಲದಲ್ಲಿ ಕಲಸಿ ಮೆಲಲ್ ವಿರೇಚನಮಪ್ಪುದು—೩೫.



1 ಪಿಪ್ಪಲಿಯು ಬೂದಿ ಪಿಪ್ಪಲಿಯ ಚೂರ್ಣಮಿವ ಮೆಲೆ ರುಜೆಯಿಂ ದಾದತಿಬಿಕ್ಕೂರ್ಧ್ವ, ದಾವಬಿಕ್ಕುಟು. 2 ಮದನತರು ಮೂಫಲಬೀಜಮಂಕೋಲೆಯ. 3 ಪೊಂದಿನ. 4 ತರ್ದಿಯಂ. 5 ಪಿರಿದಿರ್ದ. 6 ಬಿತ್ತುಗಳನಳನಕ್ಕೆ. 7 ಹಿಪ್ಪಲಿಯ ಗಱಿಯ. 8 ಕುಡಿಪ ಮತ್ತೆ.

*ಒಂದು ಪ್ರತಿಯಲ್ಲಿ ಈ ವೃತ್ತಕ್ಕೆ ಪ್ರತಿಯಾಗಿ ಈ ಕಂದವಿದೆ—

ಕಂ|| ಶಿವೆತಿಗಡೆ ಶುಂಠಿಗಳ ಚೂ | ರ್ಣವ ಮಾಡಿಯೆ ಬೆಲ್ಲದಲ್ಲಿ ಮೆಲೆ ಪುರ್ಬಿದಕ |
ಟ್ಟವತ್ತಿಗೆಯ ಬೀಜಮಂ ತಿಂ | ಗೆ ವಿರೇಚನವಧಿಕಮಕ್ಕು ಚಾಂಡನ ಮತದಿಂ ||

(ಕೆಯ್ಮ ಸಕಕ್ಕೆ)

ಕಂ|| ನವನೀತಮುಮಂ ಶುಕತುಂ |
ಡಪ್ರಮಂ ಮೇಣ್ ಬಿಸಿಯನೀರು[1]ಮಂಕೋಳದ ಮೂ ||
ಳವುಮಂ ಮರವಸಲೆಯ ಪ |
ತ್ರ ತೊಳಸಿ ಸೇವಿಸುಗೆ ಪಿಂಗುಗುಂ ಕೆಯ್ಮಸಕಂ || ೩೬ ||

(ಕ್ಷಯರೋಗಕ್ಕೆ)

(೧)

ನಾಗಬಲಾ ಘೃತಮಧುಗಳ |
ನಾಗಳುಮುಪಯೋಗಿಸುತ್ತುಮಿರ್ದಂದು ಮಹೋ ||
ದ್ಯೋಗಿ [2]ಗೆಜಬ್ ಪಿಂಗುವವೋಲ್ |
ಬೇಗಂ ಪಱಿಪಟ್ಟು ಪಿಂಗುಗುಂ ಕ್ಷಯರೋಗಂ || ೩೭ ||

(೨)

ನೆಲದಾಲಿಂ ಮೇಣ್ ನೀಲಿಯ |
ದಳಮಂ ಮೇಣ್ ವಿಷ್ಣುಕ್ರಾಂತೆಯೆಲೆಯಂ ಮೇಣ್ ನೆ ||
ಗ್ಗಿಲಬೇರ ನರೆದು ಪಾಲೊಳ್ |
ಸಲೆ [3]ಕುಡಿವಂ ಸಂಕ್ಷಯಕ್ಕೆ ಪಡೆಗುಂ ಕ್ಷಯುವಂ || ೩೮ ||

(ಗಳಗಂಡಕ್ಷಯ ವಾತಂಗಳ್ಗೆ)

ಅಳೆಯಿಂದಂ ಕಾಮಳೆ ತಂ |
ಡುಳ ಜಳದಿಂ[4]ದರುಸೆ ಗವ್ಯಘೃತದಿಂದಂತಾ ||
ಗಳಗಂಡ ಕ್ಷಯ ವಾತಂ |
ಗಳೆ ಕಿಡುಗುತ್ತರಣೆಯಂ ಪ್ರಯೋಗಿಸೆ ಸತತಂ || ೩೯ ||

---

ಟೀ|| ಆನೆಗನ ತಿಗುಡನರೆದು ಬೆಣ್ಣೆಯಲ್ಲಿ ಕಲಸಿ ಮೆ(ಲ್ವುದು)ಲಲ್, ಅಲ್ಲಾ ಅಂಕೋಲೆಯ ಬೇರಂ ಬಿಸುನೀರಲ್ಲಿ ಅರೆದು ಕುಡಿವುದು, ಅಲ್ಲಾ ಪಾಂಡವರ ಬಸಲೆಸೊಪ್ಪಂ [6]ತೊಳಸಿ(ಯಂ) ಮೆಲ್ವುದು, ಇವಱಿಂದೆ ಕೆಯ್ಮಸಕಂ ಮಾಣ್ಬುದು—೩೬.

ಟೀ|| ಕಳ್ಳಂಗಡಲೆಯ ಸಮೂಲಮನರೆದು ಜೇನುತುಪ್ಪದಲ್ಲಾದೊಡಂ ಅಲ್ಲಾ ತುಪ್ಪದಲ್ಲಾದೊಡಂ ಕಲಸಿ ಗುಳಿಗೆಯಂ ಕೊಳಲ್ ಕ್ಷಯರೋಗಂ ಮಾಣ್ಬುದು—೩೭.

ಟೀ|| ನೆಲದಾಲ ಗಂಡೆ[7]ಯಂ ಹಾಲಲ್ಲಿ ಅರೆದು ಕುಡಿಹ, ಅಲ್ಲಾ ನೀಲಿಯ[8]ಸೊಪ್ಪಂ ಹಾಲಲ್ಲಿ ಅರೆದು ಕುಡಿಹ, ಅಲ್ಲಾ ವಿಷ್ಣುಕ್ರಾಂತೆ[9]ಯಂ ಹಾಲಲ್ಲಿ ಅರೆದು ಕುಡಿಹ, ಅಲ್ಲಾ ನೆಗ್ಗಿಲ ಬೇರಂ[10] ಹಾಲಲ್ಲಿ ಅರೆದು [11]ಕುಡಿಹ ಇವಱಿಂದೆ ಕ್ಷಯ[12]ರೋಗಂ ಮಾಣ್ಬುದು—೩೮.

ಟೀ|| ಉತ್ತರಣೆಯ [13]ಬೇರಂ ಮಜ್ಜಿಗೆಯಲ್ಲಿ ಅರೆದು ಕುಡಿಯಲ್ ಕಾಮಲೆ ಕಿಡುಗುಂ. [14]ಉತ್ತರಣೆಯ ಬೇರನೆ ಅಕ್ಕಿಗರ್ಚಿನಲ್ಲಿ ಅರೆದು ಕುಡಿಯಲ್ ಮೂಲವ್ಯಾಧಿ ಮಾಣ್ಗುಂ. [15]ಉತ್ತರಣೆಯ ಬೇರಂ ತುಪ್ಪದಲ್ಲಿ ಅರೆದು ಕೊಳಲ್ ಗಳಗಂಡರೋಗ, ಕ್ಷಯರೋಗ, ವಾತರೋಗಂಗಳ್ ಕಿಡುವುವು—೩೯.

---

1 ಮಂಕೊಲಬಿ. 2 ದರ್ಪಿಂಗಡವೊಲ್. 3 ಕುಡಿಗುಂ. 4 ದರಿಸಿನ. 5 ಗಿಸು ಸತತಂ. 6 ಕುದಿಸಿ. 7 ಯಾಗಲಿ. 8 ಪ್ಪಾಗಲಿ. 9 ಯಾಗಲಿ. 10 ನಾಗಲಿ. 11 ಕುಡಿದರೆ. 12 ರೋಗಪರ.13 ಬ್ರಜನು. 14 ಆ ಬೇರನೆ. 15 ಅದೇ ಬೇರನೆ.



(ಆಯುಷ್ಯವರ್ಧನಕ್ಕೆ)

ಕಂ|| ಸಮಭಾಗೆಯಾಗಿ ಪೊಸಸಾ |
ಸಿವೆಯುಮನಂಕೋಲೆಯ [1]ಬೀಜಮಂ ಕೂಡಿ ಬಱಿ ||
ಕ್ಕವನೆಣ್ಣೆಗೊಂಡು ಸಲೆ ನ |
ಸ್ಯವೆಱೆದೊಡಾಯುಷ್ಯವರ್ಧನಂ ಬುಧ ಬಂಧೂ || ೪೦ ||

[2](ಬುದ್ಧಿವರ್ಧನಕ್ಕೆ)

ಘೃತಮಧುಸಹಿತಂ ಬಜೆಯಂ |
ಸಿತಮಂ ನೆಲ್ಲಿಯುಮನಿರ್ಪತೊಂದುದಿನಂ ||
ಸತತಮುಪಯೋಗಿಸುತಿ[3]ರ್ದಂ |
ಡತಿಶಯಮೇಧಾವಿಯಕ್ಕುಮಚಳಿತವಚನಾ || ೪೧ ||

(ನರೆತೆರೆಗಳ್ಗೆ)

ಬೆರಸಿ ಮಧುಘೃತಗಳಿಂ ನಾ |
ಗರ ಭಲ್ಲಾತಕ ವಿಳಂಗಮಂ ಸೇವಿಸುಗ ||
ಚ್ಚರಿ ಯೆಂಬಿನೆಗಂ ರುಜೆಯಂ |
ತೆರೆಯುಂ ನರೆಯುಂ ನಿರಂತರಂ ಗೆಲ್ದುಮವಂ || ೪೨ ||

(ಆಯುಷ್ಯವರ್ಧನಕ್ಕಂ— ನರೆತೆರೆಗಳ್ಗಂ)

ಮ|| ಅಳೆಯೊಳ್ ಬೋಟಿತರಂ ಸಿತಾಜ್ಯ[4]ದೊಳಮಂಗುರ್ ಬೆಲ್ಲದೊಳ್ ನಾಗರಂ |
ತಿಳದೊಳ್ ಕರ್ಶಿತದೊಳ್ ಫಲತ್ರಿತಯ ಮುಷ್ಣಕ್ಷೀರದೊಳ್ [5]ನೆಗ್ಗಿಲಾ ||
ಮಳಕಂ [6]ಚಿತ್ರಕಮೂಳಮಾಸಡಿ ವಿದಾರೀಕಂದಮೊಂದೊಂದೆ ಕೇ |
ವಳ ಮಾಯುಷ್ಯಕರಂ ಜರಾಮಯಹರಂ ಲಾವಣ್ಯ [7]ಸಂಪತ್ಕರಂ || ೪೩ ||

---

ಟೀ|| ಪೊಸಸಾಸಿವೆ, ಅಂಕೋಲೆ ಬೀಜಂಗಳ್ ಇವಂ ಸಮಭಾಗೆಯಾಗೆ ಕೊಂಡು ಸೂರ್ಯಪುಟದಿಂದೆ ತೈಲಮಂ ತೆಗೆದು ಆ ತೈಲಮಂ ನಸ್ಯಂ ಮಾಡಲ್ ಆಯುಷ್ಯವರ್ಧನಮಕ್ಕುಂ—೪೦.

ಟೀ|| ಬಜೆ, ಸಕ್ಕರೆ, ನೆಲ್ಲಿಯಸಟ್ಟು ಈ ಮೂಱುಮನೊಂದಾಗರೆದು ಜೇನತುಪ್ಪದೊಳಾದೊಡಂ, ತುಪ್ಪದೊಳಾದೊಡಂ ಕಲಸಿ [ಇರ್ಪತ್ತೊಂದುದಿನ ಪರ್ಯಂತಂ] ಮೆಲಲ್ ಬುದ್ಧಿ ಪೆರ್ಚುವುದು—೪೧.

ಟೀ|| ಶುಂಠಿ, [8]ಕೇಱಿಗೊಟ್ಟೆ, ವಾಯುವಿಳಂಗಂ ಈ ಮೂಱಿಂ [9]ಸಮಭಾಗೆಯಾಗೆಕೊಂಡು ಚೂರ್ಣಮಂ ಮಾಡಿ ಜೇನತುಪ್ಪಮನಾದೊಡಂ ಅಲ್ಲಾ ತುಪ್ಪಮನಾದೊಡಂ ಕಲಸಿ ಮೆಲಲ್ ನರೆತೆರೆಗಳ್ ಮಾಣ್ಬುವು—೪೨.

ಟೀ|| ಬೋಟಿೋತ್ತರದ ಸಮೂಲಮಂ ಮಜ್ಜಿಗೆಯಲ್ಲರೆದು [10]ಕುಡಿಹ; ಅಂಗುರಂ, ಸಕ್ಕರೆ, ಈ ಎರಡುಮಂ ತುಪ್ಪದಲ್ಲಿ ಅರೆದು[11]ಕೊಳುಹ; ಶುಂಠಿಯ ಚೂ[12]ರ್ಣಮಂ ಬೆಲ್ಲದಲ್ಲಿ ಕಲಸಿ

---

1 ಬಿತ್ತಮಂ. 2 ಬುದ್ಧಿಗೆ. 3 ರ್ದಂತತಿ. 4 ದಲವೊಂಗು, ದಲವಾಂಗು. 5 ನೇಗಿಲಾ. 6 ಚಿತ್ರದ ಮೂಲಕ. 7 ಪಕ್ಕರಜಂ. 8 ಗೇರಪರಳು. 9 ಸಮಾನಿಸಿಕೊಂಡು. 10 ಕೊಳ್ಳಲು ಮತ್ತಂ. 11 ಕೊಳ್ಳಲು. 12 ರ್ಣಮಂ ಬೆಲ್ಲದಲ್ಲಿ ಕಲಸಿ ಮೆಲುಹ, ಎಳ್ಳು.

(ಮೆಯ್ ನಾಱುವುದು ಪೋಪುದರ್ಕೆ)

ಕಂ|| ಅತಿದುರ್ಗಂ[1]ಧಾಂಗಂ ಬೋ |
ಱತರದ ಬಿತ್ತುಗಳನರೆದು ಸೌವೀರಸಮ ||
ನ್ವಿತಮಾಗಿ ಕುಡಿಯೆ ಸುರಭೀ |
ಕೃತಾಂಗನಕ್ಕುಂ ಸರಸ್ವತೀಮುಖತಿಳಕಾ || ೪೪ ||

(ವೀರ್ಯವೃದ್ಧಿ - ಪುಷ್ಟಿಗಳ್ಗೆ)

ನವಣೆಯಪಿಟ್ಟಂ ನೆಲದಾ |
ಱುವ ನೊಡವೊಯ್ದು ಟ್ಟು ಘೃತಸಮೇತಂ ಮೇಣ್ ದು ||
ಗ್ಧವಿಮಿಶ್ರಂ ಸೇವಿಸೆ ವೀ |
ರ್ಯವೃದ್ಧಿಯುಂ ಮೆಯ್ಯ ಪುಷ್ಟಿಯುಂ ಸವನಿಸುಗುಂ || ೪೫ ||

(ವೀರ್ಯವರ್ಧನಕ್ಕೆ - ನರೆತೆರೆಗಳ್ಗೆ)

ಜವೆ ನಸುಗುನ್ನಿಯುಪಾಮಾ |
ರ್ಗವುದ್ದು ಕೊಳುಗುಳಿಯೆನಿಪ್ಪಿವಿಂತಿನಿತಱ ಬೀ |
ಜವ ನರೆದು ದುಗ್ಧದೊಳ್ ಕುಡಿ |
ಯೆ ವೀರ್ಯವೃದ್ಧಿಯನನಾರತಂ ಪೆರ್ಚಿಸುಗುಂ || ೪೬ ||

ಮೆಲುಹ; ನೆಗ್ಗಿಲಬೇರಂ ಬಿಸಿಯ ಹಾಲಲ್ಲಿ ಅರೆದು ಕುಡಿಹ; ಎಳ್ಳು, ಅಣಿಲೆಯ ಕಾಯ್, ತಾರೆಯ ಕಾಯ್, ನೆಲ್ಲಿಯ ಸೆಟ್ಟು ಈ [2]ನಾಲ್ಕುಮಂ ಚೂರ್ಣಂಮಾಡಿ, ಸಕ್ಕರೆಯಲ್ಲಿ ಕಲಸಿ ಮೆಲುಹ, [3]ನೆಲ್ಲಿಯ ಸೆಟ್ಟಂ ಬಿಸಿಯ ಹಾಲಲ್ಲಿ ಅರೆದು ಕುಡಿಹ, ಚಿತ್ರಮೂಲದ ಬೇರಂ ಬಿಸಿಯ ಹಾಲಲ್ಲಿ ಅರೆದು ಕುಡಿಹ, ಆಸಡಿಯ ಬೇರಂ ಹಸಿಯ ಹಾಲಲ್ಲಿ ಅರೆದು ಕುಡಿಹ, ನೆಲಗುಂಬಳದ ಗೆಂಡೆಯಂ ಬಿಸಿಯ ಹಾಲಲ್ಲಿ ಅರೆದು ಕುಡಿಹ, ಈ ಔಷಧಿಗಳಂ [4]ಪ್ರತ್ಯೇಕವಾಗಿ ಕೊಳಲ್ ಆಯುಷ್ಯವರ್ಧನಂ, ನರೆತೆರೆಗಳ್ [5]ಬಾರವು. ದೇಹಂ ಕೋಮಳತೆಯಿನಪ್ಪುದು—೪೩.

ಟೀ|| ಬೋಱತರದ ಬಿತ್ತಂ ಅಂಬಿಲದಲ್ಲರೆದು ಕುಡಿಯಲ್ [6]ಮೆಯ್ ನಾಱುವುದು [7]ಮಾಣ್ಬುದು—೪೪.

ಟೀ|| ನವಣೆಯ ಪಿಟ್ಟಂ ನೆಲದಾಱದ ಗೆಂಡೆಯುಮಂ ಕೂಡಿ ಹಿಟ್ಟುಗುಟ್ಟಿ [8]ಸಂಕಟಿಯಾಗಿ ತೊಳಸಿ ತುಪ್ಪಮನಾದೊಡಂ, ಪಾಲನಾದೊಡಂ ಕಲಸಿ ಮೆಲಲ್ ವೀರ್ಯ[9]ವೃದ್ಧಿಯಕ್ಕುಂ ದೇಹಪುಷ್ಟಿಯುಮಪ್ಪುದು—೪೫.

ಟೀ|| ಜವೆ, ನಸುಗುನ್ನಿಯ ಬೀಜಂ, ಉತ್ತರಣೆಯ ಬೀಜಂ, ಉದ್ದು, ಕೊಳುಗುಳಿಕೆಯ ಬೀಜಂ ಇವೆಲ್ಲಮಂ ಪಾಲಲ್ಲಿ ಅರೆದು ಕುಡಿಯೆ ವೀರ್ಯವೃದ್ಧಿಯಪ್ಪುದು—೪೬.

1 ಧಂಗಂ. 2 ಈ ಮೂಱುಮಂ. 3 ನೆಗ್ಗಿಲ ಬೇರಂ.........ಕುಡಿಹ. 4 ಬೇರೆಬೇರೆಯಾಗಿ. 5 ಕಿಡುವುವು. 6 ಮೇಲೆ, ಮೇಱೆ. 7 ಪೋಗುವುದು. 8 ಸಂಟಿಯಾಗಿ, ಸಂಕುಟಿಯಂ. 9 ರ್ಯಂ ಪೆರ್ಚುವುದು.



ಕಂ|| ಜವೆ ಕಳಮಂ ಮಾಷಂ ಗೋ |
ದುವೆ ಪಿಪ್ಪಲಿಯೆಂಬಿವಿನಿತುವಂ ಗೋಘೃತದಿಂ |
ದವುಗಡಿಸಿ ತಿಂದು ಸಿತದು |
ಗ್ಧವ ನಿರುಳೊಳ್ ಕುಡಿಯೆ ವೀರ್ಯವರ್ಧನಮಕ್ಕುಂ || ೪೭ ||

(ನರೆಬಾರದಿರ್ಪುದರ್ಕೆ)

ಕ್ರಿಯೆಯಿಂದೆ ಬೇಱೆ ವೇಱಣಿ |
[1]ಲೆಯ ತಾಱೆಯ ಸೆಳ್ಳಿಕಾಯ ಬೀಜದ ಸೀವ ||
ನ್ನಿಯ ಬೇವಿನೆಣ್ಣೆಯುಂ ಕೊಂ |
ಡು ಯತ್ನದಿಂ ನಸ್ಯಮೆಱೆಯೆ ಪಲಿತಸ್ತಂಭಂ || ೪೮ ||

ಗರುಗಂ ಫಲತ್ರಯಂ ತಾ |
ವರೆ [2]ಯಲರುಂ ನೀಲಿ ಚೂತಬೀಜಂ ಕಬ್ಬೊ ||
ನ್ನರಜಮಿವ ನಾರನಾಳದೊ |
ಳರೆದಿಂಬಿನೆ ಪೂಸೆ [3]ಪಲಿತ ನಿರ್ಭಯಮಕ್ಕುಂ || ೪೯ ||

ಇದು ಕೇಳ್ ಸಾಮಾನ್ಯಮೆ ಶಂ |
ಖದ ಬೂದಿಯನೊಳ್ಪಿತಾಗಿ ಪರಿಮರ್ದಿಸಿ ಸೀ ||
ಸದಿನಂತದ ನೊಂದಿರೆ ಪೂ |
ಸಿದೊಡಂ ನರೆ ಕರಿಯವಾಗಿ ಸೊಗಯಿಸಿ ತೋರ್ಕುಂ || ೫೦ ||

ಟೀ|| ಜವೆ, ಕಱವೆಯಿಕ್ಕಿ, ಗೋದುವೆ, ಉದ್ದು ಇವಂ ಹಿಟ್ಟುಗುಟ್ಟಿ ಹಿಪ್ಪಲಿಯ ಚೂರ್ಣವಂ ಬೆರಸಿಕೊಂಡು ಆಕಳತುಪ್ಪದಲ್ಲಿ ಅವುಗನಡಿಸಿ ಮೆದ್ದು ಸಕ್ಕರೆ ಹಾಲುಮಂ ಕೂಡಿ ರಾತ್ರಿಯಲ್ಲಿ [4]ಕೊಳಲ್ ವೀರ್ಯವರ್ಧನಮಪ್ಪುದು—೪೭.

ಟೀ|| ಅಣಿಲೆಯ ಕಾಯ ತಿರುಳ್, ತಾರೆಯ ಬೀಜದ ತಿರುಳ್, ಚೆಳ್ಳಕಾಯ ಬೀಜದ ತಿರುಳ್, ಬೇವಿನ ಬೀಜದ ತಿರುಳ್, ಇವಱಲ್ಲಿ ವೊಂದೊಂದುವಂ ಬೇಱೆವೇಱೆ ಸೂರ್ಯಪುಟದಿಂ ತೈಲಮಂ ತೆಗೆದು ವೊಂದೊಂದಱ ತೈಲಮಂ ನಸ್ಯಂ ಮಾಡಲ್ ನರೆ ಕಿಡುವುದು—೪೮.

ಟೀ|| ಗರುಗಂ, ತ್ರಿಫಲೆ (ಅಣಿಲೆಯ ಕಾಯ್, ನೆಲ್ಲಿಯ ಸಟ್ಟು, ತಾರೆಯ ಕಾಯ್) ತಾವರೆಯ ಕೇಸರಂ, ನೀಲಿಯ ಸೊಪ್ಪು, ಮಾವಿನ ಬೀಜಂ, ಸುರಹೊನ್ನೆಯ ಕೇಸರಂ, ಇವಂ ಅಂಬಿಲದಲ್ಲರೆದು ಪೂಸಲ್ ನರೆತೆರೆಗಳ್ ಕಿಡುವುವು—೪೯.

ಟೀ|| ಶಂಖಮಂ ಸುಟ್ಟು ಬೂದಿಯಂ ಮಾಡಿ ಸೀಸಮಂಕೂಡಿ ಮರ್ದಿಸಿಕೊಂಡು ಮಂಡೆಯಂ ಪೂಸಲ್ ನರೆ ಕರಿದಾಗಿ ಚೆನ್ನಾಗಿ ತೋರ್ಪುದು—೫೦.

1 ಬೀಜದ ತಿರುಳ್ ಕಾಗಿದೊಂಡೆಯ ಸಿವನ್ನಿಯ ಬೇವಿನ, ಬೀಜದ ತಿರುಳ್ ಕಾಗಿದೊಂಡೆಯ ಬೇವಿನ ಬೀಜದ ತಿರುಳ ಸಿವನ್ನಿಯ ಬೇವಿನೆಣ್ಣೆಯುಂಕೊಂಡು, ಣಿಲೆಯ ಬೇಳ ಕಾಗಿದೊಂಡೆ ಬೇವಿನ ತಿರುಳೆಣ್ಣೆಯ ಸೂರ್ಯ ಪುಟದಿಂ ಕೊಂಡುಂ ಪ್ರಯತ್ನದಿಂ ನಸ್ಯಮೆಱೆಗೆ. 2 ಯ ಗೆಂಡೆಯಂ ನೀಲಿಯ ಚೂತಬೀಜಮ ಬ್ಬೊನ್ನೆಯ, ಸುರಹೊನ್ನೆಯ ರಜವರೆ ಯಾವಂ ನೀಲಿ. 3 ಪಲಿತವನಳಿಗು ನಿರ್ಭ, ಪಳಿವ ಕಳಿನಿ, ಪಳಿತವಳಿಕ ಮದಕ್ಕುಂ. 4 ಸೇವಿಸಲ್.

(ನಿಡುದಲೆಗೆ)

ಕಂ|| ರದನಿಯ ರದಮಂ ಪೊಗೆವೋ |
ಗದಂತು ಸುಟ್ಟಾಡಪಾಲೊಳಿಂಬಾಗಿರಲೇ ||
ಉದಿನಂ ರಸಾಂಜನಂ ಬೆರ |
ಸದಱಂ ತಲೆವೂಸೆ ಕುಟಿಳ ಕುಂತಳಮಕ್ಕುಂ || ೫೧ ||

(ಪಱುದಲೆ ನಿಡುದಲೆಯಪ್ಪುದರ್ಕೆ)

[1]ಸಲೆ ಮಾಂಸಿ ನೆಲ್ಲಿ ನೀಲೋ |
ತ್ಪಲ ಕಂಜಂ ಕೋಷ್ಠಮೆಂಬಿವಂ ಕಟುಯಿಂದಂ ||
ತಲೆಯಂ ಪೂಸಲೊಡಂ ಪಱು |
ದಲೆ ನಿಡುದಲೆಯಕ್ಕು ಮೆಂಬುದೊಂದಚ್ಚರಿಯೇ || ೫೨ ||

(ಮಡೆಜಡೆಗೆ)

ಗುಡಜಲಮುನಕ್ಕೆ ಮೇಣ್ ಮಾ |
ರುಡ ಫಲದೊಳ್ ತಿರುಳನಕ್ಕೆ [2]ತಲೆವೂಸಲೊಡಂ ||
ಜಡೆಗೊಂಡ ತಲೆಯೆ ಬಲ್ಪಿಣಿ |
ಲೊಡೆದು ಮೃದುಸ್ನಿಗ್ಧ ಸರಳತರಮಾಗಿರ್ಕುಂ || ೫೩ ||

(ಸೊಂಡಿಗೆ)

ತಿಳಮದು [3]ನಾಗಂ ನೀಳೋ |
ತ್ಪಳಂಗ[4]ಳೊಳ್ ಸಮನೆ ಭಾಗಮಾಗಿರೆ ಕೊಂಡಾ ||
ಮಳಕಮನಿಂಬಾಗಿರೆ ತಲೆ |
ಯೊಳಗೆಲ್ಲಂ ಪೂಸೆ [5]ಸೊಂಡು ತಡೆಯದೆ ಕಿಡುಗುಂ || ೫೪ ||

ಟೀ|| ಅರಸಿನದ ಚೂರ್ಣಮಂ ಪೊಗೆವೋಗದಂತೆ ಪುಟಮನಿಕ್ಕಿ ಆಡಿನ ಪಾಲಲ್ಲಿ ಏಬು ದಿನಮೂಱಲಿಟ್ಟು ಅದಂಕೊಂಡು ನೀಲಾಂಜನಮಂ ಬೆರಸಿಕೊಂಡು ತಲೆಯಂ ಪೂಸಲ್ ಕುರುಳ್ಗೊಂದಲಪ್ಪುದು—೫೧.

ಟೀ|| ಜಟಾಮಾಂಸಿ, ನೆಲ್ಲಿಯ ಸೆಟ್ಟು, ಕನ್ನೆಯ್ದಿಲ ಗೆಂಡೆ, ಕೋಷ್ಠಂ ಇವನಂಬಿಲದಲ್ಲರೆದು ತಲೆಯಂ ಪೂಸಲ್ ಪಱುದಲೆ ಪೊಳ್ಳಿಹ ಕೂಂದಲಪ್ಪುದು—೫೨.

ಟೀ|| ಬೆಲ್ಲದ ನೀರಾದೊಡಂ ಬೆಲ್ಲವತ್ತ್ರದ ಕಾಯ ತಿರುಳಾದೊಡಂ ತಲೆಯಂ ಪೂಸಲ್ ಜಡೆಗೊಂಡ ಕೂಂದಲ್ ಬಿಚ್ಚಿ ಜಡೆ ಮಾಣ್ದು ಚೆನ್ನಪ್ಪುದು—೫೩.

ಟೀ|| ಎಳ್ಳು, ಯಷ್ಟಿಮಧುಕಂ, ನಾಗ[6]ಕೇಸರಂ, ಕನ್ನೆಯ್ದಿಲ ಗೆಂಡೆ, ಇವಂ [7]ಸಮಭಾಗೆಯಾಗೆ ನೆಲ್ಲಿಯ ಸೆಟ್ಟುಮನೊಂದಾಗಿ ಭಾಗೆಯಾಗಿ ಮಾಡಿ ಉದಕದಲ್ಲಿ ಅರೆದು ಮಂಡೆಗೆ ಪೂಸಲ್ ಸೊಂಡು ಕಿಡುವುದು—೫೪.

1 ಜಟಾಮಾಂಸಿ, ಸಲೆ ಜಟೆ ನೆಲ್ಲಿಯು. 2 ತಲೆಯ ಊಸ. 3 ನಾಗರ. 4 ಳಂ. 5 ಸೊಂಡು. 6 ಬಸ. 7 ಸಮಾಸಿಸಿ.



[1](ತೇವುಳ್ಗೆ)

ಕಂ|| ಕರಿಯಾಡಿನ ಮೂತ್ರದೊಳರೆ |
ದರಪಿಚ್ಚಿಗೆ ಯರಲನಕ್ಕೆ ಗುಳ್ಳದ ಪಣ್ಣಂ ||
ಗುರುಗುಂಜೆ ಯೆಂಬಿವಂ ಮಧು |
ವೆರಸದನೆಜ[3] ಪೂಸಿದಂದು [2]ತೇವುಳ್ ಕಿಡುಗುಂ || ೫೫ ||

[3](ಮಂಡೆಯ ಪುಱುವಿಂಗೆ)

ಸಮನಿಸೆ ಗೋಜಳದೊಳ್ ಚಿ |
ತ್ರಮೂಲಮಂ ಕಲಸಿಕೊಂಡು ಪೂಸುಗೆ ಮೇಣ್ ಕೋ ||
ಷ್ಠಮನೆ ಪುರಿದರೆದು ತಿಳತೈ |
ಳಮ ನೆರೆದಱೆ ಪೊರಸಿದಂದು ದುಂದುಱು ಕಿಡುಗುಂ || ೫೬ ||

(ಪೇಱ ಸೀರ್ಗಳ್ಗೆ)

ರಸಮಂ ಫಣಿವಲ್ಲೀ ದಳ |
ರಸದೊಳ್ ಮರ್ದಿಸಿ ಬಟ್ಟೆಕ್ಕೆ ಕಪ್ಪಡದೊಳ್ ಭಾ[4] ||
ವಿಸಿ ತಲೆಯೊಳ್ ಕಟ್ಟೆ[5]ಡೊಡು |
ಳ್ಳ ಸೀರುಮುಳ್ಳನಿತುಪೇನುಮಾಗಳೆ ಕಿಡುಗುಂ || ೫೭ ||

(ತರ್ದು, ದುಂದುಱುಗಳ್ಗೆ)

[6]ಅರಗಾಮಳಕಫಳಂ ವ್ಯ |
ಕ್ಷರಾಜಪತ್ರಂ [7]ಚಗಚ್ಚೆ ಯೆಕ್ಕೆ ಯಿವಂ ಕೊಂ ||
ಡರೆದಿಂಬಾಗಿರೆ ಪೂಸುಗೆ |
ಶಿರೋವ್ರಣಂ ತರ್ದು [8]ದುಂದುಱೆಂಬಿವು ಕಿಡುಗುಂ || ೫೮ ||

ಟೀ|| ಜಾಜಿ ಮೊಗ್ಗೆಯಂ ಕರಿಯಾಡಿನ ಮೂತ್ರದಲ್ಲರೆದು ಪೂಸಲ್ ತೆಗು(ವು)ಳು ಕಿಡುವುದು. ಅಲ್ಲಾ ಗುಳ್ಳದ ಪಣ್ಣ ತಿರುಳ್ ಗುರುಗುಂಜೆಯ ಬೀಜಂ ಇವೆರಡಂ ಜೇನತುಪ್ಪದಲ್ಲರೆದು ತಲೆಯಂ ಪೂಸಲ್ ತೇವುಳ ನಕ್ಕಿದುದು [9]ಮಾಣ್ಬುದು—೫೫.

ಟೀ|| ಚಿತ್ರಮೂಲದ ಬೇರಂ ಗೋಮೂತ್ರದಲ್ಲರೆದು ಪೂಸುವುದು. ಅಲ್ಲಾ ಕೋಷ್ಠಮಂ ಪುರಿದು ಚೂರ್ಣಮಂ ಮಾಡಿ, ಎಳ್ಳೆಣ್ಣೆಯಲ್ಲಿ ಕಲಸಿ ಪೂಸಲ್ ಮಂಡೆಯ ಒಳಗಣ ಪುಱುಗಳ್ ಮಾಣ್ಬುವು—೫೬.

ಟೀ|| ವೀಳೆಯದೆಲೆಯ ರಸದಲ್ಲಿ [ಪಾದ] ರಸಮಂ ಮರ್ದಿಸಿ ಅಱುವೆಯಮೇಲೆ ತೊಡೆದು ಮಂಡೆಯೊಳ್ ಕಟ್ಟಲ್ ಮಂಡೆಯೊಳಗುಳ್ಳ ಪೇಱ [10]ಸೀರ್ಗಳನಿತುಂ ಕಿಡುವುವು—೫೭.

ಟೀ|| ಆರಗು ನೆಲ್ಲಿಯ [11]ಸೆಟ್ಟು ಕಕ್ಕೆಯಕುಡಿ ಚಗಚೆಯ ಬೀಜಂ, ಎಕ್ಕೆಯೆಲೆ ಇವೆಲ್ಲಮನೊಂದಾಗಿ ಉದಕದಲ್ಲರೆದು ಪೂಸಲ್ ಮಂಡೆಯ ಪುಣ್ ತರ್ದು ಪುಱುಗಳ್ ಕಿಡುವುವು—೫೮.

1 ತೇ ಉಳು ನಕ್ಕಿದುದು. 2 ತೆಗುಳು. 3 ಮಂಡೆಯ ಹುಣ್ಣು ಹುಳು. 4 ಸಾಧಿಸಿ, ಸೋಧಿಸಿ. 5 ದೊಡುಳ್ಳನಿತು ಸಿರಮುಳ್ಳ. 6 ಅರಗು ನೆಲ್ಲಿಯ ಫಲಂ ವ್ಯ. 7 ಜಗಚೆಯ. 8 ತುಱುಪೆಂಬ. 9 ಕಿಡುವುದು. 10 ಚೀರು. 11 ಕಾಯ್.

(ಮಂಡೆಯ ಪುಣ್ಣ)

ಕಂ|| ತಿಳತೈಳದೊಳುತ್ತರಣೆಯ |
ಫಳಮಂ ಮೇಣ್ [1]ಲೊಕ್ಕಿಯರ್ಕಬೀಜಮುಮಂ ಲಾಂ ||
ಗಳಿಯೆಂಬಿವ ನಟ್ಟೊಂದಿರೆ |
ವಿಳೇಪನಂಗೆಯ್ಯೆ ತಲೆಯ ಪುಣ್ಗಳ್ ಕಿಡುಗುಂ || ೫೯ ||

ಪದನರಿದು ಪುರಿದು ತಿಲತೈ |
ಲದೆ [2]ನಿಶಿ ಪೆಡೆಯಕ್ಕಿ ಯೆಂಬಿವಂ ಮೇಣ್ ಗೋಮೂ ||
ತ್ರದೆ [3]ಹಾವುಮೆಕ್ಕೆಯಂ ಬ್ರ |
ಹ್ಮ ದಂಡೆಯುಮನರೆದು ಪೂಸೆ ಪುಣ್ಗಳ್ ಕಿಡುಗುಂ || ೬೦ ||

[4](ತಲೆಬೇನೆಗೆ)

ಸಮನಾಗಿ ರುಜೆಯ ಸೇರಂ |
ಡಮೂಲಮಾಂಸಿಗಳನಕ್ಕೆ ಚಗಚೆಯ ಪೊಸ ಬೀ ||
ಜಮನಕ್ಕೆ ಕಲಿಯೊಳರೆದಾ[5] |
ದಮೆ ಪೂಸುಗೆ ತಲೆಯ ಬೇನೆ ತಡೆಯದೆ ಕಿಡುಗುಂ || ೬೧ ||

(ಅರೆದಲೆ ಬೇನೆಗೆ)

ಮರಿಚಂ ಪೆಸ[6]ರಿಂ ಬಿಂತಿವ |
ನರೆದೆಳ್ಳ ಕಷಾಯದಿಂದೆ ನಸ್ಯಂಗೆಯ್ದಂ ||
ದರೆದಲೆ ಬೇನೆಯನದು ಸಂ |
ಹರಿಕುಂ ಘನಘಟೆಯ ನುಗ್ರವಾತಾಹತಿ [7]ವೋಲ್ || ೬೨ ||

ಟೀ|| ಉತ್ತರಣೆಯ ಬೀಜವಂ ಎಳ್ಳೆಣ್ಣೆಯೊಳರೆದು ತಲೆಯಂ ಪೂಸುವುದು. ಅಲ್ಲಾ ಲೊಕ್ಕಿಯ ಬೀಜಂ, ಎಕ್ಕೆಯ ಬೀಜಂ, ಇಂದ್ರನ ಗೆಂಡೆ ಇವನುದಕದಲ್ಲರೆದು ಎಣ್ಣೆಯೊಳಟ್ಟು ಮಂಡೆಯಂ ಪೂಸಲ್ ಮಂಡೆಯ ಪುಣ್ಗಳ್ ಕಿಡುವುವು—೫೯.

ಟೀ|| ಅರಿಸಿನವಂ, ಪೆಡೆಯಕ್ಕಿಯ ಸಮೂಲಮುಮಂ ಪುರಿದು ಎಣ್ಣೆಯಲ್ಲಿ ಕಲಿಸಿ ಪೂಸುವುದು. ಅಲ್ಲಾ ಹಾವುಮೆಕ್ಕೆಯ ಬೇರುಮಂ ಬ್ರಹ್ಮದಂಡೆಯ ಬೇರುಮ ನೆರಡುಮಂ ಗೋಮೂತ್ರದಲ್ಲರೆದು ಪೂಸುವುದು ಮಂಡೆಯ [8]ಪುಣ್ಗಳ್ ಮಾಣ್ಬುವು—೬೦.

ಟೀ|| [9]ರುದಂತಿ ಅವುಡಲಕೆಯ (ಕನ) ಬೇರ್, ಇವನಂಬಿಲದಲ್ಲರೆದು ತಲೆಯಂ ಪೂಸುವುದು [10]ಅಲ್ಲಾ ಪೊಸ ಚಗಚೆಯ ಬೀಜಮ ನಂಬಿಲದಲ್ಲರೆದು ತಲೆಯಂ [11]ಪೂಸಲ್ ಮಂಡೆಯ ಶೂಲೆ ಮಾಣ್ಬುದು—೬೧.

ಟೀ|| ಮೆಣಸು, ಪೆಸಱು ಇವನರೆದು ಎಳ್ಳಂಕೂಡಿ ಕಷಾಯವಂ ಮಾಡಿ ನಸ್ಯಮಂ ಮಾಡಲ್ ಅರೆದಲೆ ಬೇನೆ ಮಾಣ್ಬುದು. [ಅದು] ಮೇಘದ[12] ಪಿಂಡಂ ಗಾಳಿ[13] ಎಹಗೆ ಕಿಡಿಸುವುದು ಆಹಗೆ ಅರೆದಲೆ ಬೇನೆಯಂ ಕಿಡಿಸುವುದು—೬೨.

1 ಲೊಕ್ಕಿಯನರ್ಕ. 2 ನಿಶಿಪಿಡಿ. 3 ಹಾಮೆಕ್ಕೆಯುಮಂ. 4 ಮಂಡೆ ಶೂಲೆಗೆ. 5 ದಾಲೆ ತಲೆಪೂಸೆ ಬೇನೆ. 6 ಱಿಂದಿಂತಿವ. 7 ಹತಿಯೊಳ್(ಲ್). 8 ಪುಣ್ ಕಿಡುವುವು. 9 ರುಜಂತಿ. 10 ಮತ್ತು. 11 ಪೂಸುವುದು. 12 ಮೇಘದೊಡ್ಡಿಂಗೆ ಯೆಹಂಗೆ ಘಾಳಿ ಆಹಂಗೆ ಅರೆದಲೆ ಬೇನೆಗೆ. 13 ಕಿಡಿಸುವಂತೆ.



*ಚಂ|| ಅರೆದಲೆಬೇನೆಗೀಶ್ವರಿಯ ಮೂಲದ ನಸ್ಯಮನುಗ್ರಪನ್ನಗೋ |
ತ್ಕರದ ವಿಷಕ್ಕೆ ಮತ್ತದಱ [1]ಬೇರೊಡನೊಂದಿರೆ ಹೆತ್ತ ತುಪ್ಪಮಂ ||
ತೊರಳೆಗೆ ನೀರೊಳಂತದಱ ಬೂದಿಯನಪ್ಪಲಿತಂ ಪ್ರಯೋಗಿಸು |
ತ್ತಿರೆ ಪೆಱತೇನಿದೊಂದೆ ಕಳೆದಿಕ್ಕುಗು ಮಾವಗಮಂತವೆಲ್ಲಮಂ || ೬೩ ||

(ಕಿವಿಯ ಶೂಲೆಗೆ)

ಕಂ|| ಸದಗುಪ್ಪೆ ಸೈಂಧವಂ ದೇ |
ವದಾರು ಬಜೆ ಹಿಂಗು ಮುಸ್ತೆ [2]ಶುಂಠಿ ಯಿವಂ ತೈ ||
ಲದೊಳಂ ಗೋಮೂತ್ರದೊಳ |
ಟ್ಟದ ನೆಱೆದೊಡೆ ಕಿವಿಯ ಶೂಲೆ [3]ಬೇಗಂ ಕಿಡುಗುಂ || ೬೪ ||

ನಯದಿಂದೆ [4]ಕೊಗ್ಗ ಪಿಟಿಗೆ |
ಣ್ಣೆಯ ನುಪ್ಪಂ ಬೆರಸು ಕರ್ಣಶೂಲವ್ಯಥೆಗೆ[5] ||
ಕ್ಕೆಯ ಮೂಲಗೆಯಾವುಂಡಲ |
ಗೆಯ [6]ಮದವಸಲೆಗಳ ದಳದೊಳೊಂದಂ ಕಿವಿಯೊಳ್ || ೬೫ ||

(ಕಿವಿಯ ಪುಣ್ಣ)

ಅಱನೇಱಲ ಬೆಳದಾವ್ಲದ |
ವರುಣದ ಪಲ್ಲವದೊಳಟ್ಟ ತೈಲಮನೆಱೆಗೊಂ ||
ದಿರೆ ಮೇಣ್ ಜಾತಿಫಳ ಪ |
ತ್ರ ರಸಾನ್ವಿತಮದುಮನೆಱೆಗೆ ಕಿವಿವುಣ್ ಕಿಡುಗುಂ || ೬೬ ||

ಟೀ|| ಈಶ್ವರಿಯ ಬೇರನುದಕದಲ್ಲಿ ತೇದು ನಸ್ಯಂಮಾಡಲ್ ಅರೆದಲೆಬೇನೆ ಕಿಡುವುದು (ಗುಂ). ಆ (ಅದೇ) ಈಶ್ವರಿಯ ಬೇರನೆ ತುಪ್ಪದಲ್ಲಿ ತೇದು ನಸ್ಯವಂ ಮಾಡಲ್ ಹಾವುಕರ್ಚಿದ ವಿಷಂ ಮಾಣ್ಬುದು. ಅಲ್ಲಾ ಅದೇ ಈಶ್ವರಿಯ ಬೇರಂ ಸುಟ್ಟು ಬೂದಿಯಂಮಾಡಿ ಉದಕದಲ್ಲಿ ಕದಡಿ ಕುಡಿಯೆ ತೊರಳೆ ಕರ್ಚಿದ ವಿಷಂ ಮಾಣ್ಬುದು—೬೩.

ಟೀ|| ಸಬ್ಬಸಿಗೆ, ಸೈಂಧವಂ, ದೇವದಾರು, ಬಜೆ, ಇಂಗು, ಭದ್ರಮುಸ್ತೆ, ಶುಂಠಿ(ಕೋಷ್ಠ) ಇವೆಲ್ಲವಂ ಸಮಭಾಗೆಯಾಗಿಕೊಂಡು ಗೋಮೂತ್ರದಲ್ಲರೆದು ಎಳ್ಳೆಣ್ಣೆಯೊಳಟ್ಟು ಕಿವಿಯೊಳ್ ಪಿಂಡಲ್, ಕಿವಿಯಶೂಲೆ ಮಾಣ್ಬುದು—೬೪.

ಟೀ|| ಪುಗ್ಗಿ (ಕೊಗ್ಗಿ) ಉಪ್ಪು ಈ ಎರಡುಮ ನೆಳ್ಳೆಣ್ಣೆಯೊಳಟ್ಟು ಕಿವಿಯಲ್ಲಿ ಪಿಂಡುವುದು. ಅಲ್ಲಾ ಎಕ್ಕೆಯ ಬೇರ ರಸಂ, ಅವುಡಲಕನ ಬೇರ ರಸಂ ಮರವಸಲೆಯ[7]ಬೇರ ರಸಂ ಇವಂ ಪ್ರತ್ಯೇಕವಾಗಿ [8]ಯೊಂದೊಂದನೆ ಕಿವಿಯೊಳ್ ಪಿಂಡಲ್ ಕಿವಿಯ ಶೂಲೆ ಮಾಣ್ಬುದು—೬೫.

ಟೀ|| ಕುನ್ನಿ ನೇಱಲೆಲೆ (ಬೇಟದೆಲೆ), ಮಾವಿನಪಣ್ಣೆಲೆ (ಕರಿ)ಲೊಕ್ಕಿಯೆಲೆ ಇವೆಲ್ಲವಂ [9]ತದಕುಟ್ಟಿ ಎಳ್ಳೆಣ್ಣೆಯೊಳಟ್ಟು ಆ ಎಣ್ಣೆಯಂ ಕಿವಿಯೊಳ್ ಪಿಂಡುವುದು. [10]ಅಲ್ಲಾ

1 ಬೇರನೊಂದನೊಂದಿರಲಿತ್ತ. 2 ಕೋಷ್ಠಮಿವಂ. 3 ಬೇಗದೆ. 4 ಪುಗ್ಗಿಪಿಟಿದೆ. 5 ಗೆಯಕ್ಕೆ 6 ಮರವಸಲೆಯದಳಗಳೊಳೊಂ. 7 ಎಲೆಯರಸಂ. 8 ಬೇಱೆವೇಱೆ. 9 ತದಕಿ. 10 ಅಲ್ಲದಿರ್ದೊಡೆ.
* ಈಶ್ವರಿಯ ಮೂಲದ ನಸ್ಯಮ......ನಪ್ಪರಿತಂ ಪ್ರಯೋಗಿ.

(ಕರ್ಣವರ್ಧನಕ್ಕೆ)

ಕಂ|| ನೆಲದಾಟಿಯನರೆದು ಪಾಲೊಳ್
ಕಲಸಿ ಬಟಾಕ್ಕಲ್ಲಿ ಬೆಣ್ಣೆಗೊಂಡೇೞುದಿನಂ ||
ನಿಲಿಸಿಟ್ಟು ಧಾನ್ಯದೊಳ್ ಕ |
ರ್ಣಲೇಪನಂಗೆಯ್ಯೆ ಕರ್ಣವರ್ಧನಮಕ್ಕುಂ || ೭೭ ||

(ಕಣ್ಣ[1]ಬೇನೆಗೆ)

ಸಾರಮೆನಿಪ್ಪುತ್ತರಣೆಯ |
ಬೇರಂ ಸೈಂಧವಸಮನ್ವಿತಂ ಪಟುನೀರಿಂ ||
ದೋರಂತರೆ ಕಿಸು[2]ವೊನ್ನೊಳ್ |
ಜಾರಿಸಿ ಕೊಂಡೆಚ್ಚೆ ನೇತ್ರರೋಗಂ ಕಿಡುಗುಂ || ೭೮ ||

ಅಬಳಾಸ್ತನಜಳದೊಳ್ ವೊ(ಮೆ)ದೆ |
ಯ ಬೂದಿಯಿಂ ಕಲಸಿ ಕಾಂಸ್ಯದೊಳ್ ಜಾರಿಸಿಕೊಂ ||
ಡು ಬಟಾಕ್ಕದನೆಚ್ಚುಗೆ ಕ |
ಣ್ಣ ಬೇನೆ [4]ತತ್ಕ್ಷಣಕೆ ಮಾಣ್ಗುಮಚಳಿತವಚನಾ || ೭೯ ||

(ಕಣ್ಣ ಬೇನೆಗೆ ಸೇಕಂ)

ಕುದಿಯಿಸಿ ಕರಿಯಾಡಿನ ದು |
ಗ್ಧದಿಂದ [5]ವೇರಂಡಮೂಲಮಂ ಪತ್ರಮುಮಂ ||
ಪದನಱದದಱಂದಂ ಮಾ |
ಡ್ಪುದು ಸೇಕಮನಕ್ಷಿಶೂಲೆಯಿರದುಪಶಮಿಕುಂ || ೮೦ ||

---

ಜಾಯಿಫಳಂ ಚಾಳಿಸಪತ್ರಕಂ ಇವಂ ಚೂರ್ಣಂಮಾಡಿ ಜೇನತುಪ್ಪಮಂಕೂಡಿ ಕಿವಿಗೆ ಹಿಂಡುವುದು ಕಿವಿಯ ಪುಣ್ ಮಾಣ್ಬುದು—೭೬.

ಟೀ|| ನೆಲದಾಟಿ ಗೆಂಡೆಯಂ ಅರೆದು ಪಾಲೊಳಗೆ ಕವಡಿ ಕಾಸಿ ಆ ಪಾಲಂ ಮೊಸರಂ ಮಾಡಿ ಕಡೆದು ಬೆಣ್ಣೆಯಂ ಕೊಂಡು ಭತ್ತದೊಳಗೇೞುದಿನ ಪರಿಯಂತಂ ಪೂೞ್ದಿರಿಸಿ ಆ ಬೆಣ್ಣೆಯಂ ಕಿವಿಗೆ ಪೂಸೆ ಕಿವಿಯ ಹಾಲೆ ದೊಡ್ಡಿತಪ್ಪುದು—೭೭.

ಟೀ|| ಉತ್ತರಣೆಯ ಬೇರ್ ಸೈಂಧವಂ ಈಯೆರಡುಮಂ ಪಟುನೀರೊಳ್ ಅರೆದು ತಾಮ್ರದ ಬಟ್ಟಲೊಳ್ ಮರ್ದಿಸಿ ಅದಂ ಕಣ್ಣೊಳೆಚ್ಚಲ್ ಕಣ್ಣ ವ್ಯಾಧಿಗಳ್ ಕಿಡುವುವು—೭೮.

ಟೀ|| ಮೊದೆಯ ಹುಲ್ಲ ಬೂದಿಯಂ ಮಾಡಿ ಮೊಲೆವಾಲೊಳ್ ಕಲಸಿ ಕಂಚಿನ ಪಾತ್ರೆಯ ಪೊಱಮೆಯ್ಯೊಳ್ ಮರ್ದಿಸಿ ಅದಂ [6]ಕಣ್ಗೆಚ್ಚಲ್ ಕಣ್ಣ ಬೇನೆ ಮಾಣ್ಗುಂ—೭೯|

ಟೀ|| ಅವುಡಲಕನ ಬೇರಂ ಎಲೆಯುಮಂ ಕರಿಯಾಡಿನ ಪಾಲಲ್ಲಿ ಕುದಿಸಿ ಅದಂ ಪದನಱತು ಸೇಕಮಂ ಮಾಡಲ್ ಕಣ್ಣ ಶೂಲೆ ಮಾ(ಣ್ಗುಂ)ಣ್ಬುದು—೮೦.

1 ವ್ಯಾಧಿಗೆ. 2 ದೊನ್ನೊಳ್. 3 ಯನೂ. 4 ತತ್ಕ್ಷಣಮಾಣ್ಗುಂ. 5 ಮೇರಂಡಮೂಲಪತ್ರಮುಮಂ ಪದನಱ, ಮೇರಂಡದ ಸಮೂಲಮಂ ಪತ್ರಮುಮಂ. 6 ಕಣ್ಣಲು.



(ತಿಮಿರರೋಗಕ್ಕೆ)

ಕಂ|| ಗುರುಗುಂಜೆಯ ಬೇರಂ ಕೊಂ |
ಡರೆದಾಡಿನಮೂತ್ರದಿಂದ ಮೆಚ್ಚುಗೆ ಜಳದಿಂ ||
ದರೆದೆಚ್ಚುಗೆ ಮುಸ್ತೆಯುಮಂ |
ತರದೆನಿಪಾಸನ್ನತಿಮಿರಮಿವಱಂ ಕಿಡುಗುಂ || ೮೧ ||

(ತಿಮಿರಾದಿ ಸಕಲ ನೇತ್ರರೋಗಂಗಳ್ಗೆ)

*ಕಿಸುವಿನ ಭಾಜನದಿಂದಂ |
ಸುಚಂದನ [1]ಜಳದಮನಿಂತು ಸಪ್ತದಿನಂ ಮ ||
ರ್ದಿಸಿ ಕೊಂಡೆಚ್ಚಲೊಡಂ ಪಿಂ |
ಗಿಸುಗುಂ ತಿಮಿರಾದಿಸಕಳನೇತ್ರಾಮಯಮಂ || ೮೨ ||

(ಇರುಳ್ಗಣ್ಗೆ)

ಮಿದಿದೆಚ್ಚು ಕೊಗ್ಗಿಯಂ ಕ್ಷೌ |
ದ್ರದೆ ಮೇಣ್ ಸಗಣದ ರಸಂ ಕಣಾನ್ವಿತದಿಂ ಚಿಂ ||
ಚದ ಚಿಗುರನಿರುಳ್ ಕಣ್ಗಾ |
ಣದರುಮರುಂಧತಿಯನಾದೊಡಂ ನೆಱೆ[3] ಕಾಣ್ಬರ್ || ೮೩ ||

(ನೀಲಿ(ನಿಲವು)ಗಣ್ಗೆ)

ನಯನದೊಳೆಚ್ಚುಗೆ ಕಾಟ್ಟಿ |
ತ್ತಿಯ ಬೇರುಮನಲ್ಲದಂದು ಪಾಗಲ ಬೇರಂ ||
ಹಯಮೂತ್ರದೊಳೆಚ್ಚುಗತಿ |
ಪ್ರಯತ್ನದಿಂ [2]ನೀಲಿಗಣ್ಗಳುಜ್ಜ್ವಳಮಕ್ಕುಂ || ೮೪ ||

---

ಟೀ|| ಗುರುಗುಂಜೆಯ ಬೇರಂ ಕರಿಯಾಡಿನ ಮೂತ್ರದಲ್ಲಿ ತೇದು ಎಚ್ಚುವುದು. ಅಲ್ಲಾ ಭದ್ರಮುಸ್ತೆಯಂ ಉದಕದಲ್ಲಿ ತೇದು ಕಣ್ಗೆ ಎಚ್ಚಲ್ ಇದಱಂದೆ ಕಣ್ಣ ತಿಮಿರರೋಗಂ ಕಿಡುವುದು—೮೧.

ಟೀ|| ಚಂದನಮಂ ತಾಮ್ರದ ಬಟ್ಟಲೊಳಗೆ ಏೞುದಿನಪರಿಯಂತಂ (ದಿನಂಪ್ರತಿ) ಮರ್ದಿಸಿ ಅದಂ ಕಣ್ಣೊಳೆಚ್ಚುವುದು. ಇವಱಂದೆ ಕಣ್ಣತಿಮಿರಂ ಮೊದಲಾದ ಎಲ್ಲಾ ರೋಗಂಗಳುಂ ಮಾಣ್ಬುವು—೮೨.

ಟೀ|| ಕಿವಿಯಕೊಗ್ಗಿಯಂ ಜೇನತುಪ್ಪದಲ್ಲಿ ಮರ್ದಿಸಿ ಕಣ್ಣೊಳೆಚ್ಚುವುದು. ಅಲ್ಲಾ ಎಮ್ಮೆಯ ಸಗಣದರಸದಲ್ಲಿ ಹಿಪ್ಪಲಿಯ [3]ಚೂರ್ಣಂ, ಪುಣಿಸೆಯ ತಳಿರ ರಸಂ ಈಯೆರಡುಮಂ ಸಣ್ಣಿತಾಗಿ ಮರ್ದಿಸಿ ಕಣ್ಣೊಳೆಚ್ಚುವುದು. ಇದಱಂದಿರುಳ್ಗಣ್ ಮಾಣ್ಬುದು. ಇರುಳರುಂಧತಿಯನಾದೊಡಂ ಕಾಣ್ಬರ್—೮೩.

ಟೀ|| ಕರಿಯಹತ್ತಿಯ(ಗಿಡುವಿನ)ಬೇರನುದಕದಲ್ಲಿ ತೇದು ಕಣ್ಗೆಚ್ಚುವುದು. ಅಲ್ಲಾ ಪಾಗಲ ಬೇರಂ ಕುದುರೆಯ ಮೂತ್ರದಲ್ಲಿ ತೇದು ಎಚ್ಚುವುದು ನೀಲಿ (ನಿರಿ) ಗಣ್ ಮಾಣ್ಬುದು—೮೪.

1 ಜಳಧಿಮಿಂತು. 2 ನಿಲುವು. 3 ತೇದು.
* ಈ ಕಂದವು ಒಂದು ಪ್ರತಿಯಲ್ಲಿ ಗಳಿತವಾಗಿದೆ, ಟೀಕೆ ಮಾತ್ರ ಇದೆ.

(ಕಣ್ಣಪಟಳಕ್ಕೆ)

ಕಂ|| ಅರೆದಜಮೂತ್ರದೊಳೊಂದಿರೆ |
ಸುರದಾರುಮನೆಚ್ಚಿದಂದು ಮೇಣೇೞುದಿನಂ ||
ಸುರಭಿಯ ಜಳದೊಳ್ ಭಾವಿಸಿ |
ಹರೀತಕಿಯನೆಚ್ಚೊಡಂದಣಂಗಳ್ ಕಿಡುಗುಂ || ೭೫ ||

(ಕಣ್ಣಕುಸುಮಗ್ರಂಥಿ)

ನಯನೋದ್ಗತ ಕುಸುಮಗ್ರಂ |
ಥಿಯೆಲ್ಲಮೊರ್ಮೆಯೆ ತೆರಳ್ದು ಕಿಡುವು[1]ದದುಂ ಸಂ ||
ದೆಯಮೇಂ [2]ಬೆಳ್ಳಡಕಿಲುಗು[3]ರ್ವ |
ಲ್ಲಿಯ ಬೇರಂ ಕೆಂದೆಯಳಿಯೊಳರೆದೆಚ್ಚಲೊಡಂ || ೭೬ ||

(ಕಣ್ಣಪೂಗಳ್ಗೆ)

ಅರೆದಿಂಬಾಗಿರೆ ತಾಱೆಯ |
ತಿರುಳಂ ಮೊಲೆವಾಲೊಳೆಚ್ಚುಗಲ್ಲದೊಡಂತಾ ||
ತಿರುಳಂ ಜೇನೆಯ್ಯಂ ಕ |
ರ್ಪ್ಪುರಮುಂ ಬೆರಸೆಚ್ಚೆ ಕಣ್ಣಪೂಗಳ್ ಕಿಡುಗುಂ || ೭೭ ||

(ವದನರೋಗಂ, ಕಣ್ಣಪೂ, ಮೊಲೆನಾಗ, ನಾಂಗಲಿವಿಷಂಗಳ್ಗೆ)

ಬಿನ್ನಣಮೇನಿಪ್ಪೆಯ ಕೆ |
ಚ್ಚಂ ನಸ್ಯಂಗೆಯ್ಯೆ ವದನರೋಗಂ ಮೊಲೆನಾ ||
ಗಂ [4]ನಾಗವಿಷಂ ಕಿಡುಗುಮ |
ದಂ [5]ನೆಱೆ ಮಧುಮಿಶ್ರದೆಚ್ಚೆ ಪೂಗಳ್ ಕಿಡುಗುಂ || ೭೮ ||

ಟೀ|| ದೇವದಾರುವಂ ಆಡಿನ ಮೂತ್ರದಲ್ಲಿ ತೇದು ಕಣ್ಣೊಳೆಚ್ಚುವುದು. ಅಣಿಲೆಯ ಕಾಯುಂ ಗೋಮೂತ್ರದೊಳಗೇೞುದಿವಸಪರಿಯಂತಂ ನನೆಯಿಕ್ಕಿ ಇರಿಸಿ ಅದಂ ತೇದು ಕಣ್ಣೊಳೆಚ್ಚುವುದು. ಇವಱಿಂದೆ ಕಣ್ಣಪಟಳಂ ಕಿಡುವುದು—೭೫.

ಟೀ|| ಬಿಳಿಯ ಗಣಜಿಲೆಯ ಬೇರನಾದೊಡಂ, ಅಲ್ಲಾ ಬೆ(ಬಿ)ಳ್ಳಡಕಿಲ ಬೇರನಾದೊಡಂ [6]ಇವಱೊಳಗೆ ದೊರಕಿದುದೊಂದಂ ಕೆಂದೆಯಾಕಳ ಮಜ್ಜಿಗೆಯಲ್ಲಿ ತೇದು ಕಣ್ಣೊಳೆಚ್ಚಲ್ ಕಣ್ಣ ಪೂವುಂ ಅಲ್ಲಿ ಪುಟ್ಟಿದ ಗಂಟುಗಳುಂ ಕಿಡುವುವು—೭೬.

ಟೀ|| ತಾಱೆಯ ಕಾಯುವೊಳಗಣ ತಿರುಳಂ ಮೊಲೆವಾಲೊಳ್ ತೇದೆಚ್ಚುವುದು. ಅಲ್ಲಾ ಆ ತಾಱೆಯ ತಿರುಳಂ [7]ಜೇನತುಪ್ಪದಲ್ಲರೆದು ಕರ್ಪೂರಮುಂ ಕೂಡಿ ಎಚ್ಚಲ್ ಕಣ್ಣಪೂಗಳ್, ಮಾಣ್ಬುವು—೭೭.

ಟೀ|| ಇಪ್ಪೆಯ ಮರದ ಕೆಚ್ಚಂ ಉದಕದಲ್ಲಿ ತೇದು ನಸ್ಯಮಂ ಮಾಡಲ್ ಬಾಯರೋಗಂ, ಮೊಲೆನಾಗಸರ್ಪಂ ಕಚ್ಚಿದ ವಿಷಂ ಮಾಣ್ಬುವು, ಆ ಇಪ್ಪೆಯ ಕೆಚ್ಚನೆ ಜೇನತುಪ್ಪದೊಳ್ ತೇದು ಕಣ್ಣೊಳೆಚ್ಚಲ್ ಕಣ್ಣಪೂ ಕಿಡು(ವುದು)ಗುಂ—೭೮.

1 ಗುಮದೇಂ ಸಂದೆಯಮೆಯುಗುರ್ವೇಲಿಯ ಬೆಳದಕಿಯ ಬೇರಂ. 2 ಬಿಳ್ಳದಕಿಲ. 3 ರ್ವೇಲಿಯ. 4 ನಾಂಗಲಿಪೂತಿ, ಘಾತಿ. 5 ನಱೆ ಮಧುಮಿಶ್ರದುಚ್ಚವೂಗಳ್. 6 ಇವನುಂ ಕೆಂದೆಯಾಕಳ. 7 ಜೇನ ತುಪ್ಪ ಕರ್ಪೂರದಲ್ಲಿ ತೇದು.



(ಕಣ್ಣಪೂ ಕಣ್ಕುಟಲಂಗಳ್ಗೆ)

ಕಂ|| ಕವಡಿಕೆಯನಕ್ಕೆ [1]ಮೇಣ್ ರಜ |
ತವನಕ್ಕಿಂಬಾಗಿ ತೇದು ಪೂಸಲೊಡಂ ಬೆ ||
ಟ್ಟುವನೇಡಿಸುತುಂ [2]ಪುರ್ವಿ |
ಕ್ಕುವೊಡಂ ಕಣ್ಕುಟಲಿಯಂತದಾಗಳೆ ಮಾಣ್ಗುಂ || ೭೯ ||

(ಮೂಗಿನರುಸೆಗೆ)

ಉದಕ[3]ದೊಳಲತೆಗೆ ದಾಳಿಂ |
ಬದ ರಜಮೆಳಗಱುಕೆಯಣಿಲೆಯೆಂಬಿವನರೆದಂ ||
ತದಱಿಂ ನಸ್ಯಮ[4]ನೆಱೆಗೊ |
ರ್ಮೊದಲೊಳ್ ಮೂಗೊಡೆದು [5]ಸುರಿವ ರಕ್ತಂ ಮಾಣ್ಗುಂ || ೮೦ ||

ಕಾರಸೆಯ ಗಡ್ಡೆಯಂ ಪಟ |
ನೀರಿಂ [6]ಮುಱುದೊಂಡೆಯೆಳೆಯ ಬೇರಂ ಮೇಣ್ ಸಾ ||
ವೀರದೆ ನಸ್ಯಂ ಗೆಯ್ಯೆ ನಿ |
ವಾರಿಸುಗುಂ ಮೂಗಿನರುಸೆಯಂ ತತ್ಕ್ಷಣದಿಂ || ೮೧ ||

(ತುಟಿಯ ಪುಣ್ಗೆ)

ಒಡಗೂಡಿ ಹೇಮ[7]ಗೈರಿಕ |
ಗುಡಸೈಂಧವ ಸರ್ಜ[8]ಸಿಕ್ಥಕಂಗಳ ನಿಂಬಾ ||
ಗಡುಗೆ ತಿಳತೈಳದಿಂದಂ |
ಕಿಡಿಸುಗುಮದು ಬಿಡದೆ ತೊಡೆದೊಡಧರವ್ರಣಮಂ || ೮೨

ಟೀ|| ಕವಡೆಯನುದಕದಲ್ಲಿ ತೇದು ತೊಡೆವುದು. ಅಲ್ಲಾ ಬೆಳ್ಳಿಯಂ ಉದಕದಲ್ಲಿ ತೇದು ತೊಡೆವುದು. ಅಲ್ಲಾ ಮೇಣದೊಳೆಯೆೞ್ದು ಬೆಟ್ಟುಮನೇಡಿಸುತ್ತೆ ಪುರ್ಬನಿಕ್ಕುವುದು. ಇವಱಿಂದೆ ಕಣ್ಕುಟಲಿ ಮಾಣ್ಬುದು—೭೯.

ಟೀ|| ಅಲತೆಗೆ, ದಾಳಿಂಬದ ಬೀಜಂ, ಎಳೆಯುಗಱುಕೆ, ಅಣಿಲೆಯ ಕಾಯ್, ಇವನುದಕದಲ್ಲರೆದು ನಸ್ಯಂಮಾಡಲ್ ಮೂಗಿಂದೆ ಸುರಿವ ರಕ್ತಂ ಮಾಣ್ಬುದು—೮೦.

ಟೀ|| ಕಾರಸೆಯ ಗಡ್ಡೆಯಂ ಪಟನೀರಲ್ಲಿ ತೇದು ನಸ್ಯಮಂ ಮಾಡುವುದು. ಅಲ್ಲಾ ಕಾದ(ಮುಱು)ದೊಂಡೆಯ ಎಳೆಯಬೇರಂ ಅಂಬಿಲದಲ್ಲಿ ತೇದು ನಸ್ಯಮಂ ಮಾಡಲ್ ಮೂಗಿನ ಅರುಸೆ ಮಾಣ್ಬುದು—೮೧.

ಟೀ|| ನಾಗಕೇಸರಂ, ಜಾಜು, ಬೆಲ್ಲಂ, ಸೈಂಧವಂ, ಸಜ್ಜರಸಂ, ಜೇನಮೇಣಂ ಇವ ನೆಳ್ಳೆಣ್ಣೆಯೊಳಟ್ಟು ತುಟ(ಗೆ)ಯನೆ ತೊಡೆಯಲ್ ತುಟಿಯೊಡೆದು ಸುರಿವ ರಕ್ತದ ಪುಣ್ ಮಾಣ್ಬುದು—೮೨.

1 ಮೇಣುಳ ಜಳಕಮ, ಮೇಣುಳಶಮ. 2 ಪುರ್ವಿರ್ವಕೊರ್ಲೊಡಂ. 3 ದಳಲತೆ. 4 ನೆಱೆಗುಂ ಮೊದ. 5 ರಕ್ತ ಸುರಿವುದು. 6 ಮಱು. 7 ಸ್ಯರಿಕ. 8 ರಸಿಕಂಗಳ.

(ಬಾಯ್ಹುಣ್ಣಿಗೆ)

ಕಂ|| ತಂಬುಲದ ಸುಣ್ಣದೊದವಿಂ |
ದಂ [1]ಬಾಯ್ ಬೆಂದೊಂದೆ ಕವಚವಾಗಿರ್ದೊಡವ ||
ರ್ಗಂಬಿಲಮುಮನೆಳ್ಳೆಣ್ಣೆಯು |
ಮಂ ಬಾಯೊಳ್ ತುಂಬ[2]ಕೊಂಡೊಡಂದುಪಶಮಿಕುಂ || ೮೩ ||

(ಪೂತಿವಾಸನೆಗೆ)

ಏಲಾವಾಳುಕಮಾ ಮಧು |
ವೇಲೆ ಘನಂ ಧಾನ್ಯಕಂಗಳೆಂಬಿವನರೆದಾ ||
ಗೋಲಕಮನಣಲೊಳಿಡೆ ಮದಿ |
ರಾಲಶುನದ ಪೂತಿಗಂಧವಾಗಳೆ ಕಿಡುಗುಂ || ೮೪ ||

(ಪಲ್ಲನೋವಿಂಗಂ, ಪುಳುವಿಂಗಂ)

ಗುರುಗುಂಜಿ[3]ಯು ಕಳ್ಳಿಯು ಹ |
ತ್ತರಿಕೆಯು [4]ಚೀಲ್ಶೈತವೆಂಬಿವಿನಿತಱ ಬೇರೊಳ್ ||
ದೊರೆಕೊಂಡುದೊಂದ[5]ನಣಲೊಳ್ |
ಧರಿಯಿಸಿದೊಡೆ ಪಲ್ಲಪುಳುಗಳೆಲ್ಲಂ ಕಿಡುಗುಂ || ೮೫ ||

ಕಿವಿಯೊಳ್ [6]ಕಿಱುಕುಸಲೆಯ ಮೂ |
ಲವನರೆದೆಱೆಗಲ್ಲದಂದು ಗುರುಗುಂಜಿಯ ಬ ||
ಳ್ಳಿ[7]ವರುಹೆಯಾ ರಸಮಂ ಹಿಂ |
ಗುವೆರಸು ಮೇಣ್[8]ಱೆಯೆ ಪಲ್ಲ ಪುಱು(ಳ್ಗ)ಗಳ್ ಕಿಡುಗುಂ || ೮೬ ||

ಟೀ|| ಅಂಬಿಲಮಂ ಎಳ್ಳೆಣ್ಣೆಯುಮಂ ಕೂಡಿ ಬಾಯೊಳ್ ತುಂಬಿ ಮುಕ್ಕುಳಿಸಿಕೊಳಲ್ ಬಾಯ್ ಸುಣ್ಣವಾಗಿ ಕವಚನೆ(ತ್ತಿ)ರ್ದ ಪುಣ್ ಮಾಣ್ಬುದು—೮೩.

ಟೀ|| ಕಳ್ಳಂಗಡಲೆ, ಇಪ್ಪೆಯಪೂ, ಭದ್ರಮುಸ್ತೆ, ಕೊತ್ತುಂಬರಿ ಇವನುದಕದಲ್ಲರೆದು ಗುಳಿಗೆಗಳಂ ಮಾಡಿ ಅಣಲಲ್ಲಿರಿಸಿಕೊಳಲ್ ಮದ್ಯಪಾನದನಾತ(ಥ)ಂ, ಉಳ್ಳಿಯನಾತ(ಥ)ಂ ಕಿಡುವುದು—೮೪.

ಟೀ|| ಗುರುಗುಂಜಿಯ ಬೇರ್, ಕಳ್ಳಿಯಬೇರ್, ಹತ್ತರಿಗೆಯ ಬೇರ್, ಚೀಲ್ಶೈತನ ಬೇರ್, ಇವುಗಳೊಳಾವುದೊಂದು ದೊರಕಿದೊಡಮದಱ ಸ್ಥಿರವಾದ ಬೇರಂ ಪ್ರತ್ಯೇಕವಾಗಿರಿಸಿ ಒಂದೊಂದುಮಂ ತದಕುಟ್ಟಿ ಅಣಲಲ್ಲಿ ಇರಿಸಲ್ ಪಲ್ಲಪುಱುಗಳ್ [6]ಕಿಡುವುವು, ಶೂಲೆಮಾಣ್ಬುದು. (ಚಿಲ್ಶೈತವೆಂದು ಎಲ್ವಿನಸಂಧಿಗನೆಯೆಂಬ ಗಿಡು)—೮೫.

ಟೀ|| ಕಿಱುಕುಸಾಲೆಯ ಬೇರ ರಸಮಂ ಕೊಂಡು ಇಂಗಂ ಬೆರಸಿಕೊಂಡು ಕಿವಿಯೊಳ್ ಪಿಂಡುವುದು. ಪಲ್ಲಪುಱುಗಳ್ [01]ಕಿಡುವುವು, ಶೂಲೆ ಮಾಣ್ಬುದು—೮೬.

1 ಬಾಯೊಳ್ ಕವಚವೋಱೆ ಬಂದಿರ್ದೊಡಂ. 2 ಕೊಂದಂ ಶ್ರಶನು, ಕೊಂಡಂದುಪ್ರಶ. 3 ಚಿಕ್ಕಿಯಾ. 4 ಚೀಲೇಜ. 5 ಕೊಂಡುದನಾನನನೊಳ್. 6 ಕಿಱುಕುಸಾಲೆ, ಕಿಱುಸಾಲೆ. 7 ವರುಂಟೆಯ, ವರುಟೆಯರಸ. 8 ನೆಕ್ಕೆಯ. 9 ಕೆಟ್ಟುವಲ್ಲಿ. 10 ಕೆಟ್ಟು ಪಲ್ಲರೂಲೆ.



(ಜಂಗಮವಿಷಪಲ್ಲಪುಱು ಅರಿದಲಿ ಬೇನೆಗಳ್ಗೆ)

ಕಂ|| ಪಲವಱೊಳೇನೆಕ್ಕೆಯ ಪ |
ಣ್ಣೆಲೆಯೊಂದನೆ ನಸ್ಯಮೆಱೆಯೆ ಜಂಗಮ ವಿಷಸಂ ||
ಕುಲಮೊಗೆದ ಪಲ್ಲ ಪುಱುಮರೆ |
ದಲೆಬೇನೆಯೆನಿಪ್ಪಿವಿನಿತುಮಾಗಳೆ ಕಿಡುಗುಂ || ೮೭ ||

(ಬಂಗಿಂಗೆ)

[1]ಜೀರಗೆ ಸಿದ್ಧಾರ್ಥಂ ಕಾ |
ಱ್ಜೀರಗೆ ಕರಿ[2]ಯೆಳ್ಗಳೆಂಬಿವಂ ಪೂಸುಗಜ ||
ಕ್ಷೀರದೊಳರೆದಾನನಪಂ |
ಕೇರುಹಮಂ ಬಂಗು ಪಿಂಗುಗುಂ [3]ಬುಧಬಂಧೂ || ೮೮ ||

(ಮೊಡವಿಗೆ)

ಸಿರಿಸದ ಮೇಣ್ ಬನ್ನಿಯ ಬೀ |
ಜರಾಜಿಯಂ ಗವ್ಯಮೂತ್ರದಿಂದರೆದಿಂಬಾ ||
ಗಿರೆ ಪೂಸೆ ಮೊಡವಿ ಮೊಗಮಂ |
ಬುರುಹ[4]ಚ್ಛವಿಯಾಗಿ ತೊಳಗಿ ಬೆಳಗುತ್ತಿರ್ಕುಂ || ೮೯ ||

(ಮುಖಕಾಂತಿಗೆ)

ಜವೆ ಕೋಷ್ಠ ಲೋಧ್ರಮೆಂಬಿಂ |
ತಿವ [5]ನೊಂದಂ ಜಲದೊಳರೆದು ಪೂಸಲ್ ಮೊಗಮಿಂ ||
ದುವ ಕಾನ್ತಿ[6]ಯುಮಂ ಸದ್ಯ |
ಚ್ಛವಿಯುಮನೊಳಕೊಂಡು ಕರಮೆ ಸೊಗಯಿಸಿ ತೋರ್ಕುಂ || ೯೦ ||

ಟೀ|| ಎಕ್ಕೆಯ ಪಣ್ಣೆಲೆಯ ರಸಮಂ ಕೊಂಡು ನಸ್ಯಮಂ ಮಾಡಲ್ ಸರ್ಪಂ ಮೊದಲಾದ ಸಕಲಜಂಗಮವಿಷಂ ಕಿಡುಗುಂ(ವುದು), ಪಲ್ಲಪುಱುಗಳುಂ ಕಿಡುವುವು, ಅರೆದಲೆಬೇನೆಯುಂ ಮಾಣ್ಬುದು—೮೭.

ಟೀ|| ಜೀರಗೆ, ಬಿಳಿಯ ಸಾಸಿವೆ ಕಾಳ್(ಱ್)ಜೀರಗೆ, ಕರಿಯೆಳ್ಳು, ಇವಂ ಆಡಿನ ಪಾಲಲ್ಲಿ ಅರೆದು ಪೂಸಲ್ ಬಂಗು ಮಾಣ್ಬುದು—೮೮.

ಟೀ|| ಬಾಗೆಯ ಬೀಜಮಂ ಗೋಮೂತ್ರದಲ್ಲರೆದು ಪೂಸುವುದು. ಅಲ್ಲಾ ಬನ್ನಿಯ ಬೀಜಮಂ ಗೋಮೂತ್ರದಲ್ಲರೆದು [7]ಪೂಸುವುದು. ಇವಱಿಂದೆ ಮೊಡವಿ ಮಾಣ್ಬುದು, ತಾವರೆ [8]ಹೂವಿನ ಮರ್ಯಾದೆಯಲ್ಲಿ ಮುಖಕಾಂತಿಯಪ್ಪುದು—೮೯.

ಟೀ|| ಜವೆ, ಕೋಷ್ಠಂ, ಲೋಧ್ರಂ ಇವಱೊಳಗೆ ಆವುದೊಂದು ದೊರಕಿದೊಡಮಂ [9]ಕೊಂಡು ಉದಕದಲ್ಲರೆದು ಮುಸುಡಂ ಪೂಸಲ್ [10]ಪುಟ್ಟುಂದು ಚಂದ್ರನ ಮರ್ಯಾದೆಯಲ್ಲಿ ಕಾಂತಿಯಪ್ಪುದು—ಬೇಗಮಪ್ಪುದು—೯೦.

1 ಬಿಂಸಿ. 2 ಯೆಳ್ಳುಗಳೆಂಬಿ. 3 ಸಿದ್ಧಾರ್ಥಜಂ. 4 ತ್ಸವಿಯಾಗಿ. 5 ನೊಂದಂ ಪೂಸೆ ಮೊಗವಮಿಂದು ಕಾ. 6 ಯುಮನೆಸೆವಚ್ಛವಿಯ. 7 ಪೂಸಲ್ ಇವಱಿಂದೆ ಮೊಡವಿ ಸೋಕುಮಾಣ್ಬುದು, ಮೊಡವಿ ಮಾಮ ಮುಖವಪ್ಪ ಕಾಂತಿಯಪ್ಪುದು. 8 ರೆಯಂತೆ. 9 ತಂದು, ಸೀರಲಿ. 10 ಮುಖ.

(ನೆಗಡಿಗೆ)

ಕಂ|| ಗುಡಮಂ ಮರಿಚಮುಮಂ ಮೊಸ |
ರೊಡನೊಂದಿರೆ ಕೂಡಿ [1]ಕೊಟಿಳೊಳೆಬೆದುಣ್ಬುದು ಮೇಣ್ ||
ಪಡುವಾಗಳ್ ತಣ್ಣೀರಂ |
ಕುಡಿದೊಡೆ ಕಡುನೆಗಡಿ ಪೋಪುದೇಂ ಸಂದೆಯಮೇ || ೯೧ ||

(ನೆಗಡಿ, ತೇಂಕರೆತಲೆಬೇನೆ, ಜ್ವರಂಗಳ್ಗೆ)

ಪಲವುಂ ಮಾತಿನೊಳೇಂ ಪಿ |
ಪ್ಪಲಿಯಂ ತ್ರಿಫಳೆಯುಮನರೆದು ಜೇನೆಯ್ಯೊಳದಂ ||
ಕಲಸಿ ತಿನೆ ನೆಗಡಿ ತೇಂಕರೆ |
ತಲೆ ಬೇನೆ[2] ಜ್ವರಂಗಳೆಂಬಿವಿನಿತುಂ ಕಿಡುಗುಂ || ೯೨ ||

(ಊರ್ಧ್ವಶ್ವಾಸಕ್ಕೆ)

ಪುಡಿಮಾಡಿದ ತಾಱೆಯೊಳಿ |
ಮ್ಮಡಿ ಮಧುವಂ ಕಲಸಿ ಕೊಂಡು ಭೋಜನದಿಂದಂ ||
ಕಡೆಯೊಳ್ ಸೇವಿಸೆ ತಡೆಯದೆ |
ಕಿಡುಗುಂ ಕರಮುರಿದೆನಿಪ್ಪುದೂರ್ಧ್ವಶ್ವಾಸಂ || ೯೩ ||

(ಕೆಮ್ಮು ಮೊದಲಾದುವರ್ಕೆ)

ಕರಿಯಾಡಿನ ತುಪ್ಪಮುಮಂ |
ಬರಿವದಣೆಯ ಪಣ್ಣ ಗಿಂಜು[3]ಮಂ ಸೇವಿಸೆ ಸಂ ||
ಹರಿಸುಗುಮದು ಕೆಮ್ಮಂ [4]ತೇಂ |
ಕರೆಯಂ ನೆಗಡಿಯುಮನ್[5]ನುಱುದುವೇಂ ಗೆಯ್ದಪುವೋ || ೯೪ ||

ಟೀ|| ಬೆಲ್ಲಂ, ಮೆಣಸಿನ ಚೂರ್ಣಂ ಈಯೆರಡುಮಂ ಮೊಸರೊಳ್ ಕಲಸಿ ಮೋಗರದಲ್ಲಿ ಕಲಸಿ ಉಣ್ಬುದು. ಅಲ್ಲಾ ನಿದ್ರೆಗೆಯ್ವಾಗಳ್ ತ(ಥ)ಣ್ಣೀರಂ ಕುಡಿ(ವು)ದು ಮಲಗಲ್ ನೆಗಡಿ ಮಾಣ್ಬುದು—೯೧.

ಟೀ|| ಹಿಪ್ಪಲಿ, ಅಣಿಲೆಯ ಕಾಯ್, ನೆಲ್ಲಿಯಸೆಟ್ಟು, ತಾಱೆಯ ಕಾಯ್ ಇವುಗಳನೊಂದಾಗಿ ಉದಕದಲ್ಲಿ ಅರೆದು ಜೇನತುಪ್ಪದಲ್ಲಿ ಕಲಸಿ ಮೆಲಲ್ ನೆಗಡಿ, [6]ತೇಂಕು, ಅರೆತಲೆಯಶೂಲೆ, ಜ್ವರಂಗಳ್ ಕಿಡುವುವು—೯೨.

ಟೀ|| ತಾಱೆಯ ಕಾಯ ಚೂರ್ಣಮಂ ಕೊಂಡು ಅದಱ ಇಮ್ಮಡಿ ಜೇನತುಪ್ಪಮಂ ಕಲಸಿ ರಾತ್ರೆಯಲ್ಲಿ [7]ಊಟಮಾಡಿದ ಬಱಕ್ಕಂ ಸೇವಿಸಲ್ ಹೆಚ್ಚಿದಂತಹ ಮೇಲಶ್ವಾಸಂ ಮಾಣ್ಬುದು—೯೩.

ಟೀ|| ನೆಲಗುಳ್ಳದ ಹಣ್ಣಿನ ತಿರುಳಂ [8]ಕಾಳಿಯಾಕಳ ತುಪ್ಪದಲ್ಲಿ ಕಲಸಿ ಮೆಲಲ್ ಕೆಮ್ಮು ತೆಂಕರಿ (ತೇಕರಿಕೆ) ನೆಗಡಿ ಇವುಗಳ್ ಕಿಡುವುವು—೯೪.

1 ಕೊಳೊಳೆಱದಂತದನೊಣ್ಬುದವಾಗಳ್ ತಣ್ಣೀರಂ ಕೂಡಿದೊಡೆ... 2 ಬೇನೆಗಳೆಂಬಿವಿನಿತುಂ ಮುಗುಱೆ ಕಿಡು. 3 ಮಂ ಕರಂ ಸೇವಿ. 4 ತೆಂಕರಿಕಂ. 5 ನುಮುದುವೇ. 6 ತೆಂಕರತಲೆ. 7 ಉಂಡಮೇಲೆ. 8 ಕರಿಯಾಕಳ.



(ಖಾಸಕ್ಕೆ)

ಕಂ|| ಬಱವದಣೆಲೊಕ್ಕಿಯೆಲೆವುಲಿ |
ಯುರ[1]ನಾಡುಳಿಯಮರ್ದುವಳ್ಳಿಯೆಂಬಿವರೊಳಗಂ ||
ದೊರೆ[2]ಕೊಂಡುದೊಂದನಾಜ್ಯದೆ |
ಕರಿದಲ್ಲದೊಡುಪ್ಪುವೆರಸಿ ತಿನೆ ಖಾಸಹರಂ || ೯೫ ||

(ಕೆಟ್ಟದನಿಗೆ)

ಬಿಸುನೀರೊಳ್ ಪಿಪ್ಪಲಿ [3]ತಾ |
ಱೆ(ರಿ) ಸೈಂಧವಂ ಬೆರಸಿ ಕುಡಿಯೆಯುಂ ಮೇಣ್[4]ನಿಸಾ ||
ಱೆಸಿ ಗೋಕ್ಷೀರಮನಾಮಳ |
ಕ ಸಮೇತಂ ಪೀರ್ಗೆ ಕೆಟ್ಟ ಸರಮಿಂಬಕ್ಕುಂ || ೯೬ ||

(ಗಂಡಮಾಲೆಗೆ)

ಕರಿಯೆಳ್ಳು ಮಾಂಸಿ [5]ಲಕ್ತಕ |
ಮರಪಿಚ್ಚುಗೆ[6]ಯರ್ಕದುಗ್ಧಮೆಂಬಿವನಿಂಬಾ ||
ಗರೆದು ತೊಡೆದಂದು ಕರಮು |
ಜ್ಚರಿಯೆನಿಸುವ ಗಂಡಮಾಲೆಗಳ್ ಪಱಿಪಡುಗುಂ || ೯೭ ||

(ಉಪಜಿಹ್ವಿಕೆಗ ಕಿಱುನಾಲಗೆ)

ಗಳಸುಂಟ(ಟಿ)ಗೆ ಕಿಡುಗುಂ ಪಿ |
ಪ್ಪಲಿ ಕಾಮನ ನಸ್ಯದಿಂದೆ ನಾಸಾಂತರದೊಳ್ ||
ಕಳೆಯಿಸೆ [7]ರಕ್ತಮನಂತದು |
ಕಳೆಗುಂ ಕರನೊದವಿ [8]ತೋಱುವುಪಜಿಹ್ವಿಕೆಯುಂ || ೯೮

ಟೀ|| ನೆಲಗುಳ್ಳಂ, ಲೊಕ್ಕಿ, ಎಲೆಹುರಿಯಂ, ಆಡಸೋಗೆ, ಅಮರ್ದುವಳ್ಳಿ ಇವಱೊಳಗೆ ಆವುದೊಂದು ದೊರಕಿದೊಡದಱ ಸೊಪ್ಪಂ ಕೊಂಡು ಆಕಳ ತುಪ್ಪದಲ್ಲಿ ಪುರಿದು ಮೆಲ್ವುದು ಅಲ್ಲಾ ಅದೇ (ಅ) ಸೊಪ್ಪುಮಂ ಉಪ್ಪಂ ಕೂಡಿ ಮೆಲ್ವುದಱಿಂದೆ ಖಾಸಂ ಮಾಣ್ಬುದು—೯೫.

ಟೀ|| ಹಿಪ್ಪಲಿ, (ಸೈಂಧವಂ) ತಾಱೆಯ ಕಾಯ್, ಸೈಂಧವಂ ಇವನರೆದು ಬಿಸುನೀ[9]ರಕ್ಷಿ ಕವಡಿ ಕುಡಿವುದು. ಅಲ್ಲಾ ನೆಲ್ಲಿಯಸೆಟ್ಟುಮಂ ಅರೆದು ಆಕಳ[10]ಹಾಲಲ್ಲಿ ಅಱಿಸಿ ಕವಡಿ ಕುಡಿಯಲ್ ಕೆಟ್ಟದನಿ ಪೊಳ್ಳಿತ್ತಪ್ಪುದು—೯೬.

ಟೀ|| ಕರಿಯೆಳ್ಳು, ಜಟಾಮಾಂಸಿ, ಅಲತಿಗೆ, ಜಾಜಿಯಸೊಪ್ಪು, ಎಕ್ಕೆಯಪಾಲ್ ಇವನುದಕದಲ್ಲರೆದು ತೊಡೆಯಲ್ ಗಂಡಮಾಲೆ [11]ಮಾಣ್ಗುಂ—೯೭.

ಟೀ|| ಹೊಮ್ಮುಗುಳ ಬೇರರಸಮಂ ನಸ್ಯಮಂ ಮಾಡಲ್ ಗಳಸುಂಟಿಗೆಯರೋಗಂ ಮಾಣ್ಬುದು. ಮೂಗಿನೊಳಗೆ ಸೆರೆಯಂ ಬಿಟ್ಟು ರಕ್ತಮಂ ಕಳೆಯಲ್ ಉಪಜಿಹ್ವೆ [12]ಮಾಣ್ಗುಂ—೯೮.

1 ನಾಡುಳಿಚಂಚನು ಬೇಪುಪೆಂಜಿನಱಿಲೆಯೊಳ್. 2 ಕೊಂಡೊಡೊಂದನಾಜ್ಯದೆ ಕರಿವಲ್ಲದುಪ್ಪು, ಕರಿವಲದೊಡುಪ್ಪು ಕೊಂಡುದನಾಜ್ಯದೊಳಂ ಕರಿದುಪ್ಪಂ ಬೆರಸಿ ತಿಂನೆ ಖಾಸಂ ಪೋಕುಂ. 3 ಸೆಂಘಾಸಮುತಾರೆ ಯುನು. 4 ನೆಱಿಸಾ. 5 ರಕ್ತತ. 6 ಗೆಮರ್ಕ. 7 ಗಂಧಮು. 8 ತೋಪುಳವಪ್ಪು. 9 ನೀರಕ್ಷಿ ಕೂಡಿ. 10 ಹಾಲನು ಕೂಡಿಸಿ ಕದಡಿ. 11 ಕಿಡುವುದು. 12 ಮಾಣ್ಬುದು.

ಕಂ|| ಬಜೆಯುಂ ಕನೆ ಗಳಸುಂಟಿ(ಟ)ಗೆ |
ಯಜೀರ್ಣಮುಪಜಿಹ್ವೆ ಗಂಡಸಂಕಲೆ ಕಫ ವಾ ||
ತಜ ರೋಗಮೆಂಬಿವಂ ತಾ |
ನೆ ಜಯಂಗೆಯ್ಗುಂ ಸರಸ್ವತೀಮುಖತಿಲಕಾ || ೯೯ ||

(ಮಾನಸ್ತಂಭರೋಗಕ್ಕೆ)

ಪರಿಪಕ್ವಮಾದ ಗರ್ದುಗಿನ |
ತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದಂ ||
ದಿರಲೀಗುಮೆ ಮಾನಸ್ತಂ |
ಭರೋಗಮುಂ ಬಾಹುಮೆಂಬಿವಂ ಗ್ರಂಥಿಯುಮಂ || ೧೦೦ ||

(ಚಿಬ್ಬಿಂಗೆ)

ಕದಳೀ[1]ಪತ್ರದಪಾಮಾ |
ರ್ಗದ ಬೂದಿಯೊಳಲ್ಲಿ ಪಡೆದುದಂ ಟಂಕಣ ಖಾ ||
ರದೊಳಕ್ಕೆ ತೈಲದೊಳ್ ಮೂ |
ಱುದಿನಂಬರಮಿರಿಸಿ ಪೂಸೆ ಚಿಬ್ಬುಂ ಕಿಡುಗುಂ || ೧೦೧ ||

ಆವಿನಳೆಯೊಳ್ ಚಗಚ್ಚೆಯ |
ಬಾವುಜಿಗೆಯ ಬಿತ್ತನಲ್ಲಿ [2]ನಿಶೆ ಗಂಧಕಮೆಂ ||
ಬೀವಸ್ತುವನರೆದೊಂದಿರೆ |
[3]ಲೇವಿ(ಪಿ)ಸಿದೊಡೆ ಚಿಬ್ಬಿನುರ್ಬು ಪರ್ಬದೆ ಕಿಡುಗುಂ || ೧೦೨ ||

ಟೀ|| ಬಜೆಯುಂ ಮೊಲಲ್ ಗಳಸುಂಟಿಗೆ, ಅಜೀರ್ಣಂ, ಉಪಜಿಹ್ವೆ, ಗಳಗಂಡರೋಗಂ, ಶ್ಲೇಷ್ಮವಾತಂಗಳುಂ [4]ಮಾಣ್ಬುವು—೯೯.

ಟೀ|| ಒಳ್ಳಿತ್ತಾಗಿ ಹಣ್ಣಾದ ಗದುಗಿನ ತಿರುಳಂ ಶುಂಠಿಯುಮನುದಕದಲ್ಲರದು ನಸ್ಯಮಂ ಮಾಡಲ್ ಮಂಕಿನಂತೆ ಇರ್ಪುದುಂ, ಬಾಹುಗಂಟುಗಳುಂ ಮಾಣ್ಬುವು—೧೦೦.

ಟೀ|| ಬಾಳೆಯೆಲೆಯ ಬೂದಿಯಾದೊಡಂ, ಅಲ್ಲಾ ಉತ್ತರಣೆಯ ಸಮೂಲದ ಬೂದಿಯಾದೊಡಂ ಇವಱೊಳಗೆ ದೊರಕಿದುದೊಂದಂ ಟಂಕಣಖಾರದಲ್ಲಾದೊಡಂ, ಅಲ್ಲಾ ಎಳ್ಳೆಣ್ಣೆಯೊಳಾದೊಡಂ ಕಲಸಿ ಮೂಱುದಿನಮಿರಿಸಿಟ್ಟು ಅದಂ ಬೞಿಕೆ ತೆಗೆದು ಪೂಸಿಕೊಳಲ್ ಚಿಬ್ಬು ಮಾಣ್ಬುದು—೧೦೧.

ಟೀ|| ಚಗಚೆಯ ಬೀಜಂ, ವಾಕುಜಿಯ ಬೀಜಂ, ನೆಲ್ಲಿಯ ಸೆಟ್ಟು, ಅರಿಸಿನಂ, ಗಂಧಕಂ, ಇವನಾಕಳ ಮಜ್ಜಿಗೆಯಲ್ಲರೆದು ಪೂಸಲ್ ಚಿಬ್ಬು ಪರ್ಬದೆ ಕಿಡುಗುಂ—೧೦೨.

1 ಪತ್ರದ ಬೂದಿಯೊಳದಱಲ್ಲಿ. 2 ಶಮ. 3 ಲೇಪಿಸಿದರೆ. 4 ಕಿಡುವುದು.



ಕಂ|| ಎರವ್ವಲಿಯ ಬೇರುಮಂ ಸ |
ಜ್ಜ[1]ರಸಮು ಮೆಂಬಿವಱೊಳಂತದೊಂದನೆ ಕಳಿಯಿಂ ||
ದರೆದೊರಸಿ ಪೂಸೆ ಕಿಡಿಸುಗು |
ವಿರದದು ಪರೆದಿರ್ದ [2]ಚಿರ್ಬನಚಳಿತವಚನಾ || ೧೦೩ ||

(ತರ್ದಂಗೆ)

ಪೆಡೆಯಕ್ಕಿಯ ಪಾಲಂ ತೊಡೆ |
ದೊಡೆ ಮೇಣರಿಸಿನದ ಬೂದಿಯುಂ ಸುಣ್ಣಮುಮಂ ||
ತೊಡೆದೊಡೆ ಮೇಣ್ ತಡವಿಲ್ಲದೆ |
ಕಿಡಿಸುಗು ತರ್ದುಗಳ [3]ನಿದಕೆ ದೊರೆ ಪೆಱತೊಳವೇ || ೧೦೪ ||

ಅರಿದಾಳಂ [4]ಸಿಂಧೂದ್ಭವ |
ಮರಿಸಿನ ಮೆಳಗಱಕೆ ಯೆಂಬಿವಂ ಗೋಮೂತ್ರಂ ||
ಬೆರ್ಚಿಸರೆದು ಪೂಸೆ ತರ್ದುಂ |
ಮುರ[6]ವೂ(ವು)ವುಂ ಖರ್ಜಿಯುಂ ವಿಸರ್ಪಮು[7]ಮಱಿಗುಂ || ೧೦೫ ||

(ಖರ್ಜಿ ವಿಸರ್ಪಂಗಳ್ಗೆ)

ತರಳಂ|| ತೊವರಿ ಗೋದುವೆ ಜೋಳಮುದ್ದು ಪೆಸಱ್ ಮಸೂರಿಗೆ ಗುಂಜಿಯೆಂ |
ಬಿವಱೊಳೊಂದಱೊಳಾದ ತೈಲಮನಕ್ಕೆ ಮೇಣ್ ತಱಿತೇಗು ವಾ ||
ರ್ಥಿವ ಕುಜಂ ಬಿಟಿಲ(ಲಿ)ಬ್ಬಿಡೆಂಬಿ[8]ವನೊಂದನೊಂದನೆ ತಂದು ಪೂ |
ಸುವುದು ಖರ್ಜಿಯುಮಂ [9]ವಿಸರ್ಪಮುಮಂ ಸಮಂತದು ಮಾಣಿಕುಂ || ೧೦೬

ಟೀ|| ಎಲವು(ವೂ)ರಿಯ ಬೇರನಂಬಿಲದಲ್ಲರೆದು ಪೂಸುವುದು. ಅಲ್ಲಾ ಸಜ್ಜ ರಸಮಂ ಅಂಬಿಲದಲ್ಲರೆದು ಪೂಸುವುದು. ಚಿಬ್ಬು ಮಾಣ್ಬುದು. ತಿಮಿರ(ಱ) ಕಿಡುವುದು—೧೦೩.

ಟೀ|| ಅಕ್ಕಿಹೆಡೆಯ ಪಾಲಂ ತೊಡೆವುದು. ಅಲ್ಲಾ ಅರಿಸಿನಮಂ ಸುಟ್ಟು ಬೂದಿಯಂ ಮಾಡಿ ಸುಣ್ಣದಲ್ಲಿ ಕಲಸಿ ಪೂಸುವುದು. ಇವಱಿಂದೆ ತರ್ದು [10]ಮಾಣ್ಬುದು—೧೦೪.

ಟೀ|| ಅರಿದಾಳಂ, ಸೈಂಧವಂ, ಅರಿಸಿನಂ, ಎಳೆಯ ಗಱಕೆ ಇವಂ ಗೋಮೂತ್ರದಲ್ಲರೆದು ಪೂಸಲ್ ತರ್ದು, ತುಱಿ, ವಿಸಬಂಗಳ್ ಮಾಣ್ಬುವು—೧೦೫.

ಟೀ|| ತೊಗರಿ, ಗೋದಿ, ಜೋಳಂ, ಉದ್ದು, ಪೆಸಱು, ಕಡಲೆ, ಗುರುಗುಂಜಿ, ಇವಂ ಜೇಱಿ ವೇಱಿ, ಅಗ್ನಿಪುಟದಲ್ಲಿ ತೈಲಮಂ ತೆಗೆದು ಬೇಱಿವೇಱಿ ಕೊಂಡ ತೈಲಮಂ ಪೂಸಲ್ ತುಱಿ [11]ವಿಸಬಂಗಳ್ ಮಾಣ್ಗುಂ—೧೦೬.

1 ರಸಂಗಳಿಂ. 2 ಚರ್ಮಮಂ, ಕೀಟನುಮಂ. 3 ನಿವಱದೊರೆ, ನಿವಱ ಸಮತೆಗೀಂ. 4 ಸೈಂಧವಮುಂ. 5 ಸಿರಸಿ. 6 ಊಉಂ ಖರ್ಜಿಯುಂ ವಿಷಮುಮಾಗಳೆ ಕಿಡುಗುಂ. 7 ಮಳಿಸಿಂ. 8 ಪಱೊಳೊಡೆಱಿಣ್ಣೆಯ ಪೂ, ಪರೊಂದೆಣ್ಣೆಯ. 9 ವಿಷಮುಮಂತದಂ ಕಳೆದಿಕ್ಕುಗುಂ. 10 ಮಾಣ್ಬುವು. 11 ವಿಸಮಾಳ.

(ರಕ್ತಮಂಡಲಕ್ಕೆ)

ಕಂ|| ಭರದಿಂ ಸಮುದ್ರಫೇನಮ |
ನೊರಸಿ ಬೞಿಕ್ಕದನೆ ಪೂಸುಗಲ್ಲದೊಡೆ ಮುನೀಂ ||
ಶ್ವರ ತರುಬೀಜಮನರೆದೊಂ |
ದಿರೆ ಪೂಸುಗೆ ರಕ್ತಮಂಡಲಂಗಳ್ ಕಿಡುಗುಂ || ೧೦೭ ||

(ಬಿಳಿಯ ತೊನ್ನಿಗೆ)

ಸಿತಗಿರಿ ಕರ್ಣಿಕೆಯಂ ಮೇಣ್ |
ಮತಂಗ ಶಾರ್ದೂಲ ಚರ್ಮ ಮಸಿಯಂ ತಿಲತೈಲ ಸಮ ||
ನ್ವಿತಮಾಗಿರೆ ಸಲೆ ಪೂಸುಗೆ |
ಸಿತಕುಷ್ಠಂ ಕಿಡುಗುಮಲ್ಲಿ ಸಂದೆಯಮುಂಟೇ || ೧೦೮ ||

ಬಾವುಜಗೆ[1] ವೆರಸಿ ಪೆಪ್ಪಿ |
ಟ್ಟಾವಿನ ಮೊಸರೊಳಗೆ ಬೆಣ್ಣೆಗೊಂಡಂತದಱೊಳ್ ||
ಭಾವಿಸಿ ಮಧುವಂ ಪೂಸುಗೆ |
ಸೇವಿ[2]ಸುಗದು ಬಿಳಿಯ ತೊನ್ನನಿರದುಪಶಮಿಕುಂ || ೧೦೯ ||

(ಕುಷ್ಠರೋಗಕ್ಕೆ)

ನಿಂಬದಳಂ ಧಾತ್ರೀಫಳ |
ಮೆಂಬಿವನೊಡನರೆದು ಕುಡಿವುದಣಲೆಗಳಂ ಮೇಣ್ ||
ತಿಂಬುದನುಕ್ರಮದಿಂ ಸೆರೆ |
ಯಂ ಬಿಡುವುದು ಕುಷ್ಠರೋಗಮಿವಱಿಂ ಕಿಡುಗುಂ || ೧೧೦ ||

ಟೀ|| ಕಡಲ್ನೊರೆಯನ್ನು ಕಲ್ಲಿನಲ್ಲಿ ಒರಸಿ ಅದನೆ ಉದಕದಲ್ಲಿ ತೇದು ಪೂಸುವುದು. ಅಲ್ಲಾ ಅಗಸೆಯ ಬೀಜವಂ ಉದಕದಲ್ಲಿ ತೇದು (ಅರೆದು) ಪೂಸುವುದು ಇವಱಿಂದೆ ರಕ್ತಮಂಡಲಂಗಳ್ ಕಿಡುವುವು—೧೦೭.

ಟೀ|| ಬಿಳಿಯಗಿರಿಕರ್ಣಿಕೆಯ ಬೇರಂ ಸುಟ್ಟು ಬೂದಿಯಂಮಾಡಿ ಆ ಬೂದಿಯಂ ಎಳ್ಳೆಣ್ಣೆಯಲ್ಲಿ ಕಲಿಸಿ ಪೂಸುವುದು. ಅಲ್ಲಾ ಆನೆಯ ಚರ್ಮಂ, ಪುಲಿಯ ಚರ್ಮಂ ಇವಂ ಸುಟ್ಟು ಬೂದಿಮಾಡಿ ಆ ಬೂದಿಯಂ ಎಳ್ಳೆಣ್ಣೆಯಲ್ಲಿ ಕಲಸಿ ಪೂಸುವುದು ಬಿಳಿಯ ತೊನ್ನು ಮಾಣ್ಬುದು ನಿರ್ಧಾರ—೧೦೮.

ಟೀ|| ಬಾವುಜಿಗೆಯ ಬೇರಂ ತಂದು ಅರೆದು ಆಕಳ ಪಾಲೊಳಗೆ [3]ಹಾಕಿ ಕಾಸಿ ಆ ಪಾಲಂ ಹೆಪ್ಪುಗೊಟ್ಟು ಆ ಮೊಸರಂ ಕಡೆದು ಬೆಣ್ಣೆಯಂ ಜೇನತುಪ್ಪದಲ್ಲಿ ಮರ್ದಿಸಿ ಸೇವಿಸುವುದು ಅದನೆ ಪೂಸುವುದು ಬಿಳಿಯ ತೊನ್ನು ಮಾಣ್ಬುದು—೧೦೯.

ಟೀ|| ಬೇವಿನ ಸೊಪ್ಪು, ನೆಲ್ಲಿಯ ಸೆಟ್ಟು, ಈ ಎರಡುಮನುದಕದಲ್ಲರೆದು ಕುಡಿವುದು. ಅಲ್ಲಾ ಅಣಲೆಯಕಾಯನನುಕ್ರಮದಿಂ ಸೇವಿಸುವ ಕಟ್ಟಳ(ಳೆ)—ಮೂಱುದಿನ ಪರ್ಯಂತಂ ದಿನಕ್ಕೊಂದೊಂದು ಕಾಯಂ ಸೇವಿಸುವುದು. ನಾಲ್ಕನೆಯ ದಿನ ತೊಡಗಿ ಮೂಱುದಿನಪರ್ಯಂತಂ ಮೂಱುಮೂಱು ಕಾಯಂ ಸೇವಿಸುವುದು. ಈ ಮರ್ಯಾದೆಯಲ್ಲಿ ಮೂಱುಮೂಱು ದಿನದಿನಕ್ಕೆ

1 ಯ ಬೇರಂ ತಂದಾವಿನ......ಣ್ಣೆಯಂ ಗೊಂಡದಱೊಳ್, ಪೆಪ್ಪಿಟ್ಟೇವಿನ. 2 ಸುತಿರೆ. 3 ಕೂಡಿ.



(ಪದಿನೆಂಟು ತೆಱದ ಕುಷ್ಠಂಗಳ್ಗೆ)

ಕಂ|| ಕರಿಯೆಳ್ಳು ಬಾವುಜಿಗೆಯರು |
ಷ್ಕರ ಬೀಜಮಿವಱ ಸಮಾನಮಾಗಿರೆ ತಿಂಗಳ್ ||
ವರೆಗಂ ಸೇವಿಸುತಿರೆ ಸಂ |
ಹರಿಕುಂ ಪದಿನೆಂಟು ತೆರದ ಕುಷ್ಠಂಗಳುಮಂ || ೧೧೧ ||

(ತುಱಿಕೆಜಂಕುಗಳ್ಗೆ)

ತಿಳಮಿಪ್ಪಲಮಾಗಿರೆ ಗೋ |
ಜಳದೊಳ್ ಭಾವಿಸಿದ [1]ವಾಕುಚಿಯ ಬೀಜಮುಮಿ ||
ಪ್ಪಳಮಾಗಿರೆ ತಿಂದೊಡೆ ನುಂ |
ಗೊಲೆವಡಿ(ರಿ)ಸುವ ತುಱಿ ಕೆಱಂಕಿನೆಸಕಂ ಮಾಣ್ಗುಂ || ೧೧೨ ||

ಮರಿಚಮುಮಂ ಸಿಂಧುರುಹಮ |
ನರೆದೆಮ್ಮೆಯ ಬೆಣ್ಣೆವೆರಸು ಸರ್ವಾಂಗಮುಮಂ ||
ಪರಿಮರ್ದಿಸಿ ಬಿಸಿಲೊಳ್ ನಿಲೆ |
ಕೆರಕುಂ ತುಱಿ ಖರ್ಜ್ಜ ಯೆಂಬಿವಿನಿತುಂ ಕಿಡುಗುಂ || ೧೧೩ ||

(ಕ್ರಿಮಿಗೆ)

ಒದವಿರ್ದ ಕಾದಲಂ ಬೆ |
ಲ್ಲದೊಳಂ ತುಪ್ಪದೊಳಮಟ್ಟು ತಿಂದೊಡಮಂತ ||
ಲ್ಲದೊಡೆ ವಿಳಂಗಂ ಚೋಪಾ |
[2]ರದೋವಮೆಂಬಿವನೆ ತಿಂದೊಡಂ ಕ್ರಿಮಿ ಪೋಕುಂ || ೧೧೪ ||

ಒಂದೊಂದು ಕಾಯಂ ಅಧಿಕವಾಗಿ ಸೇವಿಸುವುದು. ಅರ್ಧಮಂಡಲ (ಇಪ್ಪತ್ತು ನಾಲ್ಕು ದಿವಸ)ಕ್ಕೆ ಎಂಟು ಕಾಯಂ ಸೇವಿಸುವುದು. ಅಲ್ಲಿಂದ ಮೇಲೆ ಅರ್ಧಮಂಡಲ ಪರಿಯಂತಂ ದಿನಂಪ್ರತಿ ಎಂಟೆಂಟು ಕಾಯಂ ಸೇವಿಸುವುದು. ಸೆರೆಬಿಡುವ ಠಾವನಱಿತು ಸೆರೆಯಂ ಬಿಡುವುದು. ಇವಱಿಂದೆ ಬಿಳಿಯ ತೊನ್ನು ಮಾಣ್ಬುದು—೧೧೦.

ಟೀ|| ಕರಿಯೆಳ್ಳು, ವಾಕಚಿಯ ಬೀಜಂ, ಅರುಷ್ಕರಬೀಜಂ (ಗೇರಗೊಟ್ಟೆ) ಇವಂ ಸಮಭಾಗೆಯಾಗಿ ಕೊಂಡು ಒಂದು ಮಂಡಲಪರ್ಯಂತಂ ಸೇವಿಸಲ್ ಪದಿನೆಂಟು [3]ತೆಱದ ತೊನ್ನುಗಳುಂ ಮಾಣ್ಬುವು—೧೧೧.

ಟೀ|| ಎರಡು ಪಲಮೆಳ್ಳುಂ, ಗೋಮೂತ್ರದೊಳ್ ನನೆಯಿಕ್ಕಿ ಒಣಗಿಸಿದ ವಾಕುಚಿಯ ಬೀಜಮಿಪ್ಪಲಂ ಈಯೆರಡಂ ಕೂಡಿ ಪ್ರತಿದಿನಮುಂ ನಾಲ್ಕು ತೂಕದ ಮರ್ಯಾದೆಯಲ್ಲಿ ಸೇವಿಸುತ್ತುಂ ಬರಲ್ ತುಱಿಕೆರಂಕುಗಳ್ ಮಾಣ್ಬುವು—೧೧೨.

ಟೀ|| ಮೆಣಸಿನ ಪುಡಿ, ಸೈಂಧವಂ ಇವೆರಡುಮಂ ಅರೆದು ಎಮ್ಮೆಯ ಬೆಣ್ಣೆಯಲ್ಲಿ ಕಲಸಿ ಅದನ್ನು ಮೆಯ್ಗೆ ಪೂಸಿಕೊಂಡು ಬಿಸಿಲೊಳ್ ನಿಲಲ್ ತುಱಿಕೆರಕುಖರ್ಜ್ಜಗಳ್ ಮಾಣ್ಬುವು—[illegible]

ಟೀ|| ಕೊಳಗೆಡ್ಡೆಯಂ ಬೆಲ್ಲದಲ್ಲಾದೊಡಂ ಮೇಣ್ ತುಪ್ಪದಲ್ಲಾದೊಡಂ ಅಟ್ಟು ಮೆಲ್ವುದು [4]ಅಲ್ಲಾ ವಿಳಂಗಂ, ಚೋಪಾರ(ಱ)ದ ಓವಂ ಇವಂ ಕೂಡಿಕೊಂಡು ಮೆಲ್ವುದು. ಇವಱಿಂ ಕ್ರಿಮಿ ಕಿಡುವುದು—೧೧೪.

1 ವಾಲುಜದ ಬೀಜಮುವಿ. 2 ನದೋವ. 3 ಪರಿಯ. 4 ಅಲ್ಲವೆ.

ಕಂ|| ತಪ(ವ)ಸಿಯಬೇರಂ ನೆಲದಾ |
ಬುವನವು ದೊರೆಕೊಳ್ವದಂದು ತೊಱಿಮಲ್ಲಿಗೆಯಂ ||
ಪ್ರವಿಲೇಪನಮಂ ಮಾಡು |
ತ್ತುವಿರಲ್ಕಚ್ಚರಿಯಿದೆಂಬಿನಂ ಕ್ರಿಮಿ ಕಿಡುಗುಂ || ೧೧೫ ||

(ಜಲಗರಕ್ಕೆ)

[1]ತರುರಾಜಬೀಜಮಂ ದೇ |
ವರಾಜತರುದುಗ್ಧದಿಂದೆ ತೊಯ್ದೊಣಗಿಸಿ ನೆ ||
ಯ್ಯರಸು ತಿನೆ ಜಲ[2]ಗರಂ ಬಿಡೆ |
ಪಂಗುಮಂಗುವರ್ಗಾಗಿ [3]ತೂಂಬನುರ್ಚಿದ ತೆಱದಿಂ || ೧೧೬ ||

ಅವುಂಡಗೆಯೆಣ್ಣೆ ಯುಮಂ |
ಗೋ[4]ಮೂತ್ರಮುಮಂ ಯಥೋಕ್ತಮೆಮ್ಮೆಯ ಪಾಲ(ಲಿ)ಂ ||
ಗೋಮೂತ್ರಮುಮಂ ಮೇಣ್ ಕುಡಿ |
ಗಾವರಿಸುತ್ತಿರ್ಪ ಜಲಗರ(ಱ)ಂ ಪ್ರಶಮಿಸುಗುಂ || ೧೧೭ ||

(ಅತಿಸಾರಕ್ಕೆ)

ಮೊಸರೊಳ್ ಕುಡಿಯಿಸು[5]ವುದುಮಾ |
ಡಸೋಗೆಯಂ ಶುಂಠಿವೆರಸು ಮೇಣಿಕ್ಷುರಸಂ ||
ಕುಸುಮ[6]ರಸವೆಂಬಿವಂ ಕುಡಿ |
ಯಿಸುವುದು ಕಿಱುಕುಸಲೆ[7]ವೆರಸಿದತಿಸಾರಹರಂ || ೧೧೮ ||

ಟೀ|| ತವಸಿಯ ಬೇರಂ, ನೆಲದಾಱ[8]ಗಡ್ಡೆಯಂ ಇವೆರಡುಮನುದಕದಲ್ಲರೆದು ಲೇಪನಂ ಮಾಡುವುದು, ಅಲ್ಲಾ ತೊಱಿಮಲ್ಲಿಗೆಯ ಎಲಯನುದಕದಲ್ಲರೆದು ಪೂಸುವುದು, ಇವಱಿಂ ಕ್ರಿಮಿ ಕಿಡುವುದು—೧೧೫.

ಟೀ|| [9]ಕಕ್ಕೆಯಬೀಜವಂ ಎಲೆಗಳ್ಳಿಯ [10]ಹಾಲಲ್ಲಿ ನನೆಯಿಕ್ಕಿ ಆ ಬೀಜ[11]ಮಂ ನೊಣಗಿಸಿ ತುಪ್ಪಮಂ ಕೂಡಿ ಮೆಲಲ್ [12]ಜಲಗರಂ ಮಾಣ್ಬುದು. ತೂಂಬನುರ್ಚಿದ ಮರ್ಯಾದೆಯಲ್ಲಿ ಕದಡಿಪೋಪುದು—೧೧೬.

ಟೀ|| ಅವುಡಲಕನ ಎಣ್ಣೆ [13]ಗೋಮೂತ್ರಂ ಇವೆರಡಂ ಕೂಡಿ ಕುಡಿವುದು. ಅಲ್ಲಾ ಎಮ್ಮೆಯ ಪಾಲಲ್ಲಿ ಕದಡಿ ಕುಡಿಯುವುದು. ಈಯೆರಡಱಿಂದೆ ಪೆರ್ಚುತ್ತಿರ್ಪ ಜಲಗಱ(ರ)ಂ ಮಾಣ್ಬುದು—೧೧೭.

ಟೀ|| ಆಡಸೋಗೆಯ ಸೊಪ್ಪು, ಶುಂಠಿ ಇವಂ ಉದಕದಲ್ಲರೆದು ಆಕಳಮೊಸರಲ್ಲಿ ಕದಡಿ ಕುಡಿಯಿಸುವುದು. ಅಲ್ಲಾ ಧಾತಕೀಕುಸುಮಂ ಕಿಱುಕುಸಾಲೆ ಸಮೂಲಮಂ ಅರೆದು ಕಬ್ಬಿನ ಪಾಲಂ ಕದಡಿ ಕುಡಿಯಿಸುವುದು. ಇವಱಿಂದೆ ಅತಿಸಾರಂ ಕಿಡುವುದು—೧೧೮.

1 ಕರುರುಜ. 2 ಗಜಂ. 3 ತೂಂಕ. 4 ಮಂತ, ತಂತ್ರಮುಮಂ. 5 ವುದಾಡ. 6 ಸರ. 7 ನೆರಸತಿ. 8 ಬೇರಂ. 9 ಕರುರುಜವನ ಎಲೆ. 10 ಹಾಲಲ್ಲೂ. 11 ಮಂತಪ್ಪ. 12 ಜಲಬಹುಳಹುದು. 13 ಓಮು.



ಕಂ|| ಜಲದೊಳ್ ಕುಡಿಯಲೊಡಂ ಬೊ |
ಬ್ಬುಲಿ(ಳಾ)ಮೆಲೆಯನವಲ್ಲದಂದು ಮೇಣಾಲದ ಬೀ ||
ಜಲನರೆದು ತಕ್ರದೊಳ್ ಕುಡಿ |
ಯಲೊಡನೆಯತಿಸಾರರೋಗಮಾಗಳೆ ಕಿಡುಗುಂ || ೧೧೯ ||

(ನೇತ್ರರಹೊಡೆಗೆ)

ಬಜೆ ಸಂವರ್ಚಲ [1]ಹಿಂಗತಿ |
ಬಜೆ ಕೊಡಸಿಗೆಯೆಂಬಿ[2]ವಿನಿೀರುಮಂ ಕುಡಿಯಿಸಲು ||
ಷ್ಣ ಜಲಾನ್ವಿತಮದು ಕಿಡಿಸುಗು |
ಮಜಪ್ರಮೆನೆ ನಡೆವ ನುಣ್ಪುಮಂ ನೇತ್ರರುಮಂ || ೧೨೦ ||

(ದೀಪನಕ್ಕೆ) (ಶ್ವಾಸದೋಷಕ್ಕೆ)

ಬಿಸುನೀರೊಳರೆದು ಕುಡಿಗಣಿ |
ಲೆ ಸೈಂಧವಂ ಚಿತ್ರಕಂ ಕಣಾಚೂರ್ಣಮೆಂಬಿವಂ |
ಪಸಿವಕ್ಕುಮಾವಗಂ ಪಿಂ |
ಗಿಸುಗುಂ ಶ್ವಾಸಾದಿದೋಷಮಂ ನಿಶ್ಚಯದಿಂ || ೧೨೧ ||

(ವಿಷೂಚಿಗೆ)

ಗಿರಿಕರ್ಣಿಕೆ ಕಟುತ್ರಯ |
[3]ಮರಿಸಿನಮುತ್ತರಣೆಯೆಕ್ಕೆ ಮಧುವೆಂಬಿವಱಿಂ ||
ವಿರಚಿಸಿದ ಗುಳಿಗೆಯಂ ಕೊಂ |
ಡರೆದೆಚ್ಚುಗೆ ನಯನದೊಳ್ ವಿಷೂಚಿಕೆ ಕಿಡುಗುಂ || ೧೨೨ ||

ಟೀ|| ಬೊಬ್ಬುಲಿಯ ಸೊಪ್ಪನುದಕದಲ್ಲರೆದು ಕುಡಿಯುವುದು ಅಲ್ಲಾ ಆಲದ (ಬೀಜಮಂ) ಬಿಲಲಂ, ಆಕಳ ಮಜ್ಜಿಗೆಯಲ್ಲರೆದು ಕುಡಿವುದು. ಇವಱಿಂದೆ ಅತಿಸಾರರೋಗಂ ಮಾಣ್ಬುದು—೧೧೯.

ಟೀ|| ಬಜೆ ಸಂವರ್ಚಲವಣಂ, ಇಂಗು, ಅತಿಬಜೆ ಕೊಡಸಿಗನ ಬೇರ್ ಇವಂ ಬಿಸುನೀರಲ್ಲರೆದು ಕುಡಿವುದು *ನೆಣಚುನೇತ್ರರು ಮಾಣ್ಬುದು—೧೨೦.

ಟೀ|| ಅಣಿಲೆಯಕಾಯ್, ಸೈಂಧವಂ, ಚಿತ್ರಮೂಲದ ಬೇರ್, ಹಿಪ್ಪಲಿ ಇವಂ ಬಿಸುನೀರಲ್ಲಿ ಅರೆದು ಕುಡಿವುದು ದೀಪನಮಪ್ಪುದು. ಶ್ವಾಸರೋಗಂ ಮಾಣ್ಬುದು—೧೨೧.

ಟೀ|| ಗಿರಿಕರ್ಣಿಕೆ, ಶುಂಠಿ, ಮೆಣಸು, ಹಿಪ್ಪಲಿ, ಅರಿಸಿನಂ, ಉತ್ತರಣೆಯ ಬೇರ್ ಎಕ್ಕೆಯ ಬೇರ್ ಇವಂ ಸಮಭಾಗೆಯಾಗಿಕೊಂಡು ಉದಕದಲ್ಲರೆದು ಗುಳಿಗೆಯಂ ಮಾಡಿರಿಸಿ ಆ ಗುಳಿಗೆಯಂ ಜೇನತುಪ್ಪದಲ್ಲಿ ತೇದು ಕಣ್ಣಲ್ಲಿ ಎಚ್ಚುವುದು. ವಿಷೂಚಿಕೆಯರೋಗಂ ಮಾಣ್ಬುದು—೧೨೨.

1 ಲವಂಗತಿ. 2 ಬಿನಿತು. 3 ಮರಿಚನ.

* ರೋಗದ ಹೆಸರು ನೆಣಚುನೇತ್ರರೆಂದು ಟೀಕೆಯಲ್ಲಿದೆ. ಮೂಲದಲ್ಲಿ ಅಶುದ್ಧವಾಗಿ—ಅಜಪ್ರಮೆನೆ ನಡೆವನುಣ್ಪುಮಂ ನೇತ್ರರುಮಂ ಎಂದಿದೆ—ಇದೇನಾದರೂ "ಬ್ಲಡ್‌ಪ್ರೆಷರ್" ಎಂದು ಇಂಗ್ಲೀಷಿನಲ್ಲಿ ಹೇಳುವ ರೋಗವಿರಬಹುದೇ?

(ಗುಲ್ಮರೋಗಕ್ಕೆ)

ಕಂ|| ತವಸಿಯು ಬೇರ ಕಷಾಯದಿಂ |
ಬುವಿಸೊಳವುದ ಪಲವುಸೂಳಿನೊಳಂ ಭಾವಿಸಿದೋ ||
ಮವನರೆದು ಮಾತುಳುಂಗಾ |
ಮ್ಲವಿಮಿಶ್ರಂ ತಿಂಗೆ ಗುಲ್ಮವುಂ ಸಂಹರಿಕುಂ || ೧೫೩ ||

(ಅಷ್ಠೀಲಾದಿರೋಗಂಗಳ್ಗೆ)

ಸ(ಪ)ವಳದೆ ಕೊಗ್ಗಿಯನಕ್ಕಿಂ |
ದ್ರವಾರುಣಿಯ ಬೇರನಕ್ಕೆ ಸೇವಿಸೆ ತನ್ನಾ
ಲವನರೆದಂಬಲಿಯಟ್ಟುಣೆ |
ವಿವಿಧಾಷ್ಠೀಲಾದಿ ಜಠರರೋಗಂ ಕಿಡುಗುಂ || ೧೫೪ ||

(ಉದರರೋಗಕ್ಕೆ) (ಹೊಟ್ಟೆಯಸಮಸ್ತರೋಗಕ್ಕೆ)

ಕುಲುಸೆಯ ದುಗ್ಧದೊಳೊಂದಿರೆ |
ಪಲವುಂ ಸೂಟ್ ತೊಯ್ದು ಪೂಗಫಳಮಂ ಮೇಣ್ ಪಿ ||
ಪ್ಪಲಿಯಂ ಬಿಸುನೀರೊಳ್ ಕುಡಿ |
ಯಲೊಡಂ ಪ್ಲೀಹಾದಿ ಜಠರರೋಗಂ ಕಿಡುಗುಂ || ೧೫೫ ||

ಕದಳಿಯ ದಳಮಂ ಪೊಗೆ ಪೋ |
ಗದಂತು[1]ಸುಟ್ಟೂಱಲಿಟ್ಟುವಂಬಲಿಯಟ್ಟು ||
ಣ್ಬುದು ಗವ್ಯತಕ್ರದಿಂದುದ |
ರದೊಳಾದ ಸಮಸ್ತರೋಗಮಿರದುಪಶಮಿಕುಂ || ೧೫೬ ||

ಟೀ|| ತವಸಿಯ ಬೇರ[2]ನುದಕದಲ್ಲಿ ಹಾಯಿಕ್ಕಿ ಕಷಾಯಮಂ ಮಾಡಿ ಆವುದಕದಲ್ಲಿ ಓಮಮಂ ನಾಲ್ಕು (ಮೂಱು) ಬಾರಿ ನನೆಯಿಕ್ಕಿ ಒಣಗಿಸಿ ಆವೋಮಮಂ ಕೊಂಡು ಮಾದಲದ ಹಣ್ಣರಸದಲ್ಲಿ ಕಲಸಿ ಮೆಲಲ್ ಗುಲ್ಮರೋಗಂ ಮಾಣ್ಬುದು—೧೫೩.

ಟೀ|| ಕೊಗ್ಗಿಯ ಬೇರನಾದೊಡಂ ಅಲ್ಲಾ ಹಾವುಮೆಕ್ಕೆಯ ಬೇರನಾದೊಡಂ ಇವೆರಡಱೊಳಾವುದೊಂದು ದೊರಕಿದೊಡದಂ ಉದಯಕಾಲದಲ್ಲಿ ಮೆಲ್ವುದು. ಅಲ್ಲಾ ಆ ಬೇರಂ ಬೆಳತಿ(ವಿ)ಗೆಯಕ್ಕಿಯ ಸಂಗಡಮರೆದು ಅಂಬಲಿಯನಟ್ಟುಣ್ಬುದು. ಇದಱಿಂದಷ್ಠೀಲಾದಿ ಸಕಲ ಗುಲ್ಮ[3]ರೋಗಂಗಳುಂ ಕಿಡುವುವು—೧೫೪.

ಟೀ|| ಎಲೆಗಳ್ಳಿಯ ಹಾಲಲ್ಲಿ ಅಡಕೆಯಂ ನಾಲ್ಕೈದು [4]ಸೂೞ್ ನನೆಯಿಕ್ಕಿ ಒಣಗಿಸಿ ಆ ಅಡಕೆಯಂ ಬಿಸುನೀರಲ್ಲರೆದು ಕುಡಿವುದು, ಅಲ್ಲಾ ಪಿಪ್ಪಲಿಯುಂ ಬಿಸುನೀರಲ್ಲರೆದು ಕುಡಿವುದು, ಇವಱಿಂದೆ ಹೊಟ್ಟೆಯೊಳಗೆ ಹುಟ್ಟಿದಂತಹ ಅಷ್ಠೀಲಾದಿ ಸಕಲ ರೋಗಂಗಳುಂ ಮಾಣ್ಬುವು—೧೫೫.

ಟೀ|| ಬಾಳೆಯ ಎಲೆಯಂ ಪೊಗೆ ಪೋಗ[5]ದಂತೆ ಪುಟಮನಿಕ್ಕಿ ಸುಟ್ಟು ಬೂದಿಯಂ ಮಾಡಿ ಅದಂ ಆಕಳ ಮಜ್ಜಿಗೆಯಲ್ಲಿ ಕದಡಿ ಊಱಲಿಟ್ಟು ಬೆಳತಿಗೆಯಕ್ಕಿಯನರೆದು ಆ ಪಿಟ್ಟುಮಂ ಕದಡಿ ಅಂಬಲಿಯನಟ್ಟು ಉಂಡೊಡೆ ಹೊಟ್ಟೆಯೊಳಗಿರ್ದ ಸಮಸ್ತ ರೋಗಂಗಳುಂ ಮಾಣ್ಬುವು—೧೫೬.

1 ಟೊಟ್ಟೂ, ಕೊಂಡು. 2 ನುದಕದೊಳಿಟ್ಟು. 3 ರೋಗ ಮೊದಲಾದುವು. 4 ಜಿದನಲು. 5 ದಹಾಂಗೆ.



(ಮೆಯ್ಯಗಂಟುಗಳ್ಗೆ)

ಕಂ|| ಸವಸಾಗಿ ನುಗ್ಗಿ ಬಜೆ ಸಾ |
ಸಿವೆ ಮೂಲಗೆ ಕರಿಯ ಬನ್ನಿ ಎಂಬಿವಿನಿತಱ ಬೀ ||
ಜವನಾವ ತಕ್ರದಿಂದರೆ |
ದು ವಿಲೇಪಂಗೆಯ್ಯೆ ಕಳೆಗು[1]ಮವು ಗಂಟುಗಳಂ || ೧೫೭ ||

(ಬಾಹುಗಂ, ಗ್ರಂಥಿಗಳ್ಗಂ)

ಅನುದಿನಮಜದಂಡೆಯ ಬೇ |
ರನಕ್ಕಿಗರ್ಚಿಂದೆ ಪೂಸೆ ಮೇಣ್ ಗರ್ದುಗಿನ ಬೇ ||
ರನೆ ಪೂಸೆ [2]ಕಿಡಿಸುಗುಂ ತೊ |
ಟ್ಟನೆ ಪುಟ್ಟಿದ ಪೊಲ್ಲಬಾಹುವಂ ಗ್ರಂಥಿಯುಮಂ || ೧೫೮ ||

(ಅಸ್ಥಿವೃದ್ಧಿಗೆ)

ಚಂ|| ಕಿ(ತಿ)ರುಳಿಗೆ ಕಾಗೆದೊಂಡೆಯಜದೊಂಡೆ ಪುನರ್ನವಿ ಪತ್ರನಂದವೀ |
ಶ್ವರಿ ಮುಱುದೊಂಡೆ ನುಗ್ಗಿ ಸುರವಾರುಣಿ ಚಿತ್ರಕಮೆಕ್ಕೆ ಗೋನು ಕಾ ||
ತರಿಕೆಯೆನಿಪ್ಪಿವಂ ಮಧುಯುತಂ ಘೃತ[3]ಕರ್ಪಟ ಬಲ್ಬನಾಗಲೋ |
ಹ[4]ರಜಮನಟ್ಟು ಕಟ್ಟೆ ಕಳೆದಿಕ್ಕುಗುಮಾವಗಮಸ್ಥಿವೃದ್ಧಿಯಂ || ೧೫೯ ||

(ನರವುಲಿಗೆ)

ಕಂ|| ಇನವಾರದಂದು ಬಸುರಿಯ |
ಕೊನೆಯಂ ಕೊಂ[5]ಡೆಡದೆ ಬಱದು(ಳಸಿ) ಕೆಸಱೊಳದಂ ಪೂ ||
ಲ್ದನಿತಱೊಳಾ ನರವುಲಿಯೆನಿ |
ತನಿತುಮವಿರ್ದ್ದೆಡೆಯನಱಿಯದಂತಿರೆ ಪೋಕುಂ || ೧೬೦ ||

ಟೀ|| ನುಗ್ಗೆಯ ಬೇರ್, ಬಜೆ, ಸಾಸಿವೆ, ಮೂಲಂಗಿಯ ಗೆಂಡೆ, ಕರಿಯ ಬನ್ನಿಯ ಬೀಜಂ ಇವಂ ಸಮಭಾಗೆಯಾಗೆ ಕೊಂಡು ಆಕಳ ಪುಳಿಮಜ್ಜಿಗೆಯೊಳರೆದು ಲೇಪನಂ [6]ಮಾಡಲ್ ದೇಹದೊಳಿರ್ದ ಗಂಟುಗಳ್ ಮಾಣ್ಬುವು—೧೫೭.

ಟೀ|| ಅಜದಂಡೆಯ ಬೇರಂ ಅಕ್ಕಿನರ್ಚಿನಲ್ಲರೆದು ಪೂಸುವುದು. ಅಲ್ಲಾ ಗರ್ದುಗಿನ ಬೇರಂ ಅಕ್ಕಿಗರ್ಚಿನಲ್ಲಿ ಅರೆದು ಪೂಸುವುದು. ಇವಱಿಂದೆ ದೇಹದಲ್ಲಿ ಪುಟ್ಟಿದಂತಹ ಪೊಲ್ಲಾವ ಬಾಹುಗಳುಂ, ಗಂಟುಗಳುಂ ಮಾಣ್ಬುವು—೧೫೮.

ಟೀ|| ತಿ(ಕಿ)ರುಳಿಗೆಯ ಬೇರ್, ಕಾಗದೊಂಡೆಯ ಬೇರ್, ಅಜದೊಂಡೆಯ ಬೇರ್, ಗಜಣಿಕೆಯ ಬೇರ್, ಪತಂಗದಮರನಬದನಿಗೆ, ಈಶ್ವರಿಯಬೇರ್, ಮುಱು ದೊಂಡೆಯ ಬೇರ್, ನುಗ್ಗಿಯ ಬೇರ್, ಹಾವು ಮೆಕ್ಕೆಯಬೇರ್, ಚಿತ್ರಮೂಲನಬೇರ್, ಎಕ್ಕೆಯಬೇರ್, ಗೋನಮರನಬೇರ್, ಕಾತಱಿಕೆಯ ಗಿಡುವಿನ ಬೇರ್, ಇವಂ ಸಮನಾಗಿ ಕೊಂಡು ಉದಕದಲ್ಲರೆದು ಜೇನತುಪ್ಪದಲ್ಲಾದೊಡಂ, ತುಪ್ಪದಲ್ಲಾದೊಡಂ ಕಲಸಿ, ತಾಮ್ರದರಜಂ, ಸೀಸದ ರಜಂ, ಕಬ್ಬುನದ ರಜಂ ಇವನುಮಂ ಕೂಡಿ ಅಟ್ಟು ನೊಂದತಾವಿಂಗೆ ಇಕ್ಕಿ ಕಟ್ಟಲ್ ಅಸ್ಥಿವೃದ್ಧಿಯಪ್ಪುದು—೧೫೯.

ಟೀ|| ಆದಿತ್ಯವಾರದಿನಂ ಬಸುರಿಯ ಕೊನೆಯಂ ತಂದು(ಕೊಂಡು ಬಂದು) ನರವುಲಿಯಾಗಿರ್ದ

1 ಮೆಯ್‌ಗಂ. 2 ಕಿಡುಗುಗುಂ. 3 ಕರ್ಪಟ ಪಸುಲ್ಬಲೋ, ಕರ್ಪಟಸಲ್ಬಿನಾಕ. 4 ರಜಮಾವಗಮಸ್ಥಿ. 5 ಡಿರವೆ ಬಳಸಿ? 6 ಗೆಯ್ಯೆ, ಮೆಯ್ಯಲು ಪುಟ್ಟಿದಂಥಾ.

ಕಂ|| ತ್ರಿದಿನಂ ಕುಮಾರಿಯಿಂ ಕ |
ಟ್ಟಿದೊಡಂ ಮೇಣ್ ಶಂಖಚೂರ್ಣಮಂ [1]ಸದ್ಯಃಕ್ಷಾ ||
ರದ ನೀರೊಳ್ ಭಾವಿಸಿ ಪೂ |
ಸಿದೊಡಂ ಪುದಿದೊಡನೆ ತೋರ್ಪ ನರವುಲಿ ಕಿಡುಗುಂ || ೧೩೧ ||

(ಮುರಿದ ಕೆಯ್ಗೆ)

ತೊಡೆ[2]ದು ತಿಲತೈಲಮಂ ಕರ |
ಪು(ವು)ಡಿ ಸಾಸಿವೆ ಲೋಯಿಸರದ ತಿರುಳೆಂಬಿವನಿ ||
[3]ಟ್ಟಡಸಿ ಬಿಗಿತಾಗಿ ಕಟ್ಟಲ್ |
ನಿಡುಪೊಂಗುಡಿದಿರ್ದ ಕೆಯ್ಗೆ ಭಂಗಂ ಬಡುಗುಂ || ೧೩೨ ||

(ಕಿದ್ದೆಸೆಯ ಬೇನೆಗೆ)

ಪೆಸರಿಸಿವ ಪೊನ್ನಗನ್ನೆಯ |
ರಸಮಂ ಕೊಂಡಾಡ ಪಾಲೊಳುೞಿ ಮಱುಗಿಸಿ ಹಿಂ ||
ಗು ಸಮೇತಂ [4]ಕುಡಿಯಿಸೆ ಕಿ |
ದ್ದೆಸೆ ದೆಸೆಗೆಟ್ಟೋಡಿ ಪೋಗದೇಂ ನಿಂದಪುದೇ || ೧೩೩ ||

(ಮೂತ್ರಕೃಚ್ಛ್ರಕ್ಕೆ)

[5]ಅಳೆಯೊಳರೆದಣಿಲೆಯಂ ಮೇಣ್ |
ಜಳಜದ ಕುಂಬಳದ ಸವುಂತೆಯನಿತಱ ಬೀಜಂ ||
ಗಳೊಳೊಂದಱ ಬಿತ್ತಂ ಕುಡಿ |
ಗಳುಂಬಮಾಗಿರ್ದ ಮೂತ್ರಕೃಚ್ಛ್ರಂ ಕಿಡುಗುಂ || ೧೩೪ ||

---

ತಾವಂ ಅಪ್ರದಕ್ಷಿಣವಾಗಿ ಸುತ್ತಿಸಿ ಆ ಕೊನೆಯಂ ಕೆಸಱೊಳಗೆ ಹೂತರಿಸಿದೊಡೆ ನರವುಲಿ ಮಾಣ್ಬುದು ಅವಿರ್ದತಾವುಮಱಿಯ[6]ಬಾರದಂತೆ ಪೋಪುವು—೧೩೦.

ಟೀ|| ಲೋಯಿಸರವಂ ಮೂಱುದಿನಂ ಕಟ್ಟುವುದು. ಶಂಖದ ಚೂರ್ಣವಂ ಸದ್ಯಃಕ್ಷಾರದ ನೀರಲ್ಲರೆದು ಮರ್ದಿಸಿ ಪೂಸುವುದು. ಇವಱಿಂದೆ ನರವುಲಿ ಮಾಣ್ಬುದು—೧೩೧.

ಟೀ|| ಮುಱಿದಕೆಯ್ಗೆ ಆತಾವಿಂಗೆ ಎಳ್ಳೆಣ್ಣೆಯಂ ತೊಡೆದು ಸಾಸಿವೆಯ ಚೂರ್ಣಂ, ಲೋಯಿಸರದ ತಿರುಳ್ ಈ ಎರಡುಮಂ ಇಕ್ಕಿ ಬಿಗಿತಾಗಿ ಕಟ್ಟಲ್ ಸತ್ವವಿಲ್ಲದಿರ್ದ ಕೈಗೆ ಸತ್ವವಪ್ಪುದು—೧೩೨.

ಟೀ|| ಹೊನ್ನಗನ್ನೆಯರಸವಂ ಕೊಂಡು ಆಡಿನ ಪಾಲೊಳಗೆ ಕೂಡಿ ಕಾಸಿ ಇಂಗಂ ಕದಡಿ ಕುಡಿಯಲ್ ಕಿದ್ದೆಸೆಯ ಬೇನೆ ಮಾಣ್ಬುದು—೧೩೩.

ಟೀ|| ಅಣಿಲೆಯ ಕಾಯಂ ಆಕಳಮಜ್ಜಿಗೆಯಲ್ಲರೆದು ಕದಡಿ ಕುಡಿಯುವುದು. ಅಲ್ಲಾ ತಾವರೆಯ ಬೀಜಂ, ಕುಂಬಳದ ಬೀಜಂ, ಸವುಂತೆಯ ಬೀಜಂ ಇವಱೊಳಗೆ ದೊರಕಿದು

---

1 ಸದ್ಯಃ ಕ್ಷಾರದೊಳು ಭಾವಿಸಿ ಪೂಸಿದೊಡಂ ಪುದಿದೊಡತೋರ್ಪ. 2 ದುಱಿದ ತಿಳತೈಲ, ದುಪುಡಿ ಕೈಲ. 3 ಟ್ಟಡಸಿ ಬಿಗಿತಾಗಿದು ಹಿಂಗುಡಿವಿದ್ದೊಡಂಗೆ, ಗುಡಿದಿರ್ದುದಂಗೆ. 4 ಕುದಿಯಿಸೆ. 5 ಅಳೆಯ ದಳರದಣಿಲಿಯಂ .ಮೇಣ್ ಜಳದ(ನಾಳ) ಕುಂಬಳದ ಸಾಂತೆ ಇನಿಱ ಬೀಜಂಗಳೊಳೊಂದಱಬಿತ್ತಂ ಕುಡಿಗಳುಂಬಮಾಗಿ, ಅಳೆಯದಳ—(ಎಂದು ಎರಡಾವೃತ್ತಿ ಅಶುದ್ಧ ಕಂದವನ್ನು ಬರೆದಿದೆ—ಒಂದು ಪ್ರತಿಯಲ್ಲಿ). 6 ಬಾರದ ಹಾಂಗೆ.



(ಪಾಷಾಣದ ರೋಗಕ್ಕೆ)

ಕಂ|| ನಿರುತಂ ಜಾಜಿಯ ಬೇರಂ |
ಕರಿಯಾಡಿನ ಪಾಲೊಳರೆದು ಮೂಱುದಿನಂ ಶ ||
ರ್ಕರೆವೆರಸು ಕುಡಿಯೆ ಪಾಸಾ(ಸ)ಣ |
ದ ರೋಗಮುಂ ಮೂತ್ರಕೃಚ್ಛ್ರಮುಂ ಪ್ರಶಮಿಸುಗುಂ || ೧೩೫ ||

(ಪ್ರಮೇಹಕ್ಕೆ)

[1]ಶಿವೆಯಂ ಫಲತ್ರಯಮುಮನಮ |
ರ್ದವಳ್ಳಿಯಂ [2]ಮಧುಕಮಂ ಶಿಲಾಜಿತುವಂ ಲೋ ||
ಹವುಮಂ ಸಣ್ಣಿಸಿ ತಿನೆ ಬೇ |
ಱಿವೇಱಿ ನಿವ್ರ್ಯಾಜದಿಂ ಪ್ರಮೇಹಂ [4]ಕಿಡುಗುಂ || ೧೩೬ ||

ಕುಡಿವುದರೆದಾಡ ಪಾಲೊಳ್ |
ಮಡುವಾಗಲ ಬೇರನಲ್ಲದಿರ್ದೊಡೆ ಮೇಣ್ ಬೆ ||
ಳ್ಳಡಕಿಲ ಬೇರಂ ನೀರೊಳ್ |
ಕುಡಿಯಲ್ ಪಾಸಾ(ಸ)ಣದ ರೋಗಮಿವಱಿಂ [3]ಕಿಡುಗುಂ || ೧೩೭ ||

ಮಡುವಾಗಲ ಮೂಲಮುಮಂ |
ಗುಡಮುಮನೊಡಗೂಡಿದಂದು ಮತ್ಸ್ಯಾಕ್ಷಿಯ ಬೇ ||
ರೊಡನೊಂದಿರೆ ಪಾಲಂ ಕುಡಿ |
ದೊಡೆ ತಡೆಯದೆ ವಿಂಶತಿಪ್ರಮೇಹ(ಯ)ಂ ಕಿಡುಗುಂ || ೧೩೮

---

ದೊಂದಱ ಬಿತ್ತದ ತಿರುಳಂ ಉದಕದಲ್ಲರೆದು ಕುಡಿಯಲ್ ಮಿಗಿಲಾಗಿರ್ದ ಮೂತ್ರಕೃಚ್ಛ್ರ ಮಾಣ್ಬುದು—೧೩೪.

ಟೀ|| ಜಾಜಿಯಬೇರಂ ಕರಿಯಾಡಿನ ಪಾಲಲ್ಲಿ ಅರೆದು ಸಕ್ಕರೆಯಂ ಕೂಡಿ ಮೂಱುದಿನಂ ಕುಡಿಯಲ್ ಪ್ರಮೇಹ(ಯ) ರೋಗ ಮೂತ್ರಕೃಚ್ಛ್ರಂಗಳ್ ಮಾಣ್ಬವು—೧೩೫.

ಟೀ|| ಅಣಿಲೆಯ ಕಾಯಂ ಸೇವಿಸುವುದು. ಅಲ್ಲಾ ಅಣಿಲೆಯ ಕಾಯ್, ತಾಱಿಯ ಕಾಯ್, ನೆಲ್ಲಿಯ ಸೆಟ್ಟು .ಈ ಮೂಱುಮನರೆದು ಕುಡಿವುದು. ಅಮರ್ದವಳ್ಳಿಯನರೆದು ಸೇವಿಸುವುದು. ಯಷ್ಟಿಮಧುಕವನರೆದು ಸೇವಿಸುವುದು. ಕಲ್ಲಸಾರನರೆದು ಸೇವಿಸುವುದು. ಕಬ್ಬಿನ ದ ಅರವುಡಿಯಂ ಸೇವಿಸುವುದು. ಇವಂ ಬೇಱೆವೇಱೆ ಅರೆದು ಸೇವಿಸುವುದು. ಪ್ರಮೇಹ(ಯ)ರೋಗಂ ಕಿಡುವುದು—೧೩೬.

ಟೀ|| ಮಡುವಾಗಲಬೇರನರೆದು ಆಡಿನ ಪಾಲಲ್ಲಿ ಕುಡಿಯುವುದು, ಅಲ್ಲಾ ಬೆಳ್ಳಡಕಿಲ ಬೇರಂ ಅರೆದು ಉದಕದಲ್ಲಿ ಕದಡಿ ಕುಡಿಯುವುದು. ಇವಱಿಂದೆ ಪ್ರಮೇಹ(ಯ)ರೋಗಂ ಕಿಡುವುದು—೧೩೭.

ಟೀ|| ಮಡುವಾಗಲಗೆಡ್ಡೆಯಂ ಅರೆದು ಬೆಲ್ಲವಂ ಕೂಡಿ ಆಡಿನ ಪಾಲಲ್ಲಿ ಕದಡಿ ಕುಡಿವುದು. ಅಲ್ಲಾ ಹೊನ್ನಗನ್ನೆಯಬೇರಂ ಆಡಿನ ಪಾಲಲ್ಲರೆದು ಕುಡಿವುದು. ಇವಱಿಂದೆ ಇಪ್ಪತ್ತು(ಮೂಱು) ಬಗೆಯ ಪ್ರಮೇಹ(ಯ) ರೋಗಂಗಳುಂ ಮಾಣ್ಬವು—೧೩೮.

---

1 ಸಿಲೆಯುಂ. 2 ಮುರುಕರಮಂಬ ಶಿಲಾಜತುವಂ, ಮಧುಕರು ಶಿಲಾ. 3 ಶಮಿಕುಂ.

(ಲಿಂಗರೋಗಕ್ಕೆ)

ಕಂ|| ಕ್ರಮುಕಮನಕ್ಕೆ ಫಲತ್ರಯ |
ದ ಮಸಿಯ[1]ನಕ್ಕಣಿಲೆಯಂ ರಸಾಂಜನಮುಮನ ||
ಕ್ಕೆ ಮನುಷ್ಯ ಕಪಾಲಮನ |
ಕ್ಕೆ [2]ಮೊಕ್ಕಳಂ ಪೂಸೆ ಲಿಂಗರೋಗಂ ಕಿಡುಗುಂ || ೧೩೯ ||

(ವೃಷಣಂ ಬಾತಿರ್ದುದರ್ಕೆ)

ಎಡದೆಸೆಯವೊಂದೆ ಕಾಯ್ ಬಾ |
ತೊಡೆ ಬಲದ ಕೊಡಂಕೆಯಂ ಬಲಂ ಬಾತೊಡೆ ಮೇಣ್ ||
ಎಡದ ಕೊಡಂಕೆಯನೂಱೆ |
ದೊಡೆ ಮಾಣ್ಗುಂ [3]ವೃಷಣವೃದ್ಧಿ ಯಿಾ ತೆಱದಿಂದಂ || ೧೪೦ ||

(ಬಿಳಿಯರೋಗಕ್ಕೆ)

ಏರಂಡತೈಲದೊಳ್ ಸುರ |
ವಾರುಣಿಯಂ ಕಲಸಿ ತಾಮ್ರಪಾತ್ರೆಯೊಳಧಿಕಂ ||
[4]ಚಾರಿಸಿ ಪೂಸುತ್ತಿರೆ ಸಂ |
ಹಾರಿಸುಗುಂ ಬಿಳಿಯನೇೞುದಿನದಿಂ ಬೞಿಯಂ || ೧೪೧ ||

ನವನಲಿನಂ || ಗಣಿದದೊಳೇಂ ಕಟುಕ ತ್ರಯಕ್ಕೆ ಘೃತಂ ಚತು |
ರ್ಗುಣಮೆನೆ ಮುತ್ತದ ಬೂದಿಯೂಱಿಲೆ ತಚ್ಚತು ||
ರ್ಗುಣಮೆನೆ ಕೊಂಡದನಟ್ಟು [5]ಪೂಸಿದೊಡಂ ತತು |
ಕ್ಷಣದೊಳೆ ಮಾಣಿಸುಗುಂ ಗು[6]ದಾಂಕುರದೇೞ್ಗೆಯಂ || ೧೪೨ ||

---

ಟೀ|| ಒಳ್ಳೆಯ ಅಡಕೆಯಂ ಉದಕದಲ್ಲಿ ತೇದು ಪೂಸುವುದು. ಅಲ್ಲಾ ಅಣಿಲೆಯ ಕಾಯ್ ತಾಱೆಯ ಕಾಯ್, ನೆಲ್ಲಿಯಸೆಟ್ಟು ಈ ಮೂಱುಮಂ ಸುಟ್ಟು ಮಸಿಯಂ ಮಾಡಿ ಪೂಸುವುದು. ಅಣಿಲೆಯ ಕಾಯಂ ಉದಕದಲ್ಲಿ ತೇದು ಪೂಸುವುದು. ಅಲ್ಲಾ ಮನುಷ್ಯರ ಕಪಾಲಮಂ ಉದಕದಲ್ಲಿ ತೇದು ಪೂಸುವುದು. ಇವಱಿಂದೆ ಪುರುಷವ್ಯಾಧಿಯ ರೋಗಂ ಮಾಣ್ಬುದು—೧೩೯.

ಟೀ|| ಎಡದ ಕಡೆಯ ಕರುಳ್ ಇೞಿದೊಡೆ ಬಲದ ಕೊಡಂಕೆಯನೂಱುವುದು. ಬಲದ ಕಡೆ ಬಾತೊಡೆ ಎಡದ ಕೊಡಂಕೆಯನೂಱುವುದು. ಇಂತು ಮಾಡಲ್ ಕರುಳಿೞಿದುದು ಮಾಣ್ಬುದು—೧೪೦.

ಟೀ|| ಹಾವುಮೆಕ್ಕೆಯ ಬೇರನರೆದು ಅವುಡಲಕನ ಎಣ್ಣೆಯಲ್ಲಿ ಕಲಸಿ ತಾಮ್ರದ ಬಟ್ಟಲೊಳಗೆ ಹಾಯಿಕ್ಕಿ [7]ಚಾರಿಸಿ ಅದಂ ಪೂಸಲ್ ಏೞುದಿನಕ್ಕೆ ಕರುಳಿೞಿದ ರೋಗಂ ಮಾಣ್ಬುದು—೧೪೧.

ಟೀ|| ತ್ರಿಕಟುಕಮಂ (ಶುಂಠಿ, ಮೆಣಸು, ಸಿಪ್ಪಲಿಗಳಂ) ಕೂಡಿ ಚೂರ್ಣಮಂ ಮಾಡಿ ಆ ಚೂರ್ಣದ (ಇದಱ) ನಾಲ್ಕು ಮಡಿ ತುಪ್ಪಂ, ಮುತ್ತದ ಬೂದಿಯನುದಕದಲ್ಲಿ ಕದಡಿ ಊಱಲಿಟ್ಟು ಆ ಉದಕಮಂ ತುಪ್ಪದ ನಾಲ್ಕುಮಡಿಯಂ ಕೂಡಿಕೊಂಡು ಉದಕಂ ಬತ್ತುವ[8]ನ್ನಬರಂ ಅಟ್ಟು ಅದಂ ಪೂಸಲ್ ಮೂಲವ್ಯಾಧಿರೋಗದ ಮೊಳೆ ಕಿಡುವುದು—೧೪೨.

---

1 ನಕ್ಕಣಿಯ ರಸಾಂ. 2 ಮೊಳ್ಳಳಂ. 3 ಊ್ರಶಣ ಉ್ರದ್ಧಿ. 4 ಚಾರಿಸಿ. 5 ಪೂಸಲುತದು. 6 ಗುಂಡಾಂಕುರ. 7 ಚೆನ್ನಾಗಿ ಮರ್ದಿಸಿ. 8 ವ ಹಾಂಗೆ.



ಕಂ|| ಕಿಲಭಲ್ಲಾತಕಮಂ ಮೇಣ್ |
ನೆಲದಾೞುಮನಲ್ಲದಂತು ಚಿತ್ರಕಮಂ ಗೋ ||
ಜಲದೊಳ್ [1]ಕುಡಿದಳಿಗೂೞಣೆ |
ಕೆಲವುಂ ದಿವಸಕ್ಕೆ ಕಿಡುಗುಮರುಸೆಯ ಮೊಳೆಗಳ್ || ೧೪೩ ||

ಸುರದಾರು ಸೊರೆಯ ಬೀಜಂ |
ಸುರವಾರುಣಿ ಬೆಲ್ಲಮೆಂಬಿವಿನಿತುಮನೊಂದಾ ||
ಗಿರೆ ಮಿದಿದು ಮಾಡಿ ಬತ್ತಿಯ |
ನಿಂಸುಗೆ ಗುದದೊಳಗೆ [2]ಕಳೆಗುಮರಿಸೆಯ ಮೊಳೆಗಳ್ || ೧೪೪ ||

ವಿದಿತಂ ಮಧು ಪಿಪ್ಪಲಿ ಮೂ |
ಲದ [3]ಭಲ್ಲಾತಕದರುಗದ ಜಾವದ ಪುಡಿಯಂ ||
ಕುದಿಯಿಸಿ ತಜ್ಜಳಮಂ ಕುಡಿ |
ವುದು ಮೂಲ[4]ಸ್ತಂಭದವಕಮಿದಱಿಂ ಕಿಡುಗುಂ || ೧೪೫ ||

(ಅಧೋವಾಯುಗೆ)

ಬಳಸಿನೊಳೇಂ ತಿಂಬುದು ಮಾ |
ತುಳುಂಗ ಪತ್ರಪ್ರಯುಕ್ತಮಧುವಂ ಬೇಗಂ ||
ಕಳೆಗುಂ ಮಸಗಿದ ಪಾನಾ |
ನಿಳನಂ ತಾನದು ಸರಸ್ವತೀಮುಖತಿಳಕಾ || ೧೪೬ ||

---

ಟೀ|| ಎಳ್ಳಂ ಗೇಱಗೊಟ್ಟೆಯಂ ಅರೆದು ಗೋಮೂತ್ರದಲ್ಲಿ ಕದಡಿ ಕುಡಿವುದು. ಅಲ್ಲಾ ನೆಲದಾೞಗೆಡ್ಡೆಯಂ ಗೋಮೂತ್ರದಲ್ಲರೆದು ಕುಡಿವುದು. ಅಲ್ಲಾ ಚಿತ್ರಮೂಲದ ಬೇರಂ ಗೋಮೂತ್ರದಲ್ಲರೆದು ಕುಡಿವುದು. ಇವಱಿಂದೆ ಮೂಲವ್ಯಾಧಿಯ ಮೊಳೆ ಕಿಡುವುದು. ಆಕ್ಕ ಮಜ್ಜಿಗೆವೋಗರ [5]ಪಥ್ಯಂ—೧೪೩.

ಟೀ|| ದೇವದಾರಿಯ ಬೀಜದ ತಿಗುಡು, ಸೊರೆಯ ಬೀಜದ ತಿಗುಡು, ಹಾವುಮೆಕ್ಕೆಯ ಬೇರ್, ಬೆಲ್ಲಂ ಇವನೊಂದಾಗರೆದು ಬತ್ತಿಯಂ ಮಾಡಿ ಆ ಬತ್ತಿಗೆವೂಡಿ ಅದಂ ಗುದದೊಳಗೆಯಿರಿಸಲ್ ಮೂಲವ್ಯಾಧಿಯ ಮೊಳೆಗಳ್ ಮಾಣ್ಬವು—೧೪೪.

ಟೀ|| ಜೇನತುಪ್ಪದಲ್ಲಿ ಹಿಪ್ಪಲಿ ಮೂಲದ ಚೂರ್ಣಂ [6]ಕೇಱಗೊಟ್ಟೆ ಇವಂ ಕೂಡಿ ಉದಕದಲ್ಲಿ ಕಷಾಯಮಂ ಮಾಡಿ ಆ ಕಷಾಯಮಂ ಕುಡಿವುದು ಮೂಲವ್ಯಾಧಿಯ ರೋಗಂ ಮಾಣ್ಬುದು—೧೪೫.

ಟೀ|| ಮಾದಲದ ಎಲೆಯನರೆದು ಜೇನತುಪ್ಪದಲ್ಲಿ ಕಲಸಿ ಸೇವಿಸಲ್ ಅಧೋವಾಯು ನಡೆವುದು ಮಾಣ್ಬುದು—೧೪೬.

---

1 ಕುಡಿದರೆನೂಲುಣೆ. 2 ಕಳಸೆಮರಸೆ. 3 ಭಲ್ಲಾತಕದ ಮಾಗಧ ಚಾಕರ ಸುಡಿಯಂ. 4 ಸ್ತಂಭರೋಗಮಿವಱಿಂ. 5 ಇದುವರೆಗ ಯಾವ ಔಷಧಕ್ಕೂ ಅನ್ನದ ಪಥ್ಯ ಹೇಳಿಲ್ಲ—ಇಲ್ಲಿ ಮಾತ್ರ ಹೇಳಿರುವನು. 6 ಕಂಗೊಟ್ಟೆ, ಕೇಱಹರಳು.

(ಪುತ್ತುಂಗಾಲ್ಗೆ)

ಕಂ|| ಜವೆಯುಂ ಗಂಧಕಮುಂ ವಿಳಂ |
ಗವು[1]ನರೆದುಕೊಂಡು ನಾಡೆ ಭಾವಿಸಿ ಸರಳ ||
ದ್ರವದಿಂದಂ ಪೂಸಿದೊಡಂ |
ತವು ಪುತ್ತುಂಗಾಲ ಪುತ್ತನಿರದುಪಶಮಿಕುಂ || ೧೪೭ ||

(ಕಾಲಬೀಡೆಗೆ)

ನೆರಪಿ [2]ಮಧುಕಂ ಗುಡಂ ಸ |
ಜ್ಜರಸಂ [3]ಜೇನೆಯ್ಯೆ ಮೆಣಸು ಗುಗ್ಗುಳಕಂ ಸಿಂ ||
ಧುರುಹಂ ಜಾಜಂ[4]ಬಿವನಿ |
ಟ್ಟೊರಸುತ್ತಿರೆ ಕಾಲ ಬೀಡೆ ಬೇಗಂ ಕಿಡುಗುಂ || ೧೪೮ ||

(ಗೇಜಪುಣ್ಗೆ)

[5]ಎರಹುಲಿಯುನಕ್ಕೆ ವೇಣು |
ತ್ತರಣೆಯುನಕ್ಕೊರಸಿ ಪಿೞ[6]ಗದಲ್ಲದೊಡೆಂತುಂ ||
ಸುರಪುಂಖಿಯ ಬೇರಂ ಮೆ |
ದ್ದು ರಸಮುಗುೞೆ ಗೇಜ[7]ಪುಣ್ಗಳಾಗಳೆ ಕಿಡುಗುಂ || ೧೪೯ ||

(ಶಸ್ತ್ರಂ ತಾಗಿದುದಕ್ಕೆ)

ತರಳಂ|| ವಿವಿಧ ಶಸ್ತ್ರವಿಘಾತದೊಳ್ ಘೃತದಿಂದೆ ಕಟ್ಟುಗೆ [8]ಸಂದ ಗೋ |
ದುವೆಯ ಮತ್ತಿಯ ಹೊನ್ನಗನ್ನೆಯ ವಿಷ್ಣುಕ್ರಾಂತೆಯ ಮುಟ್ಟಿಮು ||
ಗ್ಗುವನ ಕೊಗ್ಗಿಯ ಕಾಕ[9]ಜಂಘೆಯ ಹಿಕ್ಕವತ್ತಿಗೆಯೊಂದು ಸಂ |
ಭವಿಪ ಮೂಳಮನಲ್ಲದಂತದನಟ್ಟು[10]ಪೊಳ್ದುಡುಗಾಜ್ಯಮುಂ || ೧೫೦ ||

---

ಟೀ|| ಜವೆ, (ಶುಂಠಿ) ಗಂಧಕಂ, ವಿಳಂಗಂ ಇವನರೆದು ಸಜ್ಜರಸದ ತೈಲದಲ್ಲಿ ಕಲಸಿ ಪೂಸಲ್ ಪುತ್ತುಂಗಾಲ್ ಮಾಣ್ಬುದು—೧೪೭.

ಟೀ|| ಯಷ್ಟಿಮಧುಕಂ, ಬೆಲ್ಲಂ, ಸಜ್ಜರಸಂ, ಜೇನತುಪ್ಪಂ, ಮೆಣಸು, ಗುಗ್ಗುಳಂ, ಸೈಂಧವಂ, ಜಾಜು, ಇವೆಲ್ಲಮಂ ಕೂಡಿ ಅರೆದು ಕುದಿಸಿ (ಮರ್ದಿಸಿ) ಪೂಸಲ್ ಕಾಲಬೀಡೆ ಮಾಣ್ಬುದು—೧೪೮.

ಟೀ|| ಎಲಹುರಿಯ ಸೊಪ್ಪಿನರಸಮನಾದೊಡಂ ಅಲ್ಲಾ ಉತ್ತರಣೆಯ ಸೊಪ್ಪಿನ ರಸಮನಾದೊಡಂ ಹಿಂಡುವುದು ಅಲ್ಲಾ ಸುರಪುಂಖಿಯ ಬೇರಂ ಬಾಯಲ್ಲಗಿದು ರಸಮಂ ಗಾಯದೊಳಗೆ ಉಗುೞ್ವುದು [11]ಗೇಜಿನಪುಣ್ಣುಂ ಮಾಣ್ಬುದು—೧೪೯.

ಟೀ|| ಶಸ್ತ್ರದಿಂದೆ ಗಾ(ಘಾ)ಯಮಾದ ಪುಣ್ಗೆ ಗೋದಿಯ, ಮತ್ತಿಯ, ಹೊನಗನ್ನೆಯ, ವಿಷ್ಣುಕ್ರಾಂತೆಯ, ಮುಟ್ಟಿಗೆಯ, (ಮುಟ್ಟಿದೊಡೆ ಮುಱುಂಟುವನ) ಕೊಗ್ಗಿಯ, ಕಾಕಜಂಘೆಯ, [ಹಿಕ್ಕವತ್ತಿಗೆಯ] ಇವಱೊಳಗೆ ದೊರಕಿದುದೊಂದಱ ಬೇರಂ ತಂದು ಜಬ್ಬುಗುಟ್ಟಿ, ತುಪ್ಪದಲ್ಲಿ ಅಟ್ಟು ತೊಡೆವುದು. ಅಲ್ಲಾ ಅವಱ ಎಲೆಯನಾದೊಡಂ ತುಪ್ಪದಲ್ಲಿ ಹಾಯ್ಸಿ ಅಟ್ಟು ಆ ತುಪ್ಪಮನಾದೊಡಂ ಆ ಪುಣ್ಣೊಳಗೆ ಎಱೆವುದು. ಶಸ್ತ್ರಗಳಿಂದಾದ ಗಾಯದ ಪುಣ್ಗಳ್ ಮಾಣ್ಬವು—೧೫೦.

1 ನರೆದು ಭಾವಿ. 2 ದಮಾದುಕಂಗುಡಸ. 3 ಜನೆಯುನು, ಜೆನೆಯನು. 4 ಬಿವನೊರಸುತ್ತಿರೆ ಕಾಲಬಿಟ್ಟೆ. 5 ಎಲಹುಲಿಯಕ್ಕೆ. 6 ಗಳಲ್ಲದೊಡೆಸಿಂ. 7 ಪುಣ್ಣು ಆಗಳೆ. 8 ಸಂದುದುವೆ. 9 ಜಂಘೆಯೊಳೊಂದುವಂದು. 10 ವಳ್ಳಿಡು. 11 ಯೆಜಿನ, ಯೇಜಿನ.



(ಮಂಡೆಯ ಪುಣ್ಗೆ)

ಕಂ|| ............................ |
.............................................. ||
....ಹಾವುಮೆಕ್ಕೆಯುಮಂ ಬ್ರ |
ಹ್ಮದಂಡೆಯುಮನರೆದು ಪೂಸೆ ಪುಣ್ಗಳ್ ಕಿಡುಗುಂ || ೧೫೧ ||

ಸಮನಾಗಿ ರುಜೆಯನೇರಂ |
ಡಮೂಲಮಾಂಸಿಗಳನಕ್ಕೆ ಚಗಚೆಯ ಪೊಸಬೀ ||
ಜಮನಕ್ಕೆ ಕಱೆಯೊಳರೆದಾ |
ದಮೆ ಪೂಸುಗೆ ತಲೆಯ ಬೇನೆ ತಡೆಯದೆ ಕಿಡುಗುಂ || ೧೫೨ ||

(ನಾಳಿಪುಣ್ಗೆ)

ಪೆಱವಱೊಳೇನರಿದಾಳಂ |
ಕಿಱುಕುಸಲೆಯ ಚೂರ್ಣಮುಂ ವ್ರಣಾಭ್ಯಂತರದೊಳ್ ||
ನೆಱೆದೀವಿ ಬೞಿಕ್ಕೆಣ್ಣೆಯ |
ನೆಱೆ ತೀವಿ ಪೊದಟ್ದೆ ನಾಳಿಪುಣ್ಗಳ್ ಕಿಡುಗುಂ || ೧೫೩ ||

(ಒಳಗುಡಿದಿರ್ದಂಬಿಂಗೆ)

ಒಳಗುಡಿದಿರ್ದೊಡೆ ಲಾಂ |
[1]ಗಲಿಯಂ ತಂದಲ್ಲದಂದು ಕುರುಟಿಗೆಯಂ ಮೊ ||
ಕ್ಕಳವಾಗಿ ಪುಣ್ಣ ಬಾ[2]ಯೊಳೆ |
ವಿಳೇಪನಂ ಗೆಯ್ದೊಡಾ ಸರಲ್ ಪೊಱಮಡುಗುಂ || ೧೫೪ ||

---

ಟೀ|| ಅರಿಸಿನಂ, ಅಕ್ಕಿಹೆಡೆಯ ಸಮೂಲಂ ಇವಂ ಪುರಿದು ಎಣ್ಣೆಯಲ್ಲಟ್ಟು ಕಲಸಿ ಪೂಸುವುದು ಹಾವುಮೆಕ್ಕೆಯ ಬೇರ್, ಬ್ರಹ್ಮದಂಡೆಯ ಬೇರ್ ಈ ಎರಡುಮಂ ಗೋಮೂತ್ರದಲ್ಲರೆದು ಪೂಸುವುದು ಮಂಡೆಯ ಪುಣ್ ಮಾಣ್ಬುದು—೧೫೧.

ಟೀ|| .........................................................................................
..........................................ಪುಣ್ ಮಾಣ್ಬುದು—೧೫೨.

ಟೀ|| ಅರಿದಾಳಂ ಕಿಱುಕುಸಾಲೆಯ ಸಮೂಲದ ಚೂರ್ಣಂ ಇವೆರಡಂ ಕೂಡಿ ಪುಣ್ಣೊಳ್ ತುಂಬಿ ಮೇಲೆ ಎಣ್ಣೆಯನೆಱೆಯಲ್ ನಾಳಿಪುಣ್ಗಳ್ ಮಾಣ್ಗುಂ—೧೫೩.

ಟೀ|| ಕೋೞಿಕುಟುಮನಗೆಂಡೆಯಂ ಉದಕದಲ್ಲರೆದು ಲೇಪಮಂ ಮಾಡುವುದು, ಅಲ್ಲಾ ಕುರುಟಿಗೆಯ ಸಮೂಲಮಂ ಉದಕದಲ್ಲರೆದು ಲೇಪಿಸುವುದು. ಇವೆರಡುಮಂ ಪುಣ್ಣ ಬಾಯೊಳ್ ಲೇಪಂ ಮಾಡಲ್ ಒಳಗೆ ಸಿಕ್ಕಿರ್ದ ಸರಲ್ ಪೊಱಮಡುವುದು—೧೫೪.

1 ಗುಲಿಕನವಲ್ಲಿ. 2 ಯೊಳೆಯೊಳು ಲೇಪನಂ ಗೆಯಿದಾ ಸರಲ್ಗಳ್.

(ಅಂಬುವುಣ್ಗೆ)

ಕಂ|| ತಿಳ ಸಿದ್ಧಾರ್ಥ ಕರಂಜಂ |
ಗಳನಿಂಬಾಗರೆದು ಪೂಸುಗಲ್ಲದೊಡಂ ಮೇೞ್ ||
ಕಱಿಯಂ ಪೂಸೇರಂಡದ |
ಫಳಮಂ ದಂತಿಯುಮನಂಬುವುಣ್ಗಳ್ ಕಿಡುಗುಂ || ೧೫೫ ||

ಅವರೆಯುಮಂ ನೀಲಿಯ ಬೇ |
ರುವನರೆ ದಿರುಳೊಲೆಯೊಳಟ್ಟು ತಿಲತೈಲಮನಂ ||
ತವಱೊಡನೆ ಕಲಸಿ ತಿನೆ [1]ಕಿಡು |
ಗುವಸಾಧ್ಯವೆನಿಸುಗುವಂಬು ಕೀಱೊಳ್ ಕಿಡುಗುಂ || ೧೫೬ ||

(ಬೆಂದವುಣ್ಗೆ)

ಎಳೆಯರಳಿಯ ಮುಗುಳಂ ತೆ |
ಳ್ಗಱ[2]ಯೊಳ್ ಮೇಣೆಣ್ಣೆಯೊಳಕ್ಕೆ [3]ಚೀಲೈತಮುಮಾ ||
ಮಳಕಮುಮಂ ತುಪ್ಪಮುಮಂ |
ವಿಳೇಪನಂಗೆಯ್ಯೆ ಬೆಂದ ಪುಣ್ಗಳ್ ಕಿಡುಗುಂ || ೧೫೭ ||

ಮಿಗಿಲಿದಱಿಂದಾವುದೊ ಮ |
ದ್ದುಗಳೊಳ್ ಘೃತಮಣಿಲೆ ಮೆಣಸು ಸಜ್ಜರಸಂ ಜೀ ||
ರಗೆ ಯೆಂಬಿವ ನರೆದಟ್ಟ |
ಕ್ಕುಗೆ ದಗ್ಧವ್ರಣಮುಮೆಯ್ದೆ ಶೋಷಣವಕ್ಕುಂ || ೧೫೮ ||

ಟೀ|| ಎಳ್ಳು, ಸಾಸಿವೆ, ಹುಲಿಗಿಲ ಬೀಜ, ಇವನಂಬಿಲದಲ್ಲರೆದು ಪೂಸುವುದು. ಅಲ್ಲಾ ಅವುಡಲಕನ ಕಾಯ್, ದಂತಿ ಈಯೆರಡುಮಂ ಅಂಬಿಲದಲ್ಲರೆದು ಪೂಸುವುದು ಇವಱಿಂದೆ ಅಂಬುವುಣ್ ಮಾಣ್ಬುದು—೧೫೫.

ಟೀ|| ಅವರೆಯ ಬೇರ್, ನೀಲಿಯ ಬೇರ್, ಈ ಎರಡುಮಂ ತದಕುಟ್ಟಿ ಕಷಾಯಮಂ ಮಾಡಿ ಆ ಕಷಾಯದೊಳಗೆ ಎಣ್ಣೆಯಂ ಕೂಡಿಯಟ್ಟು (ಈ ಯೆರಡುಮಂ) ಸೇವಿಸಲ್ ಅಂಬುವುಣ್ ಮಾಣ್ಬುದು—೧೫೬.

ಟೀ|| ಅರಳಿಯ ಮುಗುಳಂ ತಿಳಿಯಂಬಿಲದೊಳಾದೊಡಂ ಎಳ್ಳೆಣ್ಣೆಯೊಳಾದೊಡಂ ಅರೆದು ಪೂಸುವುದು, ಚೀಲಯಿಚನ ಸಮೂಲಂ, ನೆಲ್ಲಿಯ ಸೆಟ್ಟು ಇವನೆರಡನೊಂದಾಗಿ ಅರೆದು ತುಪ್ಪದಲ್ಲಿ ಕಲಸಿ ಪೂಸಲ್ ಬೆಂದವುಣ್ ಮಾಣ್ಬುದು—೧೫೭.

ಟೀ|| ಅಣಿಲೆಯ ಕಾಯ್, ಮೆಣಸು, ಸಜ್ಜರಸಂ, ಜೀರಗೆ ಯಿವನೊಂದಾಗಿ ಉದಕದಲ್ಲರೆದು ತುಪ್ಪದಲ್ಲಟ್ಟು ಆ ತುಪ್ಪಮಂ ಪೂಸಲ್, ಬೆಂದಪುಣ್ ಮಾಣ್ಬುದು ಇದರ್ಕೆ ಪಿರಿಯ ಮದ್ದು ಅವುದುಮಿಲ್ಲಂ—೧೫೮.

1 ಕಿಡುವುದಸಾಧ್ಯಂಗಳೆನಿಸುವಂಬುಣ್ಣುಗಳುಂ. 2 ಯೊಳಮೆಣ್ಣೆ. 3 ಚೀಲಯಿಚಮು.



(ಭಗಂಧರಕ್ಕೆ)

ಕಂ|| ಕ್ರಿಯೆಯಿಂ ನೆಲ್ಲಿಯುಮಂ ಪಂ |
ತಿಯುಮಂ ರಜನಿಯುಮನರೆದು ಪೂಸಿದೊಡೆ ಫಳ ||
ತ್ರಯದ ಕಷಾಯಮನರೆ ಪುರ |
ಪ್ರಯುತಂ ಕುಡಿದೊಡೆ ಭಗಂಧರಂ ಪ್ರಶಮಿಸುಗುಂ || ೧೫೯ ||

(ಕುರು(ಜು)ವಿಂಗೆ)

ಗೇರೆಣ್ಣೆಯನೊರಸುಗೆ* ದು |
ತ್ತೂರ ರಸಂ ಲವಣಮೆಂಬಿವಂ ನೆಲದಾಱೊಳ್ ||
ಚಾರಿಸಿ ಪೂಸುಗೆ ಸದ್ಯಃ |
ಕ್ಷಾರಗುಡಂಗಳನೆ ತೊಡೆಯೆ ಮೇಣ್ ಕುಱು ಕಿಡುಗುಂ || ೧೬೦ ||

(ಊತಿರೋಗಕ್ಕೆ)

ಅದಿದೆನ್ನದೆ ಲಾಂಗಲಿ ದೇ |
[1]ವದುಂಬೆ ಸುರದಾಳಿಯೆಂಬಿವಂ ಕಱಿಯಿಂದಂ ಪೂ |
ಸಿದೊಡಂ ದಾವಗಂ ಪೆ |
ರ್ಚಿದ ಕಿಚ್ಚು[2]ವೊಲುರಿವ ಊತಿಯಂ ಮಟ್ಗಿಸುಗುಂ || ೧೬೧ ||

(ಕಂಚಿಕೆಗೆ)

ಮೊಲೆವಾಲೊಳ್ ಬಸಿರಿಯ ತಳಿ |
ರೆಲೆಯಂ ಕಱು[3]ಕೆಯುಮನಕ್ಕೆ ಯಲ್ಲವೊಡೆ ಶಮಿ ||
ದಲಮನಜದುಗ್ಧದಿಂದರೆ |
ದು ಲೇಪನಂಗೆಯ್ಯೆ ಉರಿವ [4]ಕಂಚು(ಚಿ)ಕೆ ಕಿಡುಗುಂ || ೧೬೨ ||

ಟೀ|| ನೆಲ್ಲಿಯ ಸೆಟ್ಟು, ಜೇಪಾಳಂ, ಅರಿಸಿನಂ, ಈ ಮೂಱುಮನುದಕದಲ್ಲರೆದು ಪೂಸುವುದು, ಅಣಿಲೆ ಕಾಯ್, ನೆಲ್ಲಿಯ ಸೆಟ್ಟು, ತಾಱಿಯ ಕಾಯ್ ಇವಂ ಕಷಾಯಂಮಾಡಿ ಆ ಕಷಾಯದಲ್ಲಿ ಅರೆದ ಔಷಧಮಂ ಗುಂಜಿಮಾತ್ರಮಂ ಕದಡಿ ಕುಡಿಯುವುದು. ಇದಱಿಂದೆ ಭಗಂದರ ರೋಗಂ ಮಾಣ್ಬುದು—೧೫೯.

ಟೀ|| ಗೇ(ಱು)ರೆಣ್ಣೆಯಂ ತೊಡೆವುದು. ಅಲ್ಲಾ ಮದ್ದುಗುಣಿಕೆಯ ಸೊಪ್ಪಿನ ರಸಮಂ ಕೊಂಡು ಆ ರಸಮಂ ಉಪ್ಪುಮಂ ನೆಲದ ಮೇಲೊಂದಾಗಿ ಮರ್ದಿಸಿ ಅದಂ ಪೂಸುವುದು. ಇವಱಿಂದ ಮೆಲ್ಲಾಬಗೆಯ ಕುಱುಗಳುಂ ಮಾಣ್ಬುವು—೧೬೦.

ಟೀ|| ಕೋಱುಕುಟುಕನ ಗೆಂಡೆ, ದೇವದುಂಬೆ, ದೇವದಾಳಿ ಈ ಮೂಱುಮನಂಬಿಲದಲ್ಲರೆದು ಪೂಸಲ್ ಉರಿಯುತ್ತಿಹ ಊತಿಯ ರೋಗಂ ಮಾಣ್ಬುದು—೧೬೧.

ಟೀ|| ಬಸಿರಿಯ ಎಳೆಯ ತಳಿರಂ (ಮುಗುಳೆಲೆಯಂ) ಎಳೆಯ ಕಱುಂಕೆಯಂ ಯೀ ಎರಡುಮಂ ಮೊಲೆವಾಲೊಳ್ ಅರೆದು ಪೂಸುವುದು. ಅಲ್ಲಾ ಬನ್ನಿಯ ಯೆಲೆಯಂ ಆಡಿನ ಪಾಲಲ್ಲರೆದು ಪೂಸುವುದು. ಇವಱಿಂದೆ ಕಂಚುಕಿ ಕಿಡುಗುಂ—೧೬೨.

1 ವರಂಬೆ, ವದುರು ? 2 ತೊಲಗಂವ. 3 ಕೆಯ ಮನಕ್ಕೆ ದೊಡೆಸಮಿ. 4 ಕಂಜುಕೆ.

* ಪರಿಮರ್ದಿಸುವುದು ದುತ್ತೂರ ರಸವು—ಎಂಬ ಶಬ್ದಮಣಿದರ್ಪಣದ ಉದಾಹರಣದಲ್ಲಿರುವ ಪ್ರಾಚೀನ ವೈದ್ಯಗ್ರಂಥ ಪದ್ಯದ ಮದ್ದಿನೊಡನೆ ಹೋಲಿಸುವುದು.

ಮ|| [1]ಸಿರಿಕಂಡಂ ಬಜೆ ಮಾಂಸಿ ನಟ್ಟಿಮಧುಕಂ ವಕ್ರಂ ಹೇಮಾದ್ರ್ಯಯಂ |
ಸಿರಿಸಂ ದಾ(ತ್ರಾ)ಳಕಮೋಲೆ ಯೆಂಬಿಸಿತುಮಂ ಶೀತಾಂಬುವಿಂ ಪೂಸೆ ಸಂ ||
ಹರಿಕುಂ ಕಂಚುಕೆ ಕಬ್ಬುಗುಬ್ಬ್ ತುಜು ವಿಸರ್ಪಂ ದೇಹದಾಹಾರ್ತಿತ |
ಜ್ವರಮಸ್ತ್ರಪ್ರಹರವ್ರಣಂಗಳೆನಿಪೀ ದೋಷಂಗಳಂ ನಿಶ್ಚಯಂ || ೧೬೩ ||

## ಅನ್ಯಗ್ರಂಥಂ

ಕಂ|| ಒಡಲೊಡವಿ ಬಾತು ತೋರ್ಪೊಡೆ |
ಎಡೆಗೊಂಡುದು ವಾಣಿ ? ಯೆಂದು ಬೋಟೋತ್ತರಮಂ ||
ಸೆಗುಡಿತೆಯಾಡಿನ ಪಾಲಂ |
ಬಿಡುಲವಣಮುಮಂ ಕರಿಯ ತೊವರಿಯಶನಮೆ ಪಥ್ಯಂ || ೧೬೪ ||

(ಮುಳ್ಳು ಸಿವುರುಗಳ್ಗೆ)

*ಮುಳ್ಳುಂ ಸಿವುರುಗಳುಂ ನ |
ಟ್ಟಲ್ಲಿಯೆ ಪೊಱಮಡದಿರ್ದು ಬಾತೊಡೆ ಮತ್ತಂ ||
ಕಲ್ಲೊತ್ತೆ ಗರ್ಕದುಗ್ಧವ |
ಮೆಲ್ಲಿಸಿ ಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಗುಂ || ೧೬೫ ||

ಕಂ|| ಒಳದೊಡೆ ಸೆಳಿದೊಡೆ ಸಂದುಗ |
ಗುಳುಳಿದೊಡೆ ನರವೊಂದು ದೆಸೆಗೆ [2]ತಱಿಸಂದೊಡೆ ಶೀ ||
ತಳ ಜಳ ಮಿಶ್ರಿತ ವಸ್ತ್ರವ |
ನಳವಟ್ಟರೆ ಸುತ್ತಲಿನಿಸು ಬೇನೆಗಳಟಿಗುಂ || ೧೬೬ ||

ಟೀ|| ಶ್ರೀಗಂಧಂ, ರುದಂತಿ, ಜಟಾಮಾಂಸಿ, ಯಷ್ಟಿಮಧುಕಂ, ಅರಿಸಿನಂ, ಮರದರಿಸಿನಂ ಬಾಗೆ, ಅರಿದಾಳಂ, ಇವೆಲ್ಲಮನುಪಕದಲ್ಲರೆದು ಪೂಸಲ್ ಕಂಚುಕೆ, ಕರ್ಬುಗುಬ್ಬ್, ಕುಜು, ವಿಸರ್ಪಂ, ಉರಿಜ್ವರಂ, ಗಾಯದವುಣ್ಗಳ್ ಇವೆಲ್ಲಂ ಮಾಣ್ಬುವು—೧೬೩.

ಟೀ|| ಬೋಟಿತರಂ, ಸೆಗುಡಿತೆ, ಬಿಡುಲವಣಂ, ಯೀ ಮೂಱಂ ಅರೆದು ಆಡಿದ ಹಾಲಲ್ಲಿ ಕುಡಿಯಲ್ ಹೊಟ್ಟೆಬಾತ ಬಾಹು ಮಾಣ್ಬುದು. ಕರಿಯ [3]ತೊಗರಿಯ ಕಟ್ಟುವೋಗರಂ ಪಥ್ಯಂ—೧೬೪.

ಟೀ|| ಮುಳ್ಳು ಸಿವುರುನಟ್ಟು ಕ(ಗ)ಲ್ಲೊತ್ತಾಗಿ [4]ಬಾತೊಡೆ ಆ ಠಾವಿಂಗೆ ಎಕ್ಕೆಯ ಪಾಲಂ ಪೂಸಿ ವೊಲೆಗಲ್ಲಂ ಕಾಸಿ ಸೇಕಂಗೆಯ್ಯೆ ಬಾಹು ಮಾಣ್ಬುದು—೧೬೫.

ಟೀ|| [5]ಒಳದೊಡೆ ಉಟಿದೊಡೆ, ಸಂದು ತಪ್ಪಿದೊಡೆ, ನರಂ ತೊಡಕಿದೊಡೆ ಆ ಠಾವಿಂಗೆ ಅರಿವೆಯಂ ಸುತ್ತಿ ತಣ್ಣೀರಂ ಬಿಡಲ್ ಆ ಶೂಲೆ ಮಾಣ್ಬುದು—೧೬೬.

1 ಸುರಿಖಂಡಂ. 2 ಚಲಿಸಿಂದದೆ ಶಿತ. 3 ತೊಗರಿಯ ಪಥ್ಯ ಕಟ್ಟುವೋಗರ ಪಥ್ಯ. 4 ಬಾತ ಠಾವಿಂಗೆ. 5 ಒಳದೊಡೆ ಸಂದು ತಪ್ಪಿದೊಡೆ.

* ಮುಳುಸಿವು(ಗು)ರುಗಳ್ ನಟ್ಟುಮವ್ರೋಗದಿಗಾಗಲಿ ಟಾನಿಯಾಗಲಿ ಬಾತಡೆ ಮರ್ದು ಮಾಚ್ಚಿ ಕಲ್ಲೊತ್ತಿಯಾಗೆ ಆ ಠಾವಿಗೆಕ್ಕೆಯ ಪಾಲಂ (ಹುಲು) ಪೂಸಿಕಾಯಿ ಕಾಯಿದೊಲೆಗಲ್ಲಂ ಸೇಕಂಗೆಯೆ(ಎ) ಮಾಣ್ಗುವು ಚುಳಿತ ವಚನಾ ಎಂಬ ಅಶುದ್ಧ ಕಂದವು ಒಂದು ಪ್ರತಿಯಲ್ಲಿದೆ.



ಕಂ|| ಪಣೆಕಣ್ ಕಿವಿ ನೆತ್ತಿಯು ಕ |
[1]ಣ್ಣಸೆ ಯೆಂಬಿವಱೊಳಗೆ ಬೇನೆಯಾಗಲ್ ಗರುಗಂ ||
ಪ್ರಣುತಂ ಖರಮೂಲದ ರಸ |
ಕಣಮೆಣ್ಣೆಯ ಬೆರಸಿ ನಸ್ಯಗೆಯ್ಯಲ್ ಕಿಡುಗುಂ || ೧೬೭ ||

*ಖರಮೂಲದ ತನಿರಸದೊಡ |
ನೊರಸುಗೆ ಭೃಂಗರಸಮಂ ಬೆರಸುತ್ತಿನಿಸುಂ ||
ತಿಳತೈಲಸಹಿತಮಂ ನಾ |
ಸಿಕ ಯುಗಳಂಗಳೊಳೆಱಿಗೆ ನಸ್ಯೌಷಧಮಂ || ೧೬೮ ||

(ಉಗುರುಸುತ್ತಿಂಗೆ)

ಮೆಣಸಿನ ಪುಡಿಯೊಳಗೆರ್ಮೆಯ |
ತಿಳಿವಾಲಂ ಕಲಸಿ [2]ಬಿಗಿದು ಕಟ್ಟುಗೆ ಬೆರಳಂ ||
ಚಳಿಸಿದರಸದಿಂಬುಣ್ಗಳ್ |
[3]ನಿಲಿಸದಿರದು ಸಿದ್ಧಮೆಂದನೀ ಔಷಧಮಂ || ೧೬೯ ||

—ಇಂತು ಪುರುಷವೈದ್ಯಂ—

(೨) ಇನ್ನು ಸ್ತ್ರೀವೈದ್ಯಂ†

(ಸ್ತನವೃದ್ಧಿಗೆ)

ಕಂ|| ರಜನಿ ಕೃತಾಂಜಲಿ ಕಳವಿಗೆ |
ಬಜೆ ಗಂಧಕ ಪೂಪ[4]ಮೆಂಬಿವಂ ತವೆ ತಿಲತೈ ||
ಲಜಳಾನ್ವಿತ ಘೃತದಿಂದಂ |
ಬುಜಾಕ್ಷಿಯರ್ಗೆಱೆಯೆ ನಸ್ಯಮಂ ಮೊಲೆ ಬರ್ಕುಂ || ೧೭೦ ||

ಟೀ|| [5]ಪಣೆಕಣ್, ಕಿವಿ, ನೆತ್ತಿ(ಕಣ್), ಪಲ್, [6]ಎಂಬಿವಱೊಳಗೆ ನೋವಾದೊಡೆ ನಾಸಿಕ ಗುಲ್ಮಮೆಂಬುದಕ್ಕುಂ. ಅದರ್ಕೆ ಮರ್ದು, ನಿಸಂ(ಗರುಗದರಸಂ, ಖರಮೂಲದರಸಂ ಇವ ನೆಳ್ಳೆಣ್ಣೆಯಲ್ಲಿ ನಸ್ಯಂ ಮಾಡುವುದು—೧೬೭.

ಟೀ|| ಪುರ್ವುಗಳ್, ಕಿವಿ, ನೆತ್ತಿ, ಕಣ್, ಪಲ್ ಇವು ನೋಯುತ್ತಿರ್ದೊಡೆ ಅದರ್ಕೆ ಖರ ಮೂಲದ ರಸಮಂ, ಗರುಗದ ರಸಮಂ ಕೂಡಿ ಎಳ್ಳೆಣ್ಣೆಯಲ್ಲಿ ಮೂಗಿನ ಎರಡು ಹೊಳ್ಳೆಗಳೊಳಗೆ ನಸ್ಯಮನೆಱೆಯಲ್ ಆ ಶೂಲೆಗಳ್ ಮಾಣ್ಬುವು—೧೬೮.

ಟೀ|| ಮೆಣಸಿನ ಚೂರ್ಣಮಂ ಎಮ್ಮೆಯ ತಿಳಿವಾಲಿನಲ್ಲಿ ಕಲಸಿ ಅದಂ ಪುಣ್ಣ ಮೇಲಿಕ್ಕಿ ಬಿಗಿದು ಕಟ್ಟಲ್ ಬೆರಳಿನ ರಸಿಗೆ ಸುರಿವ ಪುಣ್ ಮಾಣ್ಬುದು—೧೬೯.

ಟೀ|| ಅರಿಸಿನಂ, ಮುಟ್ಟಿದೊಡೆಮುಱುಂಟುವನ ಸೊಪ್ಪು, ಕಳವಿಗೆಯ ಬೇರ್, ಬಜೆ, ಗಂಧಕಂ, ಸುಗಂಧಿ ಇವಂ ಎಳ್ಳೆಣ್ಣೆ, ತುಪ್ಪಂ, ಉದಕಂ ಇವಂ ಕೂಡಿ ಅಟ್ಟು ನಸ್ಯಂ ಮಾಡಲ್

1 ಕಣ್ಪಣೆ. 2 ಬಿಸಿಯ. 3 ನಿರಿಸದಿರ. 4 ಬಿವಂ ತಿಲತೈಲಾಜ್ಯಸಮನ್ವಿತಮಟ್ಟುವನಜಾಕ್ಷಿಯರ್ಗೆಱೆನಸ್ಯಮಂ. 5 ವಚನಂ. 6 ಇವುನೋಯುತ್ತಿರಲ್ ಖರಮೂಲವನುನರು......

* ಛಂದೋದೋಷವಿದೆ. † ಸ್ತ್ರೀಗ್ರಂಥಂ—ಎಂದು ಒಂದು ಪ್ರತಿಯಲ್ಲಿದೆ.

ಕಂ|| [1]ವನದಂತಿಯ ಪಂದಿಯ ಕೋ |
ಣನ ಬಸೆಯೊಳ್ ಮೊಲೆಯನೊರಸಿ ಕಲ[2]ವೆರಸು ರಸಾಂ ||
ಜನಮಂ ನಸ್ಯಂಗೆಯ್ದೊಡೆ |
ವನಜಾಕ್ಷಿಯ ಮೊಲೆಗಳೊದವಿ ನಡುವಂ ಮುಱುಗುಂ || ೧೭೧ ||

(ಭಗದುರ್ಗಂಧಹರಣಕ್ಕೆ)

ಪೊಸಘೃತದೊಳರಿಸಿ ಜಾತಿ |
[3]ಪ್ರಸೂನಮಂ ಪಂಚಪಲ್ಲವಂ ಮಧುಕಮುಮಂ ||
ಬಿಸುನೀರಿಂ ಪೂಸುಗೆ ತಾಂ |
ಕಿಸುಗುಳಿಯಪ್ಪವಳ ಭಗದ ಗಂಧಂ [4]ಕಿಡುಗುಂ || ೧೭೨ ||

(ಮೆಯ್ನೆರೆವುದರ್ಕೆ)

ಮದನಫಲಂ [5]ಸೊರೆ ಕಬ್ಬ |
ತ್ತಿ ದಂತಿ ಪಿಪ್ಪಲಿ [6]ಗುಡಂ ಯವಕ್ಷಾರಮುಮಂ ||
ಮಿದಿದಿಡುಗೆ ಯೋನಿಯೊಳ್ [7]ಕುದಿ |
ಸಿ ದುಗ್ಧದಿಂ ತಾನವಳ್ ರಜ[8]ಸ್ವಲೆಯಕ್ಕುಂ || ೧೭೩ ||

ಗುರುಗುಂಜಿಯೆಲೆಯೊಳಲ್ಲದೊ |
ಡರಪಿಚ್ಚುಗೆಯರಲೊಳೆಳ್ಳುಮಂ ಬೆಲ್ಲಮುಮಂ ||
ಬೆರಸಿ ತುಱುದಿಟ್ಟದಂ ತಿನೆ |
ವರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ || ೧೭೪ ||

ಸ್ತ್ರೀಯರ್ಗೆ ಮೊಲೆ ಬರ್ಪುದು—೧೭೦.

ಟೀ|| ಆನೆ, ಹಂದಿ, ಕೋಣಂ ಈ ಮೂಱಱ ಬಸೆಯಂ ಕೂಡಿ ಮೊಲೆಯನೊರಸಿ ನೀಲಾಂಜನಮನಂಬಿಲದಲ್ಲಿ ತೇದು ನಸ್ಯಮನೆಱೆಯಲ್ ಮೊಲೆಗಳ್ ದೊಡ್ಡಿತಪ್ಪುವು—೧೭೧.

ಟೀ|| ಪಸುವಿನ ಪೊಸತುಪ್ಪಂ, ಜಾಜಿಯ ಪೂ, ಅತ್ತಿ, ಆಲ, ಅರಳಿ, ಬಸಿರಿ, ಗೋಣಿ ಈ ಮರಂಗಳ ಎಳೆಯ ತಳಿರ್, ಯಷ್ಟಿಮಧುಕಂ ಇವಂ ಬಿಸುನೀರಲ್ಲಿ ಅರೆದು ಪೂಸಲ್ ಸ್ತ್ರೀಯರ ಯೋನಿಯ ದುರ್ಗಂಧಂ ಮಾಣ್ಬುದು—೧೭೨.

ಟೀ|| ಮಗ್ಗಾರೆಕಾಯ್, ಸೊರೆಯಬೀಜಂ, ಕಬ್ಬತ್ತಿ, ದಂತಿ, ಪಿಪ್ಪಲಿ, ಬೆಲ್ಲಂ ಇವನರೆದು ಪಾಲೊಳ್ ಕುದಿಯಿಸಿ ಯೋನಿಯಲ್ಲಿಡಲ್ ಕನ್ನೆ ಮೆಯ್ನೆರೆವಳ್—೧೭೩.

ಟೀ|| ಗುರುಗುಂಜೆಯ ಸೊಪ್ಪು, ಎಳ್ಳು, ಬೆಲ್ಲಂ, ಇವನರೆದು ಮೆಲ್ವುದು. ಅಲ್ಲಾ ಜಾಜಿಯ ಮೊಗ್ಗೆ, ಎಳ್ಳು, ಬೆಲ್ಲಂ ಇವನರೆದು ಮೆಲ್ವುದು. ಇವಱಿಂದೆ ರಜಸ್ವಲೆಯಾಗದವರ್ ರಜಸ್ವಲೆಯಪ್ಪರ್—೧೭೪.

1 ನವದಂತಿಯ. 2 ಪೊರಸು. 3 ಪ್ರಸೂ[illegible], ಪ್ರಸವನಕಂ. 4 ಮಾಣ್ಗುಂ. 5 ಸೊರೆಕಬ್ಬತ್ತಿ. 6 ಗುಡಂಗಳೆವಕ್ಷಾರವಮಿದಿದುಡುಗೆ, ಮಿದಿಪಡುಗೆ. 7 ಕಿಡಿಸಿ, ಕುಡಿಕಿಡಿಸೆ. 8 ಶ್ವಿ.



(ರಕ್ತಗುಲ್ಮಕ್ಕೆ)

ಕಂ|| ತ್ರಿಕಟುಕಮಧುಕಂಗಳನೆ |
ಳ್ಳ ಕಷಾಯದ ನೀರೊಳರೆದು ಕುಡಿಯಿಸೆ(ಯಲ್) ವನಿತಾ ||
ನಿಕರಕ್ಕೆ [1]ರಕ್ತ ಗುಲ್ಮಾ |
ಧಿಕತ್ವಮುಂ ಭಗರಜೋನಿರೋಧ(ಗ)ಮುಮಱುಗುಂ || ೧೭೫ ||

ಭಗರಕ್ತಂ ನಡೆವೊಡೆ ಬೆ |
ಣ್ಣೆಗರುಗಮಂ [2]ನೀರೊಳಕ್ಕದಂ ದುಗ್ಧದೊಳೀಂ ||
ಟುಗೆ ಮೇಣ್ [3]ಕಿಱುಸಾಲೆಯನ |
ಕ್ಕೆಗರ್ಚಿನೊಳ್ [4]ಕುಡಿದು ತಿಂನೆ [5]ಕದಳೀಫಳಮಂ || ೧೭೬ ||

(ಗರ್ಭಿಣಿಯಪ್ಪುದರ್ಕೆ)

ಶ್ರೀಯೆಯಱದು ಲಕ್ಷ್ಮಿಯಂ ಮೇಣ್ |
ಮಯೂರಶಿಖೆಯಂ ಪಯೋನ್ವಿತಂ ಕುಡಿಗಾಜ್ಯ ||
ಪ್ರಯುತಂ ಮೇಣಿಂಬಿನೆ ಲ |
ಕ್ಷ್ಮಿಯ ಬೇರಂ ನಸ್ಯಮೆಱೆಗೆ ಗರ್ಭಿಣಿಯಕ್ಕುಂ || ೧೭೭ ||

(ಗರ್ಭಂ ನಿಲ್ವುದರ್ಕೆ)

ಗೋರಂಟೆಯ ಬಿತ್ತಂ ಪಟಿ |
ನೀರಿಂ ಕುಡಿಯಿಸುವುದಲ್ಲದೊಡೆ ಭಗದೊಳ್ ಸಂ ||
ಚಾರಿಸುವುದು ಕ(ಖ)ರಕರ್ಣಿಕೆ |
ಬೇರಂ ಕೊಂಡೆಱೆಗೆ ಪೂಸೆ ಗರ್ಭಂ ನಿಲ್ಕುಂ || ೧೭೮ ||

ಟೀ|| ಶುಂಠಿ, ಮೆಣಸು, ಪಿಪ್ಪಲಿ, (ತ್ರಿಕಟುಕಂ) ಯಷ್ಟಿಮಧುಕಂ ಇವನೆಳ್ಳ ಕಷಾಯಮಂ ಮಾಡಿ ಆ ನೀರೊಳರೆದು ಕುಡಿಸೆ ಸ್ತ್ರೀಯರ್ಗೆ ರಕ್ತಗುಲ್ಮಂ, ಯೋನಿಯಿಂದೆ ರಕ್ತಸುರಿಯುತ್ತಿಹ ಇವು ಮಾಣ್ಬುವು—೧೭೫.

ಟೀ|| ಬೆಣ್ಣೆಗರುಗದ ಬೇರನುದಕದಲ್ಲರೆದು ಕುಡಿವುದು. ಅಲ್ಲಾ ಅದನೆ ಹಾಲಲ್ಲರೆದು ಕುಡಿವುದು. ಬಾಳೆಯ ಪಣ್ಣಂ ಮೆಲ್ವುದು ಇವಱಿಂದೆ ಯೋನಿಯಲ್ಲಿ ಸುರಿವ ರಕ್ತಂ ಮಾಣ್ಬುದು—೧೭೬.

ಟೀ|| [6]ಕರಿಯ ಉಗುನಿಯ ಬೇರಂ ಪಾಲಲ್ಲರೆದು ಕುಡಿವುದು. ಅಲ್ಲಾ ಮಯೂರಶಿಖೆಯಂ [7]ಪಾಲಲ್ಲರೆದು (ತುಪ್ಪದಲ್ಲಿ) ಕುಡಿವುದು. [8]ಅಲ್ಲಾ ಕರಿಯ ಉಗುನಿಯ ಬೇರಂ ತುಪ್ಪದಲ್ಲಿ ನಸ್ಯಂ ಮಾಡುವುದು. ಇವಱಿಂದೆ ಗರ್ಭಿಣಿಯಪ್ಪರ್—೧೭೭.

ಟೀ|| ಗೋರಂಟೆಯ ಬಿತ್ತಂ ಪಟಿಯ ನೀರಲ್ಲರೆದು ಕುಡಿಸುವುದು. ಅಲ್ಲಾ ಅದನೆ ಯೋನಿಯೊಳಗೆ ಲೇಪವಂ ಮಾಡುವುದು. ಕ(ಖ)ರಕರ್ಣಿಕೆಯ ಬೇರಂ ಪಟಿನೀರಲ್ಲರೆದು ಕುಡಿಸುವುದು. ಅಲ್ಲಾ ಅದನೆ ಯೋನಿಯೊಳಗೆ ಲೇಪಿಸುವುದು. ಇವಱಿಂದೆ ಗರ್ಭಂ ನಿಲ್ವುದು—೧೭೮.

1 ರಕ್ತಗುಲ್ಮ. 2 ಜಳಜಳಕದಂ. 3 ಕಿಱುಕುಸಲೆಯ. 4 ಕುಡಿಯ. 5 ಕದಳಿಪಮಂ. 6 ಕಾಳಿಯ ಬಳ್ಳಿಯ ಬೇರಂ. 7 ನೀರಲ್ಲಿ. 8 ಈ ಬೇರ್ಗಳನಾಕಳ ತುಪ್ಪದಲ್ಲರೆದು ಕುಡಿವುದು. ಆ ಕಾಳಿಯ ಬೇರಂ ತುಪ್ಪದಲ್ಲರೆದು ನಸ್ಯಂ.

(ಗರ್ಭವಾಗದಿರುವುದರ್ಕೆ)

ಕಂ|| ಫಲಮನಪೇಕ್ಷಿಸದಿರ್ದೊಡೆ |
1ಪಲಾಶತರುಬೀಜ ಚೂರ್ಣದೊಳ್ ಮಧುಘೃತಮಂ ||
ಕಲಸಿ ಬೞಿಕ್ಕದನೆ ರಜ |
ಸ್ವಲೆಯಾ2ದವಳ ಭಗದೊಳಿಟ್ಟೊಡಾಗದು ಗರ್ಭಂ || ೧೭೯ ||

ಸಮನಿಸೆ 3ಪುಷ್ಯಾರ್ಕಂ ಕನ |
ಕಮೂಲಮಂ ಕೊಂಡು ಕಟ್ಟಿ ಕಟಿಯೊಳ್ ಪುರುಷಂ ||
ರಮಿಯಿಸಿದಂದಾಕೆಗೆ ಗ |
ರ್ಭವಾಗದೇನೆಂದು ಪೇೞ್ವೆನಿದಱುನ್ನತಿಯಂ || ೧೮೦ ||

(ಮೊಲೆಯಧಾರಾರ್ಗಳಕ್ಕೆ)

ಅರಿಸನ4ಮಂ ಲೋಯಿಸರದ |
ತಿರುಳುಮುಮಂ ಮೊಲೆಯ ತುದಿಗೆ ತೊಡೆದೊಡೆ ಮೇಣು ||
ತ್ತರಣೆಯನಣಲೊಳ್ ತಾಳ್ದೊಡ |
ಮಿರಲೀಗುಮೆ ಕೆತ್ತ ಮೊಲೆಯ ಧಾರಾರ್ಗಳಮಂ || ೧೮೧ ||

ಕಳಮಾಕ್ಷತ ಚೂರ್ಣಂ 5ಮೇಣ್ |
ನೆಲಗುಂಬಳಮಿವಱೊಳೊಂದನೆಮ್ಮೆಯ ಪಾಲಿಂ ||
6ಕಲಸಿ ಕುಡಿಯಿಸುಗೆ ತೊರೆ(ಱೆ)ಗುಂ |
ಮೊಲೆಗಳ್ ಬಾಣ(ಳ)ಂತಿ7ಗೆಚ್ಚು ಪಾಲ್ ಪಾಯ್ವನೆಗಂ || ೧೮೨ ||

— ಇಂತು ಸ್ತ್ರೀವೈದ್ಯಂ —

---

ಟೀ|| ಮುತ್ತದ ಬೀಜದ ಚೂರ್ಣಮಂ 8ತುಪ್ಪದಲ್ಲಿ ಕೂಡಿ ಕಲಸಿ ಅದಂ ರಜಸ್ವಲೆಯಾದಾಗಳ್ ಅವಳ ಯೋನಿಯೊಳಗಿರಿಸಿದೊಡೆ ಗರ್ಭವಾಗದು—೧೭೯.

ಟೀ|| ಆದಿತ್ಯವಾರಂ ಪುಷ್ಯನಕ್ಷತ್ರಂ ಕೂಡಿದಲ್ಲಿ ಪುರುಷಂ ಮದ್ದುಗುಣಿಕೆಯ ಬೇರಂ ತಂದು ಉಡಿಯಲ್ಲಿ ಕಟ್ಟಿಕೊಂಡು ಸ್ತ್ರೀಯರಂ [ರಮಿಸೆ] ಸಂಯೋಗಂ ಮಾಡಲ್ ಗರ್ಭವಾಗದು—೧೮೦.

ಟೀ|| ಅರಿಸಿನಂ, ಲೋಯಿಸರದ ತಿರುಳ್ ಇವೆರಡುಮಂ ಕೂಡಿ ಅರೆದು ಮೊಲೆಯತೊಟ್ಟಿಗೆ ತೊಡೆವುದು. ಅಲ್ಲಾ ಉತ್ತರಣೆಯ ಬೇರಂ ಅಣಲಲ್ಲಿ9ಪಸಿಕೊಳ್ವುದು ಇವಱಿಂದೆ ಮೊಲೆ 10ಕೆತ್ತುಧಾರೆಗಳ್ ಬಿಡುವುವು—೧೮೧.

ಟೀ|| ಕಳವೆಯಕ್ಕಿಯ ಪಿಟ್ಟಂ ಎಮ್ಮೆಯ ಪಾಲಲ್ಲಿ ಕದಡಿ ಕುಡಿಯಿಸುವುದು. ಅಲ್ಲಾ ನೆಲಗುಂಬಳದ ಸಮೂಲಮಂ ಎಮ್ಮೆಯ ಪಾಲಲ್ಲರೆದು ಕದಡಿ ಕುಡಿಯಿಸುವುದು. ಇವಱಿಂದೆ ಬಾಳಂತಿಯರ್ಗೆ[ಗಳ್ಗೆ] ಮೊಲೆಗಳ್ ತೊಱೆದು ಪಾಲ್ ಬರ್ಪುದು—೧೮೨.

---

1 ಪಾಲಾಶದ ತರುಚೂರ್ಣದೊಳಗೆ ಮಧುವಂ ಘೃತಮಂ. 2 ಯಂದಾ ಭಗ. 3 ಪುಷ್ಯಂ ದುತ್ತೂರದ ಮೂಲ. 4 ಮುಮಂ ಲೋಯಿಸರವಂ ತೊಡದೊಡಮುತ್ತರಣೆಯ ನಳಲೊಳ್ ತಾಳ್ದೊಡಮಿರಲೀಗುಮೆ ಕೆತ್ತ ಮೊಲೆಯ ದಾರಾ. 5 ಪೊಳ್ಳಿಲ. 6 ಕುಡಿಯಿಸುಗೆ ತೊರೆಗಳುಂ. 7 ತಿಗೆ ಪೆಚ್ಚು ಪಾಲ್. 8 ಮೂಲದಲ್ಲಿ—ಜೇನುತುಪ್ಪ ಮತ್ತು ತುಪ್ಪ ಎಂದಿದೆ. 9 ಇರಿಸಿಕೊಳಲು. 10 ಕಟ್ಟ.



(೩) ಇನ್ನು ಬಾಲವೈದ್ಯಂ

ಕಂ|| 1ಬಾಲರ್ಗಂ ಕೋಷ್ಠಯುತಂ |
ಪಾಲಂ ಕುಡಿಯಿಸುಗೆ ಶುಂಠಿಯುಮನಣಲೆಯುಮಂ ||
ಪಾಲುಂ ತುಪ್ಪಮುಮೆಕ್ಕೆಯ |
ಪಾಲುಮಿವಂ ತೀವೆ ಸರ್ವದೋಷಾಪಹರಂ || ೧೮೩ ||

ಬಜೆ ಕೋಷ್ಠಂ ಶಂಖಂ ಪಂ |
ಕಜ ಬೀಜಂ ಲೋಹಮೆಂಬಿವಂ ಕೊರಲೊಳ್ ಕ ||
2ಟ್ಟೆ ಜಗರಮುಂ ಗ್ರಹ ಗಣಮುಂ |
ದ್ವಿಜ ಗಣಮುಂ ಪೊರ್ದಲಣ್ಮವಾ ಬಾಲಕನಂ || ೧೮೪ ||

ಸೊರೆ 3ದಾಸಣಮುಂ ಮುಳ್ವ |
ತ್ತ4ರಿಗೆ ಯೆನಿಪ್ಪಿವಱ ಬೇರ್ಗಳೊಳ್ ಮೆಚ್ಚಿದುದಂ ||
ಕೊರಲೊಳ್ ಕಟ್ಟುಗೆ ಬೆಕರ್ಪಂ |
ನಿರುಪದ್ರವದಿಂದಮೆಯ್ದೆ ಶಿಶುವಿನ ಪಲ್ಗಳ್ || ೧೮೫ ||

ಘನಮುಂ ವರಸೌವೀರಾಂ |
ಜನಮುಂ ನೆಗ್ಗಿಲುಮನರೆದು ತಂಡುಲಜಲದಿಂ ||
ದಿನಿಸುಂ ಕುಡಿಯಿಸೆ ಶಿಶುವಿನ |
[ಘನ]5ತೃಷೆಯುಂ ಛರ್ದಿ6ಯುವಕವುಂ ಪೞಿಪಡುಗುಂ || ೧೮೬ ||

---

ಟೀ|| ಶಿಶುಗಳ್ಗೆ ಪಾಲೊಳಗೆ ಕೋಷ್ಠಮು7ನರೆದು ಕುಡಿಸುವುದು. ಶುಂಠಿ, ಅಣಲೆಯ ಕಾಯ್ ಇವನರೆದು ಪಾಲ್ತುಪ್ಪಂ ಎಕ್ಕೆಯಪಾಲ್ ಇವಂ ಕೂಡಿ ಆ ಅರೆದುದಂ ಮೆಯ್ಗೆ 8ಪೂಸುವುದು. ಇವಱಿಂದೆ ಸರ್ವವ್ಯಾಧಿಹರಂ—೧೮೩.

ಟೀ|| ಬಜೆ, ಕೋಷ್ಠಂ, ಶಂಖಂ, 9ತಾವರೆಬೀಜಂ, ಕರ್ಬುನಂ ಈ ಅಯ್ದುಮಂ ಕೂಡಿ ಅರಿವೆಯೊಳ್ ಕಟ್ಟಿ ಶಿಶುವಿನ ಕೊರಲೊಳ್ ಕಟ್ಟಲ್ ಸರ್ಪಂಗಳುಂ, ಗ್ರಹಂಗಳುಂ, ದುಷ್ಟ ಪಕ್ಷಿಗಳುಂ ಮೊದಲಾದ ಆವ ದೋಷಂಗಳುಂ ಶಿಶುವಂ ಪೊರ್ದವು—೧೮೪.

ಟೀ|| ಪಾಲ್ಗುಂಬಳದ ಬೇರ್, ದಾಸವಾಣದ ಬೇರ್, ಮುಳ್ಳು ಹತ್ತರಿಕೆಯ ಬೇರ್, ಇವಱೊಳಗೆ ದೊರಕಿದುದೊಂದಱ ಬೇರಂ ಕೊಂಡುಬಂದು ಶಿಶುವಿನ ಕೊರಲೊಳ್ ಕಟ್ಟಲ್ ಉಪದ್ರವವಿಲ್ಲದೆ ಪಲ್ಗಳ್ ಬರ್ಪುವು—೧೮೫.

ಟೀ|| ಭದ್ರಮುಸ್ತೆ, ಸೌವೀರಾಂಜನಂ, ನೆಗ್ಗಿಲ ಬೇರ್, ಇವನರೆದು ಅಕ್ಕಿಗಟ್ಟಿನಲ್ಲಿ ಕದಡಿ ಶಿಶುವಿಗೆ ಕ್ರಿಯೆಯಱಿದು ಕುಡಿಯಿಸಲ್ ತೃಷೆ ಕಿಡುವುದು. ಛರ್ದಿಯುಪ್ಪುದುಮಾಣ್ಬುದು—೧೮೬.

---

1 ಬಾಲಗೆ......ಪಾಲಂ, ಬಾಲಕಂ ಕೋಷ್ಠ. 2 ಟ್ಟೆ ಜವದೆ ಫಣಿಪಕ್ಷಿಗ್ರಹ । ವ್ರಜಮುಂ ತಾಂ [illegible]. 3 ದಾಣಮುಂ. 4 [illegible]. 5 ತೃಷೆಯುಮುಂ. 6 ಯೆಜಕಮುಂ. 7 ಮಂ ತೇದು ಪೂಸುವುದು. 8 ತಿಗುವುದು. 9 ಪಂಕಜ.

(ಬಾಳಕಾತಿಸಾರಕ್ಕೆ)

ಕಂ|| ಮಧುಮಿಶ್ರಮಾಗೆ ಜಲ ಬಿ |
ಲ್ವ ಧಾತಕೀಕುಸುಮ ಲೋಧ್ರ ಗಜಕೇಸರ ಮಾ ||
ಗಧ ಕೃತಕಷಾಯಮಂ ಕುಡಿ |
ಸಧಿಕೋದ್ಗತ ಬಾಳಕಾತಿಸಾರಂ ಕಿಡುಗುಂ || ೧೮೭. ||

(ಬಾಲಕರಿಗೆ ರೋಗಕ್ಕೆ)

ಬಳೆಯಂ ಬಜೆಯುಮನೊಂದಿರೆ |
ತಿಳತೈಲದೊಳಟ್ಟು ಪೂಸಿ ತಿಮಿರ್ವುದು ಬಜೆಯಂ ||
ಬಟೆಯಂ ಮಿಸಿಸುವುದಂತಾ |
ಬಳೆಯ ಕಷಾಯಮನೆ ಬಾಲಕಂಗೆಣೆ ಮಾಣ್ಗುಂ || ೧೮೮ ||

—ಇಂತು ಬಾಲವೈದ್ಯಂ—

(೪) ಇನ್ನು ಗೋವೈದ್ಯಂ*

ತೆನೆಯಾಗದ ಪಸುವಿಂಗಾ |
ಡಿನ ತುಪ್ಪಮನಕ್ಕೆ ಕುಱಿಯ ತುಪ್ಪಮ[1]ನೆಱೆದೊ ||
ಯ್ಯನೆ ಭಗದೊಳ್ ಲಕ್ಷ್ಮಿಯ ಬೇ |
ರನೆ[2]ಯ್ದೆ ಮೆದ್ದುಗುಱೆ ಕಟ್ಟುಗುಂ ನಿಶ್ಚಯದಿಂ || ೧೮೯ ||

ಬಾವುಜಿಗೆಯ [3]ನೆಳ್ಳಂ ನಿ |
ಷ್ಪಾವಮ ನಗಸೆಯುಮನಿಕ್ಕಿದಂದೆರ್ಮೆಗೆ ಮೇ ||
ಣಾವಿಂಗೆ ಬಸಿಱ ಕಱು ಸ |
ತ್ತಾ[4]ವಡಿ(ದಿ)ಗೊಳಿಸುತ್ತಮಿರ್ಪೊಡದು ಪೊಱಮಡುಗುಂ || ೧೯೦ ||

ಟೀ|| ಭದ್ರಮುಸ್ತೆ, ಬೆಲ್ಲವತ್ತದ ಕಾಯ ತಿರುಳ್, ಧಾತಕೀ ಕುಸುಮಂ, ಲೋಧ್ರಂ, ನಾಗಕೇಸರಂ, ಪಿಪ್ಪಲಿ, ಇವೆಲ್ಲಮಂ ಕೂಡಿ ಕಷಾಯಮಂ ಮಾಡಿ ಜೇನತುಪ್ಪಮಂ ಕೂಡಿ ಕುಡಿಸಲ್ [5]ಶಿಶುಗಳ್ಗೆ ಅತಿಸಾರ ರೋಗಂ ಮಾಣ್ಬುದು—೧೮೭.

ಟೀ|| ಕಳ್ಳಂಗಡಲೆಯ ಬೇರ್, ಬಜೆ ಇವಂ ಎಳ್ಳೆಣ್ಣೆಯಲ್ಲಟ್ಟು ಮೆಯ್ಗೆ ಪೂಸಿ ತಿವಿರ್ವುದು. ಬಜೆಯಂ ಭದ್ರಮುಸ್ತೆಯಂ ಉದಕದೊಳಗೆ ಹಾಯ್ಕಿ ನನೆಯಿಕ್ಕಿ ಆ ವುದಕಮಂ ಮೆಯ್ಯಲ್ಲೆಱೆವುದು. ಆ ಬಜೆಯಂ ಕೂಡಿ ಕಷಾಯಮಂ ಮಾಡುವುದು. ಇವಱಿಂಗೆ ಶಿಸುವಿಗೆ ಎಣೆಗೊಂಡುದು ಮಾಣ್ಬುದು[6]—೧೮೮.

ಟೀ|| ತೆನೆಯಾಗದ ಪಸುಗಳ್ಗೆ ಆಡಿನತುಪ್ಪಮನಾದೊಡಂ, ಅಲ್ಲಾ ಕುಱಿಯತುಪ್ಪಮನಾದೊಡಂ (ಇವಂ) ಕೊಂಡು ಯೋನಿಯೊಳಗೆಱೆವುದು. ಲಕ್ಷ್ಮಿಯಬೇರಂ ಮೆದ್ದು ಆ ರಸಮಂ ಯೋನಿಯೊಳಗೆವುಗುಱುವುದು. ತೆನೆಯಪ್ಪುವು—೧೮೯.

ಟೀ|| ವಾಕುಚಿಯಬೀಜಂ, ಎಳ್ಳು, ಅವರೆಯಬೀಜಂ, ಅಗಸೆಯಬೀಜಂ ಇವಂ ಕೂಡಿ

1 ಮನಕ್ಕೆಱೆ. 2 ನೆಯ್ದಿಸೆ ಮೆದ್ದುವುಳೆ. 3 ಮೇಣುಂ. 4 ತ್ತಾವಱಿಸಿಗೊಳುತ್ತು. 5 ಬಾಲಕರ್ಗಾದ. 6 ಬಾಲವೈದ್ಯಂ ಸಮಾಪ್ತಂ, ಶ್ರೀಪಾರ್ಶ್ವನಾಥಾಯ ನಮಃ, ಅವಿಘ್ನಮಸ್ತು ಎಂದು ಒಂದು ಪ್ರತಿಯಲ್ಲಿದೆ.

* ಒಂದು ಪ್ರತಿಯಲ್ಲಿ ಇಲ್ಲಿಂದ ಗ್ರಂಥವು ಆರಂಭವಾಗಿದೆ-ಶ್ರೀಗಣಾಧಿಪತಯೇ ನಮಃ, ಶ್ರೀಗುರುಭ್ಯೋ ನಮಃ, ನಿರ್ವಿಘ್ನಮಸ್ತು, ಗೋವೈದ್ಯಂ ಪೇೞ್ವೆಂ.



ಕಂ|| ಅಗಸೆ ಪೆಸಱವರೆ ಬಾವುಜ |
ಗೆ ಗುಳ್ಳ[1]ಮೆಳ್ಪಿಟ್ಟು ಬಳ್ಳಿಸೊರೆಯೆಂಬಿವನಿ ||
ಕ್ಕುಗೆ ಪಾಲೊಳ್ ಮೇಣ್ ಮದ್ಯದೊ |
ಳೆ ಗೋಕುಲಂ ಮಾಸನಿಕ್ಕುಗುಂ ತತ್ಕ್ಷಣದಿಂ || ೧೯೧ ||

ಗುರುಗುಂಜೆಯ ಬೇಳೆಯನವು |
ದೊರಕೆ[2]ಕೊಳದೊಡೆಲವದಡಿಯೊಳುದಿಸಿದ ಕುಶೆಯಂ ||
ಸುರಭಿಯ ಮಹಿಷಿಯ ತುರಗಿಯ |
ಕೊರಲೊಳ್ ಕಟ್ಟಿದೊಡೆ ಮಾಸ[3]ನಿಕ್ಕುಗುಮನಿಶಂ || ೧೯೨ ||

ಈಂದಿರ್ದ ಗೋವು ಮಾಸಂ |
ತಿಂದೊಡೆ ಕಲಸಿಕ್ಕುಗೆ ಸೂಸಲಂ ಬೆಲ್ಲಮುಮಂ ||
[4]ತಂದಿಕ್ಕುಗಿಕ್ಕುಗಗಸೆಯ |
ಮಂ ದುಗ್ಧಮುಮಂ [5]ತದೀಯ ದೋಷಾಪಹರಂ || ೧೯೩ ||

(ಕಱು ಪಿಂತೆ ಪೋಪುದರ್ಕೆ)

ಕಡುಗೋಟಲೆಯಿಂ ಮೆಯ್ ಪೊಱ |
ಮಡೆ ಕಟಿಯೊಳ್ ಕರ್ಚಿ ಕರಿಯ ಕಾಕೆಯ ರಸಮಂ ||
ತೊಡೆದೊತ್ತು[6]ಗಲ್ಲದೊಡಮು |
*ತ್ತ್ರಾಣೆಯ ರಸದಿಂದೆ ತನ್ನ ನೆಲೆಗದು ಪೋಕುಂ || ೧೯೪ ||

ಚೂರ್ಣಮಂ ಮಾಡಿ ತಿನಿಸುವುದು. ಎಮ್ಮೆಯಾದೊಡಮಾಕಳಾದೊಡಮುದಱ ಬಸಿಱೊಳಗೆ ಸತ್ತು ಸಿಲ್ಕಿರ್ದ ಕಱುಗಳ್ ಪೊಱಮಡುವುವು—೧೯೦.

ಟೀ|| ಅಗಸೆಯಬೀಜಂ, ಪೆಸಱು, ಅವರೆಯಬೀಜಂ, ವಾಕುಚಿಯಬೀಜಂ, ಗುಳ್ಳದಕಾಯ್, ಎಳ್ಳಪಿಟ್ಟು, ಬಳ್ಳಿಸೊರೆಯ ಸಮೂಲಂ, ಇವಂ ಚೂರ್ಣಂ ಮಾಡಿ ಪಾಲಲ್ಲರೆದು ಕವಡಿ ಕುಡಿಸುವುದು. ಅಲ್ಲಾ ಮದ್ಯದಲ್ಲರೆದು ಕುಡಿಸುವುದು. ಪಸುಗಳ ವೊಡಲೊಳಗೆ ಸಿಲ್ಕಿರ್ದಂತಹ ಮಾಸುಗಳ್ ಬೇಗಂ ಬೀೞ್ಪುವು—೧೯೧.

ಟೀ|| ಗುರುಗುಂಜಿಯ ಬೇಳೆಯಾದೊಡಂ, ಅಲ್ಲಾ ಎಲವದ ಮರನ ಅಡಿಯಲ್ಲಿ ಹುಟ್ಟಿದ ದರ್ಭೆಯಾದೊಡಂ ಈ ಎರಡಱೊಳಗೆ ದೊರಕಿದುದಂ ತಂದು ಆಕಳು, ಎಮ್ಮೆ, ಕುದುರೆ, ಇದುಮುಂತಾದುವಱ ಕೊರಲೊಳ್ ಕಟ್ಟಲ್ [7]ಮಾಸು ಬೇಗಂ ಬೀೞ್ವುದು—೧೯೨.

ಟೀ|| ಈದ ಆಕಳು [8]ಮಾಸಂ ತಿಂದೊಡೆ ಎಳ್ಳಸೂಸಲಂ, ಬೆಲ್ಲಮಂ ಕಲಸಿ ತಿನಿಸುವುದು. ಅಲ್ಲಾ ಅಗಸೆಯ ಬೀಜಮಂ ಪಾಲಲ್ಲರೆದು ಕವಡಿ ಕುಡಿಸುವುದು. ಇದಱಿಂದಾ [9]ದೋಷಂ ಕಿಡುವುದು—೧೯೩.

ಟೀ|| ಆಕಳುಗಳ್ಗೆ ದಿನಂ ತುಂಬದೆ ಕಱು ಪೊಱಮಡುವಂತಿರ್ದೊಡೆ ಅದನಂಬಿಲದಲ್ಲಿ ತೊಳೆದು ಕರಿಯ ಕಾಕೆಯ ರಸಮಂ ತೊಡೆದು ಒಳಯಿಂಕೆ ವೊತ್ತುವುದು. ಅಲ್ಲಾ ಉತ್ತ್ರಾಣೆಯ

1 ಮಳಿಪಿಱಟ್ಟು, ಸುಳ್ಳಿಪಿಟ್ಟು. 2 ಕೊಳ್ಳದೊಡೆಲವದಡಿಯಲೊದವಿದ. 3 ನಿಕ್ಕುಗೆ ನಿಮಿಷದ. 4 ತಂದಿಕ್ಕುಗೆ ದಿಕ್ಕನಗಸೆ, ತಂದಿಕ್ಕಿದೊಡಿಕ್ಕುಗಸೆಯುಮಂ. 5 ತನಿವ, ತಿನಿಸೆ. 6 ಗಲ್ಲಮುತ್ತ್ರಾಣದ. 7 ಮಾಸನಿಕ್ಕುವುದು. 8 ಮಾಂಸವ ತಿಂದರೆ. 9 ಆದೋಷಂಗಳ ಪರಿಹರಂ.

* ದಕಾರ ರಕಾರ ಪ್ರಾಸಿದೆ. ಪ್ರಾಯಶಃ—ತ್ತ್ರಾಣೆಯರಸ—(ಎಂದಿರಬಹುದೇ?)

(ಕಱುಗೊಳ್ಳುದರ್ಕೆ)

ಕಂ|| ಬಗೆಯದೆ ಪೆಱವಱ ಮರ್ದಂ |
ಸುಗಂಧಿ ಕಲ್ಲುಪ್ಪು [1]ಪುಳ್ಗಿಗಂ ಪುಳ್ಳಕೆ ಜೀ ||
ರಗೆಯೆಂ[2]ಬಿನಿತ್ತುಮಂ ಪೂ |
ಸುಗೆ ಕಱುವಂ ನಕ್ಕಲೊಡನೆ ಪಸು ಕಱುಗೊಳ್ಗುಂ || ೧೭೫ ||

(ಅಗಡು ಪಸು ಸಾಧುವಪ್ಪುದರ್ಕೆ)

ರುಜೆ [3]ಮೇಣು ಬಿಳಿಯಸಾಸಿವೆ |
ಬಜೆ [4]ಬಿಟಲಿನ ಬೀಜಮೆಂಬಿವಂ ಸಂಗೊಂಡಂ ||
ತಜ ಮೂತ್ರ[5]ದೊಳರೆದೆಚ್ಚುಗೆ |
[6]ನಿಜೇಚ್ಛೆಯಿಂದೋಱಿಯಾವು ಮಟ್ಟಂ ಕಱಿಗುಂ || ೧೭೬ ||

ಲವಣಂ ನಱು[7]ವಲ ಬೇರ್ ಗು |
ಳ್ಳವದಣೆ ಬಂವದಣೆ ಲೊಕ್ಕಿ ಕಿಱುಮೆಕ್ಕೆಗಳೆಂ ||
ಬಿವನರೆದು ತಕ್ರದೊಳ್ ಪೂ |
ಸುವುದದಱಿಂ ಕಱುಪಿ[8]ನೋಱಿ(ಡೆ)ಗಳ್ ಪಱಿಪಡುಗುಂ || ೧೭೭ ||

(ಮುಖರೋಗಕ್ಕೆ)

ಬಿಸುನೀರೊಳ್ ಮುನ್ನಂ ಕ |
ರ್ಚಿ ಸಾಸಿವೆಯತ್ತೈಲದಿಂದಮಾಸ್ಯಮನಭ್ಯು(ಭ್ಯಂ) ||
ಕ್ಷಿ(ಸಿ)ಸಿ ಪೂಸುಗೆಕ್ಕೆಯೆಲೆಯಂ |
ಪಸುವಿನ ಮುಖರೋಗಮಿವಱಿನಾಗಳೆ ಕಿಡುಗುಂ || ೧೭೮ ||

ರಸಮಂ ತೊಡೆದು ಒಳಯಿಂಕೆ ಪೊತ್ತುವುದು. ಇವಱಿಂದೆ ಕಱು ತನ್ನ ನಿಜದ ತಾವಿಂಗೆ ಪೋಪುದು—೧೭೪.

ಟೀ|| ಸುಗಂಧಿ, ಕಲ್ಲುಪ್ಪು, (ಉಪ್ಪು) ಜೀರಗೆ ಇವಂ ಮಜ್ಜಿಗೆಯೊಳರೆದು ಕಱುವಿನ ಮೆಯ್ಯಂ ಪೂಸಿ ಅದನಾಕಳ ಮುಂದೆ ಯಿರಿಸಲ್ (ನಿಲಿಸಲ್) ಆಕಳು ಕಱುವಂ ನೆಕ್ಕಲ್ ಕಱುವಿನ ಮೇಲೆ [10]ಮೋಹಂ ಪುಟ್ಟುವುದು—೧೭೫.

ಟೀ|| ರುದಂತಿಯುನಾಡಿನ ಮೂತ್ರದಲ್ಲಿ ತೇದು ಕಣ್ಣೊಳೆಚ್ಚುವುದು. ಅಲ್ಲಾ ಬಿಳಿಯ ಸಾಸಿವೆ, ಬಜೆ, ಸೆಗುಡಿತೆಯ ಬೀಜಂ ಇವಂ ಸಮನಾಗಿ ಕೊಂಡು ಆಡಿನ ಮೂತ್ರದಲ್ಲರೆದು ಕಣ್ಣೊಳೆಚ್ಚಲ್ ಅಗಡಾಗಿರ್ದ ಆಕಳು ಸಾಧುಗಳಾಗಿ ಕಱೆವುವು—೧೭೬.

ಟೀ|| ಉಪ್ಪುನಱುವಲ ಬೇರ್, ಗುಳ್ಳದ ಬೇರ್, ನೆಲಗುಳ್ಳದ ಬೇರ್, ಕಿಱುಮೆಕ್ಕೆಯ ಬೇರ್, ಇವಂ ಮಜ್ಜಿಗೆಯಲ್ಲರೆದು ಪೂಸಲ್ ಅಗಡುಗಱುಗಳ್ ಸಾಧುಗಳಪ್ಪುವು—೧೭೭.

ಟೀ|| ಮುಖರೋಗವಾದ ಆಕಳ [9]ಮುಖಮಂ ಬಿಸುನೀರೊಳ್ ತೊಳೆದು ಸಾಸಿವೆ(ಯೆಣ್ಣೆ)ಯಲಿ ಎಕ್ಕೆಯೆಲೆಯಂ ಕೂಡಿ ಅರೆದು ಎಳ್ಳೆಣ್ಣೆಯಲ್ಲಿ ಕಲಸಿ ಮುಸುಡಿಗೆ ಪೂಸಲ್ ಮುಖರೋಗಂ ಮಾಣ್ಬುದು—೧೭೮.

1 ಪುಗ್ಗಿಗಂ ಪುಳಕೆ. 2 ಬಿವಿನಿತುಮಂ. 3 ಮೆಣಸು. 4 ಬಿಲಿನ ಚೆಳ್ಳಿನ ಬೀಜಮಿಂತಿವಂ, 5 ದಲಿರೆ, ದೊಳರೆ. 6 ನಿಜೆರತ್ನೆಯಿಂದೋಱಿ...ಗಱಿಗುಂ. 7 ವಂಜೆರು. 8 ನೋಡೆ. 9 ಹಮಂ ಮಾಡುವುದು. 10 ಮೋರೆಯಂ.



ಕಂ|| ಬಿಸುಸುಯ್ಯೆ ಬಾಯ್ [1]ಕರಂ ಕೆಂ |
ಪಸೆದಿರೆ ಬಿಡೆ ಲೋಳೆ ಸುರಿಯೆ ಬಾಯೆ(ಎ)ಸಳದನೋ ||
ಡಿಸುವೊಡೆ ಕಾಗೆಯ ಗಱಿಯಿಂ |
ಬಿಸುನೀರೊಳ್ ಕರ್ಚಿ ತೊಡೆಗೆ ಕಟುಕತ್ರಯಮಂ || ೧೭೯ ||

(ಕೆಮ್ಮಿಂಗೆ)

ಕಱಿಯಿಂ ಕೊಗ್ಗಿಯುಮಂ ಮೇ |
ಣಳೆಯುಮನಗಸೆಯುಮನುಪ್ಪುಮಂ ಮೇಣ್ ಕೊಱೆಯಂ ||
ಜಳದಿಂ ನಸ್ಯಂಗೆಯೆ(ಯ್) ಗೋ |
ಕುಳ[2]ಕ್ಕೆ ಕೊ(ಕೆ)ಱಿಸಲ್ವ ಕೆಮ್ಮಿನವಕಂ ಮಾಣ್ಗುಂ || ೧೮೦ ||

(ಕಣ್ಣಪೂಗೆ)

ಮಿಗೆ ದಿನಪದುಗ್ಧಮಂ ಗುಬ್ಬಿ(ಬಿ) |
ಯ ಗೂ(ಗು)ಳಿಯದೊಳೆ ತೀವಿ ಸುಟ್ಟು ನವನೀತದಿನೆ ||
ಚ್ಚುಗೆ ಮೇಣ್ ಗುರುಗುಂಜೆಯ ಬೇ |
ರುಗಳಂ ಕೊಂಡೆಚ್ಚುಗಕ್ಷಿಪುಷ್ಪಂ ಕಿಡುಗುಂ || ೧೮೧ ||

(ಬಾಹುಗಳ್ಗೆ)

ಕಿಱುನೆಲ್ಲಿಯುಪ್ಪು ನೆಣವುಲಿ |
ತೊಱೆನಾಯ್ ಸತ್ತೆಡೆಯ [3]ಮಣ್ ಶುಕಾಸ್ಯಂ ಮದ್ಯಂ ||
ಮುಱುದೊಂಡೆಯೆಂಬಿವಂ ಪೆಸ |
ರಱಿಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ || ೧೮೨ ||

ಟೀ|| ಆಕಳುಗಳ್ಗೆ ಬಿಸುಸುಯ್ ಸುಯ್ಯುತ್ತಿರುಹ, ಬಾಯ್ ಕೆಂಪಾಗಿರುಹ, ಲೋಳೆಸುರಿಯುತ್ತಿಹ, ಇದರ್ಕೆ ಆಕಳಬಾಯಂ ಕಾಗೆಯಗಱಿಯಿನೊರಸಿ ಬಿಸುನೀರೊಳ್ ತೊಳೆದು ಶುಂಠಿ, ಹಿಪ್ಪಲಿ, ಮೆಣಸು, ಈ ಮೂಱುಮನುದಕವಲ್ಲರೆದು ಬಾಯ್ಗೆ ತೊಡೆಯಲ್ ಬಾಯರೋಗಂ ಮಾಣ್ಬುದು—೧೭೯.

ಟೀ|| ಕೊಗ್ಗಿಯಸೊಪ್ಪಂ ಅಂಬಿಲದಲ್ಲರೆದು ಅದಂ ನಸ್ಯಂ ಮಾಡುವುದು. ಅಲ್ಲಾ [4]ಅಗಸೆಯಸೊಪ್ಪಂ ಆಕಳ ಮಜ್ಜಿಗೆಯಲ್ಲರೆದು ನಸ್ಯಂ ಮಾಡುವುದು. ಅಲ್ಲಾ ಉಪ್ಪಂ ಅಕ್ಕಿಯಂ ತೊಳೆದ ನೀರಲ್ಲರೆದು ನಸ್ಯಮಂ ಮಾಡುವುದು ಇವಱಿಂದೆ ಆಕಳುಗಳ್ಗೆ ಕೆಮ್ಮು ಮಾಣ್ಬುದು—೧೮೦.

ಟೀ|| ಎಕ್ಕೆಯಪಾಲಂ ಗುಬ್ಬಿಯ ಗುಳ್ಳಿಯಲ್ಲಿ ತುಂಬಿ ಸುಟ್ಟು ಅದಂ ಬೆಣ್ಣೆಯಲ್ಲಿ ಕಲಸಿ ಎಚ್ಚುವುದು. ಅಲ್ಲಾ ಗುರುಗುಂಜಿಯಬೇರಂ ಉದಕದಲ್ಲಿ ತೇದು ಎಚ್ಚುವುದು. ಇವಱಿಂದೆ ಆಕಳ ಕಣ್ಣ ಹೂ ಮಾಣ್ಬುದು—೧೮೧.

ಟೀ|| ಕಿಱುನೆಲ್ಲಿ, ಉಪ್ಪು, ನೆಣವುಲಿ, ನೀರ್ನಾಯ್ ಸತ್ತ ತಾವಿನ ಮಣ್, ಗಿಣಿಮೂಗನ ಗೆಂಡೆ, ಮುಱುಗೊಂಡೆ ಇವಂ ಮದ್ಯದಲ್ಲರೆದು ಪೂಸಲ್ ಆಕಳುಗಳ್ಗೆ ಪೆಸರಱಿಯದ ಬಾಹು

1 ಖರಂ. 2 ಕೈನಾಸಿಸಲು. 3 ಮೆಣಸು ಕಾಸ್ಯಮುಮಂಡೆಂ. 4 ಅಗಸೆಯಬೀಜಮುಂಟಾಪ್ಪ ಇವಂ ಜಲದಿಂ ನಸ್ಯಂ ಗೆಯ್ಯುವುದು.

ಕಂ|| * ತವೆ ಕಿಱುಕುಸಾಲೆ ನಿಜಸ್ವಂ |
ಧವ ಬಿಲ್ವಂ ಲೊಕ್ಕಿಯಾಲಪೊಟ್ಟಿ ಸರೋ ||
ಜಪಸಲೆ ಬಸಿರಿಯ(ಯಾ)ವರೆಯುಂ |
ಬಿವು ಮಾಣಿಸುಗಿರದೆ ಪಶುಗೆ ಬಸಿಱುರ್ಚುವುದಂ || ೧೮೩ ||

(ಶೂಲೆಗೆ)

ಚಂ|| [1]ತರವೊಡೆ ಮೇಣ್ ಜಡಂ ಪಡುವೊಡಂ ಭರದಿಂದೊಱಲುತ್ತು ಮಿರ್ಪೊಡಂ |
ಚರಣಮನಾವಗಂ ಬಡಿವೊಡಂ ಪೆಱತೇನಿದು ಶೂಲೆ ತೋಱುತಂ ||
ದಿರದೊಡಗೂಡಿ ಶುಂಠಿ ಲಶುನಂ ಗಜಪಿಪ್ಪಲಿ ಚವ್ಯ[2]ಹಿಂಗುವುಂ |
ಗೃತ ಗುಡ ಪೋವು ಮುಪ್ಪರಿಸಿಸಂ ಬಜೆಯೆಂಬಿವನಿಕ್ಕೆ [3]ಮಱ್ಗುಗುಂ || ೧೮೪ ||

(ಜ್ವರಕ್ಕೆ)

ಚಂ|| ನಯನಜಲಂಗ[4]ಳುಣ್ಮುವೊಡೆ ಬಿಕ್ಕುವೊಡಂ ತನು ಸೇಡೆಗೆಟ್ಟು ಬೆಂ |
ಕೆಯನೊಳಗೊಳ್ವೊಡಂ ಜ್ವರಿತನೆಂದಱಿದಾಜ್ವರದೇೞ್ಗೆ[5]ಯೊಳ್ ಕವುಂ ||
ಡೆಯ ರಸಮಕ್ಕೆ [6]ಲೊಕ್ಕಿಯನರಿಷ್ಟಫಲಂಗಳನಕ್ಕೆ ಪಂದಿಗ |
ಡ್ಡೆಯ ಪುರುವಳ್ಳಿ[7]ಯೂಷಜಳಮಕ್ಕು ಪಯೋಗಿಸಿದಂದು ಮಱ್ಗುಗುಂ || ೧೮೫ ||

ಗಳ್ ಮಾಣ್ಬುವು—೧೮೨.

ಟೀ|| ಕಿಱುಕುಸಾಲಿ, ಸೈಂಧವಂ, ಬೆಲ್ಲವತ್ತದಕಾಯ್, ಲೊಕ್ಕಿ, ಆಲದ ಮುಗುಳ್, ಮರುಳುಮ್ಮತ್ತಂ, (ಪೊಟ್ಪೊಟ್ಟಿ) ತಾವರೆಯಗಂಡೆ, ಬಸಲೆಯಬಳ್ಳಿ, ಬಸಿರಿಯೆಲೆ, ಅವರೆ ಇವ ನುದಕದಲ್ಲರೆದು ಕುಡಿಸಲ್ ಆಕಳುಗಳ್ಗೆ ಹೊಟ್ಟೆಯುಬ್ಬರಿಸಿದುದು ಮಾಣ್ಗುಂ—೧೮೩.

ಟೀ|| ಬಳಲುತ್ತಿರುಹ, ಮೆಯ್ ಮುಱಿದಿಹ, ಸೀವರಿಸುತ್ತಿಹ, ಕಾಲಬಡಿದುಕೊಳ್ಳುತ್ತಿ ರುಹ, ಇವಱಿಂದೆ ಆಕಳುಗಳ್ಗೆ ಶೂಲೆ ತೋಱುತೆಂದಱಿವುದು. ಅದರ್ಕೆ ಶುಂಠಿ, ಬೆಳ್ಳುಳ್ಳಿ, ಗಜ ಹಿಪ್ಪಲಿ, ಮೆಣಸಿನಬಳ್ಳಿ, ಇಂಗು, ಅಂಗುರಂ, ಬೆಲ್ಲಂ, ಓವು, ಉಪ್ಪು, ಅರಿಸಿನಂ, ಬಜೆ ಯಿವಂ ಉದಕವಲ್ಲರೆದು ಕುಡಿಸಲ್ ಶೂಲೆ ಮಾಣ್ಬುದು—೧೮೪.

ಟೀ|| ಆಕಳುಗಳ್ಗೆ ಆವಾಗಳುಂ ಕಣ್ಣಲ್ಲಿ ನೀರ್ ಸುರಿಹ, ಬಿಕ್ಕುತ್ತಿರುಹ, ನರತೆಗೆಹ, ಉಷ್ಣಮಾಗಿರುಹ, ಈ ಗುಣಂಗಳಿಂದೆ ಜ್ವರಮೆಂದಱಿವುದು. ಅದರ್ಕೆ ಕವುಂಡೆಯಕಾಯಂ ತದ ಕುಟ್ಟಿ ರಸವಂ ಕೊಂಡು ಕುಡಿಸುವುದು. ಅಲ್ಲಾ ಹಂದಿಗೆಡ್ಡೆ, [8]ಹುರುವಳ್ಳಿಯುಂ ಕೂಡಿ ಬಿಸಿಯ ಕಟ್ಟಂ ಕೊಂಡು ಕವಡಿ ಕುಡಿಸುವುದು. ಇವಱಿಂದೆ ಜ್ವರಂಗಳ್ ಮಾಣ್ಬುವು—೧೮೫.

1 ಕರವಡವೋಣವಂ ಬಿಡುವಡಂ ಭರದಿಂ ತೆಣರುತ್ತು. 2 ಲಿಂಗಲುಂಗರುಡಗೊವಮುಪ್ಪ 3 ತಗು ಗುಂ. 4 ಳುಳ್ಳವದ(ನಡ)ಮುಕ್ಕು. 5 ಯಾಗೆ ಕಾಂ. 6 ಲೊಕ್ಕಿ ಪಿಚುಮಂದ. 7 ಯೂಷ 8 ಹುರು ವಳ್ಳಿಯುಂ ಬೀಸಿ ಪಿಟ್ಟಂ ವುದಕವಲ್ಲಿ ಕವಡಿ ಕುಡಿಸುವುದು.

* ಕಿಱುಕುಸಾಲೆ ಸಿಂಧೂರುಹಂ ಬಿಲ್ವಲೊಕ್ಕಿಯಾಲಪೊಟ್ಟಿಡೆ ಸರೋಜಂ |
ಬಸಲೆ ಬಸುರಿಯಾವರೆಯೆಂಬಿವು ಮಾಣಿಸುವುದು ಪಶುಗೆ ಬಸಿಱುಬ್ಬುವುದಂ ||
(ಎಂಬ ಅಶುದ್ಧ ಕಂದವು ಒಂದು ಪ್ರತಿಯಲ್ಲಿ ಇದೆ.)



ಕಂ|| ಪಸು ಜ್ವ(ಜ)ರಯಿ(ಗಿ)ಸಿದೊಡೆ ಹೊಲೆಯರ |
ಮಸಣದ ಬೂದಿಯನೆ ಪೂಸುಗಲ್ಲದೊಡುದ್ಧಾ ||
ಳಸು ತಡೆಯದೆ ಕೊಳೆನಾವಿನ |
ಭಸಿತಮನನಿತಱೊಳೆ ತಜ್ಜ್ವರಂ ಪ್ರಶಮಿಸುಗುಂ || ೧೮೬ ||

(ನರಡುರೋಗಕ್ಕೆ)

ಮ|| ಭರದಿಂ ಸುಯ್ವನೆ [1]ಸುಯ್ಯೆ ಸೂಗುಱಿಸೆ ಕಣ್ದೆಕ್ಕಾಳಿಗಳ್ ಬೀೞೆ ಮೆಯ್ |
ಮರವಟ್ಟಂತಿರೆ ನೋ(ಡಿ)ಡೆ [2]ಪೇೞ್ ನರಡಿದಾಯ್ತೆಂದಂದು ನಿಶ್ಚೈಸಿ ಸಿಂ ||
ಧುರುಹಂ ಸಾಸಿವೆ ಬೀೞಲಕ್ಕಿ ಮರಿಚಂ ಕ್ಷಾರದ್ವಯಂ ನಾಗರಂ |
[3]ಪುರಧೂಮಂಗಳು(ಳಿ)ಮೆಂ(ವೆ)ಬಿವಂ ಕುಡುಗೆ [4]ಸೈತಕ್ಕುಂ ಮನೋವೇಗದಿಂ || ೧೮೭ ||

ಕಂ|| ಉದರಂ ಬಿಗಿದೊಡೆ ಬಾಯ್ ಸು |
ಣ್ಣದ ಪಾರಂ ನಾಱೆ ಕರಿಯ[5]ಸೆರೆ ನಾಲಗೆಯೊಳ್ ||
ಪುದಿದೊಡವೆ ನರಡಿದೆಂದಱಿ |
ದದನೊಡೆ[6]ದೊರಸುವುದು ಪುಳಿಯೊಳಂ ಲವಣದೊಳಂ || ೧೮೮ ||

ಚಂ|| ಕಿವಿಗಳೆಳ(ಬ)ಲ್ದು ತೂಱುವೊಡೆ ಮೆಯ್ ಬಿಗಿವಪ್ಪೊಡೆ ದಿಟ್ಟೆ ನೆತ್ತಿಗೇ |
[7]ಱುವೊಡದಱಿಂದೆ ಕಣ್ ಗುಱಿದು ತೋಱಿದೊಡೆಚ್ಚುಗೆ ಪಟ್ಟಸೂ[ತ್ರಭ ||
ಸ್ಮ]ವನರೆ[8]ದೆಚ್ಚರಿಷ್ಟಫಳಮಂ ಕಿವಿಯೊಳ್ ಪಿೞಿಗಲ್ಲದಂದು ಮೇಣ್ |
ಕಿವಿಗಳನಾವಗಂ ಮಿಡಿವರಂ ಬರೆ[9]ಗಿಂಬನದರ್ಕೆ ಮಾಡುಗುಂ || ೧೮೯ ||

ಟೀ|| ಹೊಲೆಯರ ಸುಟ್ಟ ಹಾವಿನ ಬೂದಿಯುಂ ತಂದು ಮೆಯ್ಯಲ್ಲಿ ಪೂಸುವುದು. ಅಲ್ಲಾ ಕಂದಡಿಗನಹಾವಂ ಸುಟ್ಟು ಆ ಬೂದಿಯಂ ಪೂಸುವುದು. ಇವಱಿಂದೆ ಆಕಳಜ್ವರಂ ಮಾಣ್ಬುದು—೧೮೬.

ಟೀ|| ಆಕಳುಗಳ್ ಸುಯ್ಯುತ್ತಿರುಹ, ಸೀವರಿಸುಹ, ಕಣ್ಗಳ್ ದೆಕ್ಕಾಲಿಗಳ್ ಬೀೞುಹ ಮೆಯ್ ಮರವಟ್ಟಂತೆ ಬೀೞುಹ, ಇಂತಿವಱಿಂದೆ ನರಡಾಯ್ತೆಂದಱಿವುದು. ಅದರ್ಕೆ ಸೈಂಧವ ಲವಣಂ. ಸಾಸಿವೆ, ಬೀೞಲಕ್ಕಿ, ಮೆಣಸು, ಯವಕ್ಷಾರಂ, ಸರ್ಜಿಕ್ಷಾರಂ, ಶುಂಠಿ, ಇಲ್ಲಣಂ ಇವನಂಬಿಲದಲ್ಲರೆದು ಕುಡಿಸಲ್ ನರಡು ಬೇಗಂ ಮಾಣ್ಬುದು—೧೮೭.

ಟೀ|| ಹೊಟ್ಟೆಯುಬ್ಬರಿಸಿಹ, ಬಾಯ್ ಸುಣ್ಣದಂತೆ ನಾಱುಹ; ನಾಲಗೆಯೊಳ್ ಕರಿಯ ಸೆರೆ ಎದ್ದಿರುಹ, ಇವಱಿಂದೆ ನರಡಾಯ್ತೆಂದಱಿವುದು. ಆ ನಾಲಗೆ ಸೆರೆಯುಂ ಬಿಡಿಸಿ ಆ ಹಾವಿನಲ್ಲಿ ಪುಳಿಯನುಪ್ಪುವಂ ಒರಸಿದ್ದೊಡೆ ನರಡು ಮಾಣ್ಬುದು—೧೮೮.

ಟೀ|| ಆಕಳುಗಳ್ಗೆ ಕಿವಿಗಳ್ ಎಳಲುಹ, ಮೆಯ್ ಬಿಸಿದಿರುಹ, ಕಣ್ ಮೇಲಕ್ಕೆ ಸಿಕ್ಕಿ ಇರುಹ, ಕಣ್ ಗುೞಿಯುಹ ಹೀಗಾದೊಡೆ ಅದಕ್ಕೆ ಪಟ್ಟಾವಳಿಯ ನೂಲಂ ಸುಟ್ಟು ಆ ಬೂದಿ

1 ಸುಱಿ. 2 ಪೇೞ್ರಡಿದಾ. 3 ಪುರುಧೂಮಂ ಕಳಿಯೆಂಬಿ. 4 ಶೈತ್ಯಕ್ಕೊ. 5 ಸೆಲೆ. 6 ನೊಡೆದೊರಸಂದು. 7 ಱಸಲುದಱಿಂ ಕಣುದುಂಗುೞಿ. 8 ರೆದಿಪ್ಪಳಿಕ್ಷಫಳಮಂ, ನರೆದಿಪ್ಪಬಿಂಬಫಳ. 9 ನಿರಂಬನ, ನಿಕಂಬನ.

(ತಿರುಗುತ್ತಕ್ಕೆ)

ಕಂ|| ಎಡದತ್ತ ತಿರಿಗಿ ತೊಟ್ಟನೆ |
ಕೆಡೆವೊಡೆ ಬಲದೊಳ್ ಬಲಕ್ಕೆ ತಿರುಗುತೆ ಕೆಡೆದಂ ||
ಡೆಡದೊಳ್ ಮೂಗಿನ ಸೆರೆಯಂ |
ಬಿಡುವುದು ತಿರುಗುತ್ತದವಕಮಂ ಪಿಂಗಿಸುಗುಂ || ೧೯೦ ||

(ಮೆಲ್ಕು ಸಿಲ್ಕುತಿರ್ಪುದಕ್ಕೆ — ಕೋಗಿಲೆಗೆ)

* 1ತರದಿಂ ಕಟುಕತ್ರಯಮುಮಂ |
ನರಿದೆಚ್ಚುಗೆ ಮೆಲ್ಕು ಸಿಲ್ಕುತಿರ್ಪೊಡೆ ಪೆಱತೇಂ ||
ನೆರೆ ಪಟ್ಟಿಯ ತುಪ್ಪಮುಮಂ |
ತರದಿಕ್ಕುಗೆ ಪಱಿದು ಪೋಕುಮಾ ಕೋಗಿಲೆಯುಂ || ೧೯೧ ||

(ಕುಂ(ಮಂ)ದು ರೋಗಕ್ಕೆ)

ಮ|| ಸರಳಾಂಗಂ ಮಿಗೆ ಕುಂದಿ ತೋಱಿ ಕಿವಿಗಳ್ 2ತಣ್ಪೇಱಿ ಕಣ್ದುರ್ಕು ಸೋ |
ರೆ ಕರಂ ಮೆಯ್ 3ನವಿರುದ್ಧಮಾಗಿ ನಿಲೆ ಮಂ(ಕುಂ)ದಾಯ್ತೆಂದದರ್ಕ್ಕಾಕ್ಷಣಂ ||
ಶುಕಕುಂದಂ ಗಿರಿಕರ್ಣಿ ಕಾತರಿಕೆ 4ಯಿಂತೀ ಪೇೞ್ದುವಂ ತಂಡುಲೋ |
ದಕದಿಂದಂ ಕುಡೆ ತಂದು 5ಕಟ್ಟು ಸೊರೆಯಂ ಗೆಲ್ದುಂ ತದುದ್ರೇಕಮಂ || ೧೯೨ ||

ಯಂ ಕಣ್ಣಿಂಗೆಚ್ಚುವುದು. ಅಲ್ಲಾ ಬೇವಿನಕಾಯನರೆದು ರಸಮಂ ಕಿವಿಯಲ್ಲಿ ಪಿಂಡುವುದು. ಅಲ್ಲಾ ಕಿವಿ ಮೊದಲ್ಗೊಂಡು ಮಿಡಿಪರಿಯಂತಂ ಬರೆಯನಿಕ್ಕುವುದು. ಇವಱಿಂದೆ ಆ ರೋಗಂ ಮಾಣ್ಬುದು—೧೮೯.

ಟೀ|| ಎಡಕ್ಕೆ ತಿರುಗುತ್ತೆ ಬೀೞುತ್ತಿರ್ದೊಡೆ ಬಲದ ಕಡೆಯ ಮೂಗಿನಸೆರೆಯಂ ಬಿಡುವುದು. ಬಲಕ್ಕೆ ತಿರುಗುತ್ತೆ ಬೀೞುತಿರ್ದೊಡೆ ಅದರ್ಕೆ ಎಡದ ಕಡೆಯ ಮೂಗಿನ ಸೆರೆಯಂ ಬಿಡುವುದು. ಇಂತು ಸೆರೆವಿಡಲ್ ತಿರುಗುತ್ತಿರುಹ ಮಾಣ್ಬುದು—೧೯೦.

ಟೀ|| ತ್ರಿಕಟುಕಮಂ (ಶುಂಠಿ, ಮೆಣಸು, ಹಿಪ್ಪಲಿ ಇವಂ) ಉದಕದಲ್ಲರೆದು ಕಣ್ಗೆಚ್ಚಲ್ ಮೆಲ್ಕು ಸಿಲ್ಕಿರ್ದುದು ಮಾಣ್ಬುದು. ಪಟ್ಟಿಯ ಗೊಟ್ಟೆಯಂ ಅರೆದು ತುಪ್ಪದಲ್ಲಿ ಕಲಸಿ ಇಕ್ಕಲ್ ಕೋಗಿಲೆಯರೋಗಂ ಮಾಣ್ಬುದು—೧೯೧.

ಟೀ|| ಮೆಯ್ಯೆಲ್ಲಂ ಬಡವಾಗುಹ, ಕಣ್ಣುಗಳ್ ಥಣ್ಣನೆ(ನಾಗಿ)ಯಿರುಹ, ಕಣ್ಣಲ್ಲಿದ(ಹ)

1 ಸರದಿಂ. 2 ಗಂಪೇಱಿ ಕಣ್ಬ ಕಪ್ಪೇರಿ. 3 ನಿವಿರುದ್ಧಂ ಮಾಗಿಕ್ಕು ಕುಂಥಾಯಿತೆಂದಕ್ಕಾಲಕ್ಷಣಂ ಶುಕಕಂದಂ. 4 ಯಿಂಲಿಕಿ ತಿಪ್ಪೆಳವಂ. 5 ಗಟ್ಟ.

* ನಯನದೊಳೆಚ್ಚುಗೆ ಕಟುಕ ।
ತ್ರಯ ಗಿರಿಸಿಕ್ಕಿ ಕಾಡುತಿರೆ ಪೆಱತಂ ಪೆ ॥
ತ್ತಿಯೆಮಂ ತುಪ್ಪದಮಂ ಕುಡು ।
ಗುಂಯದ್ದಿಷ್ಟಂತಿದು ಕಪ್ಪೊವೊಳ್ಗೋಗಿಲೆಯಂ ॥
ಸರದಿಂ ತ್ರಯಮಂ ಅರೆದಿಕ್ಕುಗೆ ಮೆಲುಕು ।
ಸಿಕ್ಕುತಿರ್ಪತೇಂ ಪತ್ತಿಯುಮಂ ತುಪ್ಪಮಂ ॥
ಕುಡುಗುಂ ಅವುದ್ದಿಷ್ಟಂತಿದು । ತಪ್ಪೊ ಮೇಣ್ ಕೋಗಿಲೆಯಂ ॥
—(ಎಂಬ ಅಶುದ್ಧ ಕಂದಗಳು ಎರಡು ಪ್ರತಿಗಳಲ್ಲಿವೆ.)



(ಪಲ್ಕುರು—ಕೊಱಗಿನ ಕುರುಗಳ್ಗೆ)

ಚಂ|| ಅರಿಸಿನಮೆತ್ತುನಾಲಗೆಯ ಬೇರ್ ಕನಕಂ ಪೊಸಸುಣ್ಣಮೆಕ್ಕೆ ಗೋ |
1ಕ್ಷುರ ಮುರಗಾಕ್ಷಿಯೆಂಬಿನಿತುಮಂ ನವನೀ2ತದಿನಟ್ಟು ಕಟ್ಟೆ ಪ ||
ಲ್ಕುರುವಿರದಂಬುಗುಂತೆರಡು ತಾಳಗೆಯುಂ ಬಿಸಿ ಮಾಡಿ ತಕ್ರ ಸಿಂ |
ಧುರುಹಮನಾವಗಂ ಕೊಱಗಿನೊಳ್ ಕುರು(ಱು)ವಾದೊಡೆ ಪೊಯ್ಯೆ ಪಿಂಗುಗುಂ || ೧೯೩ ||

(ನಾಳಿವುಣ್ಗೆ)

ಚಂ|| ಕುರುಟಿಗೆ ಯಿಂಗುಳಂ ತವಸಿ ಯೆಕ್ಕೆಯ 3ಪಾ(ಲ್ಮೆಣಸ)ಲೆಸೆವಶ್ವಗಂಧಿನಾ |
ಗರಮುಮರೇಂದ್ರವಾರುಣಿಯೆನಿಪ್ಪಿವನೆಣ್ಣೆಯೊಳಟ್ಟು ಬಿ4ಟ್ಟೊಡಂ ||
ದೇ[illegible]ಕೊಳೆ ಚಿಂಚಪತ್ರರಸಮಂ ಘೃತಮಿಶ್ರಿತ5ಮಟ್ಟು ಪೊಯ್ದೊಡಂ |
ಪರಿಹರಿಸಲ್ಕೆ ಸಾಲ್ಗು6ಮಿದು ಬೆನ್ನೊಡೆದೆಟ್ಟಿನ ನಾಳಿವುಣ್ಗಳಂ || ೧೯೪ ||

(ಕೊಂಬಿನ ಪುೞುಗೆ)

ಕಂ|| ಕೊರಲೊಳ್ ಕಟ್ಟುಗೆ ಶುನಕನ |
ಶಿರಮಂ ಮೇಣ್ ಬ್ರಹ್ಮದಂಡೆಯಂ ತೆಳ್ಗಱಿಯಿಂ ||
7ದರೆದಿದಱಿಂ ಬೞಿಯಂ ತೊಡೆ |
ಗೆರಡುಂ ಶೃಂಗಮುಮ8ನುದುರ್ಗುಮಾಗಳೆ ಪುೞುಗಳ್ || ೧೯೫ ||

(ಹಿ)ಕ್ಕು ಕಟ್ಟೆ ಸುರಿಹ, ಮೆಯ್ ಬಿಗಿದುಕೊಳುಹ, ಈ ಗುಣಗಳಿಂದೆ ಮಂ(ಕುಂ)ದಿನ 9ರೋಗ[illegible]ವಾಯ್ತೆಂದು ಅಱಿವುದು. ಅದರ್ಕೆ ಗಿಣಿಮೂಗನಗೆಂಡೆ, ಗಿರಿಕರ್ಣಿಕೆಯ ಬೇರ್, ಕಾತಱಿಕೆಯ ಬೇರ್ ಇವಂ ತಂದು ಅಕ್ಕಿಗರ್ಚಿನಲ್ಲರೆದು ಕುಡಿಯಿಸುವುದು. ಅಲ್ಲಾ ಕಹಿಸೊರೆಯಂ ತಂದು ಕೊರಲೊಳ್ ಕಟ್ಟುವುದು. ಆಕುಂ(ಮಂ) ದಿನ ರೋಗಂ ಮಾಣ್ಬುದು—೧೯೨.

ಟೀ|| ಅರಿಸಿನಂ, ಎತ್ತುನಾಲಗೆಯಬೇರ್, ಮದ್ದುಗುಣಿಕೆಯಬೇರ್, ಪೊಸಸುಣ್ಣಂ, ಎಕ್ಕೆಯಬೇರ್, ರಾಸ್ನೆ ಯಿವಂ ತದಕುಟ್ಟಿ ಆಕಳಬೆಣ್ಣೆಯೊಳಗೆ ಹಾಯ್ಕಿ ಅಟ್ಟು ಆ ಕಲ್ಕಮಂ ಪಲ್ಕುರುವಾದ ಠಾವಂ ನೋಡಿ ಕಟ್ಟಲ್ ಆಕಳಿಗಾದ ಪಲ್ಲಕುರು ಮಾಣ್ಬುದು. ಕೊಱಗುಕುರು[illegible] ವಾದೊಡೆ ಕಿಱುಗೊಱಗಂ ಕುಯ್ದು ಶಾ(ತಾ)ಳಿಯಸೊಪ್ಪು, ಸೈಂಧವಮಂ ಕೂಡಿ ಅರೆದು ಮಜ್ಜಿಗೆಯಲ್ಲಿ ಕದಡಿ ಬಿಸಿಮಾಡಿ ಆ ಕೊಱಗುಗುರುವಿನ ಮೇಲೆ ಪೊಯ್ದು ಸೇಕಮಂ ಮಾಡಲ್ ಆ ಕೊಳಗು10ಗುರು ಮಾಣ್ಬುದು—೧೯೩.

ಟೀ|| ಕುರುಟಿಗೆಯಬೇರ್, ಇಂಗುಳದ ಬೇರ್, ತವಸಿಯೆಕ್ಕೆಯಪಾಲ್, ಮೆಣಸು, ಅಂಗುರಂ, ಶುಂಠಿ, ಹಾವುಮೆಕ್ಕೆ ಇವನೆಳ್ಳೆಣ್ಣೆಯೊಳಟ್ಟು ಅದಂ ಪುಣ್ಣೊಳಗೆ ಬಿಡುವುದು. ಅಲ್ಲಾ ಹುಣಿಸೆಯ ಸೊಪ್ಪಿನ ರಸಮಂ ತುಪ್ಪದಲ್ಲಿ(ವಕೂಡಿ) ಅಟ್ಟು ಅದಂ ಪುಣ್ಣೊಳಗೆ ಬಿಡುವುದು. ಎತ್ತುಗಳ ಬೆನ್ನೊಡೆದು ಅಡ್ಡನಾ(ಲಾ)ಳಿಪುಣ್ಗಳ್ ಮಾಣ್ಬವು—೧೯೪.

ಟೀ|| ಆಕಳುಗಳ್ಗೆ ಕೊಂಬು ಪುೞುತೊಡೆ ಕೊರಲಲ್ಲಿ ನಾಯ ಕಪಾಲಮಂ ತಂದು ಕಟ್ಟು

1 ಕ್ಷಿರ ಉರ. 2 ತಲು ನಟ್ಟ. 3 ಪಾಲ್ಮೆಸಿವಶ್ವಗಂಧಿನಾಗರಜಮರೇಂದ್ರ. 4 ಟ್ಟದಂ॥ ದಪ. 5 ಕೊಟ್ಟು. 6 ಮಿವನ್ನೆದಿದೊಪೆತ್ತಿನ, ಮಿದು ಬೆಣ್ಣದಪೆತ್ತಿನ. 7 ತಿದಿದಿರಂ. 8 ನುದುಗುಮಾ. 9 ರೋಗ[illegible] ಘುಟ್ಟಿತೆಂದು. 10 ರೋಗಂ.

(ಪೆಗಲಬಾವಿಂಗೆ)

ಚಂ|| ಮೊ(ಪೊ)ರಕೆಯ ಬೂದಿ[1]ಯುಂ ಗರುಗದಾರಸಮುಪ್ಪಿವನೊ(ಪ)ಟ್ಟುಗಲ್ಲ ಲ |
ಜ್ಜರಿಕೆ [2]ಸರೋಚನಂ ಮೊಳ(ಲ)ಗು ಬೋಲ[3]ರಂ ಶಿವೆ ಕೋಡಸಾಲೆ ಯು ||
ತ್ತರಣೆ ಪುರಂಗಳೆಂಬಿನಿತುಮಂ ತಿಲತೈಲದೊಳಟ್ಟು ಪೂಸುಗು |
[4]ಬ್ಬರಿಸುತುಮಿರ್ಪ ಕಬ್ಬಿಗಲ ತಳ್ಳಿದು ಮಾಣ್ಬುದಿದಾವ ವಿಸ್ಮಯಂ || ೧೯೬ ||

(ಬಡವಪ್ಪುದರ್ಕ್ಕೆ)

ಕಂ|| ಬಡವಪ್ಪೊಡೆ ಮೇಯದೆ ನೀ |
ರ್ಗುಡಿಯದೆ ಮೆಲ್ಕಿಱಯದಿರ್ಪೊಡೋರಂತಿರೆ ತೂಂ ||
ಕಡಿಪೊಡೆ ಪಶುಗಳ್ಗೆಲ್ಲಂ |
ಕೊಡುವುದು ಬೇವಿನ ಕಷಾಯಮಂ ಶುಂಠಿಯ(ಮ)ತಂ || ೧೯೭ ||

(ಸರ್ವರೋಗಕ್ಕೆ)

ತಿಲತೈಲಮಂಬಿಲಂ ತುಂ |
ಬೆ ಲೊಕ್ಕಿ ಸೊರೆ ಸುಣ್ಣ ಮೆಕ್ಕೆಯೆಲೆ ಸಾಸಿವೆ ತಂ ||
ಬುಲದೆಲೆಯಿವನಿಕ್ಕುಗೆ ಗೋ |
ಕುಲಕ್ಕೆ ರುಜೆ ತೀರ್ಗುಮೆಯ್ದೆ ತೊಂಭತ್ತಾಱುಂ || ೧೯೮ ||

—ಇಂತುಪಶು(ಗೋ)ವೈದ್ಯಂ—

ವುದು. ಅಲ್ಲಾ ಬ್ರಹ್ಮದಂಡೆಯನಂಬಿಲದಲ್ಲರೆದು ಅದನೆರಡುಂ ಕೊಂಬುಗಳ ತುದಿಯಿಂದೆ ಮೊದಲಪರ್ಯಂತಂ ತೊಡೆವುದು. ಇದಱಿಂದೆ ಕೊಂಬಿನಲ್ಲಾದ ಪುಱುಗಳ್ ಮಾಣ್ಬುವು—೧೯೫.

ಟೀ|| ಎತ್ತುಗಳ ಪೆಗಲುಬ್ಬಿದೊಡೆ ಮೊ(ಪೊ)ರಕೆಯ ಬೂದಿ, ಗರುಗದರಸಂ, ಉಪ್ಪು ಇವಂ ಕೂಡಿ ಪೆಗಲಲ್ಲಿ ಒಟ್ಟುವುದು. ಅಲ್ಲಾ ಲಜ್ಜರಿಕೆ, ಸುಲೋಚನಂ, ಎಲವದ ಮೊಳಗು, ಬೋಲಶೋತ್ತರಂ, ಅಣಿಲೆಯಕಾಯ್, ಕೊಡಸಾಲೆ, ಉತ್ತರಣೆ, ಪುರಂ? ಇವನೆಣ್ಣೆಯೊಳಟ್ಟು ಪೂಸುವುದು. ಇದಱಿಂದೆ ಪೆಗಲುಬ್ಬಿರ್ದುದು ಮಾಣ್ಬುದು—೧೯೬.

ಟೀ|| ಜೀವದನಂಗಳ್ ಬಡವಾದೊಡೆ ಮೇಯದಿರುಹ, ನೀರ್ಕುಡಿಯದಿರುಹ, ಮೆಲ್ಕಿಱಯದಿಹ, ತೂಂಕಡಿಸುತ್ತಿಹ ಅದಕ್ಕೆ ಬೇವಂ ಶುಂಠಿಯುಂ ತದಕುಟ್ಟಿ ಕಷಾಯಮುಂಮಾಡಿ ಕುಡಿಸುವುದು. ಇವಱಿಂದೆ ಆದ ರೋಗಂಗಳ್ಮಾಣ್ಬುವು—೧೯೭.

ಟೀ|| ತುಂಬೆಯಸೊಪ್ಪು, ಲೊಕ್ಕಿಯಸೊಪ್ಪು, ಸೊರೆಯಸೊಪ್ಪು, ಸುಣ್ಣಂ? ಎಕ್ಕೆಯೆಲೆ, ಸಾಸಿವೆ, ತಂಬುಲದೆಲೆ ಇವೆಲ್ಲಮಂಕೂಡಿ ಅರೆದು ಅಂಬಿಲದಲ್ಲಿಕದಡಿ ಎಣ್ಣೆಯುಂಕೂಡಿ ಕುಡಿಸುವುದು ಜೀವದನಂಗಳ್ಗಾದ ತೊಂಬತ್ತಾಱುಬಗೆಯ ರೋಗಂಗಳುಂ ಮಾಣ್ಬುವು—೧೯೮.

1 ಯಂ ಭ್ರುಂಗರ್ಸಮುಪ್ಪಿನಟ್ಟು, ಗದಲ್ಲವಂದುಟ. 2 ಸುಲೋಚನಂ ಪೊಳಗು. 3 ತರಂಗುರು ಶಿ.
4 ಬ್ಬರಿಸಕಮಿರ್ಪಕಬ್ಬಿಗಲತಳ್ಳಿದುಮಾಱ್ಬುದಿದಾವ ನಿಶ್ಚಯಂ.



(*) ಇನ್ನು ಅಶ್ವವೈದ್ಯಂ

ಕಂ|| ಉದರಾಗ್ನಿವಿಷಮಮದು ವಾ |
ತದೋಲ್[1]ಗ್ನಿಯುಂ ಪಿತ್ತದೊದವಿನಿಂ ತೀಕ್ಷ್ಣಂ ಶ್ಲೇ ||
ಷ್ಮದ ಪೆರ್ಚಿಂ[1]ದಾದಂತಾ |
ತ್ರಿದೋಷಸಾಮ್ಯದೆ ಸಮಂ ಹಯಾವಳಿಗಕ್ಕುಂ || ೧೯೯

(ದೀಪನಕ್ಕೆ)

ಉ|| ಇಂಗುಳಮಾಡಸೋಗೆ ಕಟುಕಂ ಸುರವಾರುಣಿ ಲೊಕ್ಕಿ ಬ್ರಾಹ್ಮಿ ಬೇ |
ವಿಂಗು ವಿಳಂಗ[2]ವೆಕ್ಕೆ ಗಿರಿಕರ್ಣಿಕೆಯಂಗುರು ಚಿತ್ರಕಂ ಪಟೋ ||
ಲಂಗಳನೊಪ್ಪೆತಕ್ರಲವಣಂಗಳುಮಂ ತುಱಿದೊಂದುಮಾಡಿ ಸು |
ಸ್ತಂಗಱದಿಕ್ಕೆ ಪೊರ್ದವುವಣಂ ರುಜೆಗಳ್ ಜಠರಾಗ್ನಿ ಪೆರ್ಚುಗುಂ || ೨೦೦ ||

ಕಂ|| ಸವಳದೆ ಕುಡಿಯಿಸುವುದು ಪಾ |
ನವರ್ಗಮಂ ಖಾದ್ಯಮುಪ್ಪುಮಂ ಪಗಲೊಳ್ ಕ ||
ಟ್ಟುವುದಂ ರಾತ್ರಿಯೊಳಗಮೂ |
ಡುವುದಿಕ್ಕುವುದೆಲ್ಲಮಂ ತುರಂಗಮಕೆಂದುಂ || ೨೦೧ ||

(ಪಿತ್ತಕಫವಾತಂಗಳ್ಗೆ)

ಚಂ|| ಅರಗು ರಸಾಂಜನಂ ರಜನಿ ಪಿಪ್ಪಲಿ ಸೈಂಧವ ರಾಷ್ಮೆ ಯಷ್ಟಿ ನಾ |
ಗರಮಿವನಿಂಬಿನಿಂದೆಱಿಗೆ ನಸ್ಯಮನಶ್ವಕುಲಕ್ಕೆ ತಾನೆ ಸಂ ||
ಹರಿಸುಗುಮಾಡಪಾಲೊಳದು ಪಿತ್ತವಿಕಾರದೊಳಾದ ದೋಷಮಂ |
ಸುರಭಿಯ ಮೂತ್ರದಿಂದೆ ಕಫಮಂ ಬಿಸುನೀರೊಳಶೇಷವಾತಮಂ || ೨೦೨

ಟೀ|| ಕುದಿರೆಗಳ್ಗೆ ವಾತಂ ವೆಗ್ಗಳಮಾದೊಡೆ ಜಠರಾಗ್ನಿ ಪೆರ್ಚ್ಚುವುದು ಕುಂದುವುದು. ಪಿತ್ತಂ ವೆಗ್ಗಳಮಾದುದಱಿಂದೆ ಅಗ್ನಿ ಪೆರ್ಚುವುದು. ಶ್ಲೇಷ್ಮಂ ಪೆರ್ಚ್ಚುವುದಱಿಂದೆ ದೀಪನಂ ಕಿಡುವುದು. ಈ ತ್ರಿದೋಷಂಗಳ್ ಸಮಮಾಗಿರಲ್ ಕುದಿರೆಗಳ್ಗೆ ಲೇಸು—೧೯೯.

ಟೀ|| ಇಂಗುಳಂ, ಆಡಸೋಗೆ, ಕಟುಕರೋಹಿಣಿ, ಹಾವುಮೆಕ್ಕೆ, ಲೊಕ್ಕಿ ಬ್ರಾಹ್ಮಿ, ಬೇವು, ಇಂಗು, ವಿಳಂಗಂ, ಎಕ್ಕೆಯೆಲೆ, ಗಿರಿಕರ್ಣಿಕೆ, ಅಂಗುರು, ಚಿತ್ರಮೂಲಂ, ಕಹಿಪಡವಲಂ ಇವು ಮಜ್ಜಿಗೆಯುಲ್ಲಿ ಒಂದಾಗಿ ತುಱಿದು ಕವಳಮಾಗಿಯಿಕ್ಕಲ್ ಕುದಿರೆಗಳ್ಗೆ ಸರ್ವರೋಗಂಗಳುಂ ಕಿಡುಗುಂ, ದೀಪನಪ್ಪುದು—೨೦೦.

ಟೀ|| ಕುದಿರೆಗಳ್ಗೆ ಪಿತ್ತಂ ಪೆರ್ಚಿ ಉಷ್ಣಮಾದೊಡೆ ಉದಯಕಾಲದಲ್ಲಿ ಪಾನಮುಂ ಕುಡಿಸುವುದು, ಲವಣಂ ಮೊದಲಾದೌಷಧಕವಳಂಗಳಂ ಮಧ್ಯಾಹ್ನದಲ್ಲಿಕ್ಕುವುದು. ಸಾಯಂಕಾಲದಲ್ಲಿ ಕಟ್ಟುವುದಂತಪ್ಪುದಂ ಕಟ್ಟುವುದು—೨೦೧.

ಟೀ|| [3]ಅರಗು, ರಸಾಂಜನಂ, ಅರಿಸಿನಂ, ಪಿಪ್ಪಲಿ, ಸೈಂಧವಂ, ರಾಷ್ಮೆ, ಯಷ್ಟಿಮಧುಕಂ.

1 ಮಂದಂತಾಂ. 2 ವೆಕ್ಕಿ. 3 ಅಂಗುರ.

* ಈ ಮೂರು ಪದ್ಯಗಳೂ ಒಂದು ಪ್ರತಿಯಲ್ಲಿಲ್ಲ. ಅಶ್ವವೈದ್ಯಮಂ ಪೇಱ್ವೆಂ ಎಂದು ಈ ಪದ್ಯದಿಂದ ಆರಂಭವಿದೆ. ಪದ್ಯಸಂಖ್ಯೆಮಾತ್ರ ೪ ಎಂದಿದೆ.

(ಸಂಬರೋಗಕ್ಕೆ)

ಕಂ॥ ಅನವರತವಚ್ಛಜಳಮಂ ।
ಸಿನವರ್ಣಂ ಮೊಸರವರ್ಣಮಾಗೊಸರ್ವೊಡೆ ಮೂ ॥
ಗಿನೋಳನಿಲಪಿತ್ತ ಕಫಕಂ ।
ಜನಿತಂ ತುರಗಕ್ಕೆ ಸಂಬಮೆಂಬುದದಕ್ಕುಂ ॥ ೨೦೩ ॥

ಸುರದಾರು ಸೈಂಧವಂ ಜಳ ।
ಧರಂ [1]ಬಿಡಂ ಬೀಟಲಕ್ಕೆ ಸದ್ಯಃಕ್ಷಾರಂ ॥
ಸುರ[2]ಭಿಜಳಮೆಣ್ಣೆ ಯೆಂಬಿವ ।
ನಿರದಟ್ಟೆಱೆ ನಸ್ಯಮಂ ಕಟಲ್ಗುಂ ಸಂಬಂ ॥ ೨೦೪ ॥

(ಕಫಕ್ಕೆ)

ಮ॥ ಸಿರಿಸಂ ಗೋದಿ(ಣಿ) ಪಟೋಳಮಾಡುಳಿಚಮಾಸಪ್ತಚ್ಛದಂ ಬೇವು ಧಿ ।
ನ್ನರುಹಂ ಪುಲ್ಗಿಲೆನಿಪ್ಪಿವಂ ತೆಗಪಿ ತದ್ದ್ರವ್ಯಂಗಳಂ ಕೊಂಡು ನೆ ॥
ಯ್ವಿರಸಟ್ಟಿಕ್ಕುಗೆ ಮೇಣ್ ತದಾಸ್ಯಮನೆ ಬಿಲ್ವಂ ತಗ್ಗಿ ಸೀವನ್ನಿ ಪಾ ।
ದರಿಯಾವುಂಡಗೆ ಯೆಂಬಿವಂ ತೆಗಪಿ [3]ಸೇಕಂಗೆಯ್ಯೆ ಮಾಣ್ಗುಂ ಕಫಂ ॥ ೨೦೫ ॥

---

ಶುಂಠಿ ಇವಂ ತುಟಿದು ಆಡಿನಪಾಲಲ್ಲಿ ಕಲಸಿ ನಸ್ಯಂಮಾಡಲ್ ಪಿತ್ತಂ ವೆಗ್ಗಳಮಾದೊಡದಱಿಂದಾದದೋಷಂ ಮಾಣ್ಬುದು. ಆ ತುಟಿದುದನೆ ಗೋಮೂತ್ರದಲ್ಲಿ ಕಲಸಿ ನಸ್ಯಂಮಾಡಲ್ ಶ್ಲೇಷ್ಮಂ ವೆಗ್ಗಳಮಾದುದಱಿಂದಾದ ದೋಷಂ ಕಿಡುವುದು. ಆ ಔಷಧಮಂ ಬಿಸುನೀರಲ್ಲಿಕೂಡಿ ನಸ್ಯಮಂ ಮಾಡಲ್ ವಾತಂಗಳಿಂದಾದ ದೋಷಂ ಕಿಡುವುದು—೨೦೨.

ಟೀ॥ ಕುದಿರೆಗಳ್ಗೆ ಆವಾಗಳುಂ ಮೂಗಿನಿಂದೆ ಉದಕದಂತೆ, ಅರಿಸಿನದಂತೆ, ಬೆಳ್ಳನೆಯ ಶ್ಲೇಷ್ಮದಂತೆ ಸುರಿಯುತ್ತಿರ್ದೊಡೆ [4]ಸಂಬಮೆಂದಱಿವುದು. ಅದರ್ಕೆ—೨೦೩.

ಟೀ॥ ದೇವದಾರು, ಸೈಂಧವಂ, ಭದ್ರಮುಸ್ತೆ, ಬಿಡುಲವಣಂ, ವಾಯುವಿಳಂಗಂ, ಸದ್ಯಃಕ್ಷಾರಂ, ಇವಂ ತುಟಿದು ಎಳ್ಳೆಣ್ಣೆ, ಗೋಮೂತ್ರದಲ್ಲಿ [5]ಕದಡಿ ನಸ್ಯವಂ ಮಾಡಲ್ ಸಂಬಮೆಂಬ ರೋಗಂ ಮಾಣ್ಬುದು—೨೦೪.

ಟೀ॥ ಬಾಗೆ, ಗೋದಿ, ಪಡುವಲ್, ಆಡುಸೋಗೆ, [6]ಏಟಿಲೆವಾಟಿ, ಬೇವು, ಬೆಲ್ಲವತ್ತಂ ತಗ್ಗಿ, ಸೀವನ್ನಿ, ಪಾದರಿ, ಅವುಡಲಕಂ ಇವಱ ಸೊಪ್ಪುಗಳಂ ತಂದು ತುಟಿದು ಚೂರ್ಣಂ ಮಾಡಿ ಪೊಟ್ಟಣ(ಳ)ಮಂ ಕಟ್ಟಿ ಬಿಸಿ ಮಾಡಿ ಕುದಿರೆಗಳ ಮುಖಕ್ಕೆ ಸೇಕಂ ಗೆಯ್ಯಲ್ ಶ್ಲೇಷ್ಮರೋಗಂ ಕಿಡುವುದು—೨೦೫.

---

1 ಬಿಕಂಬಿಳಲಕ್ಕಿ. 2 ಧಿಯ ಗಂಜಳ. 3 ಸೇಖಂ. 4 ಸಂಬರೋಗಮೆಂಬರ್. 5 ಕಲಸಿ. 6 ಎಳಿಲಂ ಪಾಲೆ.



(ಖಾಸಕ್ಕೆ)

ಪೃಥ್ವಿ॥ ಹಯಕ್ಕೆ ಪಶುಮೂತ್ರದಿಂದೆ ಬೃಹತೀದ್ವಯಂ ಬೇವು ಲೊ ।
ಕ್ಕಿ ಯಾಡುಳಿಚಮೆಂಬಿವಂ ಮಱುಗಿಸಿಟ್ಟು ತತ್ಸಾರವಾ ॥
ರಿಯೊಳ್ ಬೆರಸಿಕೊಂಡು ಶುಂಠಿ ಕಿಱುದೇಗುಮೆಂಬಿಂತಿವಂ ।
ಪ್ರಯೋಗಿಸುಗೆ [1]ಭಾವಿಪಂದದುವೆ ಖಾಸಸಂ(ನಾ)ತ್ರಾಸಕಂ ॥ ೨೦೬ ॥

ಚಂ॥ ಪಡುವೊಡಮೇಟ್ವೊಡಂ ತಲೆಯನಿಕ್ಕುವೊಡಂ ಬಿಸುಸುಯ್ವೊಡಂ ಬೆಮ ।
ರ್ವೊಡಮುದರಂ ವಿಜೃಂಭಿಸುವೊಡಂ ಕರಮಾಮದೊಳೊಂದಿ ಲದ್ದಿ ಪ್ಪೋ ॥
ಪೊಡಮದು ಶೂಲೆಯೆಂದಱಿದು ವಾಜಿಗೆ ಪಿಪ್ಪಲಿ ಶುಂಠಿ ಸೈಂಧವಂ ।
ಗಿಡಿಪುದು ಮೂಗಿನೊಳ್ ನಯನದೊಳ್ ಗುದದೊಳ್ ಮಿಗೆ ಮೇಢ್ರದೇಶ
ದೊಳ್ ॥ ೨೦೭ ॥

(ಶೂಲೆಗೆ)

ಕಂ॥ ಲವಣಂ ಪಿಪ್ಪಲಿ ಬಜೆ ಸಾ ।
ಸಿವೆ ಬವ(ಬೋ)ನಂಗಾರೆ ಶುಂಠಿ ಪುಳ್ಳಿಕೆ ಕಟು(ತಿಲ)ತೈ ॥
ಲವೆನಿಪ್ಪಿವಱಿಂದಂ [2]ನ ।
ಸ್ಯವನಶ್ವಾವಳಿಗೆ ಮಾಡಿ ತವನಂತರದೊಳ್ ॥ ೨೦೮ ॥

ತರಳಂ॥ ಲವಣ ಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರು ಧಾನ್ಯಕಂ ।
ಶಿವೆ ದುರಾಲಭೆ ಪಾಠೆ ಚಿತ್ರಕಮೋವಮೆಂಬಿವನೆಲ್ಲಮಂ ॥
ಸವನೆ ಕೊಂಡು ಸುರಾನ್ವಿತಂ [3]ಕುಡೆ ವಾಜಿರಾಜಿಗೆ ಕುಕ್ಷಿರೋ ॥
ಗವುಮನಾಗಳೆ ಮಾಣಿಸಲ್ಕಿದು ಸಾಲ್ಗುಮಿಂ ಪೆಱತಾವುದೋ ॥ ೨೦೯ ॥

---

ಟೀ॥ ಕುದಿರೆಗಳ ಖಾಸರೋಗಕ್ಕೆ ಗುಳ್ಳದ ಬೇರ್, ನೆಲಗುಳ್ಳದ ಬೇರ್, ಬೇವು, ಲೊಕ್ಕಿ, ಆಡಸೋಗೆ ಇವಂ ತುಱಿದು ಚೂರ್ಣಂ ಮಾಡಿ ಗೋಮೂತ್ರದಲ್ಲಿ ಕದಡಿ ಅಟ್ಟು ಅವುದಕಮಂ ಕೊಂಡು ಅವಱೊಳಗೆ ಶುಂಠಿ, ಕಿಱುದೇಗು, ಇವೆರಡುಮಂ ಚೂರ್ಣಂ ಮಾಡಿ ಕುಡಿಸಲ್ ಕುದಿರೆಗಳ ಖಾಸರೋಗಂ ಮಾಣ್ಬ(ಕಿಡುವು)ದು—೨೦೬.

ಟೀ॥ ಕುದಿರೆಗಳ್ ಬೀೞ್ವೊಡೆ ಮುಖಮನೂಱಿಕೊಂಡಿರ್ದೊಡೆ ಮಿಗಿಲಾಗಿ ಉಸಿರಂ ಬಿಡುತ್ತಿರ್ದೊಡೆ, ಬೆಮರುತ್ತಿರ್ದೊಡೆ, ಹೊಟ್ಟೆಯುಬ್ಬರಿಸಿರ್ದೊಡೆ, ಲದ್ದಿಯ ಸಂಗಡ ಆಮದಂತೆ ಪೋಗುತ್ತಿರ್ದೊಡೆ ಈ ಗುಣಂ[4]ಗಳಿಂದೆ ಕುದಿರೆಗಳ್ಗೆ ಶೂಲೆಯಾಯ್ತೆಂದಱಿದು ಪಿಪ್ಪಲಿ, ಶುಂಠಿ, ಸೈಂಧವಂ, ಇವಂ ಚೂರ್ಣಂ ಮಾಡಿ ಮೂಗಿನಲ್ಲಿ ಗಿಡಿವುದು, ಕಣ್ಣಿನಲ್ಲಿ ಚ್ಚುವುದು, ಅಸನದಲ್ಲಿ ಗಿಡಿವುದು, ವೃಷಣವನಾಳಂಗಳಲ್ಲಿ ತುಂಬುವುದು—೨೦೭.

ಟೀ॥ ಉಪ್ಪು, ಹಿಪ್ಪಲಿ, ಬಜೆ, ಸಾಸಿವೆ, ಬೋನಗಾರೆಯಕಾಯ್, ಶುಂಠಿ ಇವಂ ಚೂರ್ಣಮಂ ಮಾಡಿ ಆಕಳಮಜ್ಜಿಗೆ, ಅಂಬಿಲಂ, ಎಳ್ಳೆಣ್ಣೆ ಇವಂ ಕೂಡಿ ಕಲಸಿ ನಸ್ಯಂ ಮಾಡುವುದು—೨೦೮.

ಟೀ॥ ಸೈಂಧವಂ, ಬಿಡಲವಣಂ, ಕಾಚಲವಣಂ, ಸಂವರ್ಚಲವಣಂ, ಉಪ್ಪು, ಇಂಗು,

---

1 ಭಾವಿಸುವೊಡಂದು. 2 ನಿರುಹವ. 3 ಕುಡುಗಂದುವಾಜಿಯರೋಗಕಂ। ಕವಳದಿಂದುಣಿಸಲ್ಕಮುಂ. 4 ಗಳಾದೊಡೆ.

(ಹೊಟ್ಟೆಯುಬ್ಬರಕ್ಕೆ) (ಶೂಲೆಗೆ)

ಕಂ|| ಬಸಿಱೊಳವಿ ತೊಟ್ಟನಾಧ್ಮಾ |
ನಿಸಿ ವಾಜಿಗೆ ಶೂಲೆ ತೋಱೆ ಪೆಱತೇಂ ತಿಳಿತ್ತೈ ||
ಲಸಮನ್ವಿತದಿಂ ಬೊಮ್ಮಿಯ |
ರಸಮಂ ಕೊಟ್ಟಂತದಂದುಮುಪಶಮಮಕ್ಕುಂ *|| ೨೧೦ ||

(ಕ್ರಿಮಿಗೆ)

ಅವರಿಯ ಮೂಳಮುಮಂ ತು |
ಪ್ಪವುಮಂ ಮೇಣ್ ಹಾರಿವಾಳ(ಣ)ದೆಲೆಯಂ ತಿಳಿತ್ತೈ ||
ಳವುಮಂ ಮೇಣಿಡುವಾ |
ಜ್ಯವುಮನೆಱೆಯೆ........ಪೋಕುಂ ಕ್ರಿಮಿಗಳ್ || ೨೧೧ ||

(ಅತಿಸಾರಕ್ಕೆ)

ಅತಿಬಜೆಯಂ ಶುಂಠಿಯುಮಂ |
ಪ್ರತಿಪಾಕಂಗೊಂಡು [1]ಕುಡುಗೆ ಮೂಱುದಿನಂ ಕ್ಷೀ ||
ರತರು[2]ತ್ವಕ್ಕ್ ಸಿರಿ ತೋಯಮ |
ನತಿಸಾರ[3]ವ್ಯಾಧಿ ಹಯಕುಳಕ್ಕುಪಶಮಿಕುಂ || ೨೧೨ ||

---

ಹಿಪ್ಪಲಿ, ಶುಂಠಿ, ತುಂಬುರುಕಾಯ್, ಕೊತ್ತುಂಬರಿ, ಅಣಿಲೆಯಕಾಯ್, ಬಳ್ಳಿದುಱುಜೆ, ಅತಿಬಜೆ, ಚಿತ್ರಮೂಲಂ, ಓಮಂ ಇವೆಲ್ಲಮಂ ಸಮನಾಗಿ ಕೊಂಡು ಕುಟ್ಟಿ ಚೂರ್ಣಂ ಮಾಡಿ ಮದ್ಯದಲ್ಲಿ ಕಲಸಿ ಕವಳಮನಿಕ್ಕುವುದು. ಇದಱಿಂದೆ ಶೂಲೆ ಮಾಣ್ಬುದು—೨೦೯.

ಟೀ|| ಕುದಿರೆಗಳ್ಗೆ [4]ಆಧ್ಮಾನಂ ಪುಟ್ಟಿ ಹೊಟ್ಟೆಯುಬ್ಬರಿಸಿ ಶೂಲೆ ತೋಱಲ್ ಅದರ್ಕೆ ಬ್ರಾಹ್ಮಿಯ ಸೊಪ್ಪಂ ತಂದು ರಸಮಂ ಕೊಂಡು ಆ ರಸದೊಳಗೆ ಎಣ್ಣೆಯಂ ಕುಡಿಸಲ್ ಆ ಶೂಲೆ ಮಾಣ್ಬುದು—೨೧೦.

ಟೀ|| ಅವರಿಯಬೇರಂ ಅರೆದು ತುಪ್ಪದಲ್ಲಿ ಕಲಸಿ ಕವಳಮನಿಕ್ಕುವುದು. ಹಾರಿವಾಣದೆಲೆಯಂ ಅರೆದು ಎಳ್ಳೆಣ್ಣೆಯಲ್ಲಿ ಕಲಸಿ ಕವಳಮನಿಕ್ಕುವುದು. ತುಪ್ಪದಲ್ಲಿ ಕೂಡಿ ಕುಡಿಸುವುದು. ಇವಱಿಂದೆ ಕ್ರಿಮಿ ಕಿಡುಗುಂ—೨೧೧.

ಟೀ|| ಅತಿಬಜೆ, ಶುಂಠಿ, ಇವೆರಡಂ ಕೂಡಿ ಚೂರ್ಣಂ ಮಾಡಿ ಕೊಡಸಿ(ಸು)ಗನತಿಗುಡನರೆದು ಮೊಸರನೀರಲ್ಲಿ ಕಲಸಿ ಆ ಚೂರ್ಣಮಂ ಕೂಡಿ ಕಲಸಿ ಕವಳಮನಿಕ್ಕುವುದು. ಕುದಿರೆಗಳ್ಗೆ ಅತಿಸಾರರೋಗಂ ಮಾಣ್ಬುದು—೨೧೨.

---

1 ಕುದುರೆಗೆ. 2 ತ್ವಕ್ಕಧಿತೋಯ (ಎಂದಿರಬಹುದು). 3 ಮಾದಿ. 4 ಗರ್ಭವಾಗಿ ಈ ಶೂಲೆ ತೋಱಲ್ ಎಳ್ಳೆಣ್ಣೆಯಂ, ಬ್ರಾಹ್ಮಿಯ ಸೊಪ್ಪಂ ತಂದು ರಸಮಂ ಕೂಡಿಕೊಂಡು ಕುಡಿಸಲ್ಕಾ ರೋಗಂ.

* ಮೈಸೂರು ಓರಿಯಂಟಲ್ ಲೈಬ್ರರಿ ಪುಸ್ತಕದಲ್ಲಿ ಈ ೧೫ ಪದ್ಯಗಳಿಲ್ಲ ಎಂದು ಗುರ್ತಿಸಿದೆ.



(ಮೂತ್ರಕೃಚ್ಛ್ರಕ್ಕೆ - ರಕ್ತಮೂತ್ರಕ್ಕೆ)

ಕಂ|| ಬದರೀಫಳಮಂ ಮೇಣ್ [1]ಬಿ |
ಲ್ವದರಸಮಂ [2]ಕುಡುಗೆ ಮೂತ್ರಕೃಚ್ಛ್ರಹರಂ ಮು ||
ಗ್ದದೊಳಂ ಸಿ(ಶೀ)ತದೊಳಮಾಡುಳಿ |
ಚದ ರಸಮಂ ಕುಡುಗೆ ರಕ್ತಮೂತ್ರಂ ಕಿಡುಗುಂ || ೨೧೩ ||

(ಜ್ವರಲಕ್ಷಣಂ)

ಒಡೆದಿರೆ ರೋಮಂ ಮೆಯ್ ಮರ |
ವಡೆ ಬಾಯೊಳ್ ಕೊಳೆ ನಾಱೆ ಮೇಹುಗೊಳ್ಳದೆ ನಿಲೆ ನೀ ||
ರಡಕೆ ಪಿರಿದಾಗೆ ಬ್ಳೊಂಪಿಸೆ |
ನಿಡುಸುಯ್ಯೆ ಹಯಂ ಕರಂ ಜ್ವರಾರ್ತನೆನಿಕ್ಕುಂ || ೨೧೪

(ಜ್ವರಕ್ಕೆ)

ಮ|| ಜಳದಂ ಪಿಪ್ಪಲಿ ದೇವದಾರು ರುಜೆ ನಿಂಬಂ ಚಿತ್ರಕಂ ಪಾಲೆ ನೇ |
ಱಲವುಂಗುನ್ನೆಲಬೇವು ದಂತಿ ಕಟುಕಂ [3]ಛಿನ್ನೇಜಮೆಂಬಿಂತಿವಂ ||
ಜಳದೊಳ್ ಮೂವಡಿಗೂಡಿ[4] ಕಾಸಿ ಮಧುಮಿಶ್ರಂ ಪ್ರೊಯ್ಗೆ ಮೇಣ್ ಬೇವು ಪಿ |
ಪ್ಪಲಿ ಜೇನೆಯ್ ಕಟು[5]ರೋಹಿಣಿಯುಮಂ ಕುಡಲೊಡಂ ಸರ್ವಜ್ವರಂ ಸಿಂಗುಗುಂ || ೨೧೫

---

ಟೀ|| ಎ(ಱ)ರನಕಾಯಂ ತುಱಿದು ರಸಮಂ ಕೊಂಡು ಕುಡಿಸುವುದು. ಅಲ್ಲಾ ಬಿಲ್ಲಪತ್ರದ ಬೇರಂ ಕುಟ್ಟಿದು ರಸಮಂ ಕೊಂಡು ಕುಡಿಸುವುದು. ಇವಱಿಂದೆ ಕುದುರೆಗಳ್ಗೆ ಮೂತ್ರಕೃಚ್ಛ್ರಂ ಕಿಡುಗುಂ. ಆಕಳ ಪಾಲೊಳಗೆ ಸಕ್ಕರೆಯಂ ಕದಡಿ ಆಡಸೋಗೆಯ ಸೊಪ್ಪಿನ ರಸಮಂ ತೆಗೆದು ಕೊಂಡು ಕೂಡಿ ಕುಡಿಸುವುದು. ಇದಱಿಂದೆ ಕುದಿರೆಗಳ್ಗೆ ರಕ್ತವರ್ಣವಾಗಿ ಪೋಪ ಮೂತ್ರರೋಗಂ ಮಾಣ್ಬುದು—೨೧೩.

ಟೀ|| ಕುದಿರೆಗಳ್ಗೆ ರೋಮಂ ಎದ್ದಿರುಹ, ಮೆಯ್ ಮರವಟ್ಟೆ(ರು)ಹ, ಬಾಯ್ ಕೊಳೆ ನಾಱುಹ, ಮೇವುಗೊಳ್ಳದೆ ಇರುಹ, ನೀರಡಕೆ ಘನವಾಗಿರುಹ, ತೂಂಕಡಿಸುತ್ತಿರುಹ, ಶ್ವಾಸಂ ಬಿಡುತಿರುಹ, ಈ ಗುಣಂಗಳಿಂದೆ ಕುದಿರೆಗಳ್ಗೆ ಜ್ವರಂ ತೋಱಿತೆಂದಱಿವುದು—೨೧೪. ಅದರ್ಕೆ

ಟೀ|| ಭದ್ರಮುಸ್ತೆ, ಪಿಪ್ಪಲಿ, ದೇವದಾರು, ರುದಂತಿ, ಬೇವು, ಚಿತ್ರಮೂಲಂ, ಹಾಲೆಯ ತಿಗುಡು, ನೇಱಲತಿಗುಡು, ಅಶ್ವಗಂಧಿ, ನೆಲಬೇವು, ದಂತಿ, ಕಟುಕರೋಹಿಣಿ, ಅಮೃದುವಳ್ಳಿ ಇವೆಲ್ಲಮಂ ತದಕುಟ್ಟಿ ಮಡಕೆಯೊಳಿಟ್ಟು ಉದಕದಲ್ಲಿ ಕಷಾಯಮಂ ಮೂಱು[6]ಮಡಿನೀರೊಂದುಮಡಿಯಪ್ಪಂತು ಕಾಸಿ ಆ ಕಷಾಯದ ನೀರಂ ಕೊಂಡು ಜೇನತುಪ್ಪ[7]ಮಂ ಬೆರಸಿ ಕುಡಿಸುವುದು. ಅಲ್ಲಾ ಬೇವು, ಹಿಪ್ಪಲಿ, ಕಟುಕರೋಹಿಣಿ ಈ ಮೂಱುಮನೊಂದಾಗಿ ಅರೆದು ಉದಕದಲ್ಲಿ ಕದಡಿ ಜೇನತುಪ್ಪಮಂ ಕೂಡಿ ಕುಡಿಯಿಸುವುದು. ಇದಱಿಂದೆ ಕುದಿರೆಗಳ್ಗೆ ಎಲ್ಲಾ ಜ್ವರಂ ಮಾಣ್ಬುದು—೨೧೫.

---

1 ಬಿಲ್ಲದ. 2 ಕುದುರೆಗೆ 3 ಛಿನ್ನರುಹ 4 ಸಂದಿ 5 ಕುಂಬುವಂ, ಕಮೆಂಬಿವಂ, ಕದನ್ನೆ ಯ್ಯಾಲ್ಕಾ ಜ್ವರಂ. 6 ಪಾಲುಪಾಲವೊಂದುಪಾಲವನ್ನಬರ, ಪೊಂದು ಮಡಿಯ ಹಾಂಗೆ. 7 ದಲ್ಲಿ ಕೂಡಿ.

ಕಂ|| ನಿಂಬದ ಕಷಾಯದೊಳ್ ಪೆಸ |
ಱಂ [1]ಬೇಯಿಸಿ ಕಱಿವೆಯಕ್ಕಿಯುಂ ಬಾಗಿ ಪ[2]ಟೋ ||
ಳಾಂಬುವಿನೊಳೆ ಮಧು[3]ಮಗಧರು |
ಹಂ ಬೆರಸಿಕ್ಕುಗೆ ಹಯಜ್ವರಂ ಪಿಂಗುವಿನಂ || ೨೧೬ ||

(ನಾನಾರೋಗಕ್ಕೆ)

ಉಜ್ವಳಂ|| ರಸಯಿಸಿರ್ದ ತುರಂಗಮುಮಂ ನೀರೂಡದಹರ್ನಿಶಮುಂ ಪ್ರಯೋ |
ಗಿಸುಗೆ ತಪ್ಪದೆ ಜಾವದೊಳಿಪ್ಪತ್ತ್ರಯ್ದು ಹರೀತಕಿಯಾಗೆ ಸಂ ||
ಧಿಸಿ ಶತದ್ವಯಮಪ್ಪಿನೆಗಂ ಸಿಂದೂದ್ಭವಸಂಯುತ ಮಾದೊಡು |
ರ್ವಿಸುವ ಬೇಸಗೆಯೊಳ್ ಗುಡಮಿಶ್ರಂ ತಾನದು ದೋಷವಿನಾಶನಂ || ೨೧೭ ||

ಮ|| ಜಳದೊಳ್ ರಾಶ್ನೆ ಗುಳೂಚಿ ಸಬ್ಬಸಿಗೆ ಬಿಲ್ವಂ ಪದ್ಮಕಂ ನಾಗರಂ |
ಜಳದಂ ತೊಟ್ಟಿಲ ಬೇರ್ ದುರಾಲಭೆ ವಿಳಂಗಂ ತಗ್ಗಿ [4]ವಾತಾರಿ ನೆ ||
ಗ್ಗಿಲೆರಡುಗ್ಗಳ್ಪುಮೆನಿಪ್ಪಿವಂ ಕುಡೆ ಕಷಾಯಂ ಮಾಡಿ ವಾಹಕ್ಕೆ [5]ಕೇ |
ವಲಮಿಾಯೋಗಮೆ ಮಾಣಿಸಲ್ಕೆ ನೆಱೆಗುಂ ನಾನಾವಿಧವ್ಯಾಧಿಯಂ || ೨೧೮ ||

ಟೀ|| ಬೇವಿನ ಕಷಾಯದ ನೀರೊಳ್ ಪೆಸಱಂ ಕೂಡಿ ಕುದಿಸಿ ಆ ನೀರೊಳ್ ಕಱಿವೆಯಕ್ಕಿಯೋಗರವಂ ಕೂಡಿ ಕಹಿಪಡವಲದ ಸಮೂಲಮಂ ತಂದು ತುಱಿದು ರಸಮಂ ಕೊಂಡು, ಜೇನತುಪ್ಪಮಂ, ಹಿಪ್ಪಲಿಯಚೂರ್ಣಮಂ ಕೂಡಿ ಆಪೆಸರಱ ಹುಗ್ಗಿಯವೋಗರಮಂ ಕೂಡಿ ಕಲಸಿ ಮುದ್ದೆಯಂ ಮಾಡಿ ಕುದಿರೆಗಳ್ಗೆ ಕವಳಮನಿಕ್ಕುವುದು. ಜ್ವರಂ ಮಾಣ್ಬುದು—೨೧೬.

ಟೀ|| ಕುದಿರೆಗಳ್ಗೆ ವಾಯುಕೊಂಡೊಡೆ ಬೇಸಱದೆ ಹಿವದದಿನದೊಳ್ ನೀರಂ ಕುಡಿಯಿಸದೆ ಜಾವಜಾವಕ್ಕೆ ಇಪ್ಪತ್ತಯ್ದು (೨೫) ಅಣಿಲೆಯ ಕಾಯ್ಗಳಂ ಚೂರ್ಣಂ ಮಾಡಿ ಸೈಂಧವಮಂ ಕಲಸಿ ಹೀಗೆ ಎಂಟು ಜಾವಕ್ಕಂ ತೊಲೆ ಇನ್ನೂಱು (೨೦೦) ಅಣಿಲೆಯ ಕಾಯಹನ್ನ[6]ಬರ ಕವಳಮನಿಕ್ಕುವುದು ; ಉಷ್ಣಕಾಲದಲ್ಲಿ ಈ ಮರ್ಯಾದೆಯೊಳೆ ಅಣಿಲೆಯಕಾಯ ಚೂರ್ಣಮಂ ಬೆಲ್ಲದಲ್ಲಿ ಕಲಸಿ ಕವಳಮನಿಕ್ಕುವುದು. ಇವಱಿಂದೆ ಕುದಿರೆಗಳ್ಗೆ ಸಮಸ್ತರೋಗಂ ಮಾಣ್ಬುದು, ಉಷ್ಣವಾಯು ಸಮಧಾತುವಾಗಿರ್ಪುದು—೨೧೭.

ಟೀ|| ರಾಶ್ನೆ, ಆಡಸೋಗೆ, ಸಬ್ಬಸಿಗೆ, ಬೆಲ್ಲವತ್ತದತಿಗುಡು, ಪದ್ಮಕಂ, ಶುಂಠಿ, ಭದ್ರಮುಸ್ತೆ, ತೊಟ್ಟಿಲಬೇರ್, ಬಳ್ಳಿದುಱುಚೆಸಮೂಲಂ, ವಾಯುವಿಳಂಗಂ, ತಗ್ಗಿಯಮೂಲಂ, ಅವುಡಲಕನಬೇರ್, ನೆಗ್ಗಿಲಸಮೂಲಂ, (ನೆಲ)ಗುಳ್ಳದ ಹೆಗ್ಗುಳ್ಳದ ಸಮೂಲಂ, ಇವಂ ತದಕುಟ್ಟಿ ಉದಕದಲ್ಲಿ ಕಷಾಯಮಂ ಮಾಡಿ ಆ ಕಷಾಯಮಂ ಕುಡಿಸಲ್ ಕುದಿರೆಗಳ್ಗೆ ಸಕಲ [7]ವ್ಯಾಧಿಗಳುಂ ಮಾಣ್ಬುವು—೨೧೮.

1 ಬೆರಸಿದ. 2 ದೊಳಾಂ 3 ಮರುದುರಹಂ. 4 ನಿಂತಾರಿ, ಧಾತಾರಿನೇಗಿಜಿಲೆಜಮಳ. 5 ಕವಳ. 6 ಕರ. 7 ರೋಗಂಗಳ್ ಕಿಡುವುವು.



ಕಂ|| ರಸಿಯಿಸಿದೊಡೆ ತಲೆಗುತ್ತಂ |
ಮಸಗಿದೊಡೆಗ್ಗುವೊಡೆ ತಿರಿಗಿ ಕೆಡೆವೊಡೆ ಮೆಯ್ ಛೋಂ ||
ಪಿಸುವೊಡೆ ಬಾತೊಡೆ ಪಿಂಗೆ ಮೋ |
ಹಿಸುವೊಡೆ ರಾಸ್ನಾದಿತೋಯಮಂ ಕುಡೆ ತೀರ್ಗುಂ || ೨೧೯ ||

(ಬಾವಿ(ಹಿ)ಂಗೆ)

ಮ|| ತಗರಂ [1]ಕೊಳ್ಕುಳಿ ನುಗ್ಗಿ ಕಗ್ಗೊಱಲೆ ತೊಟ್ಟಿಲ್ ಸೂರಣಂ ಶುಂಠಿ ಯ |
ಜ್ಜಗೆಯಯ್ದುಪ್ಪುಗಳೆಕ್ಕೆ ಸಾಸಿವೆ ಹರಿದ್ರಾದ್ವಂದ್ವಮಿಾಪೇಳ್ದ ಮ ||
ರ್ದುಗಳಂ ಪುತ್ತಿನ ಮಣ್ಣುಮಂ ಕದಡಿ [2]ಕಾಸಿಟ್ಟೆಯ್ದೆ ಪೊಯ್ಯಾವ ಬಾ |
ವುಗಳುಂ ತೀರ್ಚುಗುಮಲ್ಲದಂದೆಱೆಗೆ ಸದ್ಯಃಕ್ಷಾರಮಂ ತುಪ್ಪದೊಳ್ || ೨೨೦ ||

(ತುಱಿಕಜ್ಜಿಗೆ)

ಕಂ|| ಹಯನಿಕರದ ಕಜ್ಜಿಗೆ ಕ |
ಳ್ಳಿಯ ಮಸಿಯಂ ತುಪ್ಪದೊಡನೆ ಪೂಸುಗೆ [3]ಮುಂಡಂ ||
ಗಿಯ ಮಸಿಯೊಡನಿರದೆಳ್ಳೆ |
ಣ್ಣೆಯನೆಱೆ [4]ತುಱಿಯಿನಿಸುಮಿಲ್ಲದಂತಿರೆ ಪೋಕುಂ || ೨೨೧ ||

ಹರಿಣಿ|| ಬೆರಸಿ ಭರದಿಂ ಮುನ್ನಂ ಗೋಮೂತ್ರದಿಂ ಬಱಿಕುಪ್ಪು ಸಿಂ |
ಧುರವರಿಸಿನಂ ಸದ್ಯಃಕ್ಷಾರಂಗಳೆಂಬಿವನಟ್ಟು ಸಿಂ ||
ಧುರುಹಸಹಿತಂ ಪೇಳ್ ಲೋಗೇಶ್ವರಂ ಶರಪುಂಖಿಯಿಂ |
ಬೆರಡಱೊಳಮಂತೊಂದಂ ತಂದಿಕ್ಕೆ ಕಜ್ಜಿಯನೋಡಿಕುಂ || ೨೨೨ ||

ಟೀ|| ಕುದಿರೆಗಳ್ಗೆ [5]ರಸಿಯಿಸಿದೊಡೆ, ತಲೆಯಂ [6]ಚಟ್ಟೆಕ್ಕಿದೊಡೆ, ಬಿಕ್ಕುತಿರ್ದೊಡೆ, ತೂಂಕಡಿಸುವೊಡೆ, ಬಾತೊಡೆ, ತನ್ನಂತಾಂ ಮೆಯ್ಮಱೆದಿರ್ದೊಡೆ, ಈ ಮರ್ಯಾದೆಯಲ್ಲಿ ರೋಗಂ ತೋಱಿದೊಡೆ ಆದರ್ಕೆ ರಾಶ್ನೆ ಮೊದಲಾದ ಔಷಧಿಗಳಂ ಕೂಡಿ ಅರೆದು ಉದಕದಲ್ಲಿ ಕದಡಿ ಕುಡಿಸಲ್ ಆ ರೋಗಂ ಮಾಣ್ಬುದು—೨೧೯.

ಟೀ|| ತಗರಂ ಕೊಳುಗುಳಿಕೆಯ ಸಮೂಲಂ, ನುಗ್ಗಿಯ ಬೇರ್, ಕಗ್ಗೊಱಲೆಯ ಬೇರ್, ನೀರ್ದೊಟ್ಟಿಲಬೇರ್, ಸೂರಣದಗೆಂಡೆ, ಶುಂಠಿ, ಅಜ್ಜಗೆ, ಸೈಂಧವಂ, ಕಾಚಲವಣಂ, ಬಿಡುಲವಣಂ, ಸಂವರ್ಚಲವಣಂ, ಉಪ್ಪು, ಎಕ್ಕೆಯೆಲೆ, ಸಾಸಿವೆ, ಅರಿಸಿನಂ, ಮರದರಿಸಿನಂ, ಈ ಔಷಧಂಗಳಂ ಅರೆದು ಹುತ್ತಮಣ್ಣಂ ಕೂಡಿ ಉದಕದಲ್ಲಿ ಕದಡಿ ಕಾಸಿ ಹದನಱಿತು ಬಾವಿನ ಮೇಲೆ ಹೊಯ್ದು ಹೊಯ್ದು ಸೇಕವಂ ಮಾಡಿದೊಡೆ ಎಲ್ಲಾ ಬಾವು(ಹು)ಗಳುಂ ಮಾಣ್ಬುವು. ಅಲ್ಲಾ ಸದ್ಯಃಕ್ಷಾರಮಂ ಚೂರ್ಣಂ ಮಾಡಿ ತುಪ್ಪದಲ್ಲಿ ಕಲಸಿ ತೊಡೆವುದು. ಇವಱಿಂದೆ ಬಾವು(ಹು)ಗಳ್ ಮಾಣ್ಬುವು—೨೨೦.

ಟೀ|| ಕಳ್ಳಿಯ ಕೋಂಬಂ ತಂದು ಸುಟ್ಟು ಮಸಿಯಂ ಮಾಡಿ ತುಪ್ಪದಲ್ಲಿ ಕಲಸಿ ಪೂಸುವುದು. ಅಲ್ಲಾ [7]ಮುಂಡಗೆಯ ಎಲೆಯಂ ಸುಟ್ಟು ಎಣ್ಣೆಯಲ್ಲಿ ಕಲಸಿ ಪೂಸುವುದು. ಇವಱಿಂದೆ ಕುದಿರೆಗಳ ತುಱಿಕಜ್ಜಿಗಳ್ ಮಾಣ್ಬುವು—೨೨೧.

ಟೀ|| ಉಪ್ಪು, ಚಂದ್ರಂ, ಅರಿಸಿನಂ, ಸದ್ಯಃಕ್ಷಾರಂ, ಇವಂ ಚೂರ್ಣಂ ಮಾಡಿ ಗೋ

1 ಕೊಗ್ಗಿಯ. 2 ಕುಡಿಕುಡಿಕಾ ಸಿಪ್ಪೆ, ಕೂದಿಕ್ಕೆಯ್ದೆ ಪೊಯ್ಯಲ್ಕೆ. 3 ಮುಂದಂಗಿಯ. 4 ಪಱಿಗಿನಿಸುಮಿಲ್ಲ, ದಱಗಿನಿಸುಗೆಮಿಲ್ಲ. 5 ಪಸರಿಸಿದ್ದರೆ. 6 ಸದ್ದಿಕ್ಕಿದೊಡೆ. 7 ಮುಂಡಗೇದಗೆಯ.

(ವ್ರಣಕ್ಕೆ)

ಮ|| ಅರಿದಾಳಂ ಪೊಸಸುಣ್ಣ ಮಿಂದ್ರಯವೆ ಕೇಂಗಂಧೋಜಳಂ(ಕೆಂ) ? [1]ದಾರು ಸಿಂ |
ಧುರಮುಯ್ದುಪ್ಪು ಕಟುತ್ರಯಂ ರಜನಿ ಸದ್ಯಃಕ್ಷಾರಮೆಂಬಿಂತಿವಂ ||
[2]ಸರಿಗೊಂಡಾಡಿನದುಗ್ಧದಿಂ [3]ಸಮನೆ ಪೊಯ್ದೆಳ್ಳೆಣ್ಣೆಯಿಂದಟ್ಟನಂ |
ತರಮಿಂಬಾಗಿರೆ ಪೂಸೆ ಕಜ್ಜಿ ಮೊದಲಾದಶ್ವವ್ರಣಂ ಪಿಂಗುಗುಂ || ೨೨೩ ||

ಕಂ|| ಅರಿದಾಳಂ ಬೆಲ್ಲಂ ಸ |
ಜ್ಜರಸಂ ಕಾಸೀಸಮರಗುಕೇರ್ಮೆಣಸಿವನೊಂ ||
ದಿರೆ ತಿಲತೈಲದೊಳಟ್ಟಂ |
ತೊರಸುಗೆ ತುರಗಕ್ಕೆ ಪಿಂಗುಗುಂ ತಳರುಜೆಯುಂ || ೨೨೪ ||

—ಇಂತು ಅಶ್ವವೈದ್ಯಂ—

(೬) ಇನ್ನು ಗಜವೈದ್ಯಂ

ಮ| ಸ್ರ|| ಮರಿಚಂ ಚವ್ಯಂ ವಿಡಂಗಂ ಕಳವಿಗೆ ಮಗಧಪ್ರೋದ್ಭವಂ [ಚಿತ್ರಕಂ] [4]ನು |
ಗ್ಗಿರಸಾ(ಜ್ಯಂ)ಂತಂ ರಾಷ್ಮೆ ಕುಷ್ಠಂ ಬಜೆ ಪುಲಿಗಿಲಬೇರ್ ಪಿಪ್ಪಲೀ ಮೂಲಮುಯ್ದು ||
ಪ್ಪೆರಡೋವಂ ಪಾಲೆ ಬೇವಿಂಗತಿಬಜೆ ಪಟಲಂ ಸರ್ಷಪಂ ಜೀರಕಂ ನಾ |
ಗರಮುಕ್ಷಂ ನೆಲ್ಲಿ ನೇಱಲ್ [5]ತವಸಿ ಶಿವೆ ಯವಕ್ಷಾರಮೊಂದಿಂತಿವೆಲ್ಲಂ || ೨೨೫ ||

ಮೂತ್ರದಲ್ಲಿ ಅರೆದು ಅಟ್ಟು ಸೈಂಧವಂ, ಲೋಯಿಸರಂ, ಮುಳ್ಳುನುಗ್ಗಿ ಇವಱೊಳಗೆ ದೊರಕಿದೊಂದಱ ಚೂರ್ಣಮಂ ಮಾಡಿ ಆ ಅಟ್ಟುದಱೊಡಗೂಡಿ ಕಲಸಿ ಪೂಸಲ್ ತುಱಿ ಮಾಣ್ಬುವು—೨೨೨.

ಟೀ|| ಅರಿದಾಳಂ, ಪೊಸಸುಣ್ಣಂ, ಕೊಡಸುಗನಬೀಜಂ, ಗಂಧಕಂ, ಮರದರಿಸಿನಂ, ಚಂದ್ರಂ, ಸೈಂಧವಂ, ಕಾಚ, ಬಿಡುಸಂವರ್ಚಲವಣಂಗಳ್, ಉಪ್ಪು, ಶುಂಠಿ, ಹಿಪ್ಪಲಿ, ಮೆಣಸು, ಅರಿಸಿನಂ, ಸದ್ಯಃಕ್ಷಾರಂ ಇವಂ ಸಮನಾಗಿ ಕೊಂಡು ಚೂರ್ಣಮಂ ಮಾಡಿ ಎಕ್ಕೆಯಪಾಲಂ (ಆಡಿನಪಾಲಂ) ಎಳ್ಳೆಣ್ಣೆಯಂ ಸಮನಿಸಿ (ಮಾಗಿ)ಕೊಂಡು ಆ ಚೂರ್ಣಮಂ ಹಾಯ್ಕಿ ಅಟ್ಟು ಅದಂ ಪೂಸಲ್ ಕುದಿರೆಗಳ್ಗೆ ತುಱಿ ಮೊದಲಾದ ಎಲ್ಲಾ ಪುಣ್ಗಳುಂ (ವ್ರಣಂಗಳುಂ) [6]ಮಾಣ್ಬುವು—೨೨೩.

ಟೀ|| ಅರಿದಾಳಂ, ಬೆಲ್ಲಂ, ಸಜ್ಜರಸಂ, ಕಾಸೀಸಂ, (ಕರಿಯಸೀಸಂ) ಅರಗು, ಮೆಣಸು ಇವೆಲ್ಲಮಂ ವೊಂದಾಗೆ ಚೂರ್ಣಂ ಮಾಡಿ ಎಳ್ಳೆಣ್ಣೆಯಲ್ಲಿ ಕಲಸಿ ಅಟ್ಟು ತೊಡೆದೊಡೆ ಕುದಿರೆಗಳ್ಗೆ ತಳರೋಗಂ ಮಾಣ್ಬುದು—೨೨೪.

ಟೀ|| ಮೆಣಸು, ಕಾಮೆಣಸಿನಬಳ್ಳಿ, ವಾಯುವಿಳಂಗಂ, ಕಳವಿಗೆ, (ಮಗಧರುಹಂ) ಚಿತ್ರಮೂಲಂ, ನುಗ್ಗಿಯಬೇರ್, ನೀ(ರೋ)ಲಾಂಜನಂ, ರಾಷ್ಮೆ, ಕೋಷ್ಠಂ, ಬಜೆ, ಹುಲಿಗಿಲಬೇರ್, ಹಿಪ್ಪಲಿಮೂಲಂ, ಪಂಚಲವಣಂ, (ಸೈಂಧವಂ, ಬಿಡುಕಾಚಸಂವರ್ಚಲವಣಂಗಳ್, ಉಪ್ಪು) ಓವು, ಜೋಪಾರದೋವು, ಹಾಲೆಮರದಬೇರ್, ಬೇವು, ಇಂಗು, ಅತಿಬಜೆ, ಕಹಿಪಡವಲಂ

1 ದಾರ. 2 ಸರಿಸಂಗೊಂಡಿನದುಗ್ಧ. 3 ಸಮದೆ ಪೊಯ್ದೊಳೆಣ್ಣೆಂದಟ್ಟನಂಬರದಿಂಬಾ. 4 ನುರಸಾಂಜನಂ. 5 ಸವನಿಸುಗೆ. 6 ಕಿಡುವುವು.



ಕಂ|| ಸಮನಾಗಿ ಕೂಡಿ ಕಲಾವೆರ |
ಸುಮತಂಗಜಕಿಕ್ಕೆ ಶೂಲೆ ಗುಲ್ಮಂ ಜಾಡ್ಯಂ ||
ಕ್ರಿಮಿವಿಷಂಭಂ ಕಷವ |
ಗ್ನಿಮಾಂದ್ಯಮರುಚಿತ್ವಮೆಂಬಿವಂ ಮಾಣಿಸುಗುಂ || ೨೨೬ ||

— ಇಂತು ಗಜವೈದ್ಯಂ — *

ಸಮೂಲಂ, ಸಾಸಿವೆ, ಜೀರಗೆ, ಶುಂಠಿ, ತಾರೆಯ ಕಾಯ್, ನೆಲ್ಲಿಯಸೆಟ್ಟು, ನೇಱಲತಿಗುಳು, ತವಸಿ, ಅಣಿಲೆಯಕಾಯ್, ಯವಕ್ಷಾರಂ, ಇವೆಲ್ಲಮಂ ಸಮಭಾಗೆಯಾಗೆ ಕೊಂಡು ತದಕುಟ್ಟಿ [1]ರಸಮಂ (ಕೊಂಬುದು) ಪೊಯ್ವುದು. ನಾನಾರೋಗಂಗಳುಂ ಮಾಣ್ಬುವು—೨೨೫.

ಟೀ|| ಅವೆಲ್ಲಮಂ ಸಮನಾಗಿ ಕೂಡಿಕೊಂಡು ಮಾಡಿದ ಚೂರ್ಣಮಂ ಅಂಬಿಲದಲ್ಲಿ ಕದಡಿ ಆನೆಗಳ್ಗೆ ಕುಡಿಸಲ್, ಶೂಲೆ, ಗುಲ್ಮ, ಜಡತೆ, ಕ್ರಿಮಿ, ಮೊಯ್ಮಱಿದಿರುಹ, ಕೆಮ್ಮು, ದೀಪನವಿಲ್ಲದಿರುಹ, ಅರುಚಿ, ಮೊದಲಾದ ಎಲ್ಲಾ ವ್ಯಾಧಿಗಳುಂ ಕಿಡುವುವು—೨೨೬.

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ

ಶ್ರೀಮತ್ಕವಿತಾವಿಳಾಸತನೂಜಂ

ಶ್ರೀಮಚ್ಚಾವುಂಡರಾಯ

ವಿರಚಿತಮಪ್ಪ

## ಲೋಕೋಪಕಾರದೊಳ್

ನರಾದಿವೈದ್ಯಪ್ರಕರಣಂ

ನವಮಾಧಿಕಾರಂ

1 ರಸವ ಹೊಯ್ಯುವುದು ನಾನಾ ರೋಗಂ ಮಾಣ್ಬುದು.

* ವೈದ್ಯಂ ಸಮಾಪ್ತಂ, ನಮಸ್ಸಿದ್ಧೇಭ್ಯಃ ಮಂಗಳಮಹಾಶ್ರೀಕನಕಗಿರಿಕಲ್ಯ(ಟ)ಕದ ತಾಳಪ್ರತಿಯ ನಕಲು. ಶಾಲಿವಾಹನಶಕಾಬ್ದ ೧೫೫೬ನೆಯ ಭಾವ ಸಂವತ್ಸರದ ಕಾರ್ತಿಕಶುದ್ಧ ೫ ಗುರುವಾರದಲ್ಲಿ ಪುಸ್ತಕ ಬರೆದು ಮುಗಿಸಿದ್ದೇನೆ, ಎಂದು(ಪ್ರೈ. ಗವ. ಲೈ. ಕಾಗದದ ಪ್ರತಿಯಲ್ಲಿದೆ.)

# ದಶಮಾಧಿಕಾರಂ

## ೧೦. ವಿಷವೈದ್ಯಂ.[1]

* ಕಂ|| ತತ್ವಂ ತ್ರಿತತ್ವದೊಳ್ ವಿಷ |
ತತ್ವಮೆ ಬಗೆವಾಗಳದಱನದಱಾಕ್ರಮಮಂ ||
ಸತ್ವಹಿತಮಾಗಿ ಪೇೞ್ವೆಂ |
ಸತ್ವ.........ಸರಸ್ವತೀಮುಖತಿಲಕಾ || ೧ ||

(ಹಾವು ಕಚ್ಚಲ್ಕೆ ಕಾರಣಂ)

[2](ಪೆರಿಯುರ್ಚೆ) ದಾಂಟಿ [3]ಕೋಳ್ದ(ಲ್ದ) |
ಪ್ಪಿರೆ ಪಗೆಗೊಳೆ ಸೊರ್ಕೆ ಶಂಕೆ ದೊರೆಕೊಳೆ ವಿಷಮು ||
ಬ್ಬರಿಸೆ(ಸಿ) ಮಱಲುಂದೆ ತಮ್ಮೊಳ್ |
ನೆರೆವೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ || ೨ ||

(ಅಸಾಧ್ಯಮಪ್ಪ ಪಾವುಗಳ್)

ಮಸಣದೊಳಕ್ಕೆ ಫಣೀಂದ್ರಾ |
ವಸಥದೊಳಕ್ಕೊಂದೆ ಮರದೊಳಕ್ಕುದ್ಯಾನ ||
ಪ್ರಸರದೊಳಕ್ಕೆ ಚತುಷ್ಪಥ |
ದ ಸಮೀಪದೊಳಕ್ಕೆ ಪಾವುಕೊಂಡೊಡಸಾಧ್ಯಂ || ೩ ||

ಟೀ|| ತತ್ವಂಗಳೆ ತ್ರಿತತ್ವಂಗಳ್, ಆತ್ಮವಿದ್ಯಾತತ್ವಂಗಳ್, ಶಿವತತ್ವ, ಆ ತತ್ವಂಗಳ(ಲ್ಲಿ) ವಿಶೇಷತತ್ವಂ ವಿಷಕಾರ್ಯ(ರ್ಯಾ)ಮಾಗಿರ್ಪುದಾಗಿ ಆ ವಿಷಹರ(ಱ)ವಹಂಥಾ ತತ್ವಮಂ ಪೇೞ್ವೆನೆಂದುತೊಡಗುತ್ತಿರ್ಪಂ—೧.

ಟೀ|| ಪಾವುಗಳ್ಗೆ ಹೆರೆಯುರ್ಚುವಾಗಳ್, ಮಂಡಲಂಗೊಂಡಿರ್ದಲ್ಲಿ ದಾಂಟಿ ಪೋಗಲ್, [4]ಕೋಲಿನಲ್ಲಿ ಪೊಯ್ದು [5]ನೋಯೆ ಪಗೆಗೊಂಡಿರ್ದಲ್ಲಿ, ಆಹಾರಮಂ ಕೊಂಡುಸೊರ್ಕಿರ್ಪಲ್ಲಿ, ತನ್ನ ಮನಸ್ಸಿನಲ್ಲಿ ಹಾವೆಂಬ ಶಂಕೆ [6]ಪುಟ್ಟಿದಲ್ಲಿ, ವಿಷಂಗಳ್ ಪೆರ್ಚಿರ್ದಲ್ಲಿ ನೆಟ್ಟಗೆ ಇದು ಇರ್ದಾಗಳ್, ಹೆಣ್ಗಂಡು ಪಾವುಗಳ್ ಕೂಡಿ ಇರ್ಪಲ್ಲಿ ಇಂಥಾ ವೇಳೆಗಳಲ್ಲಿ ಮನುಷ್ಯರ್ ಆ ಹಾವುಗಳಂ ಬಾರಿ(ಧಿ)ಸಲ್ ಆ ಹಾವು ಮನುಷ್ಯರಂ ಕರ್ಚುವುದು—೨.

ಟೀ|| ಶ್ಮಶಾನದಲ್ಲಿ, ಹುತ್ತಿನ ಮೇಲಿರ್ದಲ್ಲಿ, ಒಂದು ಮರನಿರ್ದ ಠಾವಿನಲ್ಲಿ, ಉದ್ಯಾನವನಂಗಳೊಳಗೆ, ನಾಲ್ಕು ಬಟ್ಟೆ ಕೂಡಿದಂಥ ಠಾವಿನಲ್ಲಿ ಇಂಥಾ ಠಾವುಗಳಲ್ಲಿ ಹಾವು ಕಚ್ಚಲಸಾಧ್ಯಂ. ಗಾರುಡವಂ ಕೊಳ್ಳವು—೩.

1 ವಿಷವಾದಂ. 2 ಪೆಱಗಳೆಯದೆ. 3 ತಿಳ್ದ. 4 ಕೋಲಲಿ. 5 ನೊಂದು. 6 ಪುಟ್ಟುತ್ತುಮಿರಲ್.

* ಈ ವಿಷವೈದ್ಯವು ಎರಡು ಪ್ರತಿಗಳಲ್ಲಿವೆ. ಒಂದು ಪ್ರತಿಯು ೫೩ರಿಂದ ೬೯ರ ವರೆಗಣ ಓಲೆ ಗಳಿತವಾಗಿದೆ. ಪೀಠಿಕಾಪದ್ಯವು ಲುಪ್ತವಾಗಿದೆ.



(ಅಸಾಧ್ಯಮಪ್ಪ ನಯಮಸ್ಥಾನಂಗಳ್)

ಚಂ|| ನಡುವಲೆ ಗೋಣ್ ನೊಸಲ್ ಪರಡು ಕೆಯ್ಯತಳಂ ಪಣೆಗ(ಕ)ಣ್ ಕದಂಪು ಕಾ |
ಲಡಿ ತುದಿಮೂಗು ನಾಭಿ ಚುಬುಕಂ ಹೃದಯಂ ತಲೆ ರೋಮದಂಚೆ ನಾ ||
ಣೆಡದ ಕುಚಾಂತರಂ [1]ಪೆಱಗು ಪುರ್ಬುಗಳಂಬೆಡೆಯಂ ಮುಹೂಪಿ ಕೊಂ |
ಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇೞ್ವುದಂಗೆ ಸಾಧ್ಯಮೇ || ೪ ||

(ದೂತಲಕ್ಷಣಂ)

ಚಂ|| ಕುದುಕುಳಿ ಭೀತ(ಚಿತ್ತ)[2]ನಾರ್ತವಚನಂ ಗಳಿತಾಶ್ರು ವಿಷಣ್ಣನೆಣ್ಣೆ ಪೂ |
ಸಿದನತಿರಕ್ತವಸ್ತ್ರಕುಸುಮಂ ಲಕುಟಾಜಿನಪಾಶಹಸ್ತನ ||
ಲ್ಲದೆ ಧವಳಾಂಬರಂ ಪ್ರಹಸಿತಾಸ್ಯನನಿಂದ್ಯಗುಣಂ ಪ್ರಿಯಂವದಂ |
ಪದುಳಿಗ(ನ)ನೆಂತುಮೊಳ್ಪಿದನೆನಿಪ್ಪೊಡೆ ದೂತನ ಮಾತದುತ್ತಮಂ || ೫ ||

ಶಾ|| ದೂತಂ [3]ದಷ್ಟನ ವಾರ್ತೆಯಂ ನುಡಿದು ಮೇಗಂ ನೋೞ್ಪೊಡಿಲ್ಲಿಂಗೆ ತ |
ದ್ದೂತಂ ನಿಶ್ಚಯ ಕಾರ್ಯಮಂ ನುಡಿಯುತುಂ ತನ್ನಂಗಮಂ ಮುಟ್ಟಿದಂ ||
ತಾ ತಾಣಂ ಫಣಿ[4]ದಷ್ಟನೆಂಗೆ ಕವದಿಂ ವಿಪ್ರಾದಿವರ್ಣಂ[5]ಗಳಿಂ |
ಗಾತಂ ತನ್ನ ಶಿರೋಭುಜೋದರಪದಸ್ಥಾನಂಗಳಂ ಮುಟ್ಟಿಯುಂ || ೬ ||

ಟೀ|| ನೆತ್ತಿ, ಕೊರಲ್, ಹಣೆ, ಹರಡು, ಅಂಗೆಯ್ಯತಳಂ, ಪಣೆ, ಕಣ್, ಗಲ್ಲಂ, ಅಂಗಾಲತಳಂ, ತುದಿಮೂಗು, ಪೊಕ್ಕುೞ್, ಗಡ್ಡಂ, ಎದೆ, ಮುಂದಲೆ, ಹಿಂಡೆ, ಶಿಶ್ನ, ಎಡದಸೊಳೆಯೊತ್ತು, ಹಿಂಭಾಗ, ಹುಬ್ಬು ಇಂಥಾ ಠಾವುಗಳಂ ಪಾವು ಕರ್ಚಲ್ ಗರುಡಂಗೆಯುಮಸಾಧ್ಯಂ. ಉೞಿದವರೆಂತುಂ ಮಾಣಿಸಲಱಿಯರ್—೪.

ಟೀ|| ನಿದ್ರೆಯಾಗಿರ್ದವಂ, ಭೀತನಾಗಿ ಇಹಾತಂ, ಕ್ಲೇಶವಹನುಡಿಗಳನುಳ್ಳಾತಂ, ಅಳುತ್ತೆ ಬಂದಾತಂ, ಬಸವಳಿಯುತ್ತಿರ್ದಾತಂ, ಎಣ್ಣೆಯಂ ಪೂಸಿಕೊಂಡಿರ್ದಾತಂ, ಕೆಂಪಿನವಸ್ತ್ರಮನುಟ್ಟಾತಂ, ಕೆಂಪಿನಹೂವಂ ಮುಡಿದಾತಂ, ಬಡಿಗೆಯಂ ಪಿಡಿದಿರ್ದೊಡೆ, ತೊಗಲಂ ಪೊದ್ದಿರ್ದೊಡೆ, ನೇಣ್ ಕೆಯ್ಯೊಳಿರ್ದೊಡೆ, ಈ [6]ಪೇೞ್ದಂತಪ್ಪ ದೂತಂ ಬಂದು ಪಾವ್ ಕಚ್ಚಿತೆಂದು ಪೇೞಲ್ ಗಾರುಡಮಸಾಧ್ಯಂ, ಅದಲ್ಲದೆ ಬಿಳಿಯವಸ್ತ್ರಮಂ ಪೊದ್ದಿರುಹ, ನಗುತ ಬರುಹ, ನಿಂದೆಯಿಲ್ಲದಂತಹ ಗುಣವುಳ್ಳವನಾಗುಹ, ಪ್ರಿಯವಚನಮನುಳ್ಳಾತಂ, ಸೈರಣೆಯುಳ್ಳಾತಂ, ಎಲ್ಲರ ಕೆಯ್ಯಲ್ಲಿಯು ಒಳ್ಳೆಯವನೆನಿಸಿಕೊಳ್ಪವಂ, ಈ ಕುಱುಹುಗಳುಳ್ಳ ದೂತನ ಮಾತು ಉತ್ತಮಂ ಗಾರುಡಕ್ಕೆ ಸಾಧ್ಯಮಪ್ಪುದು—೫.

ಟೀ|| ಪಾವು ಕಚ್ಚಿತೆಂದು ಬಂದು ಪೇೞ್ವ ದೂತಂ ಹಾವು ಕಚ್ಚಿತೆಂದು ಪೇೞಿ ಮೇಲಂ ನೋಡಲ್ ಗಾರುಡಮಸಾಧ್ಯಮೆಂದಱಿವುದು. ಆ ದೂತಂ ಪಾವು ಕಚ್ಚಿತೆಂದು ಪೇೞಿ ತನ್ನ ದೇಹದೊಳಗೆ ಆವುದೊಂದು ಠಾವಂ ಮುಟ್ಟಿಕೊಳಲ್ ಆ ಠಾವಂ ಪಾವು ಕಚ್ಚಿತೆಂದು ಅಱಿವುದು. ತಱುವಾಯಿಗೊಂಡು ವರ್ಣಭೇದಮನಱಿವೊಡೆ ಆ ಪೇೞ್ದ ದೂತಂ ತನ್ನ ದೇಹದಲ್ಲಿ ಮಂಡೆಯಂ ಮುಟ್ಟಿಕೊಳಲ್ ಬ್ರಾಹ್ಮಣನೆಂದಱಿವುದು; ಭುಜಮಂ ಮುಟ್ಟಿಕೊಂಡೊಡೆ ಕ್ಷತ್ರಿಯನೆಂದಱಿ

1 ಪೆಱಉ. 2 ನಾಶ್ತ. 3 ದುಷ್ಟಕಮಾತೆನಯಂ. 4 ದಂಶ. 5 ಗಳಿಂ. 6 ಈ ಪೇೞ್ದಂಥಾಪ ನವಶಿಸಿ ದೂತ ಬಂದು ಹೇಳಲು.

(ಸೂರ್ಯಚಂದ್ರಸ್ವರಲಕ್ಷಣಂ)

ಚಂ|| ಉದಯಿಸೆ ದಕ್ಷಿಣಂ ಸಕಲಕಾರ್ಯವಿನಾಶಮನುಂಟುಮಾಳ್ಕುಮಂ |
ತದು ರತಿಭೋಜನಾದಿ ಗಮನಂಗಳೊಳುತ್ತಮಮೆಲ್ಲಿಯುಂ ಶುಭ ||
ಪ್ರದಮೆಡದತ್ತ ಸಲ್ವೊಡದು ನಾಡಿಯೊಳಂ ಕೆಳಗೊತ್ತಿ ಸೋಂಕಿ ಮ |
ಧ್ಯದೊಳೆಸಗುತ್ತುಮಿರ್ದೊಡೆ ಶುಭಾ[1]ವಹಮನ್ಯಮಮಂಗಳಾವಹಂ || ೭ ||

ಮ| ಸ್ರ|| ನಿಲೆ ದೂತಂ ಮುಂದೆ ಮೇಣ್ ವಾಮದೊಳತಿಶುಭದಂ ವಾಮನಾಡೀಪ್ರಚಾರಂ |
ಬಲದೊಳ್ [2]ಮೇಣ್ ಪಿಂದೆ ಬಂದೊಂದಿರೆ ಶುಭಫಲದಂ ದಕ್ಷಿಣಂ ವಾಮ(ಮ)ಕ್ಕುಂ ||
ಬಲಮಕ್ಕಾತಪ್ರವೇಶಂ ಶುಭಮಶುಭಕರಂ ನಿರ್ಗಮಂ ಮತ್ತೆ ವಾಮಾ |
ನಿಲನಿಂ ಸ್ತ್ರೀ ದಕ್ಷಿಣಶ್ವಾಸದಿನಱೆ ಪುರುಷಂ ದ್ವಂದ್ವದಿಂ ಪೇಡಿ(ಪೀಡೆ)ಯಕ್ಕುಂ|| ೮ ||

(ದಷ್ಟನಸಾವಿನಚಿಹ್ನಂ)

ಚಂ|| ಬಱವಱ ಬತ್ತಿ ತೋಱೆ ಕಿಱುನಾಲಗೆ ಮುಟ್ಟಲೊಡಂ ಶಿರೋರುಹಂ |
ಪಱಿಯೆ ಕುವರ್ಣಮಾಗೆ ನಖದಂತಚಯಂ ಕಡುವಣ್ಣಸಾಗಿ ಸುಯ್ ||
ಪೊಱಮಡೆ ಪೊಟ್ಟೆ ಪೊಟ್ಟಣಿ(ಳಿ)ಸೆ ಕನ್ನಡಿ ಗಂಟಲೆ ಕೆತ್ತು ಪೋಗೆ ಗೋ |
ಣೊಱಗಿರೆ ಮೂಗಿನೊಳ್ ನುಡಿಯೆ ಬಾಯ್ ಪೆಡೆ ದಷ್ಟನ ಸಾವು ನಿಶ್ಚಯಂ || ೯ ||

ವುದು ; ಎದೆಯಂ (ತೊಡೆಯಂ ಎಂದಿರಬೇಕು) ಮುಟ್ಟಿಕೊಳಲ್ ವೈಶ್ಯನೆಂದಱಿವುದು ; ಪಾದಮಂ ಮುಟ್ಟಿಕೊಳಲ್ ಶೂದ್ರನೆಂದಱಿವುದು—೬.

ಟೀ|| ದೂತಂ ಬಂದು ಪೇೞ್ದಾಗಳ್ ಆ ಕೇಳ್ವಾತಂಗೆ ಬಲದ ಸ್ವರಂ ನಡೆಯುತ್ತಿರಲ್ ಕೆಡುತ್ತಿರ್ದ ಕಾರ್ಯಂಗಳ್ ಕೆಯ್ಸಾರ್ಗುಂ, ಸಂಭೋಗಕ್ಕೆ, ಭೋಜನಕ್ಕೆ ಪೋಪೊಡೆ ಉತ್ತಮಂ, ಎಲ್ಲಿಯುಂ ಒಳ್ಳಿತ್ತೆಂ ಪೇೞ್ವುದು; ಎಡದ ಸ್ವರದೊಳಗಂ ಮೇಲೊತ್ತಿ ಅಲ್ಲದೆ ಕೆಳಗೊತ್ತಿ ಸ್ವರಂ ನಡೆಯುತ್ತಿರಲ್ ಅಲ್ಲಾ ಮಧ್ಯದಲ್ಲಿ ಸ್ವರಂ ನಡೆಯುತ್ತಿರಲ್ ಒಳ್ಳಿತ್ತು. ಈ ಪೇೞ್ದ ಮರ್ಯಾದೆಯಲ್ಲದೆ ಪಲ್ಲಟಮಾಗಿ ನಡೆಯುತ್ತಿರಲ್ ಅಮಂಗಳಮಪ್ಪುದು—೭.

ಟೀ|| ಆವುದೊಂದು ಕಾರ್ಯಮಂ ಪೇೞ್ವುದರ್ಕೆ ಬಂದ ದೂತಂ ಸಮ್ಮುಖದಲ್ಲಿ ನಿಲಲ್, ಎಡದಲ್ಲಿ ನಿಲಲ್ ಆ ಪೇೞ್ದಂತಹ ಕಾರ್ಯಂಗಳ್ ಅಪ್ಪುವು. ಆ ದೂತಂ ಬಂದ ವೇಳೆಯಲ್ಲಿ ಎಡದಸ್ವರಂ ನಡೆಯುತ್ತಿರಲ್ ಆ ದೂತಂ ಹಿಂಭಾಗದಲ್ಲಿ ನಿಲಲ್ ಉತ್ತಮಂ. ಆ ದೂತಂ ಬಂದ ವೇಳೆಯಲ್ಲಿ ಎಡದ ಸ್ವರಂ ನಡೆಯುತ್ತುಮಿರ್ದೊಡೆ ಸ್ತ್ರೀಯೆಂದಱಿವುದು. ಬಲದಸ್ವರಂ ನಡೆಯುತ್ತುಮಿರ್ದೊಡೆ ಪುರುಷನೆಂದಱಿವುದು. ಎರಡು ಸ್ವರಮುಂ ಸಮನಾಗಿ ನಡೆಯುತ್ತಿರಲ್ [3]ಆ ಪೇೞ್ದ ಕಾರ್ಯಂಗಳ್ಗೆ ಹಾನಿಯಂ ಪೇೞ್ವುದು—೮.

ಟೀ|| ದಷ್ಟನ ಚೇಷ್ಟೆಯನಱಿವೊಡೆ ನಾಲಗೆಯಂ ಮುಟ್ಟಿ ನೋಡಲ್ ದ್ರವಮಿಲ್ಲದಿರ್ದೊಡೆ ಮಂಡೆಯ ಕೂದಲು ಮುಟ್ಟಲ್ ಕಿೞ್ತು ಬಹ, ಕೈಕಾಲುಗುರ್ ಪಲ್ಗಳ ವರ್ಣಂ ಪಲ್ಲಟಮಾಗಿ

1 ವಹ ಮಂಗಳಾವಹಂ. 2 ಮೇಣಂ ಮೆಂಬಪೊಂದಿರೆ-ದಕ್ಷಿಣವಾಮು. 3 ನಪುಂಸಕ (ಪೇಡಿ—ಪೇಡಿ)ನೆಂದಱಿವುದು ಎಂದಿರಬೇಕು. ಟೀಕಾಕಾರನು ಪೇಡಿ ಎಂಬುದನ್ನು ಪೀಡೆಯೆಂದು ಭ್ರಾಂತಿಗೊಂಡಿರುವನು.



(ಮಂತ್ರಂಗಳ್)

ಕಂ|| ವಸಹಾವ್ಯಮಂತ್ರಮಂ ಮೇ |
ಳೆಸೆ [1]ವೋಂ ಹ್ರೀಂ ವಃ ಎನಿಪ್ಪ ಮಂತ್ರದಿನಭಿಮಂ ||
ತ್ರಿಸಿ ಜಲಮಂ ಮೊಗದೊಳ್ ತಳಿ |
ಯೆ ಸಾಧ್ಯಮೆಂದಱಿಗೆ ತೆಱೆದೊಡಕ್ಷಿದ್ವಯಮಂ || ೧೦ ||

ಅವಯವದೊಳ್ ದಷ್ಟಂ ಮಿಡು |
ಕುವೊಡೆ ಶುಭಂ [2]ನೀರನೆಯ್ದೆ ಓಂ [ವ್ಯಾಂ] ಹಂ ಸಃ ||
ಪ್ಲವಶಃ ಪ್ಲಾಯವಶಃ ಪ |
ಕ್ಷಿವಾಯು ಗಗನಾಖ್ಯ(ಗ್ರ)ಮಂತ್ರದಿಂ ತಳಿಯಲೊಡಂ || ೧೧ ||

* ಸಕಳಸ್ವರದೊಳ್ ಕೂಡಿದ |
ಹ(ಹ)ಕಾರಮಂತ್ರದೊಳಮೆಯ್ದೆ ಮಂತ್ರಿಸಿ ಶೀತೋ ||
ದಕಮಂ ಕುಡಿಸೆ ತಡೆದಿರ |
ದೆ [3]ಕಾಱೆದೊಡಾತನೆಯ್ದುಗುಂ ಯಮಪುರಮಂ || ೧೨ ||

ಕಪ್ಪಾಗಿರುಹ, ಉಸಿರ್ವಿಡುವಾಗಳ್ ಉಷ್ಣಮಿಲ್ಲದೆ [4]ಶೀತಮಾಗಿರುಹ, ಹೊಟ್ಟೆಯುಬ್ಬರಿಸಿಹ, ಕಣ್‌ಗುಟ್ಟಿಯುಹ, ಗಂಟಲ್ ಪೊಣಗುಹ, ಕೊರಲ್ ಒಂದು ಕಡೆಗೆ ಬಾಗುಹ, ಮೂಗಿನೊಳಗೆ ಮಾತನಾಡುಹ ಈ ಗುಣಂಗಳ್ ಆ ದಷ್ಟಂಗಾಗಲ್ ಗಾರುಡಂಗಮಸಾಧ್ಯಮೆಂದಱಿವುದು—೯.

ಟೀ|| ವಾಯುಮಂತ್ರದಲ್ಲಿ ಒಪ್ಪುತಿಹ "ಓಂ, ಹ್ರೀಂ, ವಃ" ಎಂಬೀ ಬೀಜಾಕ್ಷರಮಂತ್ರಂಗಳಿಂದೆ ಉದಕಮನಭಿಮಂತ್ರಿಸಿ ದಷ್ಟನ ಮಸುಡಮೇಲೆ ತಳಿಯಲ್ ಆತಂ ಕಣ್ದೆಱೆದೊಡೆ ಸಾಧ್ಯಮೆಂದಱಿವುದು—೧೦.

ಟೀ|| ಆ ಪಾವು ಕಚ್ಚಿದಾತಂ ವೇದನೆಯಿಂದೆ ಕೆಯ್ಕಾಲ್ ಮೊದಲಾದವಯವಂಗಳ್ ಮಿಡುಕಿ ಬಿಸುಸುಯ್ಯುತ್ತಿರಲ್ ಒಳ್ಳಿತ್ತು. ಆದಕೆ ಉದಕಮಂ "ಓಂ [ವ್ಯಾಂ] ಹಂ ಸಃ, [ಓಂ] "ಪ್ಲವಶಃ" [ಓಂ] ಪ್ಲಾಯವಶಃ" ಎಂಬ ಗಾರುಡಮಂತ್ರ, ವಾಯುಮಂತ್ರ, ಗಗನಮಂತ್ರಂಗಳ ಬೀಜಾಕ್ಷರಿಯಿಂದಭಿಮಂತ್ರಿಸಿ ಆವುದಕಮಂ ತಳಿವುದು—೧೧.

ಟೀ|| ಈ ಪಿಂದೆ ಪೇೞ್ದ ಹಂಸಮಂತ್ರ, ವಾಯುಮಂತ್ರ, ಗಗನಮಂತ್ರ ಬೀಜಾಕ್ಷರಗಳಿಂದೆ ತಣ್ಣೀರನಭಿಮಂತ್ರಿಸಿ ಕುಡಿಸಲ್ ಆವುದಕಮಂ ನಿಲ್ಲದೆ ಕಾಱೆದೊಡೆ ಆ ದಷ್ಟಂ ಉೞಿಯನೆಂದಱಿವುದು—೧೨.

1 ಓಂ. 2 ನೀರನೆಯಿರ್ದು. 3 ತೋಱೆ. 4 ಶೈತ್ಯಮಂ.

* ಮೂಲವನ್ನನುಸರಿಸಿ ಎಲ್ಲಾ ಸ್ವರಾಕ್ಷರಂಗಳಿಂದೆ ಕೂಡಿದ ಹ(ಹ್ರ) ಕಾರ ಮಂತ್ರದಿಂದೆ ಎಂದರೆ— ಓಂ, ಹ್ರಂ, ಹ್ರಾಂ, ಹ್ರಿಂ, ಹ್ರೀಂ, ಹ್ರುಂ, ಹ್ರೂಂ, ಹ್ರೆಂ, ಹ್ರೈಂ, ಹ್ರೋಂ, ಹ್ರೌಂ ಹ್ರಃ — ಎಂಬ ಬೀಜಾಕ್ಷರಮಂತ್ರದಿಂದ ಎಂದಿರಬಹುದು.

(ತಾತ್ಕಾಲಿಕವಿಷಾಪಹರಣಕಾರ್ಯಂಗಳ್)

† ಪಾವು ಕೊಳೆ ಕರ್ಣ[1]ಮಲವಂ |
ಶೀವುಗೆ ಮೇಣ್ ಕೊಯ್ದು ಕಳೆಗೆ ಪಿಂಡುಗೆ ರಕ್ತ ||
ಸ್ರಾವಂ ಮಾಡುಗೆ ಚುಂಚುರ್ಗೆ |
ನೀವುಗೆ ವಿಷಹರಣಮಕ್ಕೆ ತಾತ್ಕಾಲಿಕದೊಳ್ || ೧೩ ||

* ವಿಕಸಿತ ಸಿತಾಬ್ಜದಂತಿರೆ |
ಹಕಾರಮೊಂದನೆ ಸಮಸ್ತಸಂಧಿಯೊಳಂ ದಾ ||
ಸ್ತ್ರ(ಷ್ಟಿ)ರಿಸಲ್ ಕುಳಿಕಮುಖಾನಾ |
ಗ ಕಚ್ಚಿದೊಡೆ ................................. || ೧೪ ||

ಕಂ|| ಮೂಗಿನ ವದನದ ಸುಯ್ಯಂ |
ಬೇಗಂ ಪಿಡಿಪಿಡಿದು [ಸುಯ್ಯೆ] ಮೇಣ್ ಕಿವಿಯೊಳವಿಂ ||
ಬಾಗಿರೆ "ಹಂ ಸಃ" ಎಂಬುವ |
ನಾಗಳುಮೋದುತುಮಿರಲ್ಕೆ ನಿರ್ವಿಷಮಕ್ಕುಂ || ೧೫ ||

(ಔಷಧಂಗಳ್)

ದಧಿ ನವನೀತಂ ಮರಿಚಂ |
ಮಧು ಪಿಪ್ಪಲಿ ಶುಂಠಿ ಲವಣಮೆಂಬೀ ದಿವ್ಯೌ ||
ಷಧಮುಂ ತಿಂದೊಡೆ ನಾನಾ |
ವಿಧ ಸರ್ಪಪ್ರಮುಖವಿಷಮುನಿರದುಪಶಮಿಸಿಕುಂ || ೧೬ ||

ಟೀ|| ಆವನಾದೊಡೊರ್ವನಂ ಪಾವು ಕರ್ಚಲ್ ಕಿವಿಯ ಕೊಗ್ಗಿಯಂ ತೆಗೆದುಕಣ್ಣಲ್ಲಿಯೆಚ್ಚುವುದು. ಅಲ್ಲಾ ಕಚ್ಚಿದ [2]ತಾವಂ ಕೊಯ್ದು ತೆಗೆವುದು; [3]ಹಿಂಡುವುದು. ಆ ಕಚ್ಚಿದ ತಾವಿಂಗೆ ಕೆಳಗೆ ಮೇಲಂ ಬಿಗಿದು ಆ ಕಚ್ಚಿದ ತಾವಿನ ರಕ್ತಮಂ ತೆಗೆಸುವುದು. ಆ ತಾವಂ ಸುಡುಹ, ವಿಷ ವೇಱದಂತೆ ನೀವುಹ, [4]ಇನಿತುಮಂ ಆ ಕಚ್ಚಿದಾಕ್ಷಣಂ ಮಾಡಲ್ ವಿಷಹರಮಪ್ಪುದು—೧೩.

ಟೀ|| ...................ವಿಷಹರಮಪ್ಪುದು. (ಈ ಕಂದದ ಟೀಕು ಗಳಿತವಾಗಿದೆ; ಕಂದವೂ ಶುದ್ಧವಾಗಿಲ್ಲ.)

ಟೀ|| ಮೂಗಿನ ಉಸಿರ್, ಬಾಯ್ ಉಸಿರ್ಗಳುಂ ಬೇಗಬೇಗಂ ಪಿಡಿದು ಬಿಡುತ್ತುಮಿರಲ್ ಆ ದಷ್ಟನ ಕಿವಿಯೊಳಗೆ "[ಓಂ] ಹಂ ಸಃ" ಎಂಬ ಹಂಸಮಂತ್ರದ ಬೀಜಾಕ್ಷರಮಂ ಜಪಿಸುತ್ತುಮಿರಲ್ ಆ ದಷ್ಟಂಗೆ ನಿರ್ವಿಷಮಪ್ಪುದು—೧೫.

ಟೀ|| ಮೊಸರ್, ಬೆಣ್ಣೆ, ಮೆಣಸು, ಜೇನತುಪ್ಪಂ, ಹಿಪ್ಪಲಿ, ಶುಂಠಿ, ಉಪ್ಪು ಈ ಔಷಧಂ

1 ಮುಮಂ ಕೆ ಉಗಿ. 2 ಪ್ರದೇಶಮಂ. 3 ಹಿಂಡಲು. 4 ಇಷ್ಟನು.

† ದಾಹೋದಂಶಸ್ಯ ಛೇದೋ ವಾ ಕ್ಷತೇರ್ವಾ ರಕ್ತಮೋಚನಂ ||
—ಎಂಬ ರತ್ನಾವಳೀನಾಟಕದ ಪದ್ಯಾರ್ಥದೊಡನೆಯೂ,
ಉರಗಂ ಕೊಂಡೆಡೆಯಿಂ ನಾ। ಲ್ಪೆರಲನಿತಂ...... ||
—ಎಂಬ ಶಬ್ದಮಣಿದರ್ಪಣದ ಉದಾಹರಣ ಪದ್ಯದೊಡನೆಯೂ ಹೋಲಿಸುವುದು.

* ಈ ಕಂದದ ಕೊನೆಯ ಭಾಗವೂ, ಟೀಕೂ ಇದ್ದ ಓಲೆಯಭಾಗ ತ್ರುಟಿತವಾಗಿದೆ. ಉಳಿದ ಪ್ರತಿಗಳಲ್ಲಿ ಈ ಭಾಗವಿಲ್ಲದಿರುವುದರಿಂದ ಸರಿಪಡಿಸಲು ಶಕ್ಯವಿಲ್ಲ. ಒಂದು ಪ್ರತಿಯಲ್ಲಿ ಕಂದಭಾಗವೂ, ಟೀಕೆಯ ಕೊನೆಯ ಕಬ್ಬವೂ ನಿರಂತರವಾಗಿದೆ.



ಕಂ|| ಸುರಪಾರುಣೆ ಗಿಣಿಮೂಗೀ |
ಶ್ವರಿ ಖರಕರ್ಣಿಕೆಯುನಿಪ್ಪಿಮಂ ಕಿಱುದಾನುಂ ||
ಸೊರೆಯ ತಿ[1]ರುಳ್ ರಸದೊಡನೆಱೆ |
ಗುರುಗೋತ್ರರವಿಷಮನಲೆಯಲಿಂತಿದೆ ಸಾಲ್ಗುಂ || ೧೭ ||

ಗಿರಿ(ಸಿರ)ಕರ್ಣಿ ನೀಲಿ ಱಂಜಗೆ |
ಸುರದಾಳಿಯ ಬಿತ್ತು ಗುರ್ದುಗಿನೆಲೆಯೆಂಬಿವನೊಂ ||
ದಿರೆ ಕೂಡಿ ತಿಂದೊಡಾತನೆ |
ಗರುಡನವಂಗೆಱ್ಕೆ ಬಳ್ಕಿ ಮಣಿಗುಂ ಫಣಿಗಳ್ || ೧೮ ||

(ಸರ್ಪೋಚ್ಚಾಟನಯಂತ್ರಂ)

"ಓಂ ಕುರು [2]ಕುಲ್ಲೆ(ಳೆ) ಸ್ವಾಹಾ |
ಳಂಕೃತ ಮುರಗಾರಿವೆರಸು ಕೇರೊಳ್ ಬರೆದಾ ||
ಱಂ ಕೋಣೆಯ ಕ್ರಮದೊಳುರಗಯು |
ಗಾಂಕಿತ[3]ಮದು ಮಾಳ್ಕುಮಹಿಗಣೋಚ್ಚಾಟನಮಂ || ೧೯ ||

(ಪಾವು ಕಚ್ಚದಿರುವುದಕ್ಕೆ) (ವರ್ಷಪರ್ಯಂತಂ)

[4]ಬಿಳಿಯುಗುರ್ವೇಲಿಯ ಬೇರಂ |
ಜಳದೊಳ್ ಗುರುಪುಷ್ಯದಂದುಮಲ್ಲದೊಡಂ ತಂ ||
ಡುಳ ಜಳದೊಳರೆದು [5]ಸಲಿ(ರಿ)ಸಮ |
ನಿಳಿಸದೆ ಕುಡಿ ಪಾವು ಕೊಳ್ಳದಬ್ದಂ ಬರೆಗಂ || ೨೦ ||

ಗಳನೆಲ್ಲಮನೊಂದಾಗಿ ಕೂಡಿದ ದಿವ್ಯೌಷಧಮಂ ದಷ್ಟಂಗೆ ಮೆಲಿಸಲ್ ನಾನಾವಿಧಪಹುಫಾ ಹಾವುಗಳ್ ಕಚ್ಚಿದೊಡೆಯುಂ ವಿಷಹರಣಮಪ್ಪುದು—೧೬.

ಟೀ|| ಹಾವುಮೆಕ್ಕೆ ಬೇರ್, ಗಿಣಿಮೂಗಿನ ಗೆಡ್ಡೆ (ಗೆಂಡೆ), ಈಶ್ವರಿಯ ಬೇರ್, ಗಿರಿಕರ್ಣಿಕೆಯ ಬೇರ್ ಈ ಔಷಧಂಗಳ ರಸಮಂ ಕಹಿಸೊರೆಯ ಕಾಯ ತಿರುಳಿನ ರಸಮುಮಂ ಕೂಡಿಕೊಂಡು ದಷ್ಟಂಗೆ ಕುಡಿಸಲ್ ವಿಷಹರಣಮಪ್ಪುದು—೧೭.

ಟೀ|| ಗಿರಿಕರ್ಣಿಕೆಯ ಬೇರ್, ನೀಲಿಯ ಬೇರ್, ಱಂಜಗೆ, ದೇವದಾಳಿಯಬೀಜಂ, ಗರ್ದುಗಿನ ಕುಡಿ ಇವೆಲ್ಲಮನೊಂದಾಗಿ ಮೆಲಲ್ ಆತನೆ ಗರುಡಸಮಾನನಪ್ಪಂ, ಆತನಂ ಸರ್ಪಂ ಸೋಂಕಲರಿಯವು—೧೮.

ಟೀ|| "ಓಂ ಕುರುಕುಲ್ಲೆ(ಳೆ) ಸ್ವಾಹಾ" ಎಂಬೀ ಗರುಡಮಂತ್ರಮಂ ಗೇರಎಣ್ಣೆಯಿಂದೆ ಆಱು[6]ಕೋಣೆಯಾಗಿ ಯಂತ್ರಮಂ ಬರೆದು ಅಲ್ಲಿ * ಹಾವುಗಳ ಕುಱುಹಂ ಬರೆದು ಆ ಮಂತ್ರದಿಂದ ಮಭಿಮಂತ್ರಿಸಲ್ ಆ ಯಂತ್ರಂ ಸರ್ಪಸಮೂಹಂಗಳನುಚ್ಚಾಟನಂ ಮಾಳ್ಪುದು—೧೯.

ಟೀ|| ಬೃಹಸ್ಪತಿವಾರಂ ಪುಷ್ಯನಕ್ಷತ್ರಂ ಕೂಡಿದ ದಿನದಲ್ಲಿ ಬಿಳಿ(ಯುಗು)ಯೂರ್ವೇಲಿಯ

1 ರುಳ್ಪದ ರಸತನದ ನರದೆಱಿಗು. 2 ಕುಲೆ. 3 ಮದುವ.ದುಮಾಳ್ಕು. 4 ಬಿಳಿಯನುರ್ವೇಲಿಯ. 5 ಸರಿಸಮ. 6 ಕೋಣೆಯುಂ.

* ಅಲ್ಲಿ ಗರುಡನ ಮತ್ತು ಎರಡು ಹಾವುಗಳ ಕುಱುಹಂ ಬರೆದು ಎಂದು ಮೂಲಾನುಸಾರಿಯಾಗಿ ಟೀಕೆಯಿರಬೇಕು.

(ಗರುಡವಿಗ್ರಹಕಾಲಿ)

ಕಂ|| ಕರಡಿಯ ಪಲ್ಲೊಳ್ ಗರುಡ |
ಸ್ವರೂಪಮಂ ಮಾಡಿ ತಾಳ್ದಿ ನಿಲೆಯುಂ ಪುಷ್ಯಂ ||
ದೊರೆಕೊಳೆ ಕಟ್ಟಿರೆಯುಂ ಲ |
ಜ್ಜರಿಕೆಯನುಗ್ರಾಹಿ ಸಮಿತಿಗಾತನೆ ಗರುಡಂ || ೨೧ ||

(ಕೊಳೆವಾವ ವಿಷಕ್ಕೆ)

ತರಳಂ|| ನವಿಲಕೊಟ್ಟು ಕರಂಜ(ದ) ಪುಷ್ಪಫಳಂ ಘೃತಂ ಮಧು ಬೇವು ಸಾ |
ಸಿವೆಗಳೆಂಬಿವನಕ್ಕೆ ನೆಯ್ದ್ ಬಜೆ ಬಂಜೆವಾಗಲ ಮೂಲಮಂ ||
ಬಿವನೆ ಕೇವಳಮಕ್ಕದಲ್ಲದೊಡಂ ತ್ರಿಶೂಲಿಯನಕ್ಕೆ ಸಂ |
ಭವಿಪುದಂ ಕುಡಿ ಪಿಂಗುಗುಂ ಕೊಳೆಪಾವು ತಿಂದ ಮಹಾವಿಷಂ || ೨೨ ||

ಕಂ|| ಕವಿಲೆಯ ಸೆಗಣದ ರಸದೊಳ |
ಮವುಂಗುರಂ ಬೆರಸಿ ಕುಡಿಗೆ ಮೇಣ್ ಪೂಸುಗೆ ಮೇಣ್ ||
ಸವನೆ ಕುಡಿಗೆಣ್ಣೆಯುಂ ತು |
ಪ್ಪವುಮಂ ಮೇಣ್ ಘೋಣಸಾಹಿ ವಿಷಮುಪಶಮಿಕುಂ || ೨೩ ||

ಮರಿಚಂ ಪಿಪ್ಪಲಿ ಪಾದರಿ |
ಕರವೀರದಮೂಲಮರ್ಕಪುಷ್ಪಮುಮಂ ಕೊಂ ||
ಡರೆದಂಬಿಲದೊಳ್ ಕುಡಿದಂ |
ದಿರದಟಾಗುಂ ವ್ಯ(ಭ್ಯ)ಂತರೋರಗಂಗಳ ವಿಷಮುಂ || ೨೪ ||

---

ಬೇರಂ ಉದಕದಲ್ಲರೆದು ಕುಡಿಯಲ್ ; ಅಲ್ಲಾ ಬಾಗೆಯ ಪೂವಂ ಅಕ್ಕಿಗರ್ಚಿನಲ್ಲಿ ಅರೆದು ಕುಡಿಯಲ್ ಆತಂಗೆ ವರ್ಷಪರ್ಯಂತಂ ಪಾವಿನ ಬಾಧೆಯಿಲ್ಲದಿರ್ಪುದು—೨೦.

ಟೀ|| ಕರಡಿಯ ಪಲ್ಲಂ ತಂದು ಗರುಡನ ರೂಪಂ ಮಾಡಿಸಿ ಪುಷ್ಯನಕ್ಷತ್ರದಲ್ಲಿ ಆರೂಹನುಡಿಯಲ್ಲಿ ಕಟ್ಟಲ್ *(ಕಟ್ಟಿಕೊಳಲ್) ಸಂದೇಹವಿಲ್ಲದೆ ಸಮಸ್ತಸರ್ಪಕುಲಂಗಳ್ಗೆ ಆತನೆ ಗರುಡಸಮಾನನಾಗಿರ್ಪಂ—೨೧.

ಟೀ|| ಮಯೂರ ಸಿಖೆ, ಹುಲಿಗಿಲಹೂ, ಆ ಬೀಜಂ, ತುಪ್ಪಂ, ಜೇನೆಯ್, ಹೆಬ್ಬೇವಿನ ಸೊಪ್ಪು, ಸಾಸಿವೆ, ಇವೆಲ್ಲಮನೊಂದಾಗಿ ಅರೆದು ಕುಡಿವುದು. ಅಲ್ಲಾ ಬಜೆ, ಬಂಜೆವಾಗಲ್ ಗೆಂಡೆ ಈಯೆರಡುಮನರೆದು ತುಪ್ಪದಲ್ಲಿ ಕುಡಿಸುವುದು. ಈ ಔಷಧಂಗಳಿಂದೆ ಕೊಳೆವಾವು ಕಚ್ಚಿದ ವಿಷಂ ಮಾಣ್ಬುದು—೨೨.

ಟೀ|| ಕವಿಲೆಯಾಕಳ ಸಗಣಿಯರಸಮಂ ಕೊಂಡು ಅಂಗುರಮನರೆದು ಕದಡಿ ಕುಡಿಸಲ್ ಅಲ್ಲಾ ಎಳ್ಳೆಣ್ಣೆಯುಂ ಆಕಳತುಪ್ಪಮುಮಂ ಸಮನಾಗಿ ಕೂಡಿ ಕುಡಿಸಲ್ ಹೆಬ್ಬಾವು ಕರ್ಚಿದ ವಿಷಂ ಪರಿಹರಿಪುದು—೨೩.

ಟೀ|| ಮೆಣಸು, ಪಿಪ್ಪಲಿ, ಪಾದರಿಮರದ ಪೇರ್, ಕಣಗಿಲ ಬೇರ್, ಎಕ್ಕೆಯ ಪೂ,

* ಇಲ್ಲಿ ಮೂಲದಂತೆ—ಅಲ್ಲಾ ಗುರುಪುಷ್ಯದಲ್ಲಿ ಲಜ್ಜರಿಕೆಯ ಬೇರಂ ತಂದು ಉಡಿಯಲ್ಲಿ ಕಟ್ಟಿಕೊಳಲ್—ಎಂಬ ಟೀಕೆಯಿರಬೇಕು.



ಮ|| ಉರಗವ್ರಾತದ ಲೋಳೆಯೊಕ್ಕೆಡೆಗಳೊಳ್ ತೇಟ(ರ) ಸ್ಕ ಪಾತೇಟ್ಟ(ದುಗ)ಳು |
ಬ್ಬರದಿಂದಂ ಮಿಡಿವಂದು ಲೋಳೆ ಸುರುಕಂ ಶೋಕಂ ಬೆಮರ್ಪ್ ಮೋಹನಂ ||
ಜ್ವರವಾಕಂಪಮಪಾನವಾಯು ಮಲಮೂತ್ರೋತ್ಸರ್ಜನಂ ಲಿಂಗವಿ |
ಸ್ಫುರಣಂ ಸಾವು ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋರ್ಕುಗುಂ || ೨೫ ||

(ತೇಳುವಿಷಕ್ಕೆ)

ಪೃಥ್ವಿ|| ಘನಂ ಮೆಣಸು ಶುಂಠಿ ಪಿಪ್ಪಲಿ ನಿಶಾದ್ವಯಂ ಬೀಟಲ |
ಕ್ಕಿ ನಿಂಬಫಳಮೆಂಬಿವಂ ಸುರಭಿಮೂತ್ರದಿಂದಂ ವಿಲೋ ||
ಚನದ್ವಯದೊಳೆಚ್ಚೆ ಮೇಣ್ ಕುಡಿಯೆ ಸೈಂಧವಾಜ್ಯಂಗಳಂ |
ಮಸೋ[1]ಮುದದೆ ಸರ್ಪ [ವೃಶ್ಚಿಕ] ವಿಷಾಪಹಂ ನಿಶ್ಚಯಂ || ೨೬ ||

ಚಂ|| ಮಿದಿದಿನದುಗ್ಧದಿಂ ಗುಟ[2]ಗೆ ಮಾಡಿ ನವಾರುಣ ಕೇಸರಂ ಕು[3]ಳೀ |
ರದ ಪಿಶಿತಂ ಮಣಿಶಿಲೆ ಕುಸುಂಬೆಯ ಪೂವರಿದಾಳ[4]ಮರ್ಕಕೀ ||
ಟದ ಗೃಹಗೋಧೆಯೆಚ್ಚಮಿವನೊಯ್ಕನೆ ತೇಯಿ(ಯ್ದು)ದಲ್ಲಿ ಪೂಸೆ ನಿ |
ಲ್ಲದು ವಿಷಮಂತದುಂ ಪೆಱರನಂಟಿಸೆ ಪತ್ತುಗುಮಾ ಮಹಾವಿಷಂ || ೨೭ ||

---

ಆ ಬೇರ್ ಇವಂ ತಂದು ಅಂಬಿಲದಲ್ಲರೆದು ಕುಡಿಸಲ್ ಕಿಱುಕುಳಮಪ್ಪ ಪಾವುಗಳ್ ಕರ್ಚಿದ ವಿಷಂಗಳುಂ ಮಾಣ್ಬುವು—೨೪.

ಟೀ|| ಸರ್ಪ(ಮ)ಸಮೂಹಂಗಳ ಬಾಯ ಲೋಳೆಗಳ್ ಸುರಿದ ಠಾವಿನಲ್ಲಿ (ಚೇಳು) ತೇಳುಗಳ್ ಪುಟ್ಟುವುವು. ಆ ತೇಳು (ಚೇಳು)ಗಳ್ ತನ್ನೊಳುಳ್ಳ ಸತ್ವದಿಂದಮೂಱಿದೊಡೆ ಲೋಳೆ ಸುರಿವುದು. ದೇಹಂ ಮಱು(ರು)ಗುವುದು. ದುಃಖಂ ಪುಟ್ಟುವುದು; ದೇಹಂ ಬೆಮರ್ಪುದು; ಮಱವೆ ಪುಟ್ಟುವುದು; ಜ್ವರಂ ಪುಟ್ಟುವುದು; ನಡುಕಂ ಪುಟ್ಟುವುದು; ಅಧೋವಾಯು ನಡೆವುದು; ಮಲಮೂತ್ರಂ ನಡೆವುದು; ಕಾಱುವಂ; ಲಿಂಗಂ ಬಾತುದು; ಉಗ್ರಮಪ್ಪ ತೇಳುಗಳ ವಿಷದಿಂದ ಮರಣಮುಂ ಮನುಷ್ಯರ್ಗೆ ಅಪ್ಪುದು—೨೫.

ಟೀ|| [5]ಭದ್ರಮುಸ್ತೆ, ಮೆಣಸು, ಶುಂಠಿ, ಅರಿಸಿನಂ, ಮರದರಿಸಿನಂ, ಅಕ್ಕಿಹೆಡೆ, ಕಹಿಬೇವಿನ, ಕಾಯ್, ಈ ಪೇಟ್ಟ ಔಷಧಂಗಳೆಲ್ಲಮಂ ಕೂಡಿ ಗೋಮೂತ್ರದಲ್ಲರೆದು ಕಣ್ಣೊಳೆಚ್ಚುವುದು. ಅಲ್ಲಾ ಸೈಂಧವಮಂ ಆಕಳತುಪ್ಪದಲ್ಲಿ ಕದಡಿ ಕುಡಿಸಲ್ ಎಲ್ಲಾ ಪ್ರಕಾರದ ತೇಳುಗಳೂಱಿದ ವಿಷಂ ಮಾಣ್ಬುದು—೨೬.

ಟೀ|| ಪೊಸನಾಗಕೇಸರಂ, ಏಡಿಯಮಾಂಸಂ, ಮಣಿಶಿಲೆ, ಕುಸುಂಬೆಯಪೂ, ಅರಿದಾಳಂ, ಮನೆವಕ್ಕಿಯಪಿಷ್ಟಿ ಇವೆಲ್ಲಮನೊಂದಾಗಿ ಎಕ್ಕೆಯಪಾಲಲ್ಲರೆದು ಗುಳಿಗೆಯಂ ಮಾಡಿ ಪೊಣಗಿಸಿಯಿರಿಸಿ ಆ ಗುಳಿಗೆಗಳನುದಕದಲ್ಲಿ ತೇದು ತೇಳೂಱಿದ ಠಾವಿಂಗೆ ಪೂಸಲ್ (ತೊಡೆಯಲ್) ಆ ವಿಷಂ ಮಾಣ್ಬುದು; ಆ ವಿಷಮಂ ಕೊಂಡು ಮತ್ತೊರ್ವರ್ಗೆ ಮುಟ್ಟಿಸಲವರ್ಗಂ ಪತ್ತುವುದು—೨೭.

1 ಮುದದಿ ವಿಷಾಪಹರಂ ನಿಶ್ಚಯಂ. 2 ಗೆಯ. 3 ಕುಳ್ಳಿದ. 4 ರ್ಕಕೀಟವಿಗ್ರಹಗೊಡೆಯಚ್ಚ. 5 ಆ ವಿಷಕ್ಕೆ ಭದ್ರಮುಸ್ತೆ.

ಕಂ|| ಕೆಂಡೇಟುಟಾದೊಡೆ ಗುಗ್ಗುಳ |
ದಿಂದಂ ಪೊಗೆಗೊಂಡು ಘೃತಯುಕ್ತಂ ರವಿದಳಮಂ ||
ತಂದಡಸಿ(ಟು)ಕಟ್ಟಿ ಪೋಣ್ ಸೊಡ |
ರಿಂದೊಸರ್ವೆಣ್ಣೆಯನೆ ಪೂಸೆ ತದ್ವಿಷಹರಣಂ || ೨೮ ||

(ಕೋಡವಣಗಂ ಕರ್ಚಿದುದರ್ಕೆ)

ಒಡಲೊನರಿ ಕೋಡವಣಗಂ |
ಕಡಿದೊಡೆ ಕಳೆದುಟ್ಟುದು ಮುಳ್ಳನಾಯಸದಿಂದಾ ||
ಎಡೆಯಂ ತಾವಂಗೊಳೆಯುಂ |
ತೊಡೆಯೆಯುಮಜ್ಜಗೆಯ ರಸಮನಿರದುಪಶಮಿಕುಂ || ೨೯ ||

(ಕಾಡನೊಟ್ಟಂ ಕಡಂದುಟು ಮೊದಲಾದುವೂಟಿದೊಡೆ)

ಸದಗುಪ್ಪೆಯನುಪ್ಪಂ ತು |
ಪ್ಪದೊಳಂ ಪೋಣ್ ಮೆಣಸು ನಾಗರಂ ನಂದ್ಯಾವ ||
ರ್ತದ ಕುಸುಮಮೆಂಬಿವಂ ಪೂ |
ಸಿದಂದು ನೊಟ(ಣ)ನಿಟಾದ ನೋವನಿರದುಪಶಮಿಕುಂ || ೩೦ ||

(ಪಲ್ಲಿಯವಿಷಕ್ಕೆ)

ಮರದರಿಸಿನಂ ಕಪಿತ್ಥಂ |
ಕರಂಜಬೀಜಂ ಕಟುತ್ರಯಂ ನುಗ್ಗಿಯಿವಂ ||
ಪರಿಮರ್ದಿಸಿ ಪೂಸುಗೆ ಸಂ |
ಹರಿಸುವುದಿಂತೀಳವೆ ಪಲ್ಲಿ ಕರ್ಚಿದ ವಿಷಮುಂ || ೩೧ ||

ಟೀ|| ಕೆಂದೇಟೂಟಿದೊಡೆ ಗುಗ್ಗುಳಧೂಪದಿಂದೆ ಪೊಗೆಯಂ ಕುಡುವುದು, ಎಕ್ಕೆಯ ಪಣ್ಣೆಲೆಯಂ ತಂದು ತುಪ್ಪಮಂ ಪೂಸಿ ಕಾಸಿ ಆ ಪೂಟಿದ ತಾವಿಂಗೆ ಕಟ್ಟುವುದು. ಅಲ್ಲಾ ದೀವಿಗೆಯಿಂದೆ ಸುರಿವ ಉರಿವೆಣ್ಣೆಯಂ ಪೂಸುವುದು. ಇವಱಿಂದೆ ಆ ವಿಷಂ ಮಾಣ್ಬುದು—೨೮.

ಟೀ|| [1]ಘಾಯಮುಪ್ಪಂತೆ ಕೋಡ(ವಣಿ)ಗ ಕಚ್ಚಿದೊಡೆ ಮುಳ್ಳುಂ ನಟ್ಟೊಡೆ ಆ ಮುಳ್ಳಂ ಬುದ್ಧಿಯಿಂದೆ ಕಿಟ್ತು ಆ ಘಾಯದ ತಾವುಗಳ್ಗೆ ಬೆಂಕೆಯೊಳೆ ತಾವವಂ ಮಾಡಿ ಅಜ್ಜಗೆಯ ರಸಮಂ ತೊಡೆಯಲ್ ಆ ಪುಣ್ಗಳ್ ಮಾಣ್ಬುವು—೨೯.

ಟೀ|| ಸಬ್ಬಸಿಗೆ, ಉಪ್ಪು ಈಯೆರಡುಮಂ ತುಪ್ಪದಲ್ಲರೆದು ಪೂಸುವುದು. ಅಲ್ಲಾ ಮೆಣಸು ಶುಂಠಿ, ನಂದಿವಟ್ಟದಪೂ ಇವನೊಂದಾಗಿ ಅರೆದು ಪೂಸೆ ವಿಷಮನುಳ್ಳ ಕಾಡನೊಟಂ, ಕಡಂದುಟು ಮೊದಲಾದುವೂಟಿದೊಡೆ ಅವಱ ವಿಷ ಹರಮಪ್ಪುದು—೩೦.

ಟೀ|| ಮರದರಿಸಿನಂ, ಬೆಟಲಬೇರ್, ಪುಲಿಗಿಲಬೀಜಂ, ಶುಂಠಿ, ಮೆಣಸು, ಪಿಪ್ಪಲಿ, ನುಗ್ಗಿಯ ಬೇರ್ ಇವೆಲ್ಲಮನೊಂದಾಗಿ ಉದಕದಲ್ಲರೆದು ಪಲ್ಲಿ ಕರ್ಚಿದ ತಾವಿಂಗೆ ಪೂಸಲ್ ಆ ವಿಷಂ ಮಾಣ್ಬುದು—೩೧.

1 ಘಾಯವಪ್ಪ ಹಾಂಗೆ.



(ಸಕಲ ವಿಷಕ್ಕೆ)

ಕಂ|| ಸಿರಿಸದ ಬೀಜಮುಮಿಂಬಾ |
ಗಿರೆ ಕಳ್ಳಿಯ ಪಾಲೊಳೂಡಿ ಕುಡೆ ಮಾಣ್ಗುಂ ದು ||
ರ್ಧರ ವಿಷಮುದು ಮಧುಘೃತಮುಂ |
ಬೆರಡನೆ ಕುಡೆ ತೀರ್ಗುಮೆಯ್ದೆ [1]ಪದಿನಯ್ದು ವಿಷಂ || ೩೨ ||

[2]........ಸಿರಿಸದೆಣ್ಣೆ ನವಿರಿಂ |
ಬಿವು ಪೋಣಂಕೋಲಿಯ ಮೂಲಮುಂತದು ಪೋಣ್ ಧೂ ||
[3]ಪವಿಕ್ಕುಗೆ ವಿಷಮುಮುಪ್ಪ ವಿ |
ಷವುಮಂ ಪರಿಹರಿಸಲಕ್ಕುಮಂಜಳಿಕವಚನಾ || ೩೩ ||

(ಇಲಿಯ ವಿಷಕ್ಕೆ)

ಮದನಫಳಂ ಬಜೆ ರುಚಿ ದೇ |
ವದಾಳಿಯೆಂಬಿವನೆ ಘಂ[4]ಧದ ಜಲದೆ ಪೋಣ ||
ಲ್ಲದೊಡೆ ಶರಪುಂಖಿಯ[5]ಜಮೂ |
ತ್ರದೆ ಕುಡಿದೊಡಿಲಿಯ[6]ವಿಷಮುವಿಷಮುಪಶಮಿಕುಂ || ೩೪ ||

(ಪೆಂಕುಳಿನಾಯವಿಷಕ್ಕೆ)

ಚಂ|| ದಿನಪತಿದುಗ್ಧಮಂ ಗುಡಮನೆಣ್ಣೆಯುಮಂ ಸವನಾಗಿ ಕೊಂಡು ಪೋಣ್ |
ಕನಕರಸಾಜ್ಯದುಗ್ಧಗುಡಮೆಂಬಿವನಿಪ್ಪಲವಾಗಿ ಕೂಡಿ ಪೋಣ್ ||
ಕನಕದ ಮೂಱು ಬೀಜಮನೆ ಪೋಣ್ ಕುಡುಗಲ್ಲದೊಡಂ ಶಿರೀಷವೊಂ |
ದನೆ ಜಲದಿಂದೆ ಪೂಸುಗದು ಪೆಂಕುಳಿ ನಾಯ ವಿಷಾಪಹಾರಕಂ || ೩೫ ||

ಟೀ|| ಬಾಗೆಯ ಬೀಜಮಂ ಚೆನ್ನಾಗಿ ಕಳ್ಳಿಯ ಪಾಲಲ್ಲಿ ಭಾವನೆಯಂ ಕೊಟ್ಟು ಆ ಬೀಜಮನರೆದು ಕುಡಿಯೆ ಕೊಡಲ್ ಸೈರಿಸಲೆ ಬಾರದಿರ್ದ ಆವ ವಿಷಮಾದೊಡಂ ಮಾಣ್ಗುಂ. [ಜೇನೆಯ್, ತುಪ್ಪಂ ಇವೆರಡನೆ ಕೂಡಿಕುಡೆ [7]ಪದಿನಯ್ದು ತೆಱದ ವಿಷಮುಂ ಮಾಣ್ಬುದು]—೩೨.

ಟೀ|| ಸಿರಿಸದೆಣ್ಣೆ, ಕೂವಲ್, ಇವಂ ಕೂಡಿ ಧೂಪಮುಂ ಕುಡುವುದು. ಅಲ್ಲಾ ಅಂಕೋಲೆಯ ಬೇರಂ ತಂದು ಧೂಪಮನಿಕ್ಕುವುದು, ಇವಱಿಂದೆ ವಿಷಮುಮುಪ್ಪ ವಿಷಂಗಳುಂ[8]ಮಾಣ್ಬುವು—೩೩.

ಟೀ|| ಮಂಗಾರೆಯ ಕಾಯ್, ಬಜೆ, ದೇವದಾಳಿಯ ಬೀಜಂ ಇವಂ ಶ್ರೀಗಂಧದ ನೀರಿಂದಮರೆದು ಕುಡಿಸುವುದು. ಅಲ್ಲಾ ಶರಪುಂಖಿಯಂ ಆಡಿನಮೂತ್ರದಲ್ಲರೆದು ಕುಡಿಸುವುದು. ಇವಱಿಂದೆ ಇಲಿಗಳ್ ಕರ್ಚಿದ ವಿಷಂಗಳ್ ಮಾಣ್ಬುವು—೩೪.

ಟೀ|| ಎಕ್ಕೆಯಪಾಲ್, ಬೆಲ್ಲಂ, ಎಳ್ಳೆಣ್ಣೆ ಇವನೊಂದಾಗಿ ಕಲಸಿ ಲೇಪಮಂ ಮಾಡುವುದು.

1 ಪಡುಬಂದು. 2 ಸಿರಿಸದೆಣ್ಣೆ. 3 ಪವಿಕ್ಕುಗೆ ವಿಷಮುಚ್ಚವಿಷಮುಮಪ. (ಮೀನ್ ಕರ್ಚಿದ ವಿಷಮುಂ ಮಾಣ್ಬುದು. (ಟೀಕಾಕಾರನು ಮೂಲದ ಅಶುದ್ಧವಾದ "ವಿಷಮುಚ್ಚವಿಷಮುಂ" ಎಂಬ ಪಾಠವನ್ನು ನಂಬಿ ಮಚ್ಚ ಎಂಬುದಕ್ಕೆ ಮತ್ಸ್ಯ (ಮೀನ್) ವಿಷ ಎಂದು ಅರ್ಥ ಬರೆದಿರುವನು – ಹೀಗೆಯೇ ಖಗೇಂದ್ರಮಣಿದರ್ಪಣ ಟೀಕಾಕಾರನು – ಪಲ್ಲಿಲಿವಾಯ್ – ಎಂಬ ಹಳಗನ್ನಡ ಶಬ್ದಕ್ಕೆ ಹಲ್ಲಿಲ್ಲದ ಬಾಯವನು (ಬೊಚ್ಚುಬಾಯವನು) ಎಂಬರ್ಥವನ್ನು ತಿಳಿಯದೆ ಹಲ್ಲಿಯಂತೆ ಇಲಿಯಂತೆ ಬಾಯುಳ್ಳವನು—ಎಂದು ಟೀಕೆ ಬರೆದಿರುವನು.) 4 ಗಂಧೋದಕದಿನ. 5 ಛಾಗಮೂತ್ರ. 6 ವಿಷಮುಪಶಮಿಪ್ಪುಂ. 7 ಕಿಱುಕುಳಮುಱೆನಿಸಮಾಣು ದು. 8 ಮೀನು ಕಚ್ಚಿದ ವಿಷಂಗಳುಮಾವವು.

(ಕರಡಿ ಮೊದಲಾದುವಱ ವಿಷಕ್ಕೆ)

ಕಂ|| ಕರಡಿ ಪುಲಿ ಕುದಿರೆ ತೋಳಂ |
ನರಿಯೆಂಬಿವು ಕಚ್ಚಿದಂದು ತತ್ಕ್ಷಣದಿಂ ನೆ ||
ತ್ತರನೊತ್ತಿ ಕಳೆದು ಬಳಿಕಂ |
ತರಿಸದೆ ಚುರ್ಚುವುದು ಕಾಯ್ದ ಕಬ್ಬಿನದಿಂದಂ || ೩೬ ||

ಎರಡರಿಸಿನಮಂ ಜಾದುಮ |
ನೊರಸುಗೆ ನೀರಿಲ್ಲದಂದು ಮಧುಸಹಿತಂ ಹ ||
ತ್ತರಕೆಯ ರಸಮಂ ತೊಡೆಗಪ |
ಹರಿಕುಮುಗುರ್ಕೊಂಡ ಪಲ್ಲಿ ಉರ್ಚಿದ ವಿಷಮಂ || ೩೭ ||

(ಸಕಲವಿಷವ್ರಣಕ್ಕಂ)

ವಿವಿಧವ್ರಣದೊಳ್ [1]ಸಲೆ ಬಂ |
ಜೆವಾಗಲಂ ಪೂಸುಗೆಲ್ತುನಾಲಗೆಯಂ ಸ ||
ರ್ಪವಿಷಂ ಮೊದಲಾಗಿರೆ ಸಕ |
ಲವಿಷಕ್ಕಂ ಪೂಸುಗಾ ವಿಷಂ ಪೋಱಮಡುಗುಂ || ೩೮ ||

(ಕೃತ್ರಿಮಾದಿ ಸಕಳ ಕೀಟ ವಿಷಕ್ಕೆ)

ಪೊಸತಪ್ಪ ತುಪ್ಪಮಂ ಕಿಱು |
ಕುಸಾಲೆಯಂ ಬೇರ್ವೆರಸು ಕುಡಿಯ[2]ಲಿರದದು ಮಾ ||
ಣಿಸುಗುಂ ಕೃತ್ರಿಮವಿಷಮಂ |
ಖ್ಯಸಕಳ ಕೀಟಕ ವಿಷಂಗಳೆನಿತೊಳವನಿತಂ || ೩೯ ||

ಅಲ್ಲಾ (ಮುದ್ದುಗುಣಿಕೆಯ ರಸಂ, ತುಪ್ಪಂ, ಪಾಲ್, ಬೆಲ್ಲಂ ಇವನಿಪ್ಪಲವಾಗೆ ಕೂಡಿ ಲೇಪಂ ಮಾಡುವುದು.) ಅಲ್ಲಾ - ಮುದ್ದುಗುಣಿಕೆಯ ಮೂಱುಬೀಜಮನುದಕದಲ್ಲರೆದು ಕುಡಿಸುವುದು. ಅಲ್ಲಾ ಬಾಗೆಯ ಬೀಜಮಂ ಉದಕದಲ್ಲರೆದು ಲೇಪಂ ಮಾಡುವುದು. ಇವಱಿಂದೆ ಪೆಂಕುಳಿಗೊಂಡ ನಾಯ್ ಕಚ್ಚಿದ ವಿಷಂ ಮಾಣ್ಬುದು—೩೫.

ಟೀ|| ಕರಡಿ, ಪುಲಿ, ಕುದಿರೆ, ತೋಳಂ, ನರಿ ಇವು ಕರ್ಚಿದೊಡೆ ಆ ಕ್ಷಣದಲ್ಲಿ ಘಾಯಮನೊತ್ತಿ ನೆತ್ತರಂ (ರಕ್ತಮಂ) ತೆಗೆವುದು. ಕಬ್ಬಿನಮಂ ತೆಗೆದುಕೊಂಡು ಕಾಸಿ ಆ ಘಾಯಮಂ ಸುಡುವುದು—೩೬.

ಟೀ|| ಅರಿಸಿನಂ, ಮರದರಿಸಿನಂ, ಜಾದು ಈ ಮೂಱುಮನೊಂದಾಗಿ ತೇದು ಪೂಸುವುದು. ಇವೆರಡಱಿಂದೆ ಉಗುತರ್ಗಿದ ವಿಷಂ ಪಲ್ಲಿಂ ಕಚ್ಚಿದ ವಿಷಂಗಳುಂ ಮಾಣ್ಬುವು—೩೭.

ಟೀ|| ಆವುದೊಂದು ವಿಷಪ್ರಾಣಿ ಕಚ್ಚಿದ ವಿಷದ ಪುಣ್ ಮಾಣದೆ ವ್ರಣಂ ಸುರಿಯುತ್ತಿರಲ್ ಅದರ್ಕೆ ಬಂಜೆವಾಗಲಗೆಂಡೆ(ಡ್ಡೆ)ಯನುದಕದಲ್ಲರೆದು ಪೂಸುವುದು. ಅಲ್ಲಾ ಎಲ್ತುನಾಲಗೆಯ ಬೇರನುದಕದಲ್ಲರೆದು ಪೂಸುವುದು. ಇವಱಿಂದೆ ಪಾವಿನವಿಷಂ ಮೊದಲಾದ ಎಲ್ಲಾ ವಿಷಂಗಳಿಂದಂ ಪುಟ್ಟಿದ ಪುಣ್ ಮಾಣ್ಬುದು. ಆ ಪುಣ್ಣಿನವೊಳಗಿಹಂಥಾ ವಿಷಹರವಹು(ಪ್ಪು)ದು—೩೮.

ಟೀ|| ಆಗಳಂತೆ ಬೆಣ್ಣೆಯಂ ಕಾಸಿದ ಆಕಳತುಪ್ಪಂ ಕಿಱುಕುಸಾಲೆಯ ಬೇರರಸಂ ಇವೆರಡು

1 ಪೂಸುಗೆ ಬಂ। ಜೆ ವಾ. 2 ಯ ಕದಿರದದು.



(ನಸುಗುನ್ನಿಯ ತಿನಿಸಿಂಗೆ - ಪುಱು ತಿಂದ ಬೇನೆಗಂದೆಗಳ್ಗಂ)

ಕಂ|| ನಸುಗುನ್ನಿಯ ತಿ(ಮಿ)ನಿಸ(ರ)ಂ ಮಾ |
ಣಿಸುಗುಂ ಘೃತಮೊಂದೆ ಪಾಲ್ಮರಂಗಳ ಪಾಲ್ ಪಿಂ ||
ಗಿಸುಗುಂ ತಡೆದಿರದಭ್ಯಂ |
ಗಿಸಿದೊಡೆ ಪುಱು ತಿಂದ ಬೇನೆಯಂ ಗಂದೆಯುಮಂ || ೪೦ ||

(ಕೇರಪುಣ್ಗೆ)

ಕರಿಯೆಳ್ಳಂ ಗೋಕ್ಷೀರದೊ |
ಳರೆದೆಮ್ಮೆಯ ಬೆಣ್ಣೆವೆರಸು ಮೇಣ್ ಬೆಣ್ಣೆಯೊಳೊಂ ||
ದಿರೆ ಕಿಱುಸಾಲೆಯ ಬೇರಂ |
ಸಿರಿಸಮುಮಂ ಪೂಸೆ ಕೇರ ಪುಣ್ಗಳ್ ಕಿಡುಗುಂ || ೪೧ ||

(ಉಮ್ಮತ್ತದ - ಹಾರಕಿನ ಮದಕ್ಕೆ)

ಕ್ಷೀರಸಿತಪಾನದಿಂ ಧು |
ತ್ತೂರದ ಕೂಷ್ಮಾಂಡರಸದೊಳಂ ಬೆಲ್ಲದೊಳಂ ||
ಹಾರಕ್ಕಿನ(ಯ) ಸೊರ್ಕಡಗುಂ |
ವಾರಣಮದಮುಡುಗುವಂತೆ ಸಿಂಗದ ದನಿಯಿಂ || ೪೨ ||

(ಗಣಲಿಗೆ – ಮುದ್ದುಗುಣಿಕೆಯ ವಿಷಕ್ಕೆ)

ಜಲಜಸಖಮೂಲಮದು ಕೇ |
ವಲಮುಕ್ಕೆರಡರಿಸಿನಂಗಳಕ್ಕಂತವು ಶೀ ||
ತಳ ಜಳದಿಂದಂ ಕುಡಿಯಿಸೆ |
ಕಳೆಗುಂ (ಕ)ಣಲಿಗೆ(ಗಿಲೆ)ಯ ಮುದ್ದುಗುಣಿಕೆಯ ವಿಷಮಂ || ೪೩ ||

ಮಂ ಕೂಡಿ ಕುಡಿಸಲ್ ಕೆಯ್ಮಸಕಂ ಮೊದಲಾದ ಸ್ಥಾವರ ಜಂಗಮ ಕೃತ್ರಿಮ ವಿಷಂಗಳುಂ ಮಾಣ್ಬುವು—೩೯.

ಟೀ ನಸುಗುನ್ನಿಯ ಕಾಯ್, ಮೆಯ್ಯಂ ತಾಗಿದ ತಿಮಿರಕ್ಕೆ ತುಪ್ಪಮಂ ಪೂಸಿಕೊಳಲ್ ಆ ತಿಮಿರಂ ಮಾಣ್ಬುದು. ಪಾಲ್ಮರಂಗಳ ಪಾಲಂ ತಂದು ಪೂಸಲ್ ಪುಱುಗಳೂಱಿದ ವಿಷಂ, ಅವಱಿಂದೆ ಪುಟ್ಟಿದ ಗಂದೆಗಳುಂ ಮಾಣ್ಬುವು—೪೦.

ಟೀ|| ಕರಿಯ ಎಳ್ಳಂ ಆಕಳ ಪಾಲಲ್ಲರೆದು ಎಮ್ಮೆಯ ಬೆಣ್ಣೆಯಂ ಕಲಸಿ ಪೂಸುವುದು. ಅಲ್ಲಾ ಎಮ್ಮೆಯ ಬೆಣ್ಣೆ, ಕಿಱುಕುಸಾಲೆಯ ಬೇರ್, ಬಾಗೆಯ ಬೇರ್ ಈ ಮೂಱುಮನೊಂದಾಗಿ ಅರೆದು ಪೂಸಲ್ ಗೇರೆಣ್ಣೆ ತಾಗಿದ ಪುಣ್ಗಳ್ ಮಾಣ್ಬುವು—೪೧.

ಟೀ|| ಪಾಲಂ ಸಕ್ಕರೆಯಂ ಕದಡಿ ಕುಡಿಯಲ್ ಉಮ್ಮತ್ತದ ಮದಂ ತಿಳಿವುದು. ಕುಂಬಳಕಾಯ ತಿರುಳಿನರಸಂ, ಬೆಲ್ಲಂ ಇವೆರಡಂ ಕದಡಿ ಕುಡಿಯಲ್ ಆಹಾರಕಿನ ಮದಮುಂ ಸಿಂಹಧ್ವನಿಯಂ ಕೇಳ್ದ ಆನೆ ಎಹಗೆ ತಗ್ಗುವುದು ; ಆಹಗೆ ತಗ್ಗುವುದು—೪೨.

ಟೀ|| ಎಕ್ಕೆಯಬೇರನಾದೊಡಂ, ಅಲ್ಲಾ ಅರಿಸಿನಂ ಮರದರಿಸಿನಂ ಇವೆರಡುಮಂ ಕೂಡಿಯಾದೊಡಂ ಜಬ್ಬುಗಟ್ಟ ತಣ್ಣೀರಲ್ಲಿ ಕದಡಿ ಕುಡಿಯಲ್ ಕಣಿಗಿಲೆಯ ಬೇರ ವಿಷಂ, ಮುದ್ದುಗುಣಿಕೆಯ ವಿಷಂ ಇವು ಮಾಣ್ಬುವು—೪೩.

(ಕಂಬುಲದ ಸೊರ್ಕಿಂಗೆ)

ಕಂ|| ಕಂಬುಲದ ಸೊರ್ಕುದೊರೆಕೊಳೆ |
ತಿಂಬುದು ಬಳಪಮನದಲ್ಲದೊಡೆ ಕುಡಿವುದು ಶೀ ||
ತಾಂಬುವ ನಿರ್ಕುಡಿತೆಯ ನಿರ |
ದಿಂಬಂ ಮಾಳ್ಕುಂ ಸರಸ್ವತೀ ಮುಖತಿಳಕಾ || ೪೪ ||

(ವಿಷಮಂ ಮೆದ್ದೊಡಂ ತಾಗದಿರ್ಪುದರ್ಕೆ)

ಹಯಗಂಧಿಯಬೇರಂ ಕ್ಷಾ |
ರಯುತಂ ಮೆಲ್ದಂದೆ ಪುಟ್ಟಿದೆಳಗಱುವಿನ ವಿ ||
ಷ್ಟಿಯುಮಂಗುರುವುಮನುಂ ತಿಂ |
ದು ಯಥೇಷ್ಟಂ ತಿನ್ಗೆ ಮೆಯ್ಗೆ ಮುಟ್ಟಿದ ವಿಷಮುಂ || ೪೫ ||

(ಸಕಲವಿಷಕ್ಕಂ)

* ಲೋಯಿಸರಂ ಶರಪುಂಖಿಯ |
ಬಂಜೆವಾಗಲೆಲೆವಳ್ಳಿಯನಕ್ಕಿಗರ್ಚಿಂ ||
ದರೆದು ಕುಡಿಯಿಸಿದಾ |
ಗಳೆ ತಾಂ ಸಕಲವಿಷಮನದು ಸಂಹರಿಕುಂ || ೪೬ ||

(ಸರ್ವಗ್ರಹೋಚ್ಚಾಟನ ಧೂಪಂ)

ಮ|| ಮರಿಚಂ ಸಾಸಿವೆ ಮಾಗಧಂಗಳಿವಱಿಂ ನೇತ್ರಾಂಜನಂ ಮಾಳ್ಕೆ ಭೃಂ |
ಗರಸಂ ಸರ್ಷಪನಿಂಬತೈಲಮಿವಱಿಂ ಮೇಣ್ ನಸ್ಯಮಂ ಮಾಳ್ಕೆ ಮೇಣ್ ||
ಪುರ(ಳ)ನಿಂಬಚ್ಛದ ರಾಜಿ ಕಾಕಗರ(ಱ)ದಿಂದಂ ಧೂಪಮಂ ಮಾಳ್ಕೆ ದು |
ರ್ದ್ಧರ ದುಃಖಾವಹ ಶಾಕಿನೀಪ್ರಭೃತಿಗಂ ಸರ್ವಗ್ರಹೋಚ್ಚಾಟನಂ || ೪೭ ||

ಟೀ|| ವೀಳೆಯಂ ಸೊರ್ಕಿದೊಡೆ ತಲೆಯಂ ಪಿಡಿದೊಡೆ ಬಹಳವ ಮೆಲ್ವುದು, ಅಲ್ಲಾ ಎರಡು ಕುಡಿತೆ ತಣ್ಣೀರಂ ಕುಡಿವುದು. ಇವಱಿಂದೆ ವೀಳಯದ ಸೊರ್ಕು ಮಾಣ್ಬುದು—೪೪.

ಟೀ|| ಅಶ್ವಗಂಧಿಯ ಬೇರಂ ಯುವಕ್ಷಾರಮಂ ಕೂಡಿ ಮೆಲ್ವುದು, ಅಲ್ಲಾ ಆ ಕ್ಷಣದಲ್ಲಿ ಹುಟ್ಟಿದಂತಹ ಎಳಗಱುವಿನ ವಿಷ್ಟಿಯಂ ಅಂಗುರವಂ ಕೂಡಿ ಮೆಲ್ವುದು. ಇವಱೊಳಗೆ ಆವುದೊಂದು ದೊರಕಿದೊಡಂ ಅದಂ ಮೊದಲೊಳ್ ಮೆಲ್ದು ಬೞಿಕ್ಕವಾವುದೊಂದು ವಿಷಮಂ ಮೆದ್ದೊಡಂ ಆ ವಿಷಂ ತಾಂಗಲರಿಯದು—೪೫.

ಟೀ|| ಲೋಯಿಸರಂ, ಶರಪುಂಖಿ, ಬಂಜೆ, ವಾಗಲ ಬೇರ್, ವೀಳಯದೆಲೆವಳ್ಳಿ ಈ ನಾಲ್ಕುಮನಕ್ಕಿಗರ್ಚಿನ ನೀರಲ್ಲರೆದು ಕುಡಿಯಿಸಲ್ ಇದಱಿಂದೆ ಎಲ್ಲಾ ವಿಷಂಗಳುಂ ಮಾಣ್ಬುವು—೪೬.

ಟೀ|| ಮೆಣಸು, ಸಾಸಿವೆ, ಹಿಪ್ಪಲಿ ಇವನುದಕದಲ್ಲಿ ತೇದು ಕಣ್ಣಿನಲ್ಲಿಚ್ಚುವುದು. ಗರುಗದ ರಸಂ, ಸಾಸಿವೆ, ಬೇವಿನೆಲೆಯರಸಂ, (ಬೇವಿನೆಣ್ಣೆ?) ಈ ಮೂಱುಮಂ ಕೂಡಿ ಅರೆದು ನಸ್ಯಮಂ ಮಾಡುವುದು. ಬೇವಿನೆಲೆ, ಬಿಳಿಯ ಸಾಸಿವೆ, ಕಾಗೆಯುಗಱು ಇವಂ ಕೂಡಿ ಧೂಪಮನಿಕ್ಕುವುದು. ಇವಱಿಂದೆ ಶಾಕಿನಿ ಡಾಕಿನಿಗಳೆಂಬ ಗ್ರಹಂಗಳ್ ಮೊದಲಾಗಿ ಎಲ್ಲಾ ಗ್ರಹಂಗಳ ಸೊರ್ಕುಗಳುಂ ಮಾಣ್ಬುವು—೪೭.

* ಈ ಕಂದದ ಛಂದಸ್ಸು, ಪ್ರಾಸು ಇವೆರಡರಲ್ಲೂ ದೋಷವುಂಟು.



ಕಂ|| ಕನಕಂ ಪುಲಿಗಿಲ್ ಪೆಬೇರ್ |
ವಿನೆಲೆಯುಮಂ ಕೂಡಿ ಧೂಪಮಿಕ್ಕುಗೆ ಮೇಣ್ ಪೋಂ ||
ತಿನ ಮೂತ್ರದೊಳುಳ್ಳಿಯುಮರೆ |
ದು ನಸ್ಯಮಂ ಮಾಡೆ ಪಿಂಗುಗುಂ ಗ್ರಹನಿವಹಂ || ೪೮ ||

(ಸಕಲಗ್ರಹಕ್ಕೆ ನಸ್ಯಂ)

ಚಂ|| ಅರಿತಫಳಂ ಸಮುದ್ರಫಳಮುಂ ಬಜೆ ಪಿಪ್ಪಲಿ ಶುಂಠಿಯಾಮಯಂ |
ಮರಿಚಮಿವೆಯ್ದೆ ಬೊಮ್ಮಿಯರಸಂ ಬೆರಸೊಂದಿರೆ ಕೂಡಿ ಸಣ್ಣಮಾ ||
ಗರೆದೆಱೆದಂದು ನಸ್ಯಮನನಾಕುಳದಿಂ ಮೊಲನಾಗನಾದಿಯಾ |
ಗಿರೆ ಸಕಲಗ್ರಹಂಗಳುಮನಂದಲೆಗುಂ ಜಯಬಂಧುನಂದನಾ || ೪೯ ||

(ಆನೆಯಶಕ್ತಿವರ್ಧನಕ್ಕೆ)

ಕಂ|| ಪಿರಿದು ಮುಳಿದಿರ್ದ ಮಾದ್ಯ |
ತ್ಕರಿಕವು(ಕಾ) ಮದಜಳಮನದಱ ಕಣ್ಣೊಳ್ ಕೊಂಡೆ ||
ಚ್ಚೆ ರಜೋಧಿಕತ್ವದಿಂದಂ |
ಸುರರಾ[1]ಜಾಳ್ನಕ ಗಜಮುಮಂ ಗೆಲಲಾರ್ಕುಂ || ೫೦ ||

(ಮದದಾನೆಯ ಸ್ತಂಭನಕ್ಕೆ)

ಬಂದೊಂದೆಣಿಸದಿರು ಚು |
ಚುಂದರಿಯಂ ಪಿಡಿದು ಮದಗಜೇಂದ್ರಕ್ಕಿದಿರಂ ||
ಬಂದು ನಿಲೆ ತೊಲಗಿ ಪೋಕುಮ |
ದೊಂದನೆ ಕಂಭಮನೆ ಪೊಸೆ ಕಂಭಂದೊಱೆಗುಂ || ೫೧ ||

ಟೀ|| ಮದ್ದುಗು(ಮಿ)ಣಿಕನ (ಕೆಯ) ಬೇರ್, ಹುಲಿಗಿಲಬೇರ್, ಕಹಿಬೇವಿನ ಸೊಪ್ಪು ಈ ಮೂಱುಮಂ ಕೂಡಿ ಧೂಪವನಿಕ್ಕುವುದು. ಅಲ್ಲಾ ಬೆಳ್ಳುಳ್ಳಿಯನಾಡಿನ ಮೂತ್ರದಲ್ಲರೆದು ನಸ್ಯಂ ಮಾಡುವುದು. ಇವಱಿಂದ ಸೊರ್ಕಿದಂತಹ ಗ್ರಹಂಗಳ್ ಬಿಟ್ಟು ಪೋಪುವು—೪೮.

ಟೀ|| ಅರಿತಾಳದ ಕಾಯ್, ಸಮುದ್ರಫಳಂ, ಬಜೆ,ಹಿಪ್ಪಲಿ, ಶುಂಠಿ, ಕೋಷ್ಠಂ, ಮೆಣಸು ಇವೆಲ್ಲವಂ ಒಂದಾಗೆ ಸಮಭಾಗಿಯಾಗಿ ಕೊಂಡು ಬ್ರಾಹ್ಮಿಯರಸದಲ್ಲಿ ಅರೆದು (ಸಣ್ಣನಾಗಿ) ನಸ್ಯಮಂ ಮಾಡಲ್ ಮೊಲನಾಗಾದಿಯಾಗಿರ್ದ ಎಲ್ಲಾ ಗ್ರಹಂಗಳುಂ ಬಿಟ್ಟು ಪೋಪುವು—೪೯.

ಟೀ|| ಅಪಾರದಿನಮಿರ್ದಂತಹ ಆನೆಯಮದಮಂ ತೆಗೆದುಕೊಂಡು ಮತ್ತೊಂದು ಆನೆಯ ಕಣ್ಣೊಳ್ ಎಚ್ಚಲ್ ಆ ಆನೆ ತನ್ನಿಂದೆ ಬಲಾಧಿಕನಪ್ಪ ಐರಾವತದ ಸಮಾನಮಾದಂತಹ ಆನೆಯನಾದೊಡಂ ಗೆಲ್ವುದು—೫೦.

ಟೀ|| ಆ [2]ಔಷ(ಊಶ)ಧದ ಮೂಲ(ಮಂ) ಒಂದೆಂದು ಜಱೆಯದೆ? ಬೇರಂ ಪಿಡಿದುಕೊಂಡು ಮದಸೊರ್ಕಿಯಿದ್ದಂಥಾ (ಆನೆ ಮೊದಲಾದ) ಆನೆಗಳ ಮುಂದೆ ಇದಿರಾಗಿ ನಿಲ್ಲಲ್ ಆ ಆನೆ ಇದಿರಾಗಿ ನಿಲ್ಲಲರಿಯದೆ ತೊಲಗಿ ಪೋಪುದು; ಆ ಬೇರನೆ ಆನೆಯಂ ಕಟ್ಟುವ ಕಂಭಕ್ಕೆ ತೊಡೆಯಲ್ ಆ ಕಂಭದ ಸಮೀಪದಲ್ಲಿ ನಿಲಲಱಿಯದೆ ತೊಲಗಿ ಪೋಪುದು—೫೧.

1. ಜಾಳ್ಪಂದದ, ಸುರರಾಜಾಳಾನಗಜ (ಎಂದಿರಬಹುದು.) 2 ಅವ್ರುಸಧ.

(ಕುಸ್ತುಕ್ಕಶಕ್ತಿ ವರ್ಧನಕ್ಕೆ)

ಕಂ|| ಸಮನಿಸೆ ಹಸ್ತಂ ಲಾಂಗಲಿ |
ಯ ಮೂಲಮಂ ಕೊಂಡು ಪೂಸೆ ಸರ್ವಾಂಗಮನ ||
ಶ್ರಮದಿಂದಾತಂ ಚಾಣೂ |
ರ ಮಲ್ಲನಂ ಗೆಲ್ವ ಮಲ್ಲನಂ ಗೆಲಲಾರ್ಕುಂ || ೫೨ ||

ಸವಳದೆ ಕುಟುಕ್ಕಿನೊಳಗಿಂ |
ದ್ರವಾರುಣಿಯ ಬೇರನುಂಡು(ನಂದು) ಕೋಟಿಗೆ ಮತ್ತಾರ್ ||
ಗುವ ಕೋಟಿಕೊಕ್ಕಾಸನ ಕೋ |
ಟಿವೊಲಾಪೊಡಮೊಂದೆ ಕೊರಲಾಗಿವೂರೊಳಲು? || ೫೩ ||

---

ಟೀ|| ಹಸ್ತನಕ್ಷತ್ರದಲ್ಲಿ ಇಂದ್ರನಗೆಂಡೆಯುಂ ತಂದು ಉದಕದಲ್ಲರೆದು ಮೆಯ್ಗೆ ಪೂಸಿಕೊಂಡು ಮಲ್ಲಂಗೆ ಇದಿರಾಗಿ ನಿಲಲ್ ಆತಂ ಚಾಣೂರ ಮಲ್ಲನಾದೊಡೆಯುಂ ಗೆಲ್ವಂತಹ ಮಲ್ಲನುಮಂ ಗೆಲ್ದಪಂ—೫೨.

ಟೀ|| ಉದಯಕಾಲದಲ್ಲಿ ಕೋಟಿಗಳಿಗೆ ನೋಪ(ಹ)ಂ ಕೊಳ್ವಾಗಳ್ ಹಾವುಮೆಕ್ಕೆಯ ಬೇರಂ ತಂದು ಅರೆದು ಮೇವಿನ ವಸ್ತುವಿನ ಕೂಡೆ ಮೆಲಿಸಲ್ ಆ ಕೋಟಿ ಒಂದೇ ಪಸರ(ಭರ)ದಲ್ಲಿ ತನಗೆ ಇದಿರಹಂಥಹ ಕೋಟಿಗಳಂ ಗೆಲ್ವುದು—೫೩.

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀ ಮ ತ್ಕ ವಿ ತಾ ವಿ ಳಾ ಸ ತ ನೂ ಜಂ
**ಶ್ರೀಮಚ್ಚಾವುಂಡರಾಯ**
ವಿರಚಿತಮಪ್ಪ
**ಲೋಕೋಪಕಾರದೊಳ್**
ವಿಷಪ್ರಕರಣ (ವರ್ಣನಂ)
ದಶಮಾಧಿಕಾರಂ

---

# ಏಕಾದಶಾಧಿಕಾರಂ

## ೧೧. ಸರ್ವ ಲಕ್ಷಣ ಪರಿಜ್ಞಾನ ಪ್ರಕರಣಂ.

ಕಂ|| ಶ್ರೀಗೆ [1]ಗುಣಮಾ ಗುಣಕ್ಕಂ |
ಶ್ರೀಗಂ ಲಕ್ಷಣಮೆ [2]ವೊತ್ತ ಮೊದಲೆಂದು ಸಮ ||
ಸ್ತಾಗಮಮಿದನಱಪುಗುಮಿಂ |
ಬಾಗಿರೆ [3]ಚಾಷ್ಟಂಡನಖಿಳಲಕ್ಷಣಗುಣಮಂ || ೧ ||

[4]ಮಾನವರ್ಗಂಗಸ್ವರವಾ |
ಮಾನಂ [ರುಚಿ] ಪ್ರಕೃತಿಭಾವಗತಿ ರುಚಿರ ಮನೋ ||
ನ್ಮಾನ ಸ್ನೇಹ ಕ್ಷೇತ್ರದ |
ಶಾನುಗಕಂ ದ್ವಾದಶಾಂಗೆ ಲಕ್ಷಣಗುಣಮಂ || ೨ ||

(೧) ದೇಹ(ಅಂಗ) ಲಕ್ಷಣಂ.

(ಅಡಿವಿಡಿದುಕೊಡವರೆಗಂ)

ಚಂ|| ಬೆವರದೆ ಬೆಚ್ಚನಾಗಿ ಮೃದುವಪ್ಪಡಿ ನೆಟ್ಟನೆ [5]ಕೆಂಪುವೆತ್ತು ಮಿಂ |
ಚುವ ನಖುಮಾದಮೊಂದಿದ ಬೆರಲ್ಗಳಡಂಗದ ಗುಲ್ಫಮೊಡ್ಡಿ ಕೋ ||
ಋವ ಮಡಮುನ್ನತಾಂಘ್ರಿ ಪರಿವೃತ್ತ ಮನೋಹರ [6]ಜಂಘೆ ಹಸ್ತಿ ಹ |
ಸ್ತವನಿಬಿಸುತ್ತುಮಿರ್ಪ ತೊಡೆಗಳ್ ಪಡೆಗುಂ ಶುಭಮಂ ನಿರಂತರಂ || ೩ ||

---

ಟೀ|| ಚೆಲ್ವಿಕೆಯಿರ್ದಲ್ಲಿ ಸುಲಕ್ಷಣಗುಣಂಗಳುಂಟೆಂದು ಆ ಗುಣಕ್ಕೆ ಲಕ್ಷಣಂಗಳೆ ಪ್ರಧಾನಮಾಗಿರ್ಪುದಾಗಿ ಎಲ್ಲಾ ಶಾಸ್ತ್ರಂಗಳುಮಿಾಯರ್ಥಮನೆ ಪೇಳುತ್ತಿರ್ಪುವಾಗಿ ಆ ಎಲ್ಲಾ ಲಕ್ಷಣಂಗಳಂ ಪೇಳ್(ಪ)ರ್ಪೆ—೧.

ಟೀ|| ಮನುಷ್ಯರ್ಗೆ ದೇಹಂ, ಧ್ವನಿ, ದೇಹಚ್ಛಾಯೆ, ಪ್ರಮಾಣಂ, ಶೀಲವರ್ತನೆ, ನಡೆ, ಚೆಲ್ವಿಕೆ, ಮನೋಧರ್ಮಂ, ಸ್ನೇಹಂ, ಮಾತಾಪಿತೃಗಳ್, ದೋಷಾಫಲಂ?—ಇವು ಮೊದಲಾದ ಲಕ್ಷಣಂಗಳ್ ಪನ್ನೆರಡು ಪ್ರಕಾರಮಾಗಿ ಪೇಳಿಸಿಕೊಳ್ವುದು—೨.

ಟೀ|| ಉಷ್ಣಸಹಿತಮಾಗಿ ಬೆವರದೆ ಮೃದುವಾಗಿರ್ಪ ಪಾದಂ, ಚೆನ್ನಾಗಿ ಕೆಂಪಾಗಿ ಮಿಂಚುತಿರ್ಪ ಉಗುರ್ಗಳ್, ನಡುವೆ ತೆರಹಿಲ್ಲದೆ ಕೂಡಿಕೊಂಡಿರ್ಪ ಬೆರಲ್ಗಳ್, ಸಮನಾಗಿರ್ಪ ಪರಡು, ತೋಱಕೆಯಾಗಿರ್ಪ ಮಡಂ, ಉರುಟಾಗಿರ್ಪ ಪಾದಂ, (ಉಬ್ಬಿಕೊಂಡಿರ್ಪ ಮೇಂಗಾಲ್) ಬಟ್ಟಿತ್ತಾಗಿ ತಳುವಾಯಿಂದೆ ದೊಡ್ಡಿತ್ತಾಗಿರ್ಪ ಮೊಣಕಾಲ್, ಆನೆಯ ಸುಂಡಿಲಿಗೆ ಸಮನಾಗಿಹಂಥ ತೊಡೆ ಈ ಮರ್ಯಾದೆಯ ಲಕ್ಷಣಂಗಳನುಳ್ಳ ಪುರುಷಂ ಸಕಲೈಶ್ವರ್ಯಂಗಳನುಳ್ಳಾತನಪ್ಪಂ—೩.

---

1 ಸಣ. 2 ಪೊಟ್ಟವೊದ, ಮೊಕ್ಕೆವೊದ. 3 ಚಾ ಉಂಡ. 4 ಮದವಾಂಗ. 5 ಕೆಂಪುಮಿಂಚು. 6 ಜಂಗೆ.

(ಕಟಿ)

ಕಂ|| ನಡುನಿಡಿದಲ್ಲದೆಯುಂ ಪೋಣ್ |
ಕಡುಕಿಱಿದಲ್ಲದೆಯುಮೊದವಿ ಸಿಂಹದ ಕಟಿವೋಲ್ ||
ಕಡುಚೆಲ್ವೆನೆ [1]ಕಟಿ ಕಪ್ಪೆಯ |
**ಪೊಡೆವೊಡೆವೋಲ್ ತೋರ್ಪೊಡೆವೊಡಾತಂ ಧನ್ಯಂ** || ೪ ||

(ಲಿಂಗಂ)

ಮ|| ಧನದಾತಂ ಕಿಱಿದಾಗಿ ದೊಡ್ಡಿತೆನೆ ಲಿಂಗಂ ದೊಡ್ಡದಾದಂದು ನಿ |
ರ್ಧನನೊಂದುಂ ಸೆಲೆ(ಲೆ)ಯಿಲ್ಲದಂದು ಜನಪಂ ಮೆಯ್ವರ್ಣದಿಂ ಭೋಗಿ ವಾ ||
ಮನತಂ ಸ್ತ್ರೀಪ್ರಿಯನಂತೆ ದಕ್ಷಿಣನತಂ ಪುತ್ರಾನ್ವಿತಂ ಲಂಬವೃ |
ಷ್ಕನವಂ (ತಾಂ) ಚಿರಜೀವಿ ತತ್ಸಮತೆಯಿಂದಂ ಧೈರ್ಯಮಂ ತಾಳ್ದುಗುಂ || ೫ ||

(ಮೂತ್ರಶುಕ್ಲಲಕ್ಷಣಂ)

ಮ|ಸ್ರ|| ಪುರುಷಸ್ತ್ರೀಪ್ರಸ್ರವಂ ದಕ್ಷಿಣದೆ ಸುಱಿದು ಮೂತ್ರಂ ಬಲಕ್ಕೊತ್ತಿ ಶಬ್ದಂ |
ಬೆರಸೇಕಾಕಾರದಿಂ ಪೋಪೊಡೆ ಶುಭಫಲದಂ ಮಾಂಸಗಂಧೋಷ್ಣ ಶುಕ್ಲಂ ||
ಬರೆ ಭೂಪಂ ಮದ್ಯಗಂಧಂ ಬರೆ ಸುಖಿ ಮಧುಗಂಧೋಪಮಾನೂನಗಂಧಂ |
ಬರೆ ಧನ್ಯಂ ಕ್ಷಾರಗಂಧಂ ಬರೆ ಕಡುಬಡವಂ ಮಾನವಂ ತಾನೆನಿಕ್ಕುಂ || ೬ ||

(ಪೊಕ್ಕುೞ್-ವಳಿ-ರೋಮಾವಳಿಗಳ್)

ಮಾಲಿನಿ|| ಬಲದೆ ಸುಱಿದು ಸುಣ್ಣಂ ತಾಳ್ದಿ ಚೆಲ್ವಾಗೆ ಪೊಕ್ಕುೞ್ |
ವಳಿಗಳೊಗೆದು ಮೆಯ್ಯಂ ಕೊಂಡೆರಟ್ಮೂಱು ನಾಲ್ಕ ||
ಗ್ಗಳಿಸಿರೆ ನಸು ಪೊಂಗಿರ್ದಳ್ಳೆಗಳ್ ತೋಱೆ ರೋಮಾ |
ವಳಿ ನಿಮಿರ್ದಿರಲುತ್ತುಂಗೋದರಂ ಶುದ್ಧನಕ್ಕುಂ || ೭ ||

ಟೀ|| ಅಪಾರದೊಡ್ಡಿ[2]ತಲ್ಲದೆ, ಅಪಾರ ಸಣ್ಣವಲ್ಲದೆ ಸಿಂಹದ ಹಿಂಭಾಗದ ಮರ್ಯಾದೆಯಲ್ಲಿ ಇರ್ಪ ಹಿಂಭಾಗಂ ಕಪ್ಪೆಯ ಹೊಟ್ಟೆಯ ಮರ್ಯಾದೆಯಲ್ಲಿ ಇಹ ತೆಳ್ಳಿತಪ್ಪ ಹೊಟ್ಟೆ ಈ ಲಕ್ಷಣಂಗಳುಳ್ಳಾತಂ ಪುಣ್ಯವುಳ್ಳಾತನಪ್ಪಂ—೪.

ಟೀ|| ಲಿಂಗಮುದ್ದವಿಲ್ಲದೆ ಕಿಱಿದಾಗಿ ದೊಡ್ಡಿತಾ(ವಾ)ಗಿರಲ್ ಧನವಂತನಪ್ಪಂ, [3]ಉದ್ದಮಾಗಿರಲ್ ಧನಹೀನನಪ್ಪಂ, ಮೇಲೆ ಸೆರೆಗಳಿಲ್ಲದೆ ನಯಮಾಗಿರಲ್ ಅರಸನಪ್ಪಂ, ದೇಹದ ವರ್ಣದ ಮರ್ಯಾದೆಯ ವರ್ಣವಾಗಿರಲ್ ಭೋಗಿಯಪ್ಪಂ, ಎಡಗಡೆ ಬಾಗಿರಲ್ ಸ್ತ್ರೀಪ್ರಿಯನಪ್ಪಂ, ಬಲದಕಡೆ ಬಾಗಿರಲ್ ಮಕ್ಕಳುಳ್ಳಾತನಪ್ಪಂ, ವೃಷಣಂಗಳುದ್ದವಾಗಿ ನೇಲುತ್ತಿರಲ್ ಆಯುಷ್ಯಮುಳ್ಳಾತನಪ್ಪಂ, ಹಿರಿದು ಕಿಱಿದಲ್ಲದೆ ಸಮನಾಗಿರಲ್ ಐಶ್ವರ್ಯಮನುಳ್ಳಾತನಪ್ಪಂ-೫.

ಟೀ|| ಸ್ತ್ರೀಪುರುಷರ್ಕಳ್ ಮೂತ್ರಂ ಗೆಯ್ವಾಗಳ್ ಬಲಸುಱಿಯಾಗಿ ಧ್ವನಿ ಪುಟ್ಟವೊಂದೆ ಧಾರೆಯಾಗಿ ಬರಲೊಳ್ಳಿತ್ತು. ಶುಕ್ಲಂ ಮಾಂಸವಾಸನೆಯಾಗಿ ಉಷ್ಣವಾಗಿ ಸುರಿಯಲ್ ಶುದ್ಧಚಿತ್ತಮುಳ್ಳಾತನಪ್ಪಂ. ಕೊಱತೆಯಿಲ್ಲದೆ ಜೇನತುಪ್ಪದ ಪರಿಮಳಕೆ ಸಮಮಪ್ಪ ವಾಸನೆಯಾಗಿ ಸುರಿದೊಡೆ ಪುಣ್ಯಾಧಿಕನಪ್ಪಂ, ಖಾರವಾಸನೆಯಾಗಿ ಸುರಿದೊಡೆ ದಾರಿದ್ರ್ಯಮನುಳ್ಳಾತನಪ್ಪಂ. ಈ ಮರ್ಯಾದೆಯಲ್ಲಿ ಮನುಷ್ಯರ ಗುಣಂಗಳನಱಿವುದು—೬.

ಟೀ|| ಬಲದ ಸುಱಿಗುಱಿಯನುಳ್ಳ ಪೊಕ್ಕುೞ್, ಹೊಟ್ಟೆಯಲ್ಲಿ ತ್ರಿವಳಿಗಳ್ ನಯ

1 ಕಟಿ. 2 ಡ್ಡನಲ್ಲ. 3 ಸಸಿನಮುಳ್ಳದೆಡೆಂಡಾ(ದೊಂಕನಾ)ಗಿರಲ್



(ಕುಚಚೂಚುಕಜತ್ರುಗಳ್)

* ವೃತ್ತ(ದ್ರಿ)ಕೆ|| ಪ್ರ[1]ಭು(ವೆ) ನಿಮ್ನ ಕುಚಂ ವರಕಾಂತಾಕಾಂತನುಮುನ್ನತ ಚೂ(ಚೂ)ಚುಕಂ |
ಸುಭಗನುದ್ದಮೆನಿಪ್ಪೆದೆಯಾತಂ ಧನ್ಯನ[2]ಗಲ್ದುರಮುಪ್ಪವಂ ||
ಸುಭಟನುನ್ನತವಕ್ಷನುದಾರಂ ನೆಟ್ಟನೆ ಸಂಗತ ಜತ್ರುವಿಂ |
ವಿಭವದೈಶ್ವರ್ಯಹೀನನೆನಿಕ್ಕುಂ ನೋಟ್ಪೊಡಡಂಗಿದ ಜತ್ರುವಿಂ || ೮ ||

(ಬಱಿಬೆನ್ನಳ್)

ಕಂ|| ನತಮುಂ ಮಾಂಸಳಮುಂ ನು |
ಣ್ಣಿತುಮಾಗಿರೆ ತೋರ್ಪ ಮಗ್ಗುಲದು ಶುಭದಂ ಬೆ ||
ನ್ನತಿ [3]ಋಜುವಾಗೆ ಶುಭಂ ನೀ |
ಳ್ದು ತೋಱದಿರಲಿಂತುದ್ರೋಣಿವೆನ್ನ ಶುಭ[4]ವದುಂ || ೯ ||

(ಮುಯ್ಯುಂ ಕಕ್ಷಂಗಳು)

ಸಮಸಂಗತಿಯಿಂ ನೆಗೆದು |
ದ್ದವಾಗಿ ನಿರ್ಲೋಮಮಪ್ಪ ಮುಯ್ವುಗಳುಚಿತಂ ||
ತೆಮಟಿದ್ದೆ ಕುಱಿಯಿಲ್ಲದೆಯುಂ |
ಸುಮನೋಹರಮಪ್ಪ ಕಕ್ಷಮತಿಶುಭದಂಗಳ್ || ೧೦ ||

ಮಾಗಿ ಒಂದೆರಡ್ಮೂಱುನಾಲ್ಕಾಗಿ ತೋಱುಹ, ಅಳ್ಳೆಗಳ್ ಉಬ್ಬದೆ ಸಮವಾಗಿ ತೋಱುಹ, ರೋಮಾವಳಿಯೆದೆಪರ್ಯಂತಂ ಬಂದಿರುಹ ಈ ಲಕ್ಷಣಂಗಳನುಳ್ಳಾತಂ ಶುದ್ಧನೆನಿಸಿಕೊಳ್ವಂ—೭.

ಟೀ|| ಗುಱಿಯಾಗಿರ್ಪ ಮೊಲೆಯನುಳ್ಳಾತಂ ಪ್ರಭುವಪ್ಪಂ, ಉನ್ನತಮಪ್ಪಗಡ್ಡಮನುಳ್ಳಾತಂ ಉತ್ತಮೆಯಹಂಥಾ ಸ್ತ್ರೀಗೆ ಪುರುಷನಪ್ಪಂ, ಉದ್ದವಾದೆದೆಯನುಳ್ಳಾತಂ ಭಾಗ್ಯವಂತನಪ್ಪಂ, ಅಗಲಮಪ್ಪದೆಯನುಳ್ಳಾತಂ ಪುಣ್ಯಾಧಿಕನಪ್ಪಂ, ಒಡ್ಡಿದೆದೆಯುಳ್ಳಾತಂ ಪರಾಕ್ರಮಮುಳ್ಳಾತನಪ್ಪಂ, ಸಮಾನಮಪ್ಪ ಹರಡುಗಳನುಳ್ಳಾತಂ ಔದಾರ್ಯ (ಉದಾರ)ಮನುಳ್ಳಾತನಪ್ಪಂ, ದೊಡ್ಡವಾಗಿರ್ದಂಥಾ ಹರಡುಗಳನುಳ್ಳಾತಂ ಸಾಮರ್ಥ್ಯಾದ್ಯೈಶ್ವರ್ಯಮಿಲ್ಲದಾತನಪ್ಪಂ—೮.

ಟೀ|| ಬದಿ(ರಿ)ಗಳ್ ತುಂಬಿ ನಯವಾಗಿ ತೋಱುತ್ತಿರಲ್ ಐಶ್ವರ್ಯಮಂ ಕುಡುವುವು; ಬೆನ್ನಭಾಗಂ ಗುಱಿಯಿಲ್ಲದೆ ಸಸಿನವಾಗಿರಲೊಳ್ಳಿತ್ತು. ದೋಣಿಯ ಆಹಗೆ ಕುಱಿಯಾಗಿ ಇರ್ದೊಡೆ ಬೆನ್ ಒಳ್ಳಿತ್ತಲ್ಲ—೯.

ಟೀ|| ಮೊಱಕೆಯ್ಯಿಂದೆ ಪೆಗಲ್ ಪರ್ಯಂತಂ ಸಮನಾಗಿ ಕೂದಲಿಲ್ಲದಿರ್ಪ ಭುಜಂಗಳೊಳ್ಳಿವು. ಸಮನಾಗಿರ್ದಂಥಾ ಎದೆ, ಕೌಂಕುೞ್ ಗುಱಿಯಿಲ್ಲದೆ ಉನ್ನತವಾಗಿರುಹ ಈ ಲಕ್ಷಣಂಗಳನುಳ್ಳಾತಂ ಭಾಗ್ಯಾಧಿಕನಪ್ಪಂ—೧೦.

1 ಪ್ರಭು ನಿಮ್ನ. 2 ಗಲ್ದುರದಪ್ಪವಂ. 3 ರುಜುವಾಗಿರೆ ನೀಳ್ದು. 4 ವಕ್ಕುಂ.
* ಇದಕ್ಕೆ "ಅನವದ್ಯ"ವೆಂದು ನಾಗವರ್ಮನ ಛಂದಸ್ಸಿನಲ್ಲಿ ಹೇಳಿದೆ.

(ಕೆಯ್)

ಮ|| ಕವದಿಂ ದಟ್ಟಿದುವಾಗಿ ನೀಳ್ದ ಭುಜಮೊಳ್ಪಂ? ಶಂಗ(ತೋಳ್ಗ)ಳಾಗಿ(ಂತಿ)ದರ್ ಸಾ |
ಷ್ಠವದಿಂಪಂ ಚಟುಕೆನ್ನದಿರ್ಪ ಮೊಟಕೆಯ್ ವೃತ್ತತ್ವದಿಂಪೊಂದಿ ತೋ ||
ಱುವ ಮುಂಗೆಯ್ ಕಡುದೊಡ್ಡಿತಪ್ಪ ತಳಮೊಳ್ಪಂದೊಂದಿನೇರ್ಪಟ್ಟು ತೋ |
ಱುವ ದೀರ್ಘಾಂಗುಲಿ ಕೆಂಪುವೆತ್ತಸೆವುಗುರ್ ಮಾಳ್ಕುಂ ಮಹೈಶ್ವರ್ಯಮಂ || ೧೧ ||

(ಅಂಗೆಯ್)

ಪೃಥ್ವಿ|| ಮರಲ್ದ ತಳಮಾಗೆ ಭೋಗಿ ಕಪಿಹಸ್ತದಿಂ ಶ್ರೀಯುತಂ |
ತರಕ್ಷುಸಮಪಾಣಿಯಿಂದ ಮದುಕೃಷ್ಣಮುಂ ರೂಕ್ಷಮುಂ ||
ವಿರೂಕ್ಷಮುಮದಾಗೆ ಪಾಪಿ ಪರಿಪೀತದಾಚ್ಛಾಟನಂ? |
ನರಂ ಕರಮೆ ಧನ್ಯನಾಗಿಯುಮಗಮ್ಯನಾರೀಪ್ರಿಯಂ || ೧೨ ||

ಕಂ|| ಅತಿದೃಢ ನಿಮ್ನ ಸ್ನಿಗ್ಧಾ |
ಯತರೇಖಾತ್ರಿತಯಮಾಗೆ ಕರತಳದೊಳ್ ಸ ||
ನ್ನುತದಿನರೆಗಂಜಿ ಚೆಲ್ವಿಡ |
ದು ತೋಱೆ ಪೆರ್ವೆರಲೊಳಾತನುತ್ತಮ ಪುರುಷಂ || ೧೩ ||

(ಚಿಹ್ನಂಗಳ್)

ಮ|ಸ್ರ|| ಕುಲಿಶಂ ಚಕ್ರಂ ಧ್ವಜಂ ಕನ್ನಡಿ ಕಳಸ[1]ಮಿಭಂ ಸ್ವಸ್ತಿಕಂ ಘಂಟೆ ಶಂಖಂ |
ಜಲಜಂ ಛತ್ರಂ ಸಮುದ್ರಂ ಚಮರಮುಮಿಷುಚಾಪಂ ದಿನೇಶಂ ಶಶಾಂಕಂ ||
ಹಲವೃಕ್ಷಂ ಮತ್ಸ್ಯಮೆಂದಿಂತಿವು ತಳದೊಳ್ ಪಾದದೊಳ್ ತೋಱೆ ಜಾಱೇಂ |
ಬಲದೊಳ್ ಮರ್ತ್ಯಂಗೆ ವಾಮಾಂಗದೊಳಬಲೆಗೆ ಪುಣ್ಯಾವಹಂ ತಾನೆನಿಕ್ಕುಂ || ೧೪ ||

ಟೀ|| ತಱುವಾಯಿಂದೆ ಬಟ್ಟಿತ್ತಾಗಿ ನೀಳಮಪ್ಪ ಭುಜಂ, ಪೆರ್ಚ್ಚು ಕುಂದಿಲ್ಲದೆ ಸಮನಾಗಿರ್ಪ ತೋಳ್, ಚಟುಕೆನ್ನದಿರ್ಪ ಮೊಟಕೆಯ್, ಬಟ್ಟಿತಾಗಿರ್ಪ ಮುಂಗೆಯ್, ದೊಡ್ಡಿತ್ತಾಗಿರ್ಪ ಅಂಗೆಯ್, ಒಳ್ಳಿತ್ತಾಗಿ ನೀಳಮಾಗಿರ್ಪ ಬೆರಲ್ಗಳ್, ರಕ್ತವರ್ಣಮನುಳ್ಳುಗುರ್ಗಳ್, ಇಂಥಾ ಲಕ್ಷಣಮನುಳ್ಳ ಪುರುಷಂ ಐಶ್ವರ್ಯಮನುಳ್ಳಾತನಪ್ಪಂ—೧೧.

ಟೀ|| ಉನ್ನತವಾಗಿ ನಡುಗುಱಿಯಪ್ಪ ಅಂಗೆಯ್ಯಿಂದೆ ಭೋಗಿಯಪ್ಪಂ, ವಾನರಹಸ್ತದ ಮರ್ಯಾದೆಯಲ್ಲಿ ಬೆರಲ್ಗಳ್ ಉದ್ದಮಾಗಿರ್ಪ ಹಸ್ತದಿಂ ಐಶ್ವರ್ಯಮನುಳ್ಳಾತನಪ್ಪಂ. ಅಂಗೆಯ್ ಕರ್ಪಾಗಿ ನಯಮಿಲ್ಲದಿರ್ಪ ಹಸ್ತದಿಂ ದರಿದ್ರನಪ್ಪಂ, ಅಂಗೆಯ್ ಹೊಂಬಣ್ಣಮಾಗಿರ್ದೊಡೆ ಭಾಗ್ಯಾಧಿಕನಪ್ಪಂ. ಅಗಮ್ಯವಹಂಥಾ ಸ್ತ್ರೀಯರ ಬಯಕೆಯುಳ್ಳಾತನಪ್ಪಂ—೧೨.

ಟೀ|| ಅಂಗೆಯ್ ಅತ್ಯಂತ ದೃಢಮಾಗಿ ರಕ್ತವರ್ಣಮಾಗಿ ಅಱಿಯಬರ್ಪಂತಹ ಮೂಱು ರೇಖೆ ಖಂಡಿತಮಿಲ್ಲದಿರ್ದು, ಹೆಬ್ಬೆರಲಲ್ಲಿ ಅರೆಗಂಜಿಯಗಲಮಾಗಿ ಎರಡು ರೇಖೆಗಳ್ ತೋಱುಹ ಈ ಲಕ್ಷಣಮನುಳ್ಳ ಪುರುಷಂ ಉತ್ತಮಪುರುಷನೆನಿಸಿಕೊಳ್ವಂ—೧೩.

ಟೀ|| ಆವನಾನೊರ್ವ ಪುರುಷನ ಅಲ್ಲಾ ಸ್ತ್ರೀಯ ಅಂಗೆಯ್ ಪಾದತಳಂಗಳಲ್ಲಿ ವಜ್ರಾ

1 ಕಮಿಶರಂ.



(ಅಂಗೆಯ್ ರೇಖೆಗಳ್)

ಚಂ|| ಕರಭದ ರೇಖೆ ಸೋದರದ ರೇಖೆ ಕನಿಷ್ಠಿಕೆಯಾದಿ ರೇಖೆ ಸೌಂ |
ದರಿಯರ ರೇಖೆ ಪೆರ್ಬೆರಲ ಮೂಲದ ರೇಖೆ ತನೂಜರೇಖೆ ನೀ ||
ಳ್ದಿರೆ ಬರೆಗಡ್ಡಮಾಗದಿರೆಯುಂ ಶುಭಮಲ್ಲಿಯೆ ಕೃಷ್ಣಮಾಗೆ ಮೇಣ್ |
ಪಿರಿಯವೆನಿಪ್ಪುವಾಗೆ ಪುರುಷಂ ಬಗೆಗಂಶಿದನಾಗಮೋಕ್ತಿಯಿಂ || ೧೫ ||

ಕಂ|| ಕಿಱುಕುಣಿಕೆಯ ಬೆರಲಿಂದೆಡೆ |
ವಱಿಯದೆ ಸುಟ್ಟುಂಬೆವರೆಗಮೆಯ್ದಿದ ಬರೆಯಿಂ ||
ನೆಱೆ ನೂಱುವರ್ಷಮಲ್ಲಿಂ |
ಕಿಱಿದಾಗಿರೆ ಪೇಳ್ವ ತರದಿನಾಯುವ [1]ಪವಣಂ || ೧೬ ||

ಕಂ|| ಪರಮಾಯುವ ಬರೆಗಡ್ಡಂ |
ಬರೆ ಶೇಖೆಗಳೊಳಗೆ ಕುಕ್ಷದಿಂ ಪೊಱಗಸ್ತ್ರೋ ||
ತ್ಕರದಿನಪಮೃತ್ಯುವಕ್ಕುಂ |
ಪರಿಹರಿಕುಂ ಪೆಱವುರೇಖೆಯೆಡೆಗೊಂಡೊಡವಂ || ೧೭ ||

ಕಾರಂ, ಚಕ್ರಾಕಾರಂ, ಧ್ವಜಾಕಾರಂ, ಕನ್ನಡಿಯಾಕಾರಂ, ಕಳಶಾಕಾರಂ, ಆನೆಯಾಕಾರಂ, ಸ್ವಸ್ತಿಕಂ, ಘಂಟೆ, ಶಂಖಂ, ಪದ್ಮಂ, ಸತ್ತಿಗೆ, ಸಮುದ್ರಂ, ಚಮರಂ, ಅಂಬು ಬಿಲ್, ಸೂರ್ಯಮಂಡಲಂ, ಚಂದ್ರಮಂಡಲಂ, ನೇಗಿಲ್, ಶ್ರೀವೃಕ್ಷಂ, ಮೀನ್, ಇವೇ ಮೊದಲಾದುವುಗಳ ಆಕಾರಂ (ಲಕ್ಷಣಂಗಳ್) ಆವಪುರುಷಂಗೆ ಬಲದ ಹಸ್ತ, ಅಡಿಗಾಲ ತಳಂಗಳಲ್ಲಿ, ಆವ ಸ್ತ್ರೀಗೆ ಎಡದ ಅಂಗೆಯ್ ಪಾದ ತಳಂಗಳಲ್ಲಿ ತೋಱುತ್ತಿರ್ಪುದು ಅವರ್ ಭಾಗ್ಯಮುಳ್ಳವರೆನಿಸಿಕೊಳ್ವರ್—೧೪.

ಟೀ|| ಅಂಗೆಯ್ಯ ಕಿಱುಕುಣಿಕೆಯ ಬೆರಲಿನವೊತ್ತಿಂ ತೊಡಗಿ ಮುಂಗೆಯ್ ಪರ್ಯಂತಂ ಕರಭಮೆನಿಸಿಕೊಳ್ವುದು. ಅಲ್ಲಿರ್ಪ ರೇಖೆಗಳ್, ಪೊಡವುಟ್ಟಿದ ರೇಖೆಗಳ್ ಎನಿಸಿಕೊಳ್ವುವು. ಕಿಱುಕುಣಿಕೆಯ ಬೆರಲವೊತ್ತಿನ ರೇಖೆ ಸ್ತ್ರೀಯರ ರೇಖೆ. ಹೆಬ್ಬೆರಲ್ ಮೊದಲ್ಗೊಂಡು ಅಂಗೆಯ್ ಮಧ್ಯರೇಖೆಪರ್ಯಂತಮಿರ್ಪ ರೇಖೆ ಮಕ್ಕಳ ರೇಖೆಗಳ್—ಆ ರೇಖೆಗಳ್ ಉದ್ದಮಾಗಿರ್ದೊಡೆ ಒಳ್ಳಿತ್ತು ಆ ರೇಖೆಗಳೊಳಗೆ ಪೆಣ್ಗಂಡು ಭೇದಂಗಳನಱಿವೊಡೆ ಕಪ್ಪಾಗಿ ಉದ್ದಮಾಗಿರ್ಪ ರೇಖೆಗಳ್ ಪುರುಷ ರೇಖೆ, ಉೞಿದ ರೇಖೆ ಸ್ತ್ರೀಯರ ರೇಖೆ ಎಂದು ಶಾಸ್ತ್ರೋಕ್ತಿಯಿಂದಱಿವುದು—೧೫.

ಟೀ|| ಕಿಱುಕುಣಿಕೆಯ ಬೆರಲ ಮೊದಲವೊತ್ತಿನ ರೇಖೆ ಮೊದಲ್ಗೊಂಡು ಬ್ಬೊಟ್ಟನ (ಸುಟ್ಟುಂಬೆ) ಬೆರಲವೊಳಭಾಗದ ಮೊದಲಪರ್ಯಂತಂ ಅಡ್ಡರೇಖೆಗಳಿಲ್ಲದೆ ಎಡೆವಱಿತವಿಲ್ಲದೆ ಇರ್ಪ ರೇಖೆಯಿಂದೆನೂಱುವರ್ಷದ ಆಯುಷ್ಯವೆಂದು ಪೇಳ್ವುದು. ಅಲ್ಲಿಂದ ಕಿಱಿದಾಗಿ ಇಹಂಥಾ ರೇಖೆಯ ಆಯುಷ್ಯಪ್ರಮಾಣವಂ ಮುಂದೆ ಪೇೞ್ವೆಂ—೧೬.

ಟೀ|| ಪರಮಾಯುಷ್ಯದ ರೇಖೆಯುವೊಳಗೆ ಅಡ್ಡರೇಖೆಗಳ್ ಒಳಭಾಗದಲ್ಲಿ ತೋಱಿದೊಡೆ ವ್ಯಾಧಿಗಳಿಂದೆ ಅಪಮೃತ್ಯು ತೋಱುವುದು ಪೊಱಗಡೆಯಲ್ಲಿ ಅಡ್ಡರೇಖೆಗಳ್ ತೋಱಿದೊಡೆ ಶಸ್ತ್ರಂಗಳಿಂದೆ ಅಪಮೃತ್ಯು ತೋಱುವುದು. ಆ ಅಡ್ಡರೇಖೆಗಳಿಗೆ ಪರಮಾಯುಷ್ಯದ ರೇಖೆ ಎಡೆಗುಡದೆ ಚೆನ್ನಾಗಿ ತೋಱುತ್ತಿರ್ದೊಡೆ ಅಪಮೃತ್ಯುಗಳಂ ಗೆಲ್ವಂ—೧೭.

1 ಪರಣಂ.

ಚಂ|| ಪೆಸರಿಸವಗ್ರಸಂಧಿಗೆ ಕನಿಷ್ಠಿಕೆ ಮೀಱ್ದೊಡೆ ದಲ್ ಶತಾಬ್ದಮೆಂ |
ಗೆಸೆವರೆರೇಖೆ ರೇಖೆಗೆ ಸಮಾನಮದಾಗಿರಲೆಂಬತು ವರ್ಷಮೆಂ ||
ಗಸಮಮದಾಗೆ ಸಪ್ತತಿಯೆ ವತ್ಸರಮೆಂಗೆ ಯದರ್ಧಮಾತ್ರದಿಂ |
ಕುಸಿದಿರೆ ಷಷ್ಟಿವತ್ಸರಮದೆಂಗೆ ನರಂಗೆ ಯಥೋಚಿತಾಯು(ವ)ಷಂ || ೧೮ ||

ಕಂ|| ಮೃಗಕಂಠಂ ಮಿಬುಧಂ ಮಹಿ |
ಪಗಳಂ ಶೂರಂ ವಿನೂತಕಂಬುಗ್ರೀವಂ ||
ಜಗತೀವಲ್ಲಭನನಿಮೇ |
ಷಗಳನೆನಿಕ್ಕುಂ ಸಮಸ್ತ ಸೇನಾನಾಥಂ || ೧೯ ||

ಕೊಂಕಿದ ಕೊರಲವನತ್ಯಂ |
ತಂ ಕುಟಿಲಂ ಕುಱುಯಕೊರಲ ತೆಱದಂದದಗೋ ||
ಣಂ ಕಡು ಬಿಡಮನತಿಸ್ಥೂ |
ಲಂ ಕೊರಲಾದಂದು ಕೆಯ್ದುವಿಂ ಮಡಿಗುಮವಂ || ೨೦ ||

(ಗಲ್ಲಮುಂ ಕಣ್ಗಳುಂ ಮೂಗುಂ ಪುರ್ವುಂ)

ಚಂ|| [1]ಹನು ನಸು ನೀಳಮಾಗೆ ಮೃದುವತ್ಯರುಣಾಧರಮಾಗೆ ಪಲ್ಗಳಿಂ |
ಬಿನೆ ಋಜುವಾಗೆ [2]ಮೂಗುಮದು ಚಂಪಕಕುಟ್ಮಲದಂದಮಾಗೆ ಲೋ ||
ಚನಯುಗಮಬ್ಜಪತ್ರರುಚಿಯಾಗೆ ಮರಲ್ದಿವೆ ಮಂದಮಾಗೆ ಪು |
ರ್ವಿನಿಸೆಡೆವೆತ್ತು ನೀಳ್ದಸಿಯವಾಗೆ ವಿಭೂತಿಯನುಂಟುಮಾಡುಗುಂ || ೨೧ ||

---

ಟೀ|| ಪವಿತ್ರದ ಬೆರಲ ತುದಿಯ ಅಡ್ಡರೇಖೆ ಕಿಱುಕುಣಿಕೆಯ ಬೆರಲಂ ಮೀಱಿದೊಡೆ ನೂಱುವರ್ಷಮಾಯುಷ್ಯಮೆಂದಱಿವುದು ; ಆ ಕುಣಿಕೆಯ ಬೆರಲ ಅರೆಗೆ ಸಮಾನಮಾಗಿರಲ್ ಎಂಬತ್ತು ವರ್ಷದಾಯುಷ್ಯಮೆಂದಱಿವುದು ; ಕಿಱಿದಾಗಿರ್ದೊಡೆ ಎಪ್ಪತ್ತು ವರ್ಷಮೆಂದಱಿವುದು ; ಆ ಅಡ್ಡರೇಖೆಯಿಂದಂ ಕೆಳಗೆ ಅರ್ಧದಿಂದಂ ಆ ಕಿಱುಕುಣಿಕೆಯ ಬೆರಲ್ ಕಿಱಿದಾಗಿರ್ದೊಡೆ ಅಱುವತ್ತು ವರ್ಷದಾಯುಷ್ಯಮೆಂದು ಶಾಸ್ತ್ರಪ್ರಮಾಣದಿಂದಱಿವುದು—೧೮.

ಟೀ|| ಮೃಗದ ಮರ್ಯಾದೆಯ ಕೊರಲಿನ ಮರ್ಯಾದೆಯ ಕೊರಲನುಳ್ಳಾತಂ ವಿದ್ವಾಂಸನಪ್ಪಂ; ಎಮ್ಮೆ[ಮೋಱ]ಯ ಕೊರಲ ಮರ್ಯಾದೆಯ ಕೊರಲನುಳ್ಳಾತಂ ಶೌರ್ಯಮನುಳ್ಳಾತನಪ್ಪಂ. ಶಂಖದ ಮೇಲಣ ಮರ್ಯಾದೆಯಲ್ಲಿ ಮೂಱು ರೇಖೆಯಾಗಿಹ ಕೊರಲನುಳ್ಳಾತಂ ಅರಸನಪ್ಪಂ. [3]ಬಟ[ರು]ವಾಗಿ ಮತ್ಸ್ಯಗಳ ಕೊರಲ ಮರ್ಯಾದೆಯಲ್ಲಿ ಸಮನಾಗಿರ್ಪ ಕೊರಲುಳ್ಳಾತಂ ಸೇನಾನಾಯಕನಪ್ಪನೆಂದಱಿವುದು—೧೯.

ಟೀ|| ಕೋ(ಡೊಂ)ಕಾಗಿರ್ಪ ಕೊರಲನುಳ್ಳಾತಂ ಎಲ್ಲಾ ಕಾರ್ಯಂಗಳ್ಗಂ ವಕ್ರಿಯಪ್ಪಂ. ಕುಱುಮ ಕೊರಲ ಮರ್ಯಾದೆಯ ಕೊರಲುಳ್ಳಾತಂ ದರಿದ್ರನಪ್ಪಂ. ಅತಿ ದೊಡ್ಡಿತ್ತಾದ ಕೊರಲನುಳ್ಳಾತಂ ಶತ್ರುಗಳಿಂದೆ ಮಡಿವನೆಂದಱಿವುದು—೨೦.

ಟೀ|| ಗಲ್ಲಂ ಕೆಳಗೆ ಪೊಪ್ಪಚ್ಚಿ ನೀಳಮಾಗಿಹ, ಮೃದುವಾಗಿ ಕೆಂಪನುಳ್ಳವೋಷ್ಠವಾಗುಹ,

1 ನಸುವಿಷಗಳ. 2 ಮೂಗಿನಗುಣದ. 3 ಬಿದುಹಾಗಿ.



(ಕಿವಿ ಹಣೆ ಕದಂಪುಗಳ್)

ಕಂ|| ಕಡುಸೇಯಮಾಗಿ ಮಾಂಸದಿ |
ನಿಡಿದೊಪ್ಪುವ ಕಿವಿಗಳರ್ಧಚಂದ್ರಾಕೃತಿಯಂ ||
ಪಡೆದಿರ್ದರ್ಧಸೊಸಲ್ ಕ |
ನ್ನಡಿಯಂದದ ಕದಪು ಶುಭದಮಚಳಿತವಚನಾ || ೨೨ ||

(ಪಣೆಯರೇಖೆಗಳ್)

ಶಾ|| ಉತ್ತುಂಗೋಚಿತಮಾನಮಪ್ಪ ನೊಸಲೊಳ್ ಚೆಲ್ವಾಗೆ [1]ರೇಖಾಳಿ ನೀ |
ಳ್ದಿತ್ತುಂ ತೋರ್ಪೊಡೆ ಮೂಱಱಿಂದಮಱುವತ್ತಂತಲ್ಲಿ ನಾಲ್ಕಾದೊಡೆ ||
ಪ್ಪತ್ತಯ್ದಾಗಿ ಪೊದಱ್ದು ರಂಜಿಸುವೊಡೆಂಬತ್ತಂತಮಾಱಂಗೆ ತೊಂ |
ಬತ್ತೇೞಾದೊಡೆ ನೂಱುವತ್ಸರಮುವಂ ಬಾಳ್ಗುಂ ಬುಧೈಕಾಶ್ರಯಾ || ೨೩ ||

(ತಲೆಯಲಕ್ಷಣಂ)

ಚಂ|| ಕೊಡೆಯವೊಲುದ್ದಮಪ್ಪ ಸಿರದಿಂದರಸಂ ಕಪಿಶೀರ್ಷದಂದ್ವದಿಂ |
ಕಡುಸುಖಿ ದೊಡ್ಡಿತಪ್ಪ ತಲೆಯಿಂ ಚಪಳಂ ಸಮಮೂರ್ಧದಿಂ ಬುಧಂ ||
ಪೆಡೆಗೆಣೆಯಪ್ಪ ಮಸ್ತಕದಿನಲ್ತೆ ವಿಟಂ ಟುಟಯಪ್ಪ ನೆತ್ತಿಯಿಂ |
ಬಡವನನೂನ ದುಃಖಪರನಪ್ಪನೆ ಚಪ್ಪಟೆಯಪ್ಪ ಮಂಡೆಯಿಂ || ೨೪ ||

---

ಪಲ್ಗಳ್ ತಗ್ಗು ತೆವಱಿಲ್ಲದೆಡೊ(ಕೊಂ)ಕದೆ ಸರಿತವಾಗಿರುಹ, ಮೂಗು ಸಂಪಗೆ ಮೊಗ್ಗಿನ ಮರ್ಯಾದೆಯಲ್ಲಿ ಇರುಹ, ಕಣ್ಗಳ್ ತಾವರೆಯ ಪೂವ ಎಸಳಿನಂತೆ ನೀಳವಾಗಿರುಹ, ಪುರ್ವುಗಳ್ ಮಧ್ಯದ ತೆಱಹಂ ಬಿಟ್ಟು ಅಸಿಯವಾಗಿ ನೀಳಾಗಿ ಇರುಹ ಈ ಮರ್ಯಾದೆಯ ಕುಱುಹನುಳ್ಳ ಲಕ್ಷಣಂಗಳನುಳ್ಳಾತಂ ಐಶ್ವರ್ಯಮನುಳ್ಳಾತನಪ್ಪಂ—೨೧.

ಟೀ|| ಮಿಗಿಲಾಗಿ ಸರಿತಮಾಗಿ ತುಂಬಿದ ಮಾಂಸಮನುಳ್ಳ ಕಿವಿಯಾಗುಹ, ಅರ್ಧಚಂದ್ರಾಕಾರಮನುಳ್ಳ ಕುಟಿಗಳುಂ ತೆವಱುಮಿಲ್ಲದೆ ಊರ್ಧ್ವಮಾಗಿಹ ಹಣೆಯಾಗುಹ, ಗುಱಿಯಿಲ್ಲದೆ ಕನ್ನಡಿಯ ಮರ್ಯಾದೆಯನುಳ್ಳ ಗಲ್ಲವಾಗುಹ ಈ ಮರ್ಯಾದೆಯ ಲಕ್ಷಣಮನುಳ್ಳಾತಂ ಐಶ್ವರ್ಯಮನುಳ್ಳಾತನಪ್ಪಂ—೨೨.

ಟೀ|| ಉನ್ನತವಾಗಿ ಉದ್ದವಾಗಿ ಇರ್ಪ ಹಣೆಯಲ್ಲಿ ರೇಖೆಗಳ್ ಮೂಱು ತೋಱಿದ್ದೊಡೆ ಅಱುವತ್ತು ವರ್ಷಂ, ನಾಲ್ಕು ರೇಖೆ ತೋಱಿಲ್ ಎಪ್ಪತ್ತು ವರ್ಷಂ, ಅಯ್ದು ರೇಖೆ ತೋಱಿಲ್ ಎಂಬತ್ತು ವರ್ಷಂ, ಆಱು ರೇಖೆ ತೋಱಿಲ್ ತೊಂಬತ್ತು ವರ್ಷಂ, ಏೞುರೇಖೆ ತೋಱಿಲ್ ನೂಱುವರ್ಷಂ. ಈ ಪೇೞ್ದ ಮರ್ಯಾದೆಯೊಳ್ ರೇಖೆಗಳಿಂದೆ ಆಯುಷ್ಯದ ಕಟ್ಟಳೆಯನಱಿವುದು—೨೩.

ಟೀ|| ಕೊಡೆಯ ಮರ್ಯಾದೆಯಲ್ಲಿ ಉನ್ನತಮಪ್ಪ ಮಂಡೆಯನುಳ್ಳಾತಂ ಅರಸನಪ್ಪಂ; ಕೋಡಗದ ಮಂಡೆಯ ಮರ್ಯಾದೆಯ ಮಂಡೆಯನುಳ್ಳಾತಂ ಸುಖಿಯಪ್ಪಂ; ದೊಡ್ಡಿತಪ್ಪ ಮಂಡೆಯನುಳ್ಳಾತಂ ಚಲಚಿತ್ತನಪ್ಪಂ; ಸಮವಾಗಿರ್ಪ ಮಂಡೆಯನುಳ್ಳಾತಂ ವಿದ್ವಾಂಸನಪ್ಪಂ;

1 ನೆಬಾಳ.

(ಆವರ್ತಂಗಳ್)

ಹರಿಣಿ|| ಬಲದೆ ಸುಟ್ಟಾದಾವರ್ತಂ ಪುಂಸ್ತ್ರೀಜನಕ್ಕೆ ಶುಭಪ್ರದಂ |
ಫಳರಹಿತಮಾಲಾ(ಮೂರ್ಧ್ನಾ)ವರ್ತಂ[ತಾಂ]ಗಳೆಬ್ಬಗಿಯಾಗೆ ತಾ ||
ಯಿಲಿ[1]ಯುಱುಕರಂ ಮೂಱಾವರ್ತಂಗಳಿಂ ಖಳನೊಂದೆ ಮುಂ |
ದಲೆಯ ಸುಟ್ಟಿಯಿಂದಕ್ಕುಂ ಕಳ್ಳಂ ಮಹೀವಳಯಾಗ್ರದೊಳ್ || ೨೫ ||

(ರೋಮಂಗಳ್)

ಮ|ಸ್ರ|| ತನುಕೇಶಂ ಪುಣ್ಯವಂತಂ ಕುಟಿಳಮೃದು ಘನಸ್ನಿಗ್ಧ ಕೇಶಂ ಮಹೀಶಂ |
ಧನವಂತಂ ರೋಮಮೊಂದೊಂದೆಸೆವೊಡೆರಡುಗೆಯ್ವೇಗೆ ಶಿಷ್ಟಂ ಬುಧಂ ನೆ ||
ಟ್ಟನೆ ಕಷ್ಟಂ ಕೂಡೆ ರೋಮಾಂಕುರಮಿಡಿದಿರೆ ಕೂಪಂಗಳೊಳ್ ಮೂಱುಗೆಯ್ಯಂ |
ದಿನಿಸುಂ ನಿರ್ಲೋಮಮಾದಂಡತಿಕಠನಧಿಕಂ ರೋಮಕಂ ದ್ರವ್ಯಹೀನಂ || ೨೬ ||

(ಅಲ್ಪಾಯುಷ್ಯನಲಕ್ಷಣಂ)

ಮ|ಸ್ರ|| ತಲೆ ವಿಂಶತ್ಯಬ್ದದಿಂದಿತ್ತೊಳಗೆ ತಱತ್ತೊಡಂ ಮಾಸೆಯಿಂ ಮುನ್ನೆ ರೋಮಾ |
ವಲಿ ಕಾಣಲ್ಕೊಂದೊಡಂ ಮೇಣಿರದೆ [2]ವೃಷಣಮುದ್ಭಾವಮಾಗಿರ್ದೊಡಂ ಮೇಣ್ ||
ಲಲನಾ ಸಂಭೋಗದೊಳ್ ಕೇವಲ ಮತಿಶಯವೇಗಿತ್ವಮಾಗಿರ್ದೊಡಂ [3](ಸಂ) |
ಪಲವುಂ ಸೂ ಟ್ಟಾದ[4]ಸೀನಂ ಸಮನಿಸುವೊಡವಂತಾತನಲ್ಪಾಯುವಕ್ಕುಂ || ೨೭ ||

ಹಾವಿನ ಮಂಡೆಯ ಮರ್ಯಾದೆಯ ಮಂಡೆಯುಳ್ಳಾತಂ ಬಹುಳಮಪ್ಪ [5]ದುಃಖಮನುಳ್ಳಾತನಪ್ಪಂ—೨೪.

ಟೀ|| ಬಲಕ್ಕೆಸುಟ್ಟಾದು ಇರ್ಪ ಸುಟ್ಟಿಯಿಂದೆ ಪುರುಷರ್ಕಳಾದೊಡಂ, ಸ್ತ್ರೀಯರ್ಕಳಾದೊಡಂ ಐಶ್ವರ್ಯಮುಳ್ಳವರಪ್ಪರ್; ಉದ್ದಮಾಗಿರ್ಪ ಸುಟ್ಟಿಗಳಿಂದೆ ಲೇಸುಹೊಲ್ಲೆಹಗಳೆರಡುಮಿಲ್ಲಂ; ಸುಟ್ಟಿಯೆರಡು ಭಾಗಮಾಗಿರ್ದೊಡೆ ಬಾಲ್ಯದೊಳೆ ತಾಯಿಲ್ಲದವನಪ್ಪಂ; ಮೂಱು ಸುಟ್ಟಿಗಳಾಗಿರ್ದೊಡೆ ದುರ್ಜನನಪ್ಪಂ; ಮುಂದಲೆಯವೊಂದು ಸುಟ್ಟಿಯಾಗಿರಲ್ ಕಳ್ಳನಪ್ಪನೆಂದಱವುದು.

ಟೀ|| ಸಣ್ಣಮಾಗಿರ್ಪ ಕೇಶದಿಂದೆ ಭಾಗ್ಯವುಳ್ಳಾತನಪ್ಪಂ; ಕುರುಳಾಗಿ ಮೃದುವಾಗಿ ನಯಮಾಗಿ ಇರ್ಪ ಕೇಶಮನುಳ್ಳಾತಂ ಅರಸನಪ್ಪಂ; ರೋಮಕೂಪದಲ್ಲಿ ಒಂದೊಂದೆ ರೋಮನುಳ್ಳಾತಂ ಧನವಂತನಪ್ಪಂ; ಒಂದು ಗುಟ್ಟಿಯಲ್ಲೆರಡೆರಡು ರೋಮಂಗಳುಳ್ಳಾತಂ ಶಿಷ್ಟನುಂ ವಿದ್ಯಾವಂತನುಮಪ್ಪಂ; [ಒಂದು ಗುಟ್ಟಿಯಲ್ಲಿ ಮೂಱುಮೂಱು ರೋಮಂಗಳುಳ್ಳಾತಂ] ಕಷ್ಟನಪ್ಪಂ; ಮೆಯ್ಯೊಳೊಂದು ರೋಮಮುಮಿಲ್ಲದಾತಂ ಧೂರ್ತನಪ್ಪಂ, ಮೆಯ್ಯೊಳ್ ಬಹುಳಮಪ್ಪ ರೋಮಮನುಳ್ಳಾತಂ ದ್ರವ್ಯಹೀನನಪ್ಪಂ—೨೬.

ಟೀ|| ಇಪ್ಪತ್ತು ವರ್ಷದಿಂದೊಳಗೆ ತಲೆ ತಱಟಾದೊಡೆ, ಮಾಸೆಯಿಂದಂ ಮುನ್ನಂ ಗಡ್ಡದ ಕೂದಲ್ ಪುಟ್ಟಿದೊಡೆ ವೃಷಣಂಗಳ್ ನಿಲ್ಲದೆ ಆವಾಗಳುಂ ಮೇಲಕ್ಕೆ ಸೇದಿಕೊಂಡಿರ್ದೊಡೆ, ಸ್ತ್ರೀಸಂಭೋಗ ವೇಳೆಯಲ್ಲಿ ಇಂದ್ರಿಯಂ ಬಲಿಸುಹ, ಹಲವು ಬಾರಿ ಸೀನುತ್ತುಂ ಬರುಹ, [ಹೀನಸ್ವರಮಾಗಿರುಹ] ಈ ಗುಣಂಗಳನುಳ್ಳಾತನಲ್ಪಾಯುಷ್ಯನಪ್ಪಂ—೨೭.

1 ದಱುಕುಣಂ. 2 ವೃಷಣಂ ಮುದ್ಧವ. 3 ಸಂಸ್ವಲ ಉಂ ಸೂಟ್ಟಾದ. 4 ಹೀನಂ. 5 ದುಃಖಿಯಹಂ



(ದೇಹಪ್ರಮಾಣಂ)

ಕಂ|| ಕಡುಗುಜ್ಜಂ ಕಪಟಮನಂ |
ನಿಡಿಯಂ ಜಡಳಂ ಸಮಂತು ಸಮಸಂಸ್ಥಾನಂ ||
ಒಡೆದೊಡೆ ನಿಧಿಪುರುಷಂ ನೋ |
ಡಿಪ್ಪೊಡೆ ವಿಕಟಾಂಗಂ ನಿಕೃಷ್ಟನಕ್ಕುಂ ಮನುಜಂ || ೨೮ ||

(ಸ್ವರಲಕ್ಷಣಂ)

ಸಿಂಗದ ಬಸವನ ಮುಗಿಲ ಮೃ |
ದಂಗದ ಕೋಗಿಲೆಯಕೊಂಚೆ[ಯಂಚೆಯ]ಮದವಾ ||
ತಂಗದ ದನಿಗೆಣೆಯೆನಿಸಿ ಮ |
ನಂಗೊಳಿಸುವ ಸರದಿನಧಿಕಪುಣ್ಯನೆನಿಕ್ಕುಂ || ೨೯ ||

ಕಾಗೆಯ ಕತ್ತೆಯ ಬೆಕ್ಕಿನ |
ಗೂಗೆಯ ಹಂದಿಯ [1]ದನಿವೊಟ್ಟೆಯಾಡಿನ ದನಿಯಂ ||
ಕಾಗೆ ಕಠೋರಂ ನಿಷ್ಠುರ |
ಮಾಗೆ ಸರಂ ದುಃಖಭಾಗಿಯಕ್ಕುಂ ಪುರುಷಂ || ೩೦ ||

ಅತಿಶುದ್ಧವರ್ಣದಿಂದಂ |
ಕ್ಷಿತಿಪತಿ ಸಾಮಾನ್ಯವರ್ಣದಿಂದೆ ಧನಪತಿ ಕು ||
ತ್ಸಿತರೂಪವರ್ಣದಿಂ ಕ |
ಷ್ಟತರಂ ಸುಸ್ನಿಗ್ಧಮಾದ ಬಣ್ಣಮುಮುಚಿತಂ || ೩೧ ||

ಟೀ|| ಅರೆಗುಡ್ಡನಪ್ಪಾತಂ ಕಪಟಮಪ್ಪ ಮನಸ್ಸುಳ್ಳಾತನಪ್ಪಂ, ಅತಿಉದ್ದಮನುಳ್ಳಾತಂ ಬುದ್ಧಿಯಲ್ಲಿ ಬಡವನಪ್ಪಂ, ಸಮನೆಲೆಯಪ್ಪಾತಂ, ನಿಧಿಪುರುಷನಪ್ಪಂ, ಕೊಂಕಿನ ಶರೀರಮನುಳ್ಳಾತಂ ಅಧಮನಪ್ಪಂ—೨೮.

ಟೀ|| ಸಿಂಹಂ, ವೃಷಭಂ, ಮೇಘಧ್ವನಿ, ಮದ್ದಳೆಯಧ್ವನಿ, ಕೋಗಿಲೆಯ ಧ್ವನಿ, ಕೊಂಚೆವಕ್ಕಿಯದನಿ, ಅಂಚೆಯದನಿ ಮದಿಸಿದಾನೆಯದನಿ ಇವಱ ಧ್ವನಿಗೆ ಸಮಾನಮಪ್ಪ ಧ್ವನಿಯುಳ್ಳಾತಂ ಭಾಗ್ಯಾಧಿಕನಪ್ಪಂ—೨೯.

ಟೀ|| ಕಾಗೆಯ ಧ್ವನಿ, ಕತ್ತೆಯ ಧ್ವನಿ, ಬೆಕ್ಕಿನ ಧ್ವನಿ, ಗೂಗೆಯ ಧ್ವನಿ, ಹಂದಿಯ ಧ್ವನಿ, ಪೊಟ್ಟೆಯ ಧ್ವನಿ, ಆಡಿನ ಧ್ವನಿ ಇವಱ ಮರ್ಯಾದೆಯ ಧ್ವನಿಯುಳ್ಳಾತನಾಗಿ ನಿಷ್ಠುರಮಪ್ಪ ಮಾತನುಳ್ಳಾತನಾದೊಡಂ ಆತಂ ಬಹಳ ದುಃಖಿಯಪ್ಪಂ—೩೦.

ಟೀ|| ಅತಿಶುದ್ಧಮಪ್ಪ ದೇಹಕಾಂತಿಯುಳ್ಳಾತಂ ಅರಸನಪ್ಪಂ, ಪೊಪ್ಪಟ್ಟೆ ಸಮಾನಮಾದ ವರ್ಣಮನುಳ್ಳನಾದೊಡೆ ಧನಮನುಳ್ಳಾತನಪ್ಪಂ, ಹುಱು ತರ್ದ ಕುಷ್ಠಂಗಳ ವರ್ಣಮುಳ್ಳಾತಂ ಅತಿಕಷ್ಟನಪ್ಪಂ, ದೇಹಂ ಚೆನ್ನಾಗಿ ನಯಮನುಳ್ಳ ಬಣ್ಣದಿಂದಿರ್ದೊಡೆ ಯೋಗ್ಯನಪ್ಪಂ—೩೧.

1 ನರಿಯೊಟ್ಟೆ (ಎಂದಿರಬಹುದು.)

(ಮೆಯ್ಕಟ್ಟಿನ ಲಕ್ಷಣಂ)

ಮ॥ ಕರಿ ಸಿಂಗಂ ಗರುಡಂಗವೇಂವೃಷಭವಿವಱೊಂದಾಗಿರ್ದ ಕಟ್ಟಿಂ ಮಹಾ |
ಪುರುಷಂ ಮೇಣ್ ಧರಣೀಶ್ವರಂ ಮಹಿಷಮುಷ್ಕಂ ಪ್ಲೋಂತು ಮೇರ್ವಂದಿ ವಾ ||
ವರನೆಂದಿಂತಿವಱಿಂದಮಾದೊಡೆ ಧನಾಢ್ಯಂ ಮೇಣ್ ಬುಧಂ ಗರ್ದಭಂ |
ಕರಭಂ ನಾಯ್ ನರಿ ಕುಕ್ಕುಟರ್ಕ್ಷಮಿವಱೊಂದಾದಂದದಿಂ ನಿರ್ಧನಂ || ೩೨ ||

(ಸತ್ವಗುಣಂ)

ಹರಿಣಿ॥ ಚಳಮತಿ ಜಡಂ ಭೀತಂ ಬಹ್ವಾಶಿ ಸ್ವೈರಿಸಹಾರುವಂ |
ಖಳನೆನಿಸುಗುಂ ತಿರ್ಯಕ್ಸತ್ವಂ ವಿಭೂಷಣಲೇಪನೋ ||
ಜ್ಜ್ವಳ ಕುಸುಮಮಾಲ್ಯಾದಿಪ್ರೀತಂ ನೃಸತ್ವನಶೇಷ ನಿ |
ರ್ಮಳಗುಣಗಣಾಧಾರಂ ತಾಂ ದೇವಸತ್ವನನಿಂದಿತಂ || ೩೩ ||

ಕಂ॥ ಪಿಸುಣಂ ಪಾಪಿಷ್ಠಂ ರಾ |
ಕ್ಷಸಸತ್ವದ ಮನುಜನಸ್ಥಿರಂ ವಾಚಾಳಂ ||
ಪುಸಿವಂ ಮೂರ್ಖಂ ಕುತ್ಸಿತ |
ದಸಮಾಂಗಯುತಂ ಪಿಶಾಚಸತ್ವಂ ಮನುಜಂ || ೩೪ ||

(ತ್ವಗ್ಗುಣಂ)

ಧನವಂತಂ ಸ್ನಿಗ್ಧತ್ವಚ |
ನನೂನಸೌಖ್ಯಂ ಮೃದುತ್ವಚಂ ಮತಿವಂತಂ ||
ಮನುಜಂ ಸೂಕ್ಷ್ಮತ್ವಚ |
ನಿನಿತುಂ ಗುಣಮಾಗೆ ನೃಪನವಂ [1]ತ್ವಕ್ಸಾರಂ || ೩೫ ||

ಟೀ॥ ಆನೆ ಸಿಂಹಂ ಪದ್ದು (ಗರುಡಂ) ವೃಷಭಂ ಇವಱ ಮರ್ಯಾದೆಯ ದೇಹಮನುಳ್ಳಾತಂ ಮಹಾಪುರುಷನೆನಿಸಿಕೊಳ್ವಂ, ಅಲ್ಲಾ ಅರಸನಪ್ಪಂ. ಎಮ್ಮೆ, ಕುದುರೆ, ಆಡು, ಹಂದಿ, ಕೋಡಗ ಇವಱ ಮರ್ಯಾದೆಯ ದೇಹಮನುಳ್ಳಾತಂ [2]ಧನವಂತನಪ್ಪಂ, ಅಲ್ಲಾ ವಿದ್ವಾಂಸನಪ್ಪಂ. ಕತ್ತೆ, ವೊಟ್ಟೆ, ನಾಯ್, ನರಿ, ತೋಟಿ, ಕರಡಿ ಇವಱ ಮರ್ಯಾದೆಯ ದೇಹಮನುಳ್ಳಾತಂ ಧನಹೀನನಪ್ಪಂ—೩೨.

ಟೀ॥ ಚಂಚಲಂ, ಅತಿಜಡಂ, ಅಂಜುತಿರ್ಪಂ, ಅಪಾರಮಪ್ಪ ಆಹಾರಮನುಳ್ಳಾತಂ, ಎಲ್ಲರ ಕೂಡೆಯುಂ ಊಸಿ ವರಿಸುತ್ತಿಹಂ, ದುರ್ಜನನೆನಿಸಿಕೊಳ್ವಂ ಈ ಗುಣಂಗಳನುಳ್ಳಾತಂ ಪಶುಪಕ್ಷಿಗಳೋಪಾದಿಯಸತ್ವಮನುಳ್ಳವಂ, ಅಲಂಕಾರಮನುಲೇಪನಂ ಪೂಮಾಲೆಗಳ್ ಇಂತಹ ಸಿಂಗರ ವಸ್ತುಗಳಲ್ಲಿ ಪ್ರಿಯಮನುಳ್ಳಾತಂ ಪುರುಷತ್ವಮನುಳ್ಳವಂ ಸಂಪೂರ್ಣವಾಗಿ ನಿರ್ಮಳವಾಗಿರ್ಪ ಗುಣಗಳ್ಗೆ ಆಧಾರವಾಗಿ ಇರ್ಪಾತಂ ದೇವಸತ್ವಮನುಳ್ಳವಂ, ನಿಂದೆಯಿಲ್ಲದಾತನಪ್ಪಂ—೩೩.

ಟೀ॥ ಕೊಂಡೆಯಂ, ಪಾಪಿಷ್ಠಂ ಈ ಗುಣಂಗಳುಳ್ಳಾತಂ ರಾಕ್ಷಸನಪ್ಪಂ; ಸ್ಥಿರಮಿಲ್ಲದಿರುಹ, ಚಾಪ್ಪುಡಿಕನಾಗುಹ, ಮೂರ್ಖನಾಗುಹ, ಕುತ್ಸಿಕನಾಗುಹ, ಸವುನಲ್ಲದೆ ವಿಷಮಮಪ್ಪ ಅಂಗನುಳ್ಳಾತನಾಗುಹ ಈ ಮರ್ಯಾದೆಯ ಗುಣಂಗಳುಳ್ಳವಂ ಪಿಶಾಚಸತ್ವಮಪ್ಪಂ—೩೪.

ಟೀ॥ ನಯುಮಪ್ಪ ದೇಹಚ್ಛಾಯೆಯನುಳ್ಳಾತಂ ಧನವಂತನಪ್ಪಂ, ಮೃದುವಪ್ಪ ದೇಹ

1 ತಕ್ಸಾರಂ. 2 ಧನವಾಂಮುಳಹನು.



(ಸಪ್ತಧಾತುಸಾರಲಕ್ಷಣಂ)।

ಶಾ॥ ಆರಕ್ತಾಧರಹಸ್ತಪಾದನಯನಂ ಧೀರಂ ನೃಪಂ ತ[2]ನಸ್ಸೃ |
ಕ್ಸಾರಂ ಮೆಯ್ಸೆರೆಯಿಲ್ಲದಂ ಸುಮತಿ ಧನ್ಯಂ[3]ಮಾಂಸಸಾರಂ ಮಹೋ ||
ದಾರಂ ಸ್ಥೂಲಶರೀರನರ್ಥಪತಿ ಮೇದಸ್ಸಾರನುದ್ಯದ್ಬಳಂ |
ಶೂರಂ ದುರ್ಧರನಿಂಬಿದಂ ನಿಡಿಯನಾದಂದಸ್ಥಿಸಾರಂ ನರಂ || ೩೬ ||

ಕಂ॥ ಬಹುಸುತನುಪಚಿತತನು ಸಂ |
ಗ್ರಹಶೀಲಂ ಮಜ್ಜೆಸಾರನಕ್ಕುಂ ಸೊಬಗಂ ||
ಮಹಿಮಾನ್ವಿತನತಿಧನ್ಯಂ |
ಬಹುಶುಕ್ಲಂ ಶುಕ್ಲಸಾರನಕ್ಕುಮುದಾರಂ || ೩೭ ||

(ಗತಿಲಕ್ಷಣಂ)

ಉ॥ ಸೋಗೆಯ ಹಂಸೆಯಾನೆ ವೃಷದಂಪದ ಸಿಂಗದ[4]ಪಾಂಗಿನಿಂ ಬೆಡಂ |
ಗಾಗಿ ಚಿಟಲ್ ಚಿಟಲ್ಗರೆಯಲೊಂದದ ಮಂದಗತಿಕ್ರಮಂ ಮಹಾ ||
[5]ಭೋಗಿ[ಯೆನಿಪ್ಪ]ನೊಟ್ಟೆಯ ಸೃಗಾಲದ ಕಾಗೆಯ ಕಟ್ತೆಯಂದದಿಂ |
[6]ಬೇಗದಿನಿರ್ಪ ಕಷ್ಟಗತಿ ಬೇವಸಮಂ ಪುರುಷಂಗೆ ಮಾಡುಗುಂ || ೩೮ ||

ಕಾಂತಿಯುಳ್ಳಾತಂ ಕೊಱತೆಯಿಲ್ಲದಂಥಾ ಸುಖಮನುಳ್ಳಾತನಪ್ಪಂ; ತೆಳುವುಳ್ಳ ದೇಹಚ್ಛಾಯೆಯುಳ್ಳಾತಂ ಬುದ್ಧಿವಂತನಪ್ಪಂ. ಈ ಮೂಱು ಗುಣಂಗಳುಳ್ಳ ದೇಹಚ್ಛಾಯೆಯನುಳ್ಳಾತಂ ಅರಸನಪ್ಪಂ—೩೫.

ಟೀ॥ (ಕೆಂಪಾಗಿರ್ಪ) ತುಟಿ, ಹಸ್ತಂ, ಪಾದಂ, ಕಣ್ಗಳ್ ಇವು ಚೆನ್ನಾಗಿ ಕೆಂಪಾಗಿರ್ದೊಡೆ ಧೈರ್ಯಮನುಳ್ಳ ಅರಸನಪ್ಪಂ, ರಕ್ತ ಧಾತುವಿನ ಬಲ್ಪುಳ್ಳಾತಂ. ಮೆಯ್ಯೊಳ್ ಸೆರೆಯಿಲ್ಲದಾತಂ [7]ಬುದ್ಧಿವಂತಂ, ಪುಣ್ಯಾಧಿಕನುಮಪ್ಪಂ, ಮಾಂಸದ ಧಾತುವಿನ ಬಲ್ಪನುಳ್ಳಾತಂ. ಉದಾರಗುಣಂ, ದೊಡ್ಡಿಯದೇಹಮನುಳ್ಳಾತಂ ಧನಮನುಳ್ಳಾತನಪ್ಪಂ. ಮೇದಸ್ಸಿನ ಧಾತುವಿನ ಬಲ್ಪನುಳ್ಳಾತಂ, ಹೆಚ್ಚಿದ ಬಲುಹನುಳ್ಳಾತನಪ್ಪಂ, ಶೌರ್ಯಮನುಳ್ಳಾತಂ ಧರಿಸಲ್ ಬಾರದೆಯಿರ್ಪಂ ಒಳಕೊಬಾತಂ, ದೀರ್ಘದೇಹಿಯಾಗಿರ್ದಾತಂ ಈ ಗುಣಂಗಳುಳ್ಳಾತಂ ಅಸ್ಥಿಧಾತುವಿನ ಬಲ್ಪನುಳ್ಳಾತನೆನಿಸಿಕೊಳ್ವಂ—೩೬.

ಟೀ॥ ಪಲಂಬರ್ ಮಕ್ಕಳನುಳ್ಳಾತಂ, ಪೆರ್ಚಿದ ಶರೀರನುಳ್ಳಾತಂ, ಏನನಾದೊಡಂ ಗಳಿ(ಧನಿ)ಸುವ ಶೀಲಮನುಳ್ಳಾತಂ ಈ ಗುಣಂಗಳನುಳ್ಳಾತಂ ಮಜ್ಜೆಧಾತುವಿನ ಬಲ್ಪನುಳ್ಳಾತನಪ್ಪಂ, ಒಳ್ಳಿಹ ಭಾಗ್ಯಮನುಳ್ಳಾತಂ ಮಿಗಿಲಪ್ಪ ಶುಕ್ಲಧಾತುವಿನ [8]ಬಲ್ಪುಳ್ಳಾತನಪ್ಪಂ—ಉದಾರಗುಣಮುಳ್ಳಾತನುಮಪ್ಪಂ—೩೭.

ಟೀ॥ ನವಿಲ್, ಹಂಸೆ, ಆನೆ, ಬಸವಂ, ಸಿಂಹಂ ಇವಱ ನಡೆಯ ಮರ್ಯಾದೆಯಾಗಿ ಚಿಟಚ್ಚಿಟಧ್ವನಿ ಪುಟ್ಟದೆ ಮಂದಗಮನದ ನಡೆಯನುಳ್ಳಾತಂ ಮಹಾಭೋಗಿಯಪ್ಪಂ, ಒಟ್ಟೆ, ನರಿ,

1 ಧೀರಂ. 2 ನಸುಹೃತ್ಸಾರಂ. 3 ಹಂಸ. 4 ಪಾಂಗದಿಂದ. 5 ಭೋಗಿಗ ನೊಟ್ಟೆ. 6 ಬೇಗದಿನಿರ್ಪ. 7 ಬುದ್ಧಿವಾನು. 8 ಬಲುಹನುಳ್ಳಾತನೆಂದು ಹೇಳಿಕೊಂಡು ಉದಾರ.

(ಪಂಚಭೂತಚ್ಛಾಯೆ)

ಮಾಲಿನಿ|| ಛವಿವಡೆದಿರೆ ರೋಮಂ ತೋರ್ಪ[1]ಕೋಳ್ ಪಲ್ಗಳಿಂದಿಂ |
ತಿವು ಸೊಗಯಿಸೆ ರೂಪುಂ ಶೌರ್ಯಮುಂ ಧೈರ್ಯಮುಂ ಸಂ ||
ಭವಿಸಿವ ಬೆಮರಿಂದುಂ [2]ಬಂಧುರಾಮೋದಗಂಧಂ |
ಸವನಿಸಿರೆ ನರಂ [3]ತಾಂ ಸೋಡೆ ಭೂಚ್ಛಾಯನಕ್ಕುಂ || ೩೯ ||

ಕಂ|| ಮೃದುವಾಕ್ಯಂ ಸುಭಗಂ ಚಪ |
ಳದೃಷ್ಟಿ ಪೆಂಪೊಡೆಯನತಿಧನಾಢ್ಯಂ ಶುಚಿ ಬೆ ||
ಳ್ಪೊದವಿದ ತನುರುಚಿಯುಂ ತಾ |
ಳ್ದಿದನುದಕಚ್ಛಾ[4]ಯನಕ್ಕು[ಮೊಪ್ಪುವ] ಪುರುಷಂ || ೪೦ ||

ಶಾ|| ಶ್ರೀಯುಕ್ತಂ ವಿಜಿಗೀಷು ಚಂಡಕರತೇಜಂ ತೀವ್ರನಕ್ಕುಂ ಶಿಖಿ |
ಚ್ಛಾಯಂ ದುಃಖಿತನರ್ಥಹೀನ[5]ನಧಮಂ ರೂಕ್ಷಾಕ್ಷನಕ್ಕುಂ ಮರು ||
ಚ್ಛಾಯಂ ನಿರ್ಮಳತೇಜನರ್ಥಪತಿ ಮಾನ್ಯಂ ಪ್ರಾಜ್ಞನಕ್ಕುಂ ವಿಯ |
ಚ್ಛಾಯಂ ಭಾವಿಪೊಡಂಗ(ತೆ)ವಹ್ನಿರುಚಿಯುಂ ಶ್ರೀಶಿಷ್ಟಕಲ್ಪದ್ರುಮಾ || ೪೧ ||

ಕಾಗೆ, ಕತ್ತೆ ಇವಱ ಮರ್ಯಾದೆಯ ಬೇಗಮನುಳ್ಳ ಕಷ್ಟಮಪ್ಪ ನಡೆಯನುಳ್ಳ ಪುರುಷಂಗೆ ಬಳಲಿಕೆಯಂ ಮಾಡುವುದು—೩೮.

ಟೀ|| ದೇಹದ ರೋಮಂಗಳ್ ಕಾಂತಿಯುಕ್ತಮಾಗಿರುಹ, ತೋಳ್ಗಳುಂ, ಪಲ್ಗಳುಂ ಚೆಂದವಾಗಿ ಸೊಗಯಿಸಿರುಹ, ರೂಪು, ವೀರತನ, ಶೂರತನ (ಧೀರತನ?) ಈ ಗುಣಗಳುಂಟಾಗಿರುಹ ದೇಹದಲ್ಲಿ ಪುಟ್ಟಿದಂಥಹ ಬೆಮರುಮೊಳ್ಳಿಹ ಸುಗಂಧನಾಱುಹ, ಈ ಗುಣಂಗಳುಳ್ಳಾತಂ ಭೂಮಿಯ ಅಂಶಭೂತನೆನಿಸಿಕೊಳ್ವಂ—೩೯.

ಟೀ|| ಮೃದುವಾಕ್ಯಮನುಳ್ಳಾತನಾಗುಹ, ಭಾಗ್ಯವುಳ್ಳಾತನಾಗುಹ, ಚಲಿಸುತಿಹಂಥಾನೋಟವನುಳ್ಳಾತನಾಗುಹ, ಧನವಂತನಾಗುಹ, ಶುದ್ಧಚಿತ್ತವನುಳ್ಳಾತನುಂ, ಬೆಳ್ಪನುಳ್ಳ ದೇಹಕಾಂತಿಯುಳ್ಳವನುಮಾಗುಹ ಈ ಗುಣಂಗಳುಳ್ಳ ಪುರುಷಂ ಉದಕದ ಅಂಶಭೂತನೆನಿಸಿಕೊಳ್ವಂ—೪೦.

ಟೀ|| ಐಶ್ವರ್ಯಮನುಳ್ಳಾತನುಂ, ಗೆಲ್ಲನುಳ್ಳಾತನುಂ, ಸೂರ್ಯನಮರ್ಯಾದೆಯ ತೇಜಸ್ಸುಳ್ಳಾತನುಂ, ಕ್ರೂರನಪ್ಪನುಂ, ಅಗ್ನಿಯ ತೇಜಸ್ಸಿನ ಅಂಶಭೂತನೆನಿಸಿಕೊಳ್ವಂ. ದುಃಖಮನುಳ್ಳಾತಂ, ಧನವಿಲ್ಲದಂ, ಸತ್ವಹೀನನುಂ, ಕ್ರೂರದೃಷ್ಟಿಯುನುಳ್ಳಾತನುಂ ವಾಯುವಿನ ಅಂಶಭೂತನೆನಿಸಿಕೊಳ್ವಂ. ನಿರ್ಮಳಮಪ್ಪ ತೇಜಸ್ಸುಳ್ಳಾತನುಂ, ಧನವಂತನುಂ, ಎಲ್ಲ ಕೆಯ್ಯಿಂದಂ ಪೊಗಳಿಸಿಕೊಳ್ವನುಂ, ಬುದ್ಧಿವಂತನುಂ ಈ ಗುಣಂಗಳು[6]ಳ್ಳಾತಂ ಆಕಾಶದ ಅಂಶಭೂತನೆನಿಸಿಕೊಳ್ವಂ. ವಿಚಾರಿಪೊಡೆ ಅಗ್ನಿಯ ತೇಜಸ್ಸಿನ ಗುಣಮುಳ್ಳಾತಂ ಆಕಾಶದ ಅಂಶಭೂತನೆನಿಸಿಕೊಳ್ವಂ—೪೧.

1 ರೋರ್ಪಲ್ಲಿ. 2 ಬಂದುವಾಯೋಗ. 3 ನರಂ ತಾನೆ ಭೂತ್ಸಾಯ. 4 ಯನಕ್ಕುಂ ಪುರುಷಂ. 5 ನಧಮಂ. 6 ಳ್ಳಾತಂ ಅಗ್ನಿ ಸಮತೇಜನುನಿರ್ಮಳ......ಬುದ್ಧಿಮಾನ್ನು ಈ ಗುಣಂಗಳುಳ್ಳಾತಂ ವಾಯುವಿನಂಶಿಭೂತಂ ವಿಚಾರಿಸುವೊಡೆ ಅಗ್ನಿಯ ತೇಜಸ್ಸಿನ......



(ದೇಹದಪ್ರಮಾಣಂ)

ಕಂ|| [1]ಉತ್ತಮಮಾನಂ ಬೆರಲ |
ಷ್ಟೋತ್ತರಶತಮಾಗೆ ಮಧ್ಯಮಂ ಮಾನಂ ತೊಂ ||
ಬತ್ತಾಱುಮೆರಲ್ [2]ಮತ್ತೊಂ |
ಬತ್ತಯ್ದುವೆರಲ್ ಜಘನ್ಯಮಾನಮೆನಿಕ್ಕುಂ || ೪೨ ||

(ದೇಹದಭಾರಂ)

ತೊಲೆ ಪದಿನಯ್ದಱ ಬಿಣ್ಪಂ |
ದಿಲಾಧಿಪಂ ಪತ್ತು ತೊಲೆಯ ಬಿಣ್ಪಂ [3]ಧನ್ಯಂ ||
ತೊಲೆಯಯ್ದಱ ಬಿಣ್ಪಂ ಸುಖಿ |
ಖಳ[4]ನಿರ್ತೊಲೆವರೆಯ ಬಿ[illegible] ಸವನಿಸಿದಾತಂ || ೪೩ ||

(ಅವಯವಸಮುದಾಯ ಗುಣಂಗಳ್)

ಉಗುರ್ಗಳ್ ಪಲ್ಲಧರಂ ನಾ |
ಲಗೆ ನೇತ್ರದ್ವಿತಯಮೆಂಬಿವಯ್ದುಂ ಸ್ನಿಗ್ಧ ||
ತ್ವಗುಣಂ ಬಡೆದೆಸೆದಿರೆ ನೆ |
ಟ್ಟಗೆ ಮತ್ತಿನಗುಣಂಗಳೇಗೆಯ್ದಪುವೋ || ೪೪ ||

(ಉತ್ತರೋತ್ತರೋತ್ತಮಮಾದವಯವಂಗಳ್)

ಮ|| ತನುವಿಂದ(ಗ)ಂ ಮೊಗಮಾಮೊಗಕ್ಕೆ ಸಮ ಮೂಗಾಮೂಗಿನಿಂದಂ ವಿಲೋ |
ಚನಮಾಲೋಚನದಿಂದೆ ಬಣ್ಣಮೆಸೆದಿರ್ಪಾ ಬಣ್ಣದಿಂ ಸ್ನೇಹಮಾ ||
ಗಿನಿತುಂ ಸ್ನಿಗ್ಧತೆಯಿಂ ಸ್ವರಂ ಸ್ವರದಿನಂತಾ ಸತ್ವಮಾವೀರ್ಯನೆ |
ಟ್ಟನೆ ಮುಖ್ಯಂ ಶುಭಮಕ್ಕೆ(ಲ್ತೆ)ಮತ್ತಮಿನಿತುಂ ಸರ್ವಪ್ರತಿಷ್ಠಾಪಕಂ || ೪೫ ||

ಟೀ|| ಪುರುಷಪ್ರಮಾಣಂಗೆ ಉತ್ತಮಮಪ್ಪ ಪ್ರಮಾಣಂ ನೂಱಿಯೆಂಟು ಬೆರಲ್, ಮಧ್ಯಮಪುರುಷನ ಪ್ರಮಾಣಂ ತೊಂಬತ್ತಾಱುವೆಱಲ್, ಎಂಬತ್ತಯ್ದು ವೆರಲ್ ಅಧಮಪುರುಷನ ಪ್ರಮಾಣಮೆಂದಱಿವುದು—೪೨.

ಟೀ|| ಪದಿನಯ್ದು ತೊಲೆಯತೂಕ ಪ್ರಮಾಣಿನ ತೂಕವನುಳ್ಳ ಪುರುಷಂ ಅರಸನಪ್ಪಂ, ಪತ್ತುತೊಲೆಯ ತೂಕದ ಪ್ರಮಾಣಿನ ತೂಕಮನುಳ್ಳಾತಂ ಪುಣ್ಯಾಧಿಕನೆನಿಸಿಕೊಳ್ವಂ, ಅಯ್ದು ತೊಲೆಯ ತೂಕಮನುಳ್ಳ ಪುರುಷಂ ಸುಖಿಯೆನಿಸಿಕೊಳ್ವಂ, ಎರಡುವರೆ ತೂಕ ತೊಲೆಯ ಪ್ರಮಾಣಿನ ತೂಕಮನುಳ್ಳಾತಂ ಖಳನೆನಿಸಿಕೊಳ್ವಂ—೪೩.

ಟೀ|| ಉಗುರ್ಗಳುಂ, ಪಲ್ಗಳುಂ, ತುಟಿಗಳುಂ, ನಾಲಗೆಯುಂ, ಕಣ್ಗಳೆರಡುಂ ಈ ಅಯ್ದು ಅವಯವಂಗಳುಂ ನಯಮಪ್ಪ ಗುಣದಿಂದಮೊಪ್ಪುತ್ತುಮಿರಲ್ ಉೞಿದಂಥಾ ಲಕ್ಷಣಗಳಿಂದಮೇನುಂ ಪ್ರಯೋಜನಮಿಲ್ಲಂ—೪೪.

ಟೀ|| ಆವನಾನೊರ್ವ ಪುರುಷಂಗೆ ದೇಹಕ್ಕೆ ಮುಖಮುತ್ತಮಂ, ಆ ಮುಖಕ್ಕೆ ಮೂಗುತ್ತ

1 ಉತ್ತಮಾನಂ. 2 ಮತ್ತೊಂಬತ್ತುವೆರಲ್. 3 ದಂನ್ಯಂ. 4 ನಿತ್ತೊದೆವರೆಯ ಬಿಣ್ಪನಿಂ ಸಪ್ಪ. 5 ಯಿಂದಮಾಸ್ವರದಿಸತಮಾವೈರ್ಯನೆಟ್ಟನೆ.

ಮ|ಸ್ರ|| ಹನು ತೋಳ್ ಮೂಗಕ್ಷಿಯುಗ್ಮಂ ಮೊಲೆ ಯೆರ್ದೆಯಿವು ದೀರ್ಘಂ ಕವುಂಕುಳ್
ಬಸಿಱ್ ಮೂ |
ಗು ನೊಸಲ್ ವಕ್ಷಂ ಪೆಗಲ್ ಸಂಗತಮಿವು ತಲೆ ರೋಮಂ ಕುರುಳ್ ಪೇಣೆನಿತ್ತಾ ||
[1]ವೆನಸಂ ಸಲ್ಲಕ್ಷ್ಮ ಸ(ದ)ಲ್ [2]ಮಸ್ತಕಮುರಮಿವು [3]ವಿಸ್ತೀರ್ಣಮಕ್ಷಿದ್ವಯಂ
(ತಾ)ತೋ |
ಳು ನಖಂ * ಪೋಡಂ ಶದಂ ನಾಲಗೆ ಕರತಳ [4]ಪಾದಂಗಳಾದಂದು [5]ಪೂಜ್ಯಂ || ೪೬ ||

ಕಂ|| ಲಿಂಗಂ ಬೆನ್ ಜಂಘಾಯುಗ |
ಳಂಗಳುಮೆಂಬೀ ಪ್ರದೇಶಮಿವು ನಾಲ್ಕುಂ ಹ್ರ ||
ಸ್ವಂಗಳೆನೆ ನಾಭಿಸುಟೀ ಎಡ |
ಕಂ ಗಂಭೀರಂಗಳಾದೊಡಂ ನಿಧಿಪುರುಷಂ || ೪೭ ||

ಮ|| ಅಡಿಯುಂ ಗುಲ್ಫಮುಮೊಂದೆ ಜಂಘೆ ಮೊಲಕಾಲೆಂದಿಂತಿವುಂ ವೊಂದೆ ಪೆ|
ರ್ದೊಡೆಯುಂ ಗುಹ್ಯಮುಮೊಂದೆ ನಾಭಿಜಘನಂ ಬೆನ್ನೆಂಬಿವೊಂದಾವಗಂ ||
ವೊಡೆ ತಾನೊಂದುರ[6]ಮೊಂದೆ ಮುಯ್ಪುಮೆರಡೋಷ್ಠಪ್ರಾಂತಮಂತೊಂದು ಕ |
ಣ್ಣಡೆಯುಂ ಪುರ್ಬುಮವೊಂದಿನಿತ್ತುಮರಮೊಂದಕ್ಕಂ ದಶಕ್ಷೇತ್ರದೊಳ್ || ೪೮ ||

ನಂ, ಆ ಮೂಗಿಂದಂ ಕಣ್ಗಳುತ್ತಮಂ, ಆ ಕಣ್ಗಳಿಂದ ಬಣ್ಣಮುತ್ತಮಂ, ಆ ಬಣ್ಣದಿಂ ನಯಮಾಗಿರುಹ ಉತ್ತಮಂ, ಆ ನಯದಿಂದಂ ಧ್ವನಿಯುತ್ತಮಂ. ಇವೆಲ್ಲಮುಂ ಸತ್ವಗುಣಮಾಗಿರ್ಪುವು—೪೫.

ಟೀ|| ಗಡ್ಡಂ, ತೋಳ್, ಮೂಗು, ಎರಡು ಕಣ್ಗಳ್, [ಮೊಲೆ, ಎದೆ ಇವು ಉದ್ದಮಾಗಿರುಹ; ಕವುಂಕಟ್, ಬಸಿಱ್, ಮೂಗು, ಪಣೆ, ಪೆಗಲ್ ಇವು ಉಬ್ಬಿರುಹ, ತಲೆಯ ರೋಮಂ ಕುರುಳ್..........ಇವು ನಯವಾಗಿರುಹ, ತಲೆ, ಎದೆ ಅಗಲವಾಗಿರುಹ, ಕಣ್ಗಳ್, ತೋಳ್ಗ(ಕಾಲು)ಳ್, ಉಗುರ್, ತುಟಿ] ನಾಲಗೆ, ಅಂಗೆಯ್, ಅಂಗಾಲ್ ಇವು ರಕ್ತವರ್ಣಂಗಳಾಗಿರುಹ ಈ ಗುಣಂಗಳನುಳ್ಳ ಪುರುಷನುತ್ತಮಪುರುಷನಪ್ಪಂ—೪೬.

ಟೀ|| ಲಿಂಗಂ, ಬೆನ್ನು, ಎರಡುಂ ಮೊಳಕಾಲ್ಗಳ್ ಈ ನಾಲ್ಕುಂ ಗಿಡ್ಡವಾಗಿರುಹ, ಪೊಕ್ಕುಳುಂ ಎಡದ ಸುಳಿಯಾಗಿ [ಆಳವಾಗಿ] ಇರುಹ ಈ ಲಕ್ಷಣಂಗಳನುಳ್ಳಾತಂ ನಿಧಿಪುರುಷನೆನಿಸಿಕೊಳ್ವಂ—೪೭.

ಟೀ|| ಪಾದಮುಂ, ಪರಡುಮೊಂದುಸ್ಥಾನಂ, ಜಂಘೆ ಮೊಳಕಾಲ್ಗಳೊಂದುಸ್ಥಾನಂ, ಪೆರ್ದೊಡೆ ಗುಹ್ಯಂಗಳೊಂದುಸ್ಥಾನಂ, ಪೊಕ್ಕುಳ್ ಕಿಬ್ಬೊಟ್ಟೆ ಬೆನ್ ಇವೊಂದುಸ್ಥಾನಂ, ಹೊಟ್ಟೆ ಒಂದುಸ್ಥಾನಂ, ಎದೆ ಒಂದುಸ್ಥಾನಂ, ಎರಡು ಭುಜಂಗಳುಮೆರಡುಸ್ಥಾನಂಗಳ್, ಓಷ್ಠಪರ್ಯಂತಮೊಂದುಸ್ಥಾನಂ, ಕಣ್ಣುಂ ಪುರ್ಬುಮೊಂದುಸ್ಥಾನಂ, ಈ ಪತ್ತುಮೊಂದಕೊಂದು ಕೂಡಿದೊಡೆ ದಶಸ್ಥಾನಮೆನಿಸಿಕೊಳ್ವುವು—೪೮.

1 ವಿನಮಂ. 2 ಮಸ್ತಕ. 3 ಮಸ್ತೀರ್ಣ. 4 ಪಾದವುಮಾದಂದು ಪೂಜಿಲ. 5 ಪೂಜಿಂ. 6 ದುರಮೊಂದೆಮು ಇವೆರಡುಮಾಷ್ಠಾಂತರಮಂ ಕೊಂದು ಕಣ್ಣಿಡೆ.

* ದಂತಚ್ಛದಂ(=ತುಟಿ) ಇರಬಹುದೇ?



ಕಂ|| ಮನುಜನ ಪರಮಾಯುವ ಪ |
ತ್ತನೆ[1]ಯುಂಶಂ ದೇಶದೇಶಾಂತರದೊಳ್ ಸಂ ||
ಜನಿತ ಶುಭಾಶುಭಲಕ್ಷಣ |
ಮನಿ[2]ಃಉಂ ತಂತಮ್ಮ ದೇಶದೊಳ್ ಗಣಿಯಿಸುಗುಂ || ೪೯ ||

— ಇಂತು ಪುರುಷಲಕ್ಷಣಂ —

(೨) ಇನ್ನು ಸ್ತ್ರೀಲಕ್ಷಣಂ.

ಮ|ಸ್ರ|| ಅಡಿ ರಕ್ತಾಂಭೋಜಮೆಂಬಂತಿರೆ ಸರಳತರಂ ಜಂಘೆ ನೇರ್ಪಟ್ಟು ಚೆಲ್ವಿಂ |
ತೊಡೆ ರಂಭಾಸ್ತಂಭಮಂ (ತಾಂ) ಕಟಿ ಗಜಶಿರಮಂ ತೆಳ್ಪಸಿಱ್ ವೇದಿಯಂ ಪೋ ||
ಗೊಡನಂ ವೃತ್ತಸ್ತನಂ ಸಂಚಳಿಪೆಳಲತೆಯಂ ತೋಳ್ ಕೊರಲ್ ಕೋಂಕಿ ನೋಟ್ಪಂ |
ಗಡೆಗೊಂಡಾಸ್ಯಂ ಶರಚ್ಚಂದ್ರನನಿಳಿಸೆ ಕರಂ ಧನ್ಯೆ (ಸ)ತತ್ಕನ್ಯೆಯಕ್ಕುಂ || ೫೦ ||

ಪೃಥ್ವಿ|| ಕನಿಷ್ಠಿಕೆ ಸ[3]ಮಂತು ಮುಟ್ಟದಿರೆ ಪೃಥ್ವಿಯಂ [4]ಜಂಡೆ ಮ |
ತ್ತನಾಮಿಕೆಯ[5]ದುದ್ದಮಾಗೆ ಮಱುವಾಟ್ಟಿ ಸುಟ್ಟಂಬೆ ಯೊಂ ||
ದೆ ನೀಳ್ದು ನಿಲೆ ಕಡ್ಡ ಮಿಕ್ಕಿನ ಬೆರಲ್ ಕ್ರಮಂದಪ್ಪಿ ಮ |
ತ್ತನಿಪ್ತ[6]ಱೊಳಗೊಂದೆರಟ್ ನಿಡಿಯಪಾಗೆ [7]ಜಾರೆಯಕ್ಕುಂ || ೫೧ ||

ಟೀ|| ಮನುಷ್ಯನ ಪರಮಾಯುಷ್ಯಮುಂ ಈ ದಶಸ್ಥಾನಂಗಳಲ್ಲಿ ಸಂಪನ್ನಮಾಗಿರ್ಪುದು. ತಂತಮ್ಮ ಸ್ಥಾನಂಗಳಲ್ಲಿ ಲಕ್ಷಣಹೀನ[8]ನಾಗಿದೊಡೆಯಾವೊಂದುಸ್ಥಾನಲಕ್ಷಣದಿಂದ ಪತ್ತುವರ್ಷಮಾಯುಷ್ಯಂ ಹೀನಮಪ್ಪುದು. ಎಲ್ಲಾ ಸ್ಥಾನಂಗಳುಂ ಶುಭಲಕ್ಷಣಮುಳ್ಳುದಾಗಿರ್ದೊಡೆ ಆಯುಷ್ಯಂ ಸಂಪೂರ್ಣಮೆನಿಸಿಕೊಳ್ವುದು—೪೯.

ಟೀ|| ಪಾದತಳಂ ಕೆಂಪಾಗಿ ತಾವರೆಯ ಮರ್ಯಾದೆಯಲ್ಲಿ ಕೆಂಪಾಗಿರುಹ, ಮೊಳಕಾಲ್ ನೇರಿತ್ತಾಗಿ ನುಣ್ಪಾಗಿರುಹ, ತೊಡೆ ಬಾಳೆಯ ಕಂಬದಂದದೆ ಬಟು(ತು)ವಾಗಿರುಹ, ಎರಡು ಕಪೋಳಂಗಳುಂ ಆನೆಯ ಕುಂಭಸ್ಥಳದಂತೆ ಇರುಹ, ಹೊಟ್ಟೆ ತೆಳುವಾಗಿರುಹ, ಮಧ್ಯಂ ವೇದಿಯಂತಿರುಹ, ಸ್ತನಂಗಳ್ ಪೊಂಗಳಸಂಗಳಂತಿರುಹ, ತೋಳ್ಗಳುಮಲ್ಲಾಡುತ್ತಿರ್ಪ ಎಳಲತೆಗಳಂತಿರುಹ, ಕೊರಲ್ ವೃತ್ತಮಾಗಿ ಸಣ್ಣನಾಗಿರುಹ ಮುಖಂ ಸಂಪೂರ್ಣಚಂದ್ರನಂತಿರುಹ ಈ ಲಕ್ಷಣಂಗಳನುಳ್ಳಾಕೆ ಉತ್ತಮಸ್ತ್ರೀಯೆನಿಸಿಕೊಳ್ವಳ್—೫೦.

ಟೀ|| ಪಾದದ ಕಿಱುಕುಣಿಕೆಯ ಬೆರಲ್ ಭೂಮಿಯಂ ಸಮನಾಗಿ ಮುಟ್ಟದಿರ್ದೊಡೆ ವೈಧವ್ಯಮಪ್ಪುದು. ಆ ಕಿಱುಕುಣಿಕೆಯ ಒತ್ತಿನ ಬೆರಲ್ ಉದ್ದವಾಗಲ್ ಮೊದಲ ಪುರುಷನಲ್ಲದೆ ಮತ್ತೊಬ್ಬ ಪುರುಷನನ್ನನುಭವಿಸುವಳ್. ನಡುವಣ ಬೆರಲೊಂದೇ ಉದ್ದಮಾಗಿರಲ್ ಕಡ್ಡೆಯಪ್ಪಳ್. ಉಳಿದ ಬೆರಲ್ಗಳೊಳಗೆ ಒಂದೆರಡು ನಿಡಿಯ ಗುಡ್ಡನಾಗಿರ್ದೊಡೆ ಜಾರೆಯಪ್ಪಳ್-೫೧.

1 ಯಂಶಮುಹಿದು ದರದರಾಂತರ. 2 ತುಂತಮ್ಮ. 3 ಸ್ವಿತು. 4 ಜಂದೆ. 5 ಯುಮದ್ದ. 6 ಱೊಳಗೊಂದರಡಿಡಿಯುವಾಗೆ ಜಾರೆ. 7 ಇಲ್ಲಿಯ ಛಂದಸ್ಸಿನ ಗಣಾಕ್ಷರವು ಸಾಧುವಾಗಿಲ್ಲ—"ರೆ" ಗುರುವಾಗಿಯೂ, "ಯ" ಲಘುವಾಗಿಯೂ ಇರಬೇಕು (ಪಾಱಟ್ಟಿಪಳ್ – ಎಂದು ತಿದ್ದಬಹುದು.) 8 ಮಾಗಿ ಇದ್ದಡೆಯಾವೊಂದು ಸ್ಥಾನಲಕ್ಷಣದಿಂದ ಸಂಪೂರ್ಣವೆನಿಸಿಕೊಂಬುದು.

ಚಂ|| ಧರಣಿಯನೆಯ್ದೆ ಪತ್ತದೊಡೆ ನೀಳ್ದ ಮಡಂ ಮೊಱನಂದಮಪ್ಪ ಕಾ |
ಲೊರಸುವೊಡೊಡ್ಡಿತಪ್ಪ [1]ಪರಡಂತಸಿದುಂ ಮಿಗೆ ದೊಡ್ಡಿತಾದ ಪೋಱ್ ||
ಕರವುಸಿದಾದ ಜಂಘೆ ಚಿಟಿಕೆಂದು ಪಳಂಚುವ ಜಾನು ಕೇಶಮುಂ ||
ಪುರುಷಕರಂ ಕೃಶಂ ತೊಡೆಯೆನಿಪ್ಪೊಡೆ ಪಾಪದ ಪುಂಜಮಂತವಳ್ || ೫೨ ||

ಕಂ|| ಚತುರಸ್ರಾಶ್ವತ್ಥದಳ |
ಪ್ರತಿಮರುಚಿಸ್ಥಗಿತಮಣಿವರಾಂಗಂ ಶುಭಮು ||
ದ್ದಿತಮುಳಕುಳರೋಮಶಮು |
ಲ್ಪತರಂ ಭಗಮಾದೊಡಾಕೆ ದುರ್ಭಗೆಯಕ್ಕುಂ || ೫೩ ||

ವದನದ ನೊಸಲ ಕವುಂಕುಟ |
ಕದಪಿನ ತೆಱದವಟಯೋನಿ [ವರ] ಮಣಿನಾಸಾ ||
ಗ್ರಪ್ರೋಲ್ಲತದಾಸ್ಪದಗಂ |
ಧದಂತೆ ತದ್ಗಂಧಮೆಂದು ಲಕ್ಷಿಸುಗವಳಂ || ೫೪ ||

* ಉ|| ........................................................................ |
........................................................................ ||
[2]ಬತ್ತಿದುರೋಜ ಮೆಲ್ಪುಪೊಱಪೊಣ್ಮಿದ ಸೋರ್ಮೊನೆಯಪ್ಪ ಜೋಲ್ವ ಮೇ |
ಗೊತ್ತಿದ ಕೊಟ್ಟಡಂಗಿದ ಕುಚಂಬಡೆದಂದಶುಭಂ ನಿರಂತರಂ || ೫೫ ||

ಟೀ|| ಭೂಮಿಯಂ ಮಡಂ ಸಮನಾಗಿ ಮುಟ್ಟದಿರ್ದೊಡೆ, ಅಸಿದಪ್ಪ ಪಾದಮಲ್ಲದೆ ಮೊಱದ ಮರ್ಯಾದೆಯ ಅಗಲಮನುಳ್ಳಪಾದಂಗಳಾಗುಹ, ಹರಡು ನಡೆವಾಗ ಒಂದನ್ನೊಂದು ರಸುಹ, ದೊಡ್ಡಿತಪ್ಪ ಮೊಟಕಾಲ್, ಅಸಿದಾಗಿರುಹ, ಅಲ್ಲಾ ತೋರನಾಗಿರುಹ, ನಡೆವಾಗಳ್ ಧ್ವನಿಯಹಂಥ ಮೊಟಕಾಲ್ ಪುರುಷಾಕೃತಿಯಾಗಿ ರೋಮಮನುಳ್ಳ ಮೊಟಕಾಲ್, ಬತ್ತಿದ ತೊಡೆಗಳಾಗುಹ ಈ ಆಱು ಲಕ್ಷಣಂಗಳುಳ್ಳಂಥ ಸ್ತ್ರೀಯು [3]ಪಾಪೆ ಎನಿಸಿಕೊಳ್ವಳ್—೫೨.

ಟೀ|| ಆವಳೊರ್ವಳ ಗುಹ್ಯಂ ಚತುರಸ್ರಮಾಗಿ ಅರಳಿ(ದ)ಯೆಲೆಯ ಮರ್ಯಾದೆಯಲ್ಲಿ ರ್ದೊಡೆ ಉತ್ತಮಂ, ಆ ಗುಹ್ಯಸ್ಥಾನಂ ಸ್ವಲ್ಪಮಾಗಿ ರೋಮಂಗಳ್ ಬಹುಳಮಾಗಿರ್ದೊಡೆ ಭಾಗ್ಯಹೀನೆಯೆನಿಸಿಕೊಳ್ವಳ್—೫೩.

ಟೀ|| ಆವುದಾವಳೊರ್ವಳ ಗುಹ್ಯಸ್ಥಾನಂ, ಮುಖದ, ಹಣೆಯ, ಕವುಂಕುಟ, ಗಲ್ಲದ ಆಕಾರದ ಯೋನಿಯಾಗುಹ, ಆಗುಹ್ಯಸ್ಥಾನದ ಯೋನಿ ಮಣಿಮೂಗಿನ ತುದಿಯ ಮರ್ಯಾದೆಯಲ್ಲಿ ರುಹ, ಮುಖದ ಪರಿಮಳದಂತೆ ಗುಹ್ಯವಾಸನೆ ಎಂದಱಿವುದು—೫೪.

ಟೀ|| ....................................ತೋರಮೊಲೆಯಲ್ಲದೆ ಬತ್ತಿದಮೊಲೆ, ಎಲ್ವಿನ ಮರ್ಯಾದೆಯಲ್ಲಿ ಹೊಱಹೊಮ್ಮಿ ತೋಱುವ ಕುಚಾಗ್ರಂ ಮೇಲು ಮುಂತಾಗಿರುಹ, ಕೊಟ್ಟು ಅಡಂಗಿರುಹ, ಈ ಅವಲಕ್ಷಣಂಗಳುಳ್ಳವಳ್ ಭಾಗ್ಯಹೀನೆಯೆಂದಱಿತುಕೊಳ್ವುದು—೫೫.

1 ಪರಡೊಮಿಂತಿದು. 2 ಬತ್ತಿದ ಮೊಲೆ ಎಲ್ಪು, (ಛಂದೋದೋಷವಿದೆ) 3 ಪಾಪಿ(ನಿ?)
* ಈ ವೃತ್ತದ ಎರಡು ಪಾದಗಳು ಮಾತ್ರವಿವೆ; ಅಷ್ಟಕ್ಕೆ ಟೀಕೆಯೂ ಇದೆ. (ಗಳಿತವಾದಂತೆ ಮೂಲ ಪ್ರತಿಯಲ್ಲಿ ದೊರಕುವುದಿಲ್ಲ, ಗ್ರಂಥ ನಿರಂತರವಾಗಿ ಬರೆದಿದೆ.)



||ಕಂ ಕುಟಿಯೆ ಪೊಱಂಡಾಗಿರೆಯುಂ |
ಕುಟಿದಿರೆಯುಂ ಬೆನ್ನಸಿಪ್ಪಮುಂ ಮಾಳ್ಕುಂ ಮೇಣ್ ||
ಸುೞಿ ಬೆನ್ನೊಳ್ ಮೊಲೆಗಂ ಪೊ |
ರ್ಕುೞಿಡೆಗ[1]ಮುಳ್ಳಂತೆ ತೋಱೆ ವಿಧವೆ ದಲಕ್ಕುಂ || ೫೬ ||

ಕೊಳೆ ಸೋಱುವ ಕುಳ್ಳಿದ ಕೌಂ |
[2]ಕುಟವಟ್ ನಿರ್ಭಾಗ್ಯೆ ನಿರುತ ರೇಖಾವಳಿ ಕೌಂ ||
ಕುಟ ಮೇಲೆ ತ್ರಿಶೂಲಾ ಕೃತಿ |
ಘಟಿಯಿಸಿ ನಿಲೆ [3]ಕಳ್ಳಿಯವಳೆ ತಾಟಕೆಯಕ್ಕುಂ || ೫೭ ||

ಮ|ಸ್ರ|| ಕಡುಗುಜ್ಜಂ[4]ಗಳ್ ಜಘನ್ಯಂಗಳುಮೆನಿಸುವ ತೋಳ್ ರೋಮವೊಂದಿರ್ಪಮುಂಗೆಯ್ |
ನಿಡಿದುಂ ಕೊಂಕುಂ ಕೊರಲ್ ಪತ್ತಿದ ಕದಪು ಕರಂ ಕಾರ್ಪ್ಪಿಗರ್ ನೀಳ್ದ [5]ಗಡ್ಡಂ ||
ಬಿಡುವಾಯ್ ಮಿಕ್ಕುದ್ದಮಾಗಿರ್ಪ್ಪಸಡು ಬೆರಳಿವಲ್ ಕೊಂಕುಮೂಗಲ್ಗೆ ಕಣ್ಗಳ್ |
ಕೆಡೆಗಳ್ ಪುರ್ವುಂ [ಸಮಂತಂ] ತಱಿಯ ಕುಟಿನೊಸಲ್ಕೂಡೆ ನಿರ್ಭಾಗ್ಯೆಯಕ್ಕುಂ || ೫೮ ||

ಕಂ|| ಕಿವಿಗಳ್ ತೋರ್ಪೊಡೆ ನಿಮಾರ್ಂ |
ಸವಾಗಿ ಸಿರವ(ರೆಯು)ಸಮುವಾಗಿ [ನೆರೆ] ನಿಲೆ ನವಿರ್ಗಳ್ ||
ಕವಲುಂ ಕಡುಗೆಂಪುಂ ಪಲ |
ವುವಪ್ಪ ಮುಸುಡುಱುವುಮಾಗೆ ದುಃಖಿತೆಯಕ್ಕುಂ || ೫೯ ||

ಟೀ|| ಆವಳೊರ್ವಳಿರ್ದ ಪೊಱಂಡಾಗಿರುಹ, ಅಲ್ಲಾ ಕುಟಿಯಾಗಿರುಹ, ಇಂತಪ್ಪ ಬೆನ್ (ಭಾಗಂ) ದುಃಖಮಂ ಮಾಡುವುದು. ಬೆನ್ನಲ್ಲಿ ಪುಟ್ಟಿದ ಸುೞಿ, ಮೊಲೆಗಾದೊಡಂ ಪೊರ್ಕುೞಿಗಾದೊಡಂ ಬಂದಿರ್ಪಂತೆ ತೋಱೆ ಆ ಸ್ತ್ರೀ ವೈಧವ್ಯಮನನುಭವಿಪಳ್—೫೬.

ಟೀ|| ಕೌಂಕುಟ್ ಕುಟಿಯಾಗಿ ದುರ್ಗಂಧಂ ನಾಱುತ್ತಿರಲ್ ಆವಳ್ ಭಾಗ್ಯಹೀನೆ, ಆ ಕೌಂಕುಳ ಮೇಲೆ ಸಸಿನವಾಗಿ ತ್ರಿಶೂಲದಾಕೃತಿಯೊಳ್ ರೇಖೆಗಳಿರಲ್ ಆವಳ್ ಕಳ್ಳಿ ತಾಟಕೆಯೆನಿಸಿಕೊಳ್ವಳ್—೫೭.

ಟೀ|| ಅಪಾರಗುಡ್ಡಗುಡ್ಡನಾಗಿ ಕಪ್ಪಾಗಿರ್ಪ ತೋಳ್, ರೋಮಂತುಂಬಿರ್ಪ ಮುಂಗೆಯ್, ಉದ್ದವಾಗಿ ಡೊಂ(ಕೊಂ)ಕಾಗಿರ್ಪ ಕೊರಲ್, ಪತ್ತಿದ ಗಲ್ಲಂ, ಅಪಾರ ಕಪ್ಪನುಳ್ಳ ತುಟಿ, ಉದ್ದಮಾಗಿರ್ಪ ಗಡ್ಡಂ, ಬಿಟ್ಟ ಬಾಯ್, ಉಬ್ಬಿದಪ್ರೋಡು, ಅಗಲಮಾಗಿರ್ಪ ಪಲ್, ಡೊಂ(ಕೊಂ ಕಾಗಿರ್ಪ ಮೂಗು, ಕುಟಿಯಾಗಿರ್ಪ ಕಣ್, ಗಂಟಿಕ್ಕಿದ ಪುರ್ವುಗಳ್, ಅಸಿದಾಗಿ ಕುಟಿದಾಗಿರ್ಪ ಪಣೆ ಇಂತಪ್ಪ ಅವಯವಂಗಳನುಳ್ಳಾಕೆ ಭಾಗ್ಯಹೀನೆಯಪ್ಪಳ್—೫೮.

ಟೀ|| ಕಿವಿಗಳ್ ಮಾಂಸಂಗಳಿಲ್ಲದೆ ಇರುಹ, ಸೆರೆಗಳ್ ಡೊಂಕಾಗಿ ತೋಱುತಿಹ ಕೇಶಂಗಳ್ ಕವಡು ಕವಡಾಗಿ ಕೆಂಪಾಗಿ ಅಲ್ಪವಾಗಿ ಗುಡ್ಡನಾಗಿರುಹ ಈ ಲಕ್ಷಣಂಗಳಿಂದೆ ದುಃಖಿತೆಯಪ್ಪಳ್—೫೯.

1 ಗಮುಳಂತೆ. 2 ಕುಳದವಳ್. 3 ಕಳಿಯಮುರಚು ಎತೆ. 4 ಗಳಘನ್ಯಂಗಳಮುಗಳೆನಿಸು, ತೋಳು ವೆುಂದಿಪ್ಪ. 5 ಸೂಡುಂ.

ಕಂ|| ಕಡುಕೆಚ್ಚನೆ ಕಡುಗರಿಯುಳ್ |
ಕಡುಸಿಡಿಯುಳ್ ಕಂಪೆ ಗುಜ್ಜೆ ಮೇಣ್ ಕರಮುಸಿಯುಳ್ ||
ಕಡುದೊಡ್ಡೆಯೆನಿಪೊಡಂ ನೋ |
ಟ್ಪೊಡೆ ಪುರುಷಾಕಾರೆಯಪ್ಪೊಡಂ ಕಷ್ಟೆಯವಳ್ || ೬೦ ||

ಚಂ|| ನಗುವೊಡೆ ಗಲ್ಲದಲ್ಲಿ ಕುಟು[1]ಯಾದೊಡೆ ಪಟ್ಟಿಡೆಯಲ್ಲಿ ಲೋಳೆ ಸೋ |
ರ್ದುಗುವೊಡೆ ಮೇಲು[2]ಮಾಗಿ ನಡೆವಪ್ಪೊಡಧೋಮುಖಿಯಾಗಿ ನೋಟ್ಪೊಡು ||
ಬ್ಬೆಗದೊದವಿಂದಮಿಪ್ಪೊ[3]ಡೆ ನೆಲಂ ನಡೆವಲ್ಲಿ ನಿರಂತರಂ ಧಿಗಿ |
ಧ್ಧಿಗಿಲೆನುತಿರ್ಪೊಡಾಕೆ ಪತಿ[4]ವಿತ್ತ ಚರಿತ್ರವಿಹೀನೆ ನಿಶ್ಚಯಂ || ೬೧ ||

ಕಂ|| ಕಾಲುಗುರ್ಗಳ್ ಮೊಱನಂತಿರೆ |
ಮೇಲೆ ಕರಂ ಸಿರೆಗಳಾಗೆ ಕೊಂಕಿದ ಬೆರಲಾ ||
ಬಾಲಿಕೆ ವರನೊಡವಾಟಲು |
ಮಾಲಕ್ಷಣದಾಕೆ ಯೋಗಿಯೆನಿಸುತೆ ತೊಳಲ್ವಳ್ || ೬೨ ||

ಉ|| ಕಾಂತೆಗೆ ಕಾಲೊಳಂ ಕಟಿಯೊಳಂ ಪುರುಷಂಗೆ ಶಿರೋಮುಖಂಗಳೆಂ |
ಬಿಂತೆರಡುಂ ಪ್ರದೇಶದೊಳಗುತ್ತಮಲಕ್ಷಣಮೊಂದಿ ತೋರ್ಪೊಡ ||
ತ್ಯಂತ ಶುಭಂ ವರಾಂಗರಸನಾ ವೃಷಣೇಕ್ಷಣ ಶುಕ್ಲಸತ್ವಮಾ |
ಭ್ಯಂತರಮಾವ ಲಕ್ಷಣಮುಮಿಂತಿವೆ ಬಲ್ಲಿದನೋದಿನಿಷ್ಟದೊಳ್ || ೬೩ ||

---

ಟೀ|| ಅತಿಕೆಂಚೆಯಾಗಿರುಹ, ಅತಿಕರಿಕೆಯಾಗಿರುಹ, ಅತಿಯುದ್ದವಾಗಿರುಹ, ಅತಿಗುಡ್ಡನಾಗಿಹ, ಅತಿಅಸಿಕೆಯಾಗಿರುಹ, ಅತಿದೊಡ್ಡೆಯಾಗಿರುಹ ಈ ಲಕ್ಷಣಂಗಳಾಗಿ ತೋಱುಕೆ ಪುರುಷಾಕಾರಮಾಗಿ ತೋಱಲ್ ಆಕೆ ಅತಿಕಷ್ಟೆಯಪ್ಪಳ್—೬೦.

ಟೀ|| ನಗುತಿರ್ಪಲ್ಲಿ ಗಲ್ಲದಲ್ಲಿ ಕುಟು ತೋಱುಹ, ನಿದ್ರೆಗೆಯ್ವಲ್ಲಿ ಬಾಯಿಂದೆ ಲೋಳೆ ಸುರಿಯುತ್ತಿರುಹ, ಮೇಲುಂಗಾಗಿ ನಿಲುಹ, ನಡೆವಾಗಳಧೋಮುಖಿಯಾಗಿ ನೋಡುತ್ತೆ ನಡೆಹ, ಉಬ್ಬೆಗಂ ಮಿಗಿಲಾಗಿರುಹ, ನಡೆವಲ್ಲಿ ಭೂಮಿ ಧ್ವನಿಯಾಗುತ್ತಂ ಬರುಹ, ಆ ಸ್ತ್ರೀಯುಂ ಪುರುಷನಿಂದೆಯುಂ, ಧನದಿಂದೆಯುಂ, ಚರಿತ್ರದಿಂದೆಯುಂ ಇಲ್ಲದಿರ್ಪಳಪ್ಪಳ್—೬೧.

ಟೀ|| ಕಾಲುಗುರ್ಗಳ್ ಮೊಱದ ಮರ್ಯಾದೆಯಲ್ಲಿ ಅಗಲವಾಗಿರುಹ, ಕೆಯ್ಯಮೇಲೆ ಸಿರೆಗಳ್ ತೋಱುತ್ತಿರುಹ, ಡೊ(ಕೊ)ಂಕಿದ ಬೆರಲ್ಗಳಾಗುಹ, ಇಂಥಹ ಲಕ್ಷಣಮುಳ್ಳ ಸ್ತ್ರೀ ಪುರುಷಸಂಗಂ ಕ್ಷಣಮುಮಿಲ್ಲದೆ ದಿವ್ಯ[5]ಯೋಗಿನಿಯಾಗಿ ತೊಳಲುತ್ತಿರ್ಪಳ್—೬೨.

ಟೀ|| ಸ್ತ್ರೀಯರ್ಗೆ ಕಾಲಲ್ಲಿ ಪಚ್ಚಳದಲ್ಲಿ, ಪುರುಷರ್ಗೆ ಶಿರಸ್ಸಿನಲ್ಲಿ ಮುಖದಲ್ಲಿ ಈ ಎರಡೆರಡು ಸ್ಥಾನಂಗಳಲ್ಲಿ ಸ್ತ್ರೀಪುರುಷರ್ಗೆ ಉತ್ತಮವಹಂಥಾ ಲಕ್ಷಣಂಗಳ್ ಚೆನ್ನಾಗಿ ತೋಱುತ್ತಿರಲ್ ಅತ್ಯಂತಮುತ್ತಮುಂ. ಮುಖಂ (ವರಾಂಗ=ಗುಹ್ಯಂ ಎಂದಿರಬಹುದು, ಮುಖವೆಂದಲ್ಲ) ನಾಲಗೆ. ವೃಷಣಂ, ನೋಟಂ, ವೀರ್ಯಂ, ಸತ್ವಂ ಇವು ಅಂತರ್ಲಕ್ಷಣಂಗಳೊಳಗೆ ಸಾಮುದ್ರಿಕಶಾಸ್ತ್ರದಲ್ಲಿ ಉತ್ತಮಂಗಳೆಂದು ಪೇಱಿಸಿಕೊಳ್ಳುವು—೬೩.

---

1 ಯಾಗಿಪ್ಪಡೆ. 2 ಮಾಗಿ ಎನೆ ಬಪ್ಪೊಡೆ ಮುಟ್ಟಿ. 3 ಡೆಲಂ ನಡೆ. 4 ಪತಿಪತ್ತ. 5 ಗಿಯೆನಿಸಿ ತೊಂಟಳ್.



ಕಂ|| ತಲೆಗಾತ್ರ ಸ್ಫುರಣಂ ನರ |
ವುಲಿ ಕಾಳೆಳ್ಳಟ್ಟೆ ಚ(ಂ)ಮ್ಮಖಿಳ್ಳೆಂದಿನಿತುಂ ||
ಬಲದೊಳ್ ಪುರುಷಂಗೆಡದೊಳ್ |
ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ || ೬೪ ||

— ಇಂತು ಸ್ತ್ರೀಲಕ್ಷಣಂ —

(೨) ಗಜಲಕ್ಷಣಂ

ವ|| ಇನ್ನು ಗಜಲಕ್ಷಣಮಂ ಪೇೞ್ವೆಂ

ಮ|| ಕರಮುದ್ದಂ ಪ್ರತಿಮಾನಮಾಗದಿರೆ [1]ಬಾಹ್ಯಸ್ಥಂ (ವಾಹಿತ್ಥಂ) ದೃಢಂ ಸ್ಥೂಲಮಾ |
ಗಿರೆ ಪೂರ್ಣಂ ಸಕಳಾಂಗಮಾಗಿರೆ ಸರೋಮಂ ನೀಳ್ಪ[2]ವೆಕ್ರೋಷ್ಠಮಾ ||
ಗಿರೆ ಸೋತ್ತುಂಗ ಕಟಂಗಳಾಗಿರೆ [3]ಬೃಹದ್ವಿಸ್ತೀರ್ಣಕುಂಭಾಗ್ರಮಾ |
ಗಿರೆ ಸದ್ಬಿಂದು ಸುರಕ್ತಮಾಗಿರೆ ಮುಖಂ [4]ಶ್ರೀಕಾರಣಂ ವಾರಣಂ || ೬೫ ||

ಮ|| ನಿಡಿದಪ್ಪಂಗುಲಿ ಕೆಂಪುವೆತ್ತ ವಿಪುಳಶ್ರೋತ್ರ(ಸ್ರೋತ)ಂ ಲ(ರ)ಸತ್ಪುಷ್ಕರಂ |
[5]ಕಡುಗಂಪುಣ್ಮುವ ಸುಯ್ ಪೊದಟ್ಟ ವಳಿಯುಂ ನಿರ್ಲೋಮಮುಂ [6]ನುಣ್ಚಿತುಂ ||
ನಿಡಿದುಂ ಬಟ್ಟಿತುಮಪ್ಪ ಕೆಯ್ ಮದ(ಧು)ನಿಭಂ ಸಂಶ್ಲಿಷ್ಟಮ[7]ಪ್ಪೊಳ್ಕಡಂ |
ಬಡಗಣ್ಗೊಪ್ಪುವ ದಕ್ಷಿಣೋನ್ನತರದಂ ತಾನಾಗೆ ಪೂಜ್ಯಂ ಗಜಂ || ೬೬ ||

---

ಟೀ|| ಮಂಡೆ, ಶರೀರಂಗಳುಂ ಕೆತ್ತುತ್ತಿಹ, ನರವಲ್ಲಿ (ವುಲಿ) ಕಾಳೆಳ್ಳು, ಮಚ್ಚೆ, ಚಂಮರ್ಖಿಳ್ ಈ ಲಕ್ಷಣಂಗಳ್ ಬಲದೊಳ್ ಪುರುಷಂಗೆ ಆದೊಡಂ, ಎಡದೊಳ್ ಸ್ತ್ರೀಯರ್ಗೆ ಆದೊಡಂ ಉತ್ತಮವೆನಿಸಿಕೊಳ್ವುದು. ಇಷ್ಟಾರ್ಥಮೆಲ್ಲಮಂ ಸಲಿಸುವುದು—೬೪.

ಟೀ|| ಸೊಂಡಿಲುದ್ದಮಾಗಿರುಹ, ಶರೀರಂ ಸುಂಡಿಲಿಂದಂ ಗುಡ್ಡನಾಗಿರುಹ, ಹಿಂಭಾಗಂ ದೃಢಮಾಗಿರುಹ, ಅವಯವಂಗಳೆಲ್ಲಂ ಸಂಪೂರ್ಣಮಾಗಿ ತುಂಬಿಕೊಂಡಿರುಹ, ರೋಮಸಹಿತಮಾಗಿ ಕೆಳಗಣ ತುಟಿ ನೀಳಮಾಗಿರುಹ, ಗಲ್ಲಂಗಳುನ್ನತಮಾಗಿರುಹ, ಕುಂಭಸ್ಥಲಂಗಳ ತುದಿಗಳ್ ವಿಸ್ತೀರ್ಣಮಾಗಿ ದೊಡ್ಡಿತ್ತಾಗಿರುಹ, ಮುಸುಡಲ್ಲಿರ್ಪ ಚಿ(ಪ್ಪು)ಬ್ಬುಗಳ್ ಚೆನ್ನಾಗಿ ಕೆಂಪಾಗಿ ಇರುಹ, ಈ ಲಕ್ಷಣಂಗಳನುಳ್ಳ ಆನೆ ಐಶ್ವರ್ಯಕ್ಕೆ ಕಾರಣಮಾಗಿರ್ಪುದು—೬೫.

ಟೀ|| ಉನ್ನತವಹಂಥ ಕಾಲ್ಬೆರಲ್ಗಳ್, ಕೆಂಪಾಗಿ ದೊಡ್ಡಿತ್ತಾಗಿರ್ಪ ಕಿವಿಗಳ್, ಧ್ವನಿಗೆಯ್ಯುತ್ತಿರ್ಪ ಸೊಂಡಿಲ ತುದಿ, ಗಲ್ಲದಿಂ ಬಹಂಥಾ ಉಸಿರ್ (ಸುವಾಸನೆ ನಾಱುತ್ತಿಹ ಉಸಿರ್?) ತೋಱುತ್ತಿಹಂಥಹ ವಳಿಗಳ್, ರೋಮಮಿಲ್ಲದೆ ನುಣ್ಚಿತ್ತಾಗಿ ಬಟ್ಟಿತ್ತಾಗಿ ಉದ್ದವಾಗಿರ್ಪ ಸೊಂಡಿಲ್, ಮದಮನುಳ್ಳುದಾಗಿ ಒಂದನ್ನೊಂದು ಒರಸುತಿಹಂಥ ಪೊಳ್ಕೊಡೆಗಳ್, ಸಣ್ಣವಾಗಿರ್ಪ ಕಣ್ಗಳ್, ಎಡದಿಂದಲುಂ ಬಲದಂತಮುದ್ದಮಾಗಿರುಹ ಇಂತಹ ಲಕ್ಷಣಮುಳ್ಳ ಆನೆ ಪೂಜೆಗೆ ಯೋಗ್ಯಮಪ್ಪುದು—೬೬.

---

1 ಬಾಹ್ಯಸ್ಪಂದುತ್ತಂ. 2 ವೆತ್ತಿಷ್ಠ 3 ಬೃಹಸ್ವಸ್ತೀ. 4 ಶ್ರೀಕಾರಣಂ. 5 ಕಡಗಂಪ್ಪು. 6 ಗುಣ್ಚಿಡು, ಗಿಡೆದುಂ. 7 ಪ್ಪೊಳ್ಪಡಂ, ಪೊಳ್ವದಿಂ.

ಕಂ|| ಪಾರಿವದ ಮಿಾನ ನಯನಾ |
ಕಾರಮೊಡಂಬಡೆ ಪೊದಲ್ದು ನೀಳ್ದಿ ಸೆವೆವೆಗಳ್ ||
ನೇರಿದುವಾಗಿರೆ ರದನಗ |
ಳಾರಾ? ಮಧುಪಿಂಗಲೋಚನಂಗಳ್ ಶುಭದಂ || ೬೭ ||

ಅರುಣಾಗ್ರಪಲ್ಲವಂಗಳ್ |
ಸೆರೆಯಿಲ್ಲದೆ ವೃತ್ತಮಲ್ಲದತಿಮೃದು ಚಿಬ್ಬಂ ||
ದೊರೆಕೊಳೆ ದುಂದುಭಿನಿನದಂ |
ಕರಿವರ್ಣಮದಾಗೆ ಪೂರ್ಣಫಲಮಂ ಕುಡುಗುಂ || ೬೮ ||

ಪೃಥ್ವಿ|| ಸಮಾನಮೆನಿಸಿರ್ದು ಮೇಗಡರ್ದು[1]ತೋರ್ಪ ರೋಮಂಗಳು |
ಳ್ಳ[2]ಮಸ್ತವೆನೆ ನಿಮ್ನಮಾಗಿ ಸೊಗಯಿಪ್ಪ ನಿರ್ಯಾಣಕಂ ||
ಸಮುನ್ನತಮೆನಿಪ್ಪವಗ್ರಹಮನೂನ[3]ಪೀನಂ ಸಮು |
ದ್ದಮಾಗಿ ಕಡುಗುಜ್ಜನಪ್ಪ ಕೊರಲಾಗೆ ಪೂಜ್ಯಂ ಗಜಂ || ೬೯ ||

ಮ|| ಸ್ಥಿರದೀರ್ಘಾಸನಮೊಪ್ಪುವುನ್ನತ ಶಿರೋವಿರ್ಭಾಗ ವಿಸ್ತೀರ್ಣಮು |
ಪ್ಪುರಮಿಂಬೊಪ್ಪುವ ಕುಕ್ಷಿ ಚೆಲ್ವನೊಳಕೊಂಡಾ ಚೂಚಕಂ ದೀರ್ಘರ ||
ಕ್ತ ರುಚಿತ್ವಂ ಸ್ಥಿರಪಾಹನು ವಿಪುಳ ನಿರ್ಲೋಮಾಂಡಕೋಶಂ ಮನೋ |
ಹರಸತ್ಪೇಚಕಮುದ್ಘವಾಳಧಿ ಗಜೇಂದ್ರಕ್ಕಾದೊಡತ್ಯುತ್ತಮಂ || ೭೦ ||

---

ಟೀ|| ಪಾರಿವಾಳದ ಹಕ್ಕಿಯ ಮಿಾನಿನ ಮರ್ಯಾದೆಯ ಛಾಯೆಯನುಳ್ಳ ಕಣ್ಗಳ್, ದಟ್ಟಿದುವಾಗಿ ನೀಳವಾಗಿರ್ಪ ಕಣ್ಣೆವೆಗಳ್, ನೀಳವಾಗಿರ್ಪ ದಂತಂಗಳ್, ಆಲಿಗಳ್ ಜೇನತುಪ್ಪದ ಮರ್ಯಾದೆಯ ಪೊಂಬಣ್ಣವಾಗಿರುಹ ಈ ಲಕ್ಷಣಂಗಳನುಳ್ಳ ಆನೆ ಉತ್ತಮಂ—೬೭.

ಟೀ|| ಎಳದಳಿರಿನ ಮರ್ಯಾದೆಯಲ್ಲಿ ಕೆಂಪಾಗಿ ಸೆರೆಗಳಿಲ್ಲದೆ ಬಟ್ಟಿತ್ತಾಗಿ ಇರ್ಪ (ಇರದ) ಚಿಬ್ಬುಗಳಾಗೆ, ಭೇರೀಧ್ವನಿಯ ಮರ್ಯಾದೆಯನುಳ್ಳ ಧ್ವನಿ ಈ ಮರ್ಯಾದೆಯಲ್ಲಿ ವರ್ಣಧ್ವನಿಗಳನುಳ್ಳ ಆನೆ ಪೂರ್ಣಮಪ್ಪ ರಾಜ್ಯಪದಮಂ ಕುಡುವುದು—೬೮.

ಟೀ|| ಸಮನಾಗಿ ಮೇಲಕ್ಕೆ ಅಡರಿ ತೋಱುವ ರೋಮಂಗಳುಳ್ಳ ಮಸ್ತಕಂ, ಗುೞಿಯಾಗಿ ಚೆಂದವಾಗಿ ಇರ್ಪ ಕಡೆಗಣ್ಣ ಮೊದಲ್, ಉನ್ನತವಾಗಿರ್ಪ ಪಣೆ, ಕೊರತೆಯಿಲ್ಲದೆ ಉದ್ದವಾಗಿ ಇರ್ಪ, ಮಸ್ತಕದ ಹಿಂದು, ಗಿಡ್ಡವಾಗಿರ್ಪ ಕೊರಲ್ ಈ ಲಕ್ಷಣಮನುಳ್ಳ ಆನೆ ಪೂಜೆಗೆ ಯೋಗ್ಯಮೆನಿಸಿಕೊಳ್ವುದು—೬೯.

ಟೀ|| ದೃಢವಾಗಿ ಉದ್ದವಾಗಿ ಇರ್ಪ ಪೆಗಲ್, ಚೆನ್ನಾಗಿ ಉನ್ನತವಾಗಿರ್ಪ ಶಿರಸ್ಥಾನಂ, ವಿಸ್ತೀರ್ಣವಾಗಿರ್ಪ ಉರಸ್ಸು, ತೆಱನುಳ್ಳ ಹೊಟ್ಟೆ, ಚೆಲ್ವನಾಗಿರ್ಪ ಮೊಲೆಯಸ್ಥಾನಂ, ನಿಡಿದಾಗಿ ರಕ್ತವರ್ಣವಾಗಿ ದೃಢವಾಗಿ(ರ್ಪ)ರುಹ, ಕುೞಿಯಸ್ಥಾನಂ, ರೋಮಮಿಲ್ಲದೆ ದೊಡ್ಡಿತ್ತಾಗಿರ್ಪ ವೃಷಣದ ಮೊದಲ್, ಚೆಂದವಪ್ಪ ಹಿಂಭಾಗಂ, ಉತ್ತಮವಾಗಿರ್ಪ ಬಾಲಂ ಈ ಲಕ್ಷಣಂಗಳ್ ಆನೆಗಳ್ಗಿರ್ದೊಡೆ ಉತ್ತಮಂ—೭೦.

---

1 ಕೊರ್ವಿದ. 2 ಮಸ್ತವೆ ನಿಮ್ನಾವನ್ನಾವಾಗಿ. 3 ಸೀನಂ.



ಮ|| ಪುದಿ[1]ದೊಂದಿರ್ದಲಗ್ಗಳ್ ಪಂಚಾಹಜಘನಂ ಸದ್ವೃತ್ತಮಪ್ಪೀವಮೆ |
ಯ್ದಿ ದೃಢತ್ವಂಬಡೆದಿರ್ದ ಪಾದತಳ[2]ಮುಂ ನಾಲ್ಕಾಲ್ಗಳಿರ್ಪತ್ತು ಮೇಣ್ ||
ಪದಿನೆಂಟಪ್ಪ ನಖಂ ವಿರಾಜಿಪೊಡಮಯ್ದಾಱೇೞು ಹಸ್ತಪ್ರಮಾ |
ಣದ ಹಸ್ತಿಪ್ರಕರಂ ಧರಾಧಿಪತಿಗಾಯುಂ ಶ್ರೀಯುಮಂ ಮಾಡುಗುಂ || ೭೧ ||

ಚಂ|| ಜಿಗುೞೆಯ ಮಾೞ್ಕೆಯಿಂ ತಳೆದ ಕೆಯ್ ಲಘುಪುಷ್ಕರಮಾದಮಂಡ(ಮೊಂದಿ)ವಂ |
ದಿಗಳೆನಿಸಿರ್ದ ದಂತಯುಗಮೊಪ್ಪಿದ ಕರ್ಪಸೆವಾ ಬೃಹತ್ಕುಚಂ ||
ಬುಗುಟೊದವಿರ್ದ ನಾಭಿ ಪೊಱಪೊಣ್ಮೆ(ಣ್ಮ)ದ ಮುಷ್ಕಮೆಬಲ್ಪ ಪೇಚಕಂ |
ಮಿಗೆ ಪಲವುಂ ಕರಂ ಕೆಲವುಮಪ್ಪುಗುಂರಾಗೆ ಗಜಾಳಿ ನಿಂದಿತಂ || ೭೨ ||

— ಇಂತು ಗಜಲಕ್ಷಣಂ —

(೪) ಅಶ್ವಲಕ್ಷಣಂ

ವ|| ಇನ್ನಶ್ವಲಕ್ಷಣಮಂ ಪೇೞ್ವೆಂ—

ಕಂ|| ಅಂಗಂ ಬಹುವಿಧದಾವ |
ರ್ತಂ ಗತಿ ಹೇಷಿತರವಂ ಲಸದ್ವರ್ಣಂ ಸ ||
ತ್ವಂ ಗಂಧಂ ರುಚಿಯೆಂದ |
ಷ್ಟಾಂಗಂ ಹಯಲಕ್ಷಣಂ ಯಥೋಚಿತಮಕ್ಕುಂ || ೭೩ ||

---

ಟೀ|| ಅರ್ಧ ಅರಳಿದ ಪೂವಿನ ಮರ್ಯಾದೆಯನುಳ್ಳ ಕಣ್, ವರಾಹದ ಮರ್ಯಾದೆಯನುಳ್ಳ ಮುಂದಣ ಉರಂ, ಚೆನ್ನಾಗಿ ಬಟ್ಟಿತ್ತಾಗಿರ್ಪ ತೊಡೆ, ದೃಢವಾಗಿ ಚೆನ್ನಾಗಿರ್ಪ ಪಾದತಳಂ ನಿಡಿದಪ್ಪ ಪಜ್ಜೆ, ನಾಲ್ಕು ಕಾಲ್ಗೆಯುಂ ಕೂಡಿ ಇಪ್ಪತ್ತಾದೊಡಂ, ಪದಿನೆಂಟಾದೊಡಂ ಉಗುರ್, ಒಪ್ಪುವ ಅಯ್ದು ಹಸ್ತಂ, ಆಱುಹಸ್ತಂ, ಏೞುಹಸ್ತಂ ಪ್ರಮಾಣಮನುಳ್ಳ ಉದ್ದಂ ಈ ಲಕ್ಷಣಂಗಳನುಳ್ಳ ಆನೆ ರಾಜಯೋಗ್ಯಮೆನಿಸಿಕೊಳ್ವುದು—೭೧.

ಟೀ|| ಜಿಗುೞೆಯ ಮರ್ಯಾದೆಯ ಆಕಾರದಂತೆ ತುದಿಮೊದಲ್ ಸಣ್ಣನಾಗಿ ನಡು ದೊಡ್ಡಿತ್ತಾಗಿಹ ಅಲ್ಲಾ ಸಣ್ಣವಾಗಿಹ [3]ಭಂಕೆಯ್, ಜಡವಾಗಿ ತುದಿ ಕೂಡಿ ಇಹ ಎರಡು ದಂತಂಗಳ್, ಕಪ್ಪಾಗಿ ಒಪ್ಪುತ್ತಿ(ರ್ಪ)ರಲ್ ಮೊಲೆಗಳ್, ಮುಂದಕ್ಕೆ ಬುಗುಟಾಗಿ ಪಾಯ್ದಿರ್ಪ ಪೊಕ್ಕುೞ್, ಒಳಯಿಂಕೆ ಪಾಯ್ದಿರ್ಪ ಮುಷ್ಕಂ, ಬಡವಾಗಿರ್ಪ ಹಿಂಭಾಗಂ, ಕಾಲಕೆಯ್ಯುಗುರ್ಗಳ್ ಕಟ್ಟಿಕೆಯಿಲ್ಲದೆ ಕಿಱಿದಾಗಿರುಹ ಈ ಲಕ್ಷಣಂಗಳನುಳ್ಳ ಆನೆ ಆ ಲೇಸಂ ಬಯಸುವಂಗೆ ನಿಂದಿತಮೆನಿಸಿಕೊಳ್ವುದು—೭೨.

ಟೀ|| ಶರೀರದ ನಾನಾಪ್ರಕಾರಂ, ಸುೞಿಗಳ್, ನಡೆ, ಹೇಷಿತರವಂ, ಒಪ್ಪುತಿರ್ಪ ವರ್ಣಂ, ಸತ್ವಂ, ಪರಿಮಳಂ ರುಚಿ, (ವಾಯ) ಎಂದು ಎಂಟು ಲಕ್ಷಣಂಗಳ್ ಕುದಿರೆಗೆ ಶಾಸ್ತ್ರೋಕ್ತಮಾಗಿರ್ಪುವು-೭೩.

---

1 ದೋದಾಡಿರ್ದಲಗಣ್ಪರಾಜಿ. 2 ಮಪ್ಪಾಡ್ಪಾಮಿಪತ್ತು. 3 ಚರಿಕೆ.

೧ (ಅಂಗಲಕ್ಷಣಂ)

ಮ|ಸ್ರ|| ಕಿವಿ ಮುಷ್ಕಂ ಕುಷ್ಠಿಕಂ ಸಂಧಿಗಳಿವು ಲಘು ಕಂಠಂ ಮುಖಂ ಜಂಘೆಯೆಂಬಿಂ |
ತಿವು ದೀರ್ಘಂ ಲೋಚನಂ ವಾಯ್ ರದನಮಿವು ಘನಂ ವಾಳಮುಂ ವಕ್ಷಮುಂ ಪ ||
ಕ್ಷಿವಮುಂ ವಿಸ್ತೀರ್ಣಮಾದಂ ಮೃದುತರವಳಯಂ ಸೃಕ್ವಮುಂ ಜಿಹ್ವೆಯುಂ [1]ಮೆ |
ಯ್ನವಿರ್ಗಳ್ ತೋಳ್ ಕುಕ್ಷಿಯೆಂದಿಂತಿವು ತನುವೆನಿಪೊಂದಶ್ವಮುರ್ವೀಶಪೂಜ್ಯಂ || ೭೪ ||

ಚಂ|| ಕಿವಿಗಳನೊತ್ತೆ ನೆತ್ತರತಿರಕ್ತಮದಾಗಿರೆ ಕಣ್ಪೊದಲ್ದು ತೋ |
ಱುವೊಡೊಳವೊಕ್ಕ ನೀರನಡರ್ದುಣ್ಬೊಡೆ ಕೂರ್ಚೆಗಳಾರೆ ಕೋಟಿಯಾ ||
ರೆವೊಲಿರೆ ಮುಷ್ಕಮೊಂದೆನಸು ನೇಲ್ದಿರೆ ಸೂಸದೆ ಸೈತುಮೆಯ್ದೆ ಪ |
ಕ್ಷವುಮಪರಪ್ರದೇಶಮುಮಗಲ್ದಿ ವಾಜಿ ಚಿರಾಯು ನಿಶ್ಚಯಂ || ೭೫ ||

ಪಿ|ಅಕ್ಕರಂ|| ನಡುವ(ಣ) ಮೇಲಣ ಕೆಳಗಣಯೆರಡೆರಡುಂ ಪಲ್ ನಿಜವಾಗಿರ್ಕುಂತಿರೆ ಸಂದಂಶ(ಮುಕ್ಕುಂ) |
ನಡುವಣೆರಡುಪಲ್ ಮಧ್ಯಮುಂ ಪಾರ್ಶ್ವದಂತದ್ವಯಮುಕ್ಕುಂ ಪಾರಿಪಾರ್ಶ್ವ(ಪಕ್ವ)ಂ ||
ಕಡೆಗಳೆರಡು ಪಲ್ಲಕ್ಕುಮಿಪಾಪೇಟ್ದಿ ಪಲ್ಗಳ್ ಹಯುವೃಂದಕ್ಕೊಂದು ತಿಂಗಳೆ |
ರಡುಮೊಳಗಿಱ[2]ವಿಾವಮಾಟಕ್ಕಿಯೊಳಾಱುಂ ತಿಂಗಳೊಳ್ ಕೂಡೆ ಸಂಪೂರ್ಣಮುಕ್ಕುಂ || ೭೬ ||

---

ಟೀ|| ಕಿವಿ, ಮುಷ್ಕಂ, ಹೆರಡಿನಸಂದು, ಸರ್ವಸಂದುಗಳ್ ಇವು ಸಣ್ಣವಾಗಿರುಹ, ಕೊರಲ್ ಮುಸುಡು, ಮೊಟಕಾಲ್ ಇವು ಉದ್ದವಾಗಿರುಹ, ಕಣ್, ಬಾಯುವೊಳಗು [ಪಲ್] ದಟ್ಟಿತ್ತಾಗಿರುಹ, ಬಾಲಂ, ಉರಂ, ಹಿಂಭಾಗಂ ಇವು ಅಗಲವಾಗಿರುಹ, ದೇಹದಲ್ಲಿರ್ಪ ರೋಮಂಗಳ್ ಮೃದುವಾಗಿರುಹ, ಕಟವಾಯ್, ನಾಲಗೆ, ಅಂಗಕೂದಲ್ಗಳ್, ತೋಳ್, ಹೊಟ್ಟೆ ಇವು ಸಣ್ಣವಾಗಿರುಹ, ಇಂತಹ ಲಕ್ಷಣಮುಳ್ಳ ಕುದಿರೆ ಅರಸುಗಳಿಂದೆ ಪೂಜಿಸಿಕೊಳ್ವುದು—೭೪.

ಟೀ|| ಕಿವಿಗಳನೊತ್ತಲ್ ರಕ್ತಂ ಬರುಹ, ಕಣ್ಗಳ್ ಚೆನ್ನಾಗಿ ತೋರುಹ, ನೀರಂ ಕುಡಿವಾಗಳ್ ಮುಸುಡ ಅಟ್ಟೆ ನೀರ್ಕುಡಿಹ, ಕಿಱುಗೊಱಗಿನ ಅರೆಗಳ್ ಕೂಂದಲ್ ಸಹಿತಮಾಗಿ ಕೋಟಿಯ ಅರೆಯ ಮರ್ಯಾದೆಯಲ್ಲಿ ಮೊನೆಯಾಗಿ ಇರುಹ, ಮುಷ್ಕಮುಮೊಪ್ಪಚ್ಚಿ ನೇಲ್ದಿರುಹ ಸಸಿನವಾಗಿ ಹಿಂಭಾಗ ಮುಂಭಾಗಂಗಳ್ ಅಗಲವಾಗಿರುಹ ಈ ಲಕ್ಷಣಂಗಳನುಳ್ಳ ಕುದಿರೆ ಸಂಪೂರ್ಣಮಪ್ಪಾಯುಷ್ಯಮನುಳ್ಳುದೆಂದು ಪೇೞಿಸಿಕೊಳ್ವುದು—೭೫.

ಟೀ|| ನಡುವಣ ಮೇಲಣ ಕೆಳಗಣ ಎರಡೆರಡುಂ ಪಲ್ಗಳ್ ಇರ್ಕುಂತಿರ್ಪುದಱಿಂ ಸಂದಂಶಮೆನಿಸಿಕೊಳ್ವುವು. ಎರಡು ಕಡೆಯ ಮೇಲಣ ಕೆಳಗಣ ಎರಡೆರಡು ಪಲ್ಗಳ್ ಮಧ್ಯಮುವೆನಿಸಿಕೊಳ್ವುವು. ಕಡೆಕಡೆಯ ಮೇಲಣ ಕೆಳಗಣ ಎರಡೆರಡು ಪಲ್ಗಳ್ ಪಾರಿಪಕ್ವ(ಪಾರ್ಶ್ವ)ವೆನಿಸಿಕೊಳ್ವುವು. ಈ ಪಲ್ಗಳ್ ತಿಂಗಳ್ಗೆರಡೆರಡ ಈ ಮರ್ಯಾದೆಯಲ್ಲಿ ಆಱು ತಿಂಗಳ್ಗೆ ಪನ್ನೆರಡುಂ ಪಲ್ಗಳುಂ ಸಂಪೂರ್ಣಮಾಗಿ ಪುಟ್ಟುವುವು—೭೬.

1 ಮ್ನವರ್ಗಳ್ತೋಳ್ಕು. 2 ವಿತ್ತಿಂಗಳೊಳ್ ಬರ್ಕುವಿಾವಮಾಟ್ಕಿಯೊಳಾಱು ತಿಂಗಳೊಳ್ ಪನ್ನೆರಡ ದಶನಮುಂ ಕೂಡೆ. (ಈ ಅಕ್ಕರವೃತ್ತದಲ್ಲಿ ಛಂದೋದೋಷವಿದೆ.)



ಕಂ|| [1]ಕರದಿಂ ಪಲ್ಗಳುಮಧರೋ |
ತ್ತರಸಂದಂಶಂಗಳಾದಿಯಾಗಿರೆ ಬರಿಸಂ ||
ಬರಮೆರಡುತಿಂಗಳಿಂತೊ |
ಟ್ಟಿರಡೆರಡುಂ ತಿಂಗಳಿಂಗೆ ಬೆಳ್ಪಂ ತಳೆಗುಂ || ೭೭ ||

ಬರಿಸವುರಿಗಶ್ವದಶನೋ |
ತ್ಕರಂಗಳೆನಿಸಿನಿಸು ಕೆಂಪನಾವರಿಸುಗುಮಂ ||
ತೆರಡುಂ ಬರಿಸಕದು ಕಷಾ |
ಯರುಚಿಯನಾಳ್ಗುಂ ಸರಸ್ವತೀಮುಖತಿಲಕಾ || ೭೮ ||

ಸ್ರ|| ಸಂದಂಶಂ ಬೀೞ್ಗುಮಶ್ವಕ್ಕೆರಡು ಬರಿಸಮುಂ ತೀವೆ ಮೂಱಬ್ದದಿಂ ಬಂ |
ದೊಂದಿರ್ಕುಂ ಮಧ್ಯಮುಂ ಮೂಱರೆ ಬರಿಸದೆ ಬೀೞ್ಗುಂ ಚತುರ್ಥಾಬ್ದದಿಂ ಬಂ ||
ದೊಂದಿರ್ಕುಂ ಪಾರಿಪಕ್ವಂ ದಳಯುತಚತುರಾಬ್ದಂ (ಬರಲ್ಕೆ) ಬೀೞ್ಗ[2]ಮಯ್ದಾ |
ದಂದೆಲ್ಲಂ ಬರ್ಕುಮಲ್ಲಿಂ ಬೞಿಯುಮನಿತುಮುಂ ವ್ಯಂಜನಕ್ಕಾಶ್ರಯಂಗಳ್ || ೭೯ ||

*ಚಂ|| ಕಡುಗರಿದಪ್ಪ ಲೇಖೆಯುದು ಕಾಳಿಕೆ ಪೊನ್ನಿನರೇಖೆಯಂದಮಾ |
ಗೆಡೆಗುಡೆ ರೇಖೆ ಪೊಂಗೆಬೆಳ್ಪವೆತ್ತವರೆಯಂತಿರೆ ಶುಕ್ತಿಸುಚ್ಚಿನಂದಮೊ ||
ಪ್ಪೆಡೆಗುಡೆ ಕಾಕ ಮಾಕ್ಷಿಕದ ಶಂಖದುಲೂಕದ ವರ್ಣ(ಮಾರ್ಗ)ದಂತಿರ |
ಪ್ಪೊಡೆ ಪಡೆಗುಂ ಮಹಾಪಸರ್ಗಳಂ ಚಳನಂ ಪತನಂ ಯಥಾರ್ಥಕಂ || ೮೦ ||

---

ಟೀ|| ತಱುವಾಯಿಂದೆ ಸಂದಂಶಮೆಂಬಪೆಸರನುಳ್ಳ ಮೇಲಣ ಕೆಳಗಣೆರಡೆರಡುಂ ಪಲ್ಗಳ್ ಮೊದಲಾಗಿ ವರ್ಷಂ ತುಂಬುವನ್ನೆವರಂ ಎರಡೆರಡುಂ ತಿಂಗಳಿಂಗೆ ಮೇಲಣ ಕೆಳಗಣೆರಡೆರಡು ಪಲ್ಗಳ ಮರ್ಯಾದೆಯಲ್ಲಿ ಪನ್ನೆರಡುಂ ಪಲ್ಗಳುಂ ಬೆಳ್ಪಪ್ಪುವು—೭೭.

ಟೀ|| ಪದಿನೆಂಟು ತಿಂಗಳ್ಗೆ ಕುದಿರೆಯ ಪಲ್ಗಳ್ ಕೆಂಪಪ್ಪುವು. ಅಲ್ಲಿಂದಂ ಮೇಲೆರಡು ಬರಿಸಕ್ಕೆ ಕಷಾಯದವರ್ಣದ ಮರ್ಯಾದೆಯ ವರ್ಣಮಪ್ಪುವು—೭೮.

ಟೀ|| ಸಂದಂಶಮೆಂಬೆರಡುಂ ಪಲ್ಗಳ್ § ಎರಡು ಬರಿಸಂ ತುಂಬಲ್ ಬೀೞ್ವುವು, ಮೂಱನೆಯವರ್ಷಕ್ಕೆ ಮರಳ ಪುಟ್ಟುವುವು; † ಮೂಱನೆಯ ವರ್ಷಂ ತುಂಬಲ್ ಮಧ್ಯಮದೆರಡೆರಡು ಪಲ್ಗಳ್ ಬೀೞ್ವುವು; ನಾಲ್ಕನೆಯ ವರ್ಷಕ್ಕೆ ಮರಳ ಪುಟ್ಟುವುವು; ಪಾರಿಪಕ್ವಮೆಂಬೆರಡು ಪಲ್ಗಳ್ ನಾಲ್ಕನೆಯ (ಲ್ಕುವರೆ?) ಬರಿಸಕ್ಕೆ ಬೀೞ್ವುವು; ಅಯ್ದನೆಯ ಬರಿಸಕ್ಕೆ ಮರಳ ಪುಟ್ಟುವುವು. ಈ ಮರ್ಯಾದೆಯಲ್ಲಿ ಪನ್ನೆರಡು ಪಲ್ಗಳುಂ ಪುಟ್ಟಿ ಪಂಚಾ(ಜಾ)ರಿಸಲ್ ಬೆಂಜನಕ್ಕೆ ಆಶ್ರಯಮಪ್ಪುದು—೭೯.

ಟೀ|| ಪಂಚಾ(ಜಾ)ರಿಸಿದ ಅಯ್ದು ವರ್ಷದಿಂ ಮೇಲೆ ಆ ಪಲ್ಗಳ ಮೇಲೆ ಚೆನ್ನಾಗಿ ಕರಿದಾಗಿಕ(ಗೆ)ರೆ ಪುಟ್ಟಲ್ "ಕಾಳಿಕೆ" ಎನಿಸಿಕೊಳ್ವುದು, ಬಂಗಾರದ ಗೆರೆಯ ಮರ್ಯಾದೆಯ ವರ್ಣಂ

1 ಕರದಿಂ. (ಟೀಕೆಯು ಇಲ್ಲಿಂಜ ಒಂದು ಪ್ರತಿಯಲ್ಲಿಲ್ಲ.) 2 ಮಯ್ದಾರಾದಂ. 3 ಮರೆಯ.
* ಕಡುಗೆಂದಪ್ಪಾರೇ............ಯಂದಮಾಗಿರೆ ತೋರ್ಪಾ ರೇಖೆ. ಈ ಛಂದಸ್ಸು ಕೆಟ್ಟಿದೆ.
§ ಕ್ರಮವನ್ನನುಸರಿಸಲು ಎರಡುವರೆ ವರ್ಷ ಎಂದಿರಬೇಕು.
† ಮೂಱುವರೆ.

ಕಂ|| ಸಂದಂಶಮಧ್ಯಪಾಂಕಿತ |
ಮೆಂದಿಂತಿವು ಕಾಳಿಕಾದಿ ಗುಪ್ತವ್ಯಂಜನಮೋ ||
ರೊಂದಬ್ದಮಿರ್ಕುಮಿಾಕ್ರಮ |
ದಿಂದಂತವು ಮೂಱುಮೆಯ್ದು ವರ್ಷಮನಾಳ್ಗುಂ || ೮೧ ||

೨ ಆವರ್ತಂ (ಸುೞಿ—ಧ್ರುವಂ)

ಶಿರದೊಳೆರಡೊಂದು ನಿಟಿಲಾ |
ನ್ತರದೊಳ್ ತುರಗಪ್ರಪಾಣದೇಶದೊಳಂತೊಂ ||
ದೆರಡುರದೊಳೆರಡು ರಂಧ್ರದೊ |
ಳೆರಡುಪರಂಧ್ರಂಗಳೊಳ್ ದಶಧ್ರುವಮಕ್ಕುಂ || ೮೨ ||

ಸೊಗಯಿಸೆ ಸೃಕ್ವದೊಳುರದೊಳ್ |
ನಿಗಾಳದೊಳ್ [1]ಕಣ್ಣಮೂಲದೊಳ್ ಕೊರಲೊಳ್ ಬಾ ||
ಹುಗಳೊಳ್ ಮೇಖಳೆಯೊಳ್ ಮಡ |
ವುಗಳೊಳಗಂಶಕದೊಳೊಗೆದ ಸುೞಿ ಶುಭದಂಗಳ್ || ೮೩ ||

ಮ|| ಕೊರಲೊಳ್ ಕಣ್ಗೆಸೆದೊಪ್ಪೆ ದೇವಮಣಿ ಮೇಣ್ ರೋಚಮಾನಂ ಪೊದ |
ೞ್ದಿರೆ ಪೂರ್ವಾಂಗದ ದೋಷಮಂ ನಿಟಿಲದೊಳ್ ನಿಶ್ರೇಣಿಕಾಕಾರದಿಂ ||
ದಿರೆ ಮೇಣ್ ಪ(ಪು)ಲ್ಲಿಯ ಮಾಟಕ್ಕೆಯಿಂದಿರೆ ಶಿರೋದೋಷಂಗಳಂ ಮೇಖಳಾಂ |
ತರದೊಳ್ ತೋಱಿರೆ ಪಶ್ಚಿಮಾರ್ಧದ ಶುಭಾವರ್ತಂಗಳುಂ ಪಿಂಗುಗುಂ || ೮೪ ||

ಪುಟ್ಟಲ್ "ಪೊಂಗೆ" ಎನಿಸಿಕೊಳ್ಳ್ವುದು, ಬಿಳಿದಪ್ಪ ವರ್ಣಂ ಪುಟ್ಟಲ್ "ಶುಕ್ತಿ" ಎನಿಸಿಕೊಳ್ವುದು, ನುಚ್ಚಿನ ಮರ್ಯಾದೆಯ ವರ್ಣಮಾದೊಡೆ "ಕಾಕ"ವೆನಿಸಿಕೊಳ್ವುದು, ಜೇನತುಪ್ಪಂ, ಶಂಖಂ, ಗೂಗೆ ಈ ಮರ್ಯಾದೆಯ ವರ್ಣಮಾದೊಡೆ ಪಲವು ಪೆಸರಂ ಪೇೞಿಸಿಕೊಳ್ವುದು-೮೦.

ಟೀ|| ಸಂದಂಶದ ಪಲ್ ಮಧ್ಯಮದ ಪಲ್ ಕಡೆಯ ಪಾಂಪಕ್ವಮೆಂಬ ಪಲ್ಗಳ್ ಕಾಳಿಕೆ ಮೊದಲಾಗಿ ವ್ಯಂಜನಮೆಂದು ಪಿಂದೆ ಪೇೞ್ದ ಪೊಂಬತ್ತುಂ ವ್ಯಂಜನಂ. ವ್ಯಂಜನಮೊಂದೊಂದಕ್ಕಂ ಮೂಱುಮೂಱು ವರ್ಷದ ಮರ್ಯಾದೆಯಲ್ಲಿ ಇಪ್ಪತ್ತೇೞು ವರ್ಷಪರ್ಯಂತಂ ಕುಱುಪಂ ಪೇೞಿಸಿಕೊಳ್ವುವು. ಮೊದಲ ಪಂಚಾ(ಜಾ)ರ ಪರ್ಯಂತಂ ಅಯ್ದು ವರ್ಷಂ ವ್ಯಂಜನಮಿಲ್ಲಂ-೮೧.

ಟೀ|| ಶಿರಸ್ಥಾನದಲ್ಲೆರಡು ಸುೞಿ, ಪಣೆಯೊಳೊಂದು ಸುೞಿ, ಮೂಗಿನತುದಿಯೊಳೊಂದು ಸುೞಿ, ಉರದೊಳೆರಡು, ಒಳಭಾಗದ ಎಡಗಳ್ಳೆಯಲ್ಲೆರಡು ಸುೞಿ, ಪೊಱಭಾಗದ ಎಡಗಳ್ಳೆಯೊಳೆರಡು ಸುೞಿ ಈ ಪೇೞ್ದ ದಶಸ್ಥಾನಂಗಳ ಪತ್ತು ಸುೞಿಗಳ್ "ದಶಧ್ರುವ"ಮೆಂದು ಪೇೞಿಸಿಕೊಳ್ವುವು—೮೨.

ಟೀ|| ಒಪ್ಪುತ್ತಿರ್ಪ ಕಟವಾಯ [2]ಮುಂದೆ, ಉರಂ ಕೊರಲ ಮೊದಲ್, ಎರಡು ಕಣ್ಣ (ಕಿವಿಗಳ?) ಮೊದಲ್, ಕೊರಲ್ ಮುಂಗಾಲ್ಗಳ್ ಎರಡು ಬಱ(ರಿ)ಯ ಮಧ್ಯಂ, ಮುಡುಹುಗಳ ಕೆಳಗಣ ಅಂಶಂಗಳ್ ಈ ಪೇೞ್ದ ಠಾವುಗಳಲ್ಲಿ ಸುೞಿಗಳ್ ಪುಟ್ಟಿರಲೊಳ್ಳಿತ್ತು(ದುವು)—೮೩.

ಟೀ|| ಕೊರಲ ಮಧ್ಯದಲ್ಲಿ "ದೇವಮಣಿ" ಎಂಬ ಸುೞಿ, ಅಲ್ಲಾ ಕೊರಲ ಮೊದಲೊಳ್

1 ಕಣ್ಣ. 2 ಮುಂದಣ.



ಮ|ಸ್ರ|| ಹನುನಾಸಾವಂಶ ಗಂಡ ತ್ರಿಕಕಕುದಸನಪ್ರೋಥಶಂಖ ಸುಪಾರ್ಶ್ವಾ |
[1]ನನಮನ್ಯಾಕಾರ ಸಪ್ತಬ್ರ ಜಠರ ಚುಬುಕಮುಷ್ಕೋತ್ತರೋಷ್ಠಸ್ತುರಾಮೇ |
ಹನ ಜಂಘಾಪಾಂಗ ಜಾನುಶ್ರವಣ ವಿದುಕಳಾ ಕಕ್ಷಹೃತ್ಕುಕ್ಷಿ ರೋ |
ಚನಮಧ್ಯಪ್ರೋಥಕೂರ್ಚಪ್ರವರಮೆನಿಸಿದಾವರ್ತದಶ್ವಂ ಕನಿಷ್ಠಂ || ೮೫ ||

ಕಂ|| ಕಕುದಾವರ್ತಂ ಮೇಣ್ ಧಿ |
ನ್ನಕರಾದಮಳವಟ್ಟು ಮೇಣ್ ದ್ವಿಜಿಹ್ವಂ ಹೀನಾ ||
ಧಿಕದಂತನೇಕಮುಷ್ಕಂ |
ತ್ರಿಕರ್ಣವೆನಿಪಶ್ವಮಶುಭಲಕ್ಷಣಮಕ್ಕುಂ || ೮೬ ||

ಖುರವೆರಲಾ(ಡಾ)ಗಿರೆ ಮೇಣ್ [2]ಕ |
ಬ್ಬುರಮಾಗಿರೆ ಪೊಲೆಗಳೊದವೆ ನಿಲೆ ಪಂಚಪದಂ ||
ದೊರೆಕೊಳೆ ಶೃಂಗಂ ಸಮನಿಸೆ |
ತುರಗಂಗಳ್ಗಿಯ್ದು ಮಿವು ಮಹಾದೋಷಂಗಳ್ || ೮೭ ||

"ರೋಚಮಾನ"ಮೆಂಬ ಸುೞಿ ತೋಱುತ್ತಿರಲ್ ಪೂರ್ವಭಾಗದಲ್ಲಿರ್ದ ಪೊಲ್ಲಸುೞಿಗಳ ದೋಷಮಂ ಕಿಡಿಸುಗುಂ, ಪಣೆಯಲ್ಲಿ ಎಱ (ಏಣಿ) ಮುಂತಾಗಿ ಇರ್ಪ ಸುೞಿಗಳ್ ಅಲ್ಲಾ ಪು(ಪ)ಲ್ಲಿಯ ಮರ್ಯಾದೆಯಲ್ಲಿ ಮೂಱುಕೋಣೆಯಾಗಿ ಮೂಱುಸುೞಿಯೊಂದಾಗಿ ಪುಟ್ಟಿರಲ್ ಶಿರಸ್ಸಿನಲ್ಲಿ ಪುಟ್ಟಿರ್ಪ ಪೊಲ್ಲಸುೞಿಗಳ ದೋಷಮಂ ಕಿಡಿಸುವುವು. ನಡುವಣ ಹಿಂಭಾಗದ ಮಧ್ಯದಲ್ಲಿ ಸುೞಿ ಪುಟ್ಟಿರಲ್ ಹಿಂಭಾಗದಲ್ಲಿರ್ಪ ಪೊಲ್ಲಸುೞಿಗಳ ದೋಷಂಗಳಂ ಕಿಡಿಸುವುವು—೮೪.

ಟೀ|| ಗಲ್ಲದಿಂದ ಕೆಳಗು, ಮೂಗಿನ ಹೊಳ್ಳೆ, ಗಲ್ಲ, ಪೇಚಕ, ಕಂದ, ಆಸನ, ಮೂಗಿನ ಹೊಳ್ಳೆಗಳ ಮಧ್ಯಂ, ಕಿವಿಯ ಕೆಳಗು, ಎರಡು ಬರಿ ಕಿವಿಯ ಕೆಳಗಣ ಸೆರೆಗಳ ಠಾವು, ಕಂಪದ ಮುಂಭಾಗ, [3]ಪುರ್ವು, ಪೊರ್ಕುೞಿಂದೆ ಕೆಳಗು, ಕೆಳಗಣ ತುಟಿ, (ಗಡ್ಡದ ತುದಿ?) ಅಂಡಂ, ಮೇಲಣ ತುಟಿ, ಶಿಶ್ನ, ಒಳಕಾಲ್, ಕಡೆಗಣ್, ಮೊಣಕಾಲ ಸಂದು, ಕಿವಿ, ಹಣೆ, ಆಳ್ಳೆಗಳ್, ಎದೆ, ಪೊರ್ಕುೞ್, ಎದೆಯ ಮಧ್ಯಂ, ಕೊರಲ, ರೋಚಮಾನದ ದೇವಮಣಿಯ ಮಧ್ಯಂ, ನಡು, ಮುಂಗಾಲ ಮಧ್ಯಂ, ಕಿಱು ಕೊಳಗು, ಆ ಮೇಲೆ ಇಂಥಾ ಠಾವುಗಳಲ್ಲಿ ಸುೞಿ ಪುಟ್ಟಿರಲೊಳ್ಳಿತ್ತಲ್ಲ—[4]೮೫.

ಟೀ|| ಕಂಪದ, ಕೊರಲಮಧ್ಯದ ಈ ಠಾವುಗಳಲ್ಲಿ ಸುೞಿಯಿರುಹ, ಎರಡುನಾಲಗೆಯಾಗಿ ತೋಱುಹ, ದಂತಂಗಳ್ ಪೆರ್ಚು ಕುಂದಾಗಿರುಹ, ಅಂಡದ ಮೇಲೆ ಸುೞಿಯಿರುಹ, (ಒಂದು ವೃಷಣ(ಬೀಜ)ಮಿರುಹ?) ಮೂಱು ಕಿವಿಯಾಗಿ ತೋಱುಹ ಈ ಲಕ್ಷಣಂಗಳನುಳ್ಳ ಕುದಿರೆಗಳ್ ಲಕ್ಷಣಹೀನಂಗಳೆನಿಸಿಕೊಳ್ವುವು—೮೬.

ಟೀ|| ಖುರಂಗಳ್ ಬೆರಲ ಮರ್ಯಾದೆಯಲ್ಲಿ ಖಂಡಿಸಿರುಹ, ಕೊಳಗುಗಳ್ ಅತಿಕಪ್ಪಾಗಿರುಹ, ಗಂಡುಗುದಿರೆಗಳ್ಗೆ ಮೊಲೆಗಳ್ ದೊಡ್ಡಿತ್ತಾಗಿ ಬರುಹ, ಅಯ್ದು ಕಾಲ್ ಪುಟ್ಟುಹ, ಕೊಂಬುಗಳ್ ಪುಟ್ಟುಹ ಈ ಲಕ್ಷಣಂಗಳ್ ಕುದಿರೆಗಳ್ಗಾಗಲ್ ಮಹಾದೋಷಂಗಳಂ ಪೇೞ್ವುವು—೮೭.

1 ಮುಮಂ ನ್ಯಾ. 2 ಖಬ್ಬುರ. 3 ಪುಬ್ಬು. 4 ಒಂದು ಪ್ರತಿಯಲ್ಲಿ ೬೦ ಎಂಬ ಸಂಖ್ಯೆಯಿದೆ.

೩ (ಗತಿ)

ಚಂ|| ಬೆದಱ... ಬೀಸುವೆಲ್ತಿರ ಪದಕ್ರಮವಿಲ್ಲದೆ ಗೋಣನೆತ್ತಿ ಮಾ |
ಣದೆ ತಲೆಗೊತ್ತಿ ಕಷ್ಟಗತಿಯಿಂ ದಡವುಕ್ತುಮುಲುರ್ಗೆಟ್ಟು ಪೋ ||
ಗದೆ ಕರಮುಪ್ಪಿ(ಕ್ಕಿ) ಕಿಂತಕಿಯ ಪುಲ್ಲೆಯ ಸೋಗೆಯ ಹಂಸೆಯಾಂದೆಯಂ |
ದದ ನಡೆಯಾಗೆ ವಾಜಿ ಶುಭಮಂ ಪಡೆಗುಂ ಜಯಬಂಧುನಂದನಾ || ೮೮ ||

೪ (ಹೇಷಿತಂ)

ಕಂ|| ಮುಗಿಲ ಮೃದಂಗದ ಸರದಂ |
ತೆ ಗಭೀರಸ್ನಿಗ್ಧತರಮಚ್ಛಿನ್ನಂ ವಾ ||
ಜಿಗೆ ಹೇಷಿತಂ ಶುಭಂ ರೂ |
ಕ್ಷಗದ್ಗದದ್ಧ್ವಾಕ್ಷವಾದ ನಾದಂ ಕಷ್ಟಂ || ೮೯ ||

೫ (ವರ್ಣಂ)

ಸಿತರಕ್ತ ಪೀತ ಕೃಷ್ಣೋ |
ಚಿತವರ್ಣಂ ನಾಲ್ಕು ಶುದ್ಧವರ್ಣಂಗಳ್ ಮಿ ||
ಶ್ರಿತವರ್ಣಮನೇಕಂ ಸ್ನಿ |
ಗ್ಧತೆವಡೆದೊಂದಾದ ವರ್ಣದಶ್ವಮುಮುಚಿತಂ || ೯೦ ||

ಎಡದತ್ತಲೊತ್ತಿ ನಿಲೆ ಲೊ |
ಲ್ಲಿಡೆವಱ(ಱ)ದಿರೆ ಮೇಣ್ ವಿವರ್ಣವಾಗಿರೆ ಕಷ್ಟಂ ||
ನಿಡಿದಾಗಿ ಬೆಳ್ಪುವೆತ್ತಿರೆ |
ಕಡುಲೇಸಲ್ಲದೊಡೆ ತಿಳಕವುಂ ಶುಭಫಲದಂ || ೯೧ ||

---

ಟೀ|| ನಡೆವಲ್ಲಿ ಬೆದಱುತ್ತೆ ನಡೆಹ, ಎಡಬಲಕ್ಕೆ ಒತ್ತಿ ನಡೆಹ, ಉಪ್ಪರಿಸುಹ, ಪಾದಗತಿಯಿಲ್ಲದೆ ನಡೆಹ, ಮೋಱೆಯಂ ನೆಗಪಿಕೊಂಡು ನಡೆಹ, ಅಧೋಮುಖವಾಗಿ ನಡೆಹ, [1]ಎಡಹುತ್ತೆ ನಡೆಹ, ಅಳ್ಕುತ್ತೆ ನಡೆಹ ಈ ಮರ್ಯಾದೆಯ ಕಷ್ಟಮಪ್ಪ ನಡೆಗಳಲ್ಲದೆ ಟೀವನಪಕ್ಕಿ, ಪುಲ್ಲೆ, ನವಿಲ್, ಹಂಸೆ, ಪರ್ದು ಇವಱ ಮರ್ಯಾದೆಯ ನಡೆಗಳಾಗಲ್ ಆ ಕುದಿರೆಗಳ್ ಐಶ್ವರ್ಯಪ್ರದಂಗಳ್—೮೮.

ಟೀ|| ಗುಡುಗು (ಸಿಡಿಲ್), ಮರ್ದಳೆ ಇವಱ ಮರ್ಯಾದೆಯಲ್ಲಿ ಗಂಭೀರಮಪ್ಪ ಧ್ವನಿಯಾಗಿ ಖಂಡಿತಮಿಲ್ಲದಿರ್ಪ ಧ್ವನಿ ಉತ್ತಮಂ. ಡೋಲ್ ಧ್ವನಿ ನಡುಕ ಧ್ವನಿಗಳಾಗಲೊಳ್ಳಿತಲ್ಲ—೮೯.

ಟೀ|| ಬೆಳ್ಪು, ರಕ್ತಂ, ಹಳದಿ, ಕೃಷ್ಣಂ ಈ ನಾಲ್ಕು ನಿಜವರ್ಣಂಗಳ್, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬೀ ನಾಲ್ಕುಂ ವರ್ಣದ ಜಾತಿಭೇದಂಗಳೆಂದು ಪೇೞಿಸಿಕೊಳ್ವುವು. ಇವುತ್ತಮಂಗಳ್. ಮಿಶ್ರವರ್ಣಂಗಳಾಗಿ ನಯವಾಗಿ ಇರ್ಪ ವರ್ಣಂಗಳ ಕುದಿರೆಗಳೊಳ್ಳಿದುವು—೯೦.

ಟೀ|| ಪಣೆಯಲ್ಲಿರ್ಪ ಲೊ(ಬೆ)ಲ್ಲು ಎಡದ ಭಾಗಕ್ಕೆ ಒತ್ತಿ ಇರುಹ, ಅದಱ ಮಧ್ಯ ಖಂಡಿತವಾಗಿರುಹ, ಬೆಳ್ಪು ಮಸುಳಿಸಿಹ ಈ ಮರ್ಯಾದೆಯ ಬೊ(ಲೊ)ಲ್ಲನಿರಲ್ ಪೊಳ್ಳಿತಲ್ಲ. ನೀಳ

1 ಮುಗಿಲಡಹುತ್ತಂ.



೬ (ಸತ್ವಂ)

* ಸಿರಿಯಕ್ಕರ|| ಮುನಿದು ಕಲಿಯಪ್ಪುದುಂ ಹೀನಸತ್ವಂ ಮೇಧಾವಿ ಮುನಿಸತ್ವಂ ಗರ್ವಿತನಸುರಸತ್ವಂ
ಮನಮಿಕ್ಕು(ಪ್ಪು)ದು ಬಹ್ವಾಶಿ ಪಿತೃಸತ್ವಂ ಅತಿಭಿನ್ನರುಚಿ ಪಿಶಾಚಸತ್ವಂ ||
ಇನಿಸಂ ಮೇವುದು ಜವಹೀನಂ ಪಶುಸತ್ವಂ ತೇಜಸ್ವಿ ಕಲಿಶುಭಾಶುಭಸೂಚಕಂ |
ವಿಸುತಜಳಗಂಧಮಾ[ಲ್ಯೋ]........ದಿತಪ್ರಿಯಂ ಶುಚಿಯಪ್ಪ ಹಂದೇವಯೋನಿಸತ್ವಂ || ೯೨ ||

೭ (ಗಂಧಂ)

ಕಂ|| ತಗುಣೆ ಬಜೆ ಪೊಲಸು ಬೆಳ್ಳು |
ಳ್ಳಿಗತ್ತಮೆಂಬಿವಱಗಂಧಮತ್ಯಶುಭಂ ಸಂ ||
ಪಗೆಯ ಸರಸಿಜದ ಚಂದನ |
ದ ಗಂಧ[1]ಮವು ಶುಭದಮಶ್ವರಾಜಿಯ ಬೆಮರೊಳ್ || ೯೩ ||

೮ (ಛಾಯೆ - ರುಚಿ)

ಮ|ಸ್ರ|| ವಿವಿಧೋದ್ಯದ್ವರ್ಣಮುಂ ಸ್ನಿಗ್ಧತೆಯುಮೆಸೆಯೆ ಭೂಚ್ಛಾಯೆ ಮೇಘಾಬ್ಜತೋಯ |
ಚ್ಛವಿ [2]ತಾನಪ್ಪಾಯೆ ಪೊಂಬಣ್ಣದ [3]ಪವಳದ ಮಾಣಿಕ್ಯದಾಭಾಸದಿಂದೊ ||
ಪ್ಪುವುದಗ್ನಿಚ್ಛಾಯೆ ತುಚ್ಛಂ ಪುರುಷರುಚಿಕರಂ ಸಂಚಳನ್ಮಾರುತಚ್ಛಾ |
ಯೆ ವಿರೂಕ್ಷಪ್ರಾಯಮಾದುಂದಱುವುದು ಗಗನಚ್ಛಾಯೆ ವಾಜಾಳಿಗಕ್ಕುಂ || ೯೪ ||

---

ವಾಗಿ ಚೆನ್ನಾಗಿ ಬೆಳ್ಪಾಗಿ ತೋಱಲ್ ಉತ್ತಮಂ.. ಅಲ್ಲ ತಿಲಕಾಕಾರವಾಗಿ ಮಧ್ಯದಲ್ಲಿರಲೊಳ್ಳಿತ್ತು ಲೇಸಂ ಕುಡುವುದು—೯೧.

ಟೀ|| ಕೋಪಂ ಪುಟ್ಟೆ ಕಲಿಯಪ್ಪುದು ಹೀನಸತ್ವಮೆನಿಸಿಕೊಳ್ವುದು, ಬುದ್ಧಿಯನುಳ್ಳುದು ಋಷಿಸತ್ವನೆನಿಸಿಕೊಳ್ವುದು, ಗರ್ವಮನುಳ್ಳುದು ಅಸುರಸತ್ವನೆನಿಸಿಕೊಳ್ವುದು, ಮನಮನಿಕ್ಕುವುದು ಬಹ್ವಾಶಿ ಪಿತೃ[4]ಸತ್ವಮೆನಿಸಿಕೊಳ್ವುದು, ಪಲವುವರ್ಣಂಗಳನುಳ್ಳುದು ಪಿಶಾಚಸತ್ವನೆನಿಸಿಕೊಳ್ವುದು, [5]ಇಕ್ಕಿದನಿತಂ ಮೇದು ವೇಗವಿಲ್ಲದಿರ್ಪುದು ಪಶುಸತ್ವಮೆನಿಸಿಕೊಳ್ವುದು, ತೇಜಸ್ಸನುಳ್ಳುದಾಗಿ [6]ಕಲಿಯಾಗಿ ಶುಭಾಶುಭ ಫಲಂಗಳಂ ಪೇೞ್ವುದಾಗಿ ಉದಕಗಂಧಮಾಲೆಗಳುನಿತು? ಇವಕ್ಕೆ ದೇವಯೋನಿಸತ್ವಮೆನಿಸಿಕೊಳ್ವುದು—೯೨.

ಟೀ|| ಕುದಿರೆಯ ಮೆಯ್ಯ ಬೆಮರ್ ತಗುಣೆ, ಬಜೆ, ಪೊಲಸು, ಬೆಳ್ಳುಳ್ಳಿ, ಮೂತ್ರಂ ಇವಱ ಗಂಧದ ವಾಸನೆಯಾಗಲ್ ಒಳ್ಳಿತ್ತಲ್ಲ. ಸಂಪಗೆಯ ಪೂ, ತಾವರೆಯ ಪೂ, ಶ್ರೀಗಂಧಂ ಇವಱ ಮರ್ಯಾದೆಯ ಸುಗಂಧವಾಸನೆಯಾಗಲ್ ಉತ್ತಮಂ ,ಐಶ್ವರ್ಯಪ್ರದಂಗಳ್—೯೩.

ಟೀ|| ಅನೇಕ ಪ್ರಕಾರದ ವರ್ಣವಾಗಿ ನಯವಾಗಿರ್ಪ ವರ್ಣಮನುಳ್ಳುದು ಭೂಮಿಯ ಅಂಶಭೂತಮೆನಿಸಿಕೊಳ್ವುದು. ಮೇಘವರ್ಣಂ, ತಾವರೆಪೂವಿನ ಬಣ್ಣಂ, ಉದಕದ ವರ್ಣಂ ಈ ವರ್ಣಂಗಳನುಳ್ಳುದು ಉದಕಾಂಶಭೂತಮೆನಿಸಿಕೊಳ್ವುದು. ಹೊಂಬಣ್ಣದ, ಹವಳವಣ್ಣದ, ಮಾ

1 ಮೌವು ಶುಭಮಶ್ವತಾಜಿರಾಜಿಯ ಬೆಮರೊಳ್. 2 ತಾನಚ್ಛಾಯೆ. 3 ಪರಿಮಳದ. 4 ಸತ್ವಮಾಭಿನ್ನಸತ್ವವೆನಿಸಿ. 5 ಇಕ್ಕಿದಷ್ಟನು. 6 ಕಲಸತ್ವಮನುಳ್ಳುದು.
* ಪೃಥ್ವಿ|| ಎಂದಿದೆ – ಸಿರಿಯಕ್ಕರ ಎಂದಿರಬೇಕು.

ಕಂ|| ಛಾಯೆಗಳೊಳ್ ಹಂಗೆ ವಿಯ |
ಚ್ಛಾಯೆ ಮರುಚ್ಛಾಯೆಯೆಂಬಿವನುಚಿತಮಗ್ನಿ ||
ಚ್ಛಾಯೆ ವನಚ್ಛಾಯೆ ಮಹಿ |
ಚ್ಛಾಯೆಗಳೆಂಬಿವು ವಿಶಿಷ್ಟಫಲಮಂ ಕುಡುಗುಂ || ೯೫ ||

— ಇಂತು ಅಶ್ವಲಕ್ಷಣಂ —

(೫) ಗೋಲಕ್ಷಣಂ

ವ|| ಗೋಲಕ್ಷಣಮಂ ಪೇೞ್ವೆಂ —

ಚಂ|| ಪೆಱಗಸಿದಾಗೆ ಮುಂದಗಲಿತಾಗೆ ಪೊದೞ್ದಣಿ ದೊಡ್ಡಿತಾಗೆ ಕಣ್ |
ಪೊಱಗೆ ತಗುೞ್ದು ಸೂಸುವ ಜೋಲಾಗೆ..................ರೋಮಮಮುಂ ||
ಕಿಱುಗಿವಿಯಾಗೆ ಬೆಳ್ಳಲಿಯ ಬಾಲದ ಮಾೞ್ಕೆಯ ಬಾಲಮಾಗೆ ಸಂ |
ದಱಿಯದ ಕೆಂಪುವೆತ್ತ ತೊಱಗಾಗೆ ವೃಷಂ ಶುಭದಂ ಧರಿತ್ರಿಯೊಳ್ || ೯೬ ||

ಮ|ಸ್ರ|| ಕಪಿಲಂ ಕೃಷ್ಣಾರುಣಾಂಗಂ ನರೆಯನೆನಿಪೊಡಂ ತಾಲು ಜಿಹ್ವೋಷ್ಠ ಕರ್ಣಾ |
ಗ್ರಪದಂಗಳ್ ಕರ್ಪುವೆತ್ತಿರ್ಪೊಡಮಿಣಿಯೊಳಪೊಕ್ಕಿರ್ಪೊಡಂ ವೇಗದೊಳ್ ಮೂ ||
ತ್ರಪುರೀಷಂ ಕ್ಷಿಪ್ರದಿಂ ತಾ[1]ಮೊಡನೆ ನಡೆಪೊಡಂ ಕಾಕ ಮಾರ್ಜಾಳವಕ್ತ್ರಾ ||
ತಿಪಿಶಂಗಾಕಾರನೇತ್ರಂ ಸಮನಿಸುವೊಡಮಾಯೆೞ್ತು ಮೃತ್ಯುಸ್ವರೂಪಂ || ೯೭ ||

ಣಿಕ್ಯವರ್ಣದ ಈ ವರ್ಣಂಗಳನುಳ್ಳುದು ಅಗ್ನಿಯ ಅಂಶಭೂತನೆನಿಸಿಕೊಳ್ವುದು. ಕಿಱಿದಾಗಿ? ಪುರುಷರ್ಕೆ ಸೊಗಸಾಗಿ ಇರ್ಪ ಬಣ್ಣಮನುಳ್ಳುದು ವಾಯುವಿನ ಅಂಶಭೂತನೆನಿಸಿಕೊಳ್ವುದು. ನಯಮಿಲ್ಲದೆ ಕುಱುಹಱಕವಾಗಿರ್ಪ? ಪಲವು ಬಣ್ಣಮನುಳ್ಳುದು ಆಕಾಶದ ಅಂಶಭೂತಮೆನಿಸಿಕೊಳ್ವುದು—೯೪.

ಟೀ|| ಈ ಪೇೞ್ದ ಪಂಚಭೂತಮಯಮಾದ ಅಯ್ದು ಛಾಯೆಗಳೊಳಗೆ ಆಕಾಶಛ್ಛಾಯೆ, ವಾಯುಛ್ಛಾಯೆಗಳ್ ಒಳ್ಳಿತ್ತಲ್ಲ. ಉೞಿದ ಅಗ್ನಿಛ್ಛಾಯೆ, ಉದಕಚ್ಛಾಯೆ, ಭೂಮಿಚ್ಛಾಯೆ, ಈ ಮೂಱುಂ ಛಾಯೆಗಳ್ ಉತ್ತಮಂ, ಲೇಸಂ ಕುಡುವುದು—೯೫.

ಟೀ|| ಪಿಂಭಾಗಂ ಅಸಿದಾಗಿರುಹ, ಮುಂಭಾಗಂ ಅಗಲಿತ್ತಾಗಿರುಹ, ಹಿಡಿ(ಣಿ)ಲ್, ದೊಡ್ಡಿತ್ತಾಗಿರುಹ, ಕಣ್ಗಳ್ ಪೊಱಯಿಂಕೆ ತೇಜಸ್ಸನುಗು[2]ೞುತ್ತಿರ್ಪವೆಂಬಂತಿರುಹ, ರೋಮಂಗಳ್ ಮೃದುವಾಗಿ ನಯಮಾಗಿರುಹ ಇಲಿಯ ಬಾಲದ ಮರ್ಯಾದೆಯ ಸಣ್ಣ ಬಾಲಮಾಗಿರುಹ, (ಮೆಯ್) ಸಂದಱಿಯಬಾರದೆ ತುಂಬಿಯಿರುಹ, ಕೊಱಗುಗಳ್ ಕೆಂಪಾಗಿರುಹ ಈ ಲಕ್ಷಣಮನುಳ್ಳ ಎೞ್ತು ಭೂಮಂಡಲದೊಳಗೆ ಉತ್ತಮಮೆನಿಸಿಕೊಳ್ವುದು—೯೬.

ಟೀ|| ಹೊಂಬಣ್ಣ ಕಾಳನರೆಯ ಈ ಮರ್ಯಾದೆಯ ದೇಹಚ್ಛವಿಯಾಗಿರುಹ, ಗಂಟಲ್, ನಾಲಗೆ, ತುಟಿ, ಕಿವಿಯತುದಿ, ಕಾಲ್ಗಳ್ ಇವು ಕರಿದಾಗಿರುಹ, ಇಣಿ ಕುೞಿಯಾಗಿರುಹ, ಸೆಗಣಿ ಮೂತ್ರಂಗಳ್ ಬೇಗದಿಂದ ವೊಂದೇ ಬಾರಿ ನಡೆಹ, ಕಾಗೆ, ಬೆಕ್ಕು ಇವಱ ಮರ್ಯಾದೆಯ ಮುಖಮಾಗಿರುಹ, ಪೊಂಬಣ್ಣಮಪ್ಪ ಕಣ್ಗಳಾಗಿರುಹ ಈ ಲಕ್ಷಣಮನುಳ್ಳ ಎೞ್ತು ಲಕ್ಷಣಹೀನವೆನಿಸಿಕೊಳ್ವುದು, ಮೃತ್ಯುಸ್ವರೂಪಮಾಗಿರ್ಪುದು—೯೭.

1 ಮೊದನೆನಡದಂಕಾರ. 2 ೞುತ್ತಿದ್ದಾವೆಂಬ ಹಾಂಗೆ ಇರುಹ.



ಮ|| ನಿಡುಗೋಣುಂ ಕುಸಿಗೋಣುಮಪ್ಪಾದೊಡಿಣಿ ದೊಡ್ಡಿತ್ತಾದೊಡಲ್ಪಾಂಗಮಾ |
ದೊಡೆ ಹೀನಾಧಿಕವಂಗಮಾದೊಡೆ ಉಗಣ್ಣಾಸಿ ದಂತಂಗಳಾ ||
ದೊಡೆ ಕೋಡಿಂ ನಿಡಿದಾಸ್ಯಮಾದೊಡೆನಸುಂ ನೀರ್ ಶಿವಿ ಸೋರ್ವಕ್ಷಿಯಾ |
ದೊಡೆ ದುರ್ವಣಮದಾದೊ[1]ಡಾವನದನಾಳ್ವಾತಂ ಸುಖಂ ಬಾಳ್ವನೇ || ೯೮ ||

ಮ|| ಕೊಱಿ ವಲ್ಲೞ್ಗದ ಬೆನ್ನಡಂಗಿದ ಸೊಣಕ್ಕಂಗುಳ್ಳ ಕೊಳ್ಗೋಡು ಬೆಂ |
ಬೞಿ ತೂಗುಂದಲೆ ಕಾಳದಾಳುಗೆ ಪೊಱಂದೋರ್ಪಕ್ಷಿ[2]ಗಳ್ಪೆರ್ಚಗ ||
ಣ್ಗೊಱಿಗಣ್ ಪೂತನಿಗೊಂಡ ಮೆಯ್ ಕೆಲಪಸಿರ್ಕೆಳ್ದುಪ್ಪಳಾದಂ[3]ದದಂ |
ತೊಱಿಗಾಜೀವದನಂ ಕಳರ್ಚಿ ನೆಲೆಯಿಂ ತಮ್ಮಾಳ್ದನಂ ತೂಳ್ದುಗುಂ || ೯೯ ||

— ಇಂತು ಗೋಲಕ್ಷಣಂ —

(೬) ಅಜಲಕ್ಷಣಂ

ವ|| ಅಜಲಕ್ಷಣಮಂ ಪೇೞ್ವೆಂ —

ಮ|| ತಲೆಹಂಡಾವೊಡಮಲ್ಲಿ ಕೃತ್ತಿಗೆಯವೋಲ್ ಬೆಳ್ಪಾದೊಡಂ ಕಂಠದೊಳ್ |
ವೊಲೆಗಳ್ ಮೂಱುವಗಂ ಪೊದೞ್ದಿಸದೊಡಂ ವರ್ಣಾನ್ತರಚ್ಛಾಯೆ ಮೇಣ್ ||
ಬಲದೊಳ್ ಮಿಕ್ಕಿಸದಿರ್ಪೊಡಂ ದಶನಮೆಂಟೊಂಭತ್ತಾದೊಡಂ |
ಜಲದೊಳ್ ಪೊಕ್ಕದು ಪೀರ್ವೊಡಂ ಬಗೆಪೊಡಂತಾಭಾಗಮತ್ಯುತ್ತಮಂ || ೧೦೦ ||

— ಇಂತಜಲಕ್ಷಣಂ —

ಟೀ|| ಉದ್ದಮಾದ ಕೊರಲ್ ಅಲ್ಲಾ ಗುಡ್ಡವಾದ ಕೊರಲ್ ಆಗಿರುಹ, ಇಣಿ ದೊಡ್ಡಿತ್ತಾಗಿರುಹ, ಅವಯವಂಗಳ್ ಪ್ರಮಾಣಹೀನಮಾಗಿರುಹ, ಪಲ್ಗಳ್ ಹೀನಾಧಿಕಮಾಗಿರುಹ, ಕಣ್ಗಳ್ ಗುೞಿಯಾಗಿ ಸಮಮಿಲ್ಲದಿರುಹ ಕೋಡಿಂದಂ ಮುಖಮುದ್ದಮಾಗಿರುಹ, ನೀರ್ತುಂಬಿ ಪಸಿಸಣ್ಣಾಗಿರುಹ, ವರ್ಣಹೀನಮಾಗಿರುಹ ಈ ಲಕ್ಷಣಂಗಳನುಳ್ಳ ಪಸುವಂ ಮನೆಯಲ್ಲಿರಿಸಿಕೊಂಡು ಸಾಕುವಾತಂ ಸುಖದಿಂದೆ ಬಾೞಲರಿಯಂ—೯೮.

ಟೀ|| ಆವಾಗಳುಂ ಪಲ್ಲಂ ಕಡಿಹ, ಮುಱಿದಾಗಿರ್ಪ ಬೆನ್, ಒಳಪೊಕ್ಕ ಸಲ್, ಕೊಱಗುಗಳ್ ಗುಡ್ಡನಾಗಿರುಹ, ಕೋಡುಗಳ್ ಬೆಣ್ಣಾಗಿರುಹ, ತೂಗುವಲೆಯಾಗಿರುಹ; ಕರ್ಪಾಗಿರ್ಪ ತಾಳುಗೆ, ಪೊಱಪಾಯ್ದ ಕಣ್, ಬೆಕ್ಕುಗಣ್, ಮುಚ್ಚುಂಗಣ್ಣಾಗಿರುಹ, ಪೂತನಿಪಾಯ್ದ [4]ಮೆಯ್ಯಾಗಿರುಹ, ಬೞಿಗಳ್ ಪತ್ತಿಕೊಂಡಿರುಹ, ರೋಮಂಗಳದ್ದಿಯಿರುಹ ಈ ಲಕ್ಷಣಂಗಳುಳ್ಳ ಜೀವದನಂ ತನ್ನೊಡೆಯಂಗೆ ಸ್ಥಾನಚಲನೆಯಂ ಮಾಡಿಸದಿರವು—೯೯.

ಟೀ|| ತಲೆ ಬೆಳ್ಪಾಗಿರುಹ, ಅಲ್ಲಾ ಕೃತ್ತಿಕಾನಕ್ಷತ್ರದ ಮರ್ಯಾದೆಯಲ್ಲಿ ಅಲ್ಲಲ್ಲಿಗೆ ಬೆಳ್ಪಾಗಿರುಹ, ಕೊರಲಲ್ಲಿ ಮೂಱುಮೊಲೆಪರ್ಯಂತಮಾಗಿರುಹ [ಬಲಗಡೆಯಲ್ಲಿ ಬೇಱೊಂದು ವರ್ಣಂ ಮಿಕ್ಕುತೋಱುತ್ತಿರ್ದೊಡಂ ಎಂಟಾದೊಡಂಬತ್ತಾದೊಡಂ ಪಲ್ಗಳಿರುಹ] ಉದಕಮಂ ಪೊಕ್ಕು ನೀರ್ಗುಡಿಹ ಈ ಲಕ್ಷಣಂಗಳನುಳ್ಳ ಆಡು ಉತ್ತಮಂ—೧೦೦.

1 ಡಾತನಱಿದೊಳ್ವಾತಂ. 2 ಗೞ್ಬೆಕ್ಕು. 3 ಅದಂದು ಕಂದಱಿಗಾ. 4 ಪಾಯ್ದುಯ್ಯಾ.

(೭) ಇನ್ನು ಶುನಕಲಕ್ಷಣಂ

ವ|| ಶುನಕಲಕ್ಷಣಮಂ ಪೇಳ್ವೆಂ —

ಮ|| ಅಗಲಂಬೆತ್ತುರಮೊಪ್ಪು[1]ವೊಳ್ನಡು ಕರಂ ಋಕ್ಷಾಳಿಯಂ ಪೋಲ್ವ ದೃ |
ಙ್ಮಗಲಂ ಕಾಲ್ಗಳೊಳಯ್ದುಗುರ್ ಬಲದ ಮುಂಗಾಲೊಂದಱೊಳ್ ನೋಳ್ಪೊಡಾ ||
ಱುಗುರ್ಗಳ್ ತಾಮ್ರನಖೋಷ್ಠನಾಸಿಕಮುದಗ್ರಂ ಲಂಬಕರ್ಣಂ ಮೃಗೇಂ |
ದ್ರಗುಣಂ ಸುರ್ಬುರುಬಾಲಮಾಗೆ ಶುನಕಂ ಮಾಳ್ಕುಂ ಶುಭಪ್ರಾಪ್ತಿಯಂ || ೧೦೧ ||

ಹರಿಣಿ|| ಸೊಗಯಿಪೊಡಲುಂ ಬಿಂಕಂಬೆತ್ತಿರ್ದ ಕೊಂಕಿದ ಬಾಲಮುಂ |
ಱುಗುರೆಡದ ಮುಂಗಾಲೊಳ್ ಮತ್ತಪ್ಪಕಾಲ್ಗಳೊಳಯ್ದುಮೆ ||
ಯ್ದುಗುರತಿಜವಂ ಕೆಂಗ(ಕ)ಂ ತಾಳ್ದಿರ್ದ ಬಾಯೊಳಗೆಂಪಿನ |
ಕ್ಷಿಗಳಿನಿತುಮಾದಂದಾ ಪೆಣ್ನಾಯ್ ಶುಭಪ್ರದಮೆಲ್ಲಿಯುಂ || ೧೦೨ ||

— ಇಂತು ಶುನಕಲಕ್ಷಣಂ —

(೮) ಇನ್ನು ಕುಕ್ಕುಟಲಕ್ಷಣಂ

ವ|| ಕುಕ್ಕುಟಲಕ್ಷಣಮಂ ಪೇಳ್ವೆಂ —

ಅಕ್ಕರಂ|| ಬೆರಲುಂ [2]ಮದಗಂಗಳುಂ ಸೈತಪ್ಪುದು ಕೊರಲ್ ಜಿಗುಱ[3]ಯಂದಮುದಪ್ಪುದು ನಖಮುಂ ಕೊ |
ಟ್ಟುರಮೆ ಕೆಂಪುವುವಾರೆಗಳ್ ದೊಡ್ಡಿದುವಪ್ಪುವು ದನಿಸು — ||
ಸ್ವರವತಿ ಗಂಭೀರಮಪ್ಪುದು ಪುಂಜಂ ಕಬ್ಬಕ್ಕಿ ಬೆಳ್ಪಿಡೆ ಚೀರಂ |
ನರೆಯಂ ಪಂಡನೆಂದಿಂತಪ್ಪಬಣ್ಣಮಪ್ಪುದು ಕೋೞಿಯಧಿಪತಿಗೊಳ್ಪಂ ಮಾಳ್ಕುಂ || ೧೦೩ ||

— ಇಂತು ಕುಕ್ಕುಟಲಕ್ಷಣಂ —

ಟೀ|| ಅಗಲಮಾಗಿ ತೋಱುವ ಪುರಂ, ಚೆನ್ನಾಗಿ ತೋಱುವ ಸಣ್ಣನಡು, ನಕ್ಷತ್ರದ ಪೊಳೆಪನುಳ್ಳ ಕಣ್ಗಳ್, ಕಾಲ್ಗಳಲ್ಲಿ ಅಯ್ದುಗುರಾಗಿರುಹ, ಬಲದ ಮುಂದಣವೊಂದು ಕಾಲಲ್ಲಿ ಆಱುಗುರಾಗಿಹ, ಉಗುರ್, ತುಟಿ, ಮೂಗಿನ ತುದಿಗಳ್ ಕೆಂಪಾಗಿರುಹ, ನೀಳ್ಪ ಕಿವಿಗಳಾಗಿರುಹ, ಸಿಂಹದ ಪರಾಕ್ರಮನುಳ್ಳುದಾಗಿರುಹ, ಬಾಲಂ ರೋಮಸಹಿತಮಾಗಿರುಹ ಇಂತಹ ಲಕ್ಷಣಂಗಳನುಳ್ಳ ನಾಯ್ ಲೇಸಂ ತಂದು ಕುಡುವುದು—೧೦೦.

ಟೀ|| ಚೆಂದಮಾಗಿ ತೋಱುತ್ತಿರ್ಪ ಪೊಟ್ಟೆ, ನೆಗಡಿಕೊಂಡು ಡೊಂಕನಾಗಿರ್ಪ ಬಾಲಂ, ಎಡದ ಮುಂಗಾಲಲ್ಲಿ ಮೂಱುಗುರಾಗಿರುಹ, ಉೞಿದ ಮೂಱು ಕಾಲಲ್ಲಿಯುಂ ಅಯ್ದಯ್ದುಗುರಾಗಿರುಹ, ಮಿಗಿಲಪ್ಪ ಉರವಣೆಯನುಳ್ಳುದಾಗಿರುಹ, ಬಾಯೊಳಗೆಯುಂ ಕಣ್ಣೊಳಗೆಯುಂ ಕೆಂಪಾಗಿರುಹ ಈ ಲಕ್ಷಣಮನುಳ್ಳ ಪೆಣ್ನಾಯ್ ಎಲ್ಲಿರ್ದ ಠಾವಿನಲ್ಲಿಯುಂ ಶುಭಪ್ರದಮಪ್ಪುದು—೧೦೨.

ಟೀ|| ಬೆರಲ್ಗಳುಂ ಮಡಮುಂ ಸರಿತವಾಗಿರುಹ, ಕೊರಲ್ ಜಿಗುಱೆಯ ಮರ್ಯಾದೆಯಲ್ಲಿ ನಡು ದೊಡ್ಡಿತಾಗಿರುಹ, ಉಗುರ್ಗಳುಂ, ಕೊಟ್ಟುಂ ಚೆನ್ನಾಗಿ ಕೆಂಪಾಗಿ ಇರುಹ, ದನಿ ಸುಸ್ವರಮಾಗಿ ಗಂಭೀರಮಾಗಿರುಹ, ಗಂಡುಗೋೞ ಕಬ್ಬಕ್ಕಿಯಂತೆ, ಬೆಳ್ಳಕ್ಕಿ[3]ಯಂತೆ ಕುಂಕುಮದ

1 ಮೊಳ್ನಡು. 2 ಮಡಂಗಳುಂ. 3 ಯಱಹಗೆ.



ಕಂ|| ನಿಯುತಂ ಕುಱಯೊಂದಂ ಮಹಿ |
ಷಿಯನೆರಡಂ ಮೂಱುಪಶುಪನಂತೆಂಟುಂ ವಾ ||
ಜಿಯ ನಾಱುನಾಯನೇೞಾ |
ನೆಯ ನಾಳಲ್[1]ವೇಡ ಪೆರ್ಚನಿಚ್ಛೈಸುವವಂ || ೧೦೪ ||

ಮ|| ಪರಮಾ[2]ಯುಷ್ಯಮುದಯ್ದಿರುಳ್ಪಿರಸು ನೂಱಿಪ್ಪತ್ತು ವರ್ಷಂ ನರ |
ದ್ವಿರದೌಘಕ್ಕೆ ಹಯಕ್ಕೆ ಮೂವತೆರಡಿಪ್ಪತ್ತಯ್ದು ಬೆಳ್ಗೞ್ತಿಗಂ ||
ಕರಭಕ್ಕಂ ಮಹಿಷೋಕ್ಷ ಜಾತಿಗದೆ ತಾನೇಕೋನಿತಂ ನಾಯ್ಗೆ ಪ |
ನ್ನೆರಡೀರೆಂಟಜಮಾದಿಯಾದ ಮೃಗಸಂದೋಹಕ್ಕೆ ಶಾಸ್ತ್ರೋಕ್ತಿಯಿಂ || ೧೦೫ ||

— ಇಂತು ಮೃಗ(ಪಶು)ಲಕ್ಷಣಂ —

(೯) ಇನ್ನು ಶಸ್ತ್ರಲಕ್ಷಣಂ

ವ|| ಇನ್ನು ಶಸ್ತ್ರಲಕ್ಷಣಮಂ ಪೇಳ್ವೆಂ —

* ಕಂ|| ಕಂಗೊ(ಂ)ಗುೞಯಲಗು ವಜ್ರಂ |
ಬೆಂಗವಳಂ ಪೊಗವದಿರಂ ನೆರವಂಗುಂ ||
ಟುಂಗೊಳುಂ ಕರಿಯಪಳಂ |
ಕಾಂಗೆನಿಸಿದ ಬಟ್ಟಕೆಯ್ದುವತಿಶುಭದಂಗಳ್ || ೧೦೬ ||

ವರ್ಣ[3]ದಂತೆ ನರೆಯನಾಗಿ ಹಂಡನಾಗಿಹ ಈ ವರ್ಣಂಗಳನುಳ್ಳ ಕೋೞಗಳ್ ಅರಸಂಗೆ [4]ಲೇಸಂ ಮಾಳ್ಪುದು—೧೦೩.

ಟೀ|| ಒಂದು ಕುಱ, ಎರಡೆಮ್ಮೆಗಳ್, ಮೂಱಾಕಳ್, ಎಂಟು ಕುದಿರೆ, ಆಱು ನಾಯ್ಗ್, ಏೞಾನೆ ಈ ಪೇಳ್ದುವಂ ಈ ಪೇಳ್ದ ಸಂಖ್ಯೆಯ ಪ್ರಮಾಣಿನಲ್ಲಿ ಅರಸಾಗಿರ್ಪಾತಂ ಲೇಸಂ ಬಯಸುವೊಡೆ ಕಟ್ಟಿ ಸಾಕಲಾಗದು—೧೦೪.

ಟೀ|| ಪರಮಾಯುಷ್ಯಂ ಮನುಷ್ಯರ್ಗೆ, ಆನೆಗೆ ನೂಱಿಪ್ಪತ್ತು ವರ್ಷಮುಮಯ್ದು ದಿನಂ, ಕುದಿರೆಗಳ್ಗೆ ಮೂವತ್ತೆರಡ್ಬರಿಸಂ, ಕೞ್ತೆಗಿಪ್ಪತ್ತಯ್ದು ಬರಿಸಂ, ಒಟ್ಟೆಗೆ, ಎಮ್ಮೆಗೆ, ಆಕಳಂಗೆ † ಪತ್ತೊಂಬತ್ತು ಬರಿಸಂ, ನಾಯ್ಗೆ ಪನ್ನೆರಡು ಬರಿಸಂ, ಆಡು ಮೊದಲಾದ ಮೃಗಜಾತಿಗಳ್ಗೆ ಪದಿನಾಱು ಬರಿಸಂ—ಶಾಸ್ತ್ರೋಕ್ತಿಯಿಂದೆ (ಈ ಪೇಳ್ದ ಮೃಗಾದಿಗಳ್ಗೆ) ಪರಮಾಯುಷ್ಯವಿಾ ಪ್ರಮಾಣಮೆಂದರಿವುದು—೧೦೫.

ಟೀ|| ............................................................ —೧೦೬.

1 ವೇಡಪೆಚನಿಚ್ಛಯಿಸಾವವಂ. 2 ಯಪ್ಪಮುಪ್ಪೈನಿರುಳ್ಪಿರಸು. 3 ಹಾಂಗೆ. 4 ಬೆಸಂ.

* ಈ ಕಂದದಲ್ಲಿ ತುಂಬಾ ಅಶುದ್ಧ ಪಾಠಗಳಿವೆ; ಟೀಕೆಯಿಲ್ಲ. ಆಯುಧಗಳ ಹೆಸರಿರಬಹುದು; ಇಲ್ಲಿರುವ ಹಲವು ಹೆಸರುಗಳು ವ್ಯವಹಾರದಲ್ಲಿಲ್ಲವಾದುದರಿಂದ ಶುದ್ಧರೂಪಗಳನ್ನು ನಿರ್ಧರಿಸಲು ಶಕ್ಯವಿಲ್ಲ.

† ಅದೆ ಏಕೋನಿತಂ—ಎಂದು ಮೂಲವಿರುವುದರಿಂದ ಇಪ್ಪತ್ತಯ್ದರಲ್ಲಿ ಒಂದು ಕಡಿಮೆ ಇಪ್ಪತ್ತನಾಲ್ಕು ಎಂದಿರಬಹುದು. ಏಕೋನಿತಂ—ಏಕೋನವಿಶವೆಂದು ಟೀಕಾಕಾರನು ಅರ್ಥಮಾಡಿಕೊಂಡಿರಬಹುದು.

(ಕೆಯ್ದುಗಳ ವಾಸನೆ)

ಕಂ|| ಬೇವಿನ ಬೆಳ್ಳುಳ್ಳಿಯ ಕೋಳಿ |
ವಾವಿನ ಸುಂಡಿಲಿಯ ಪುಣ್ಣ ಮೀಂಬೊಲಸಿನ * ಗೋ ||
ದಾವೆಯ ತಗುಣೆಯ ಗತ್ತದ |
ಬಾವಲ ನಾತಂಗಳಾಗೆ ಬಟ್ಟೆಗಳಶುಭಂ || ೧೦೭ ||

ಚಂ|| ನಡುಕಡಿ [1]ತೋಲಿ ಬಿಂದು ಕಿಱು ಮುಕ್ಕಡಿ ಗುಲ್ಮರಲೋತೆ ಗಾರೆ ಕೋ |
ಳುಡೆ ಪೊರೆ(ಱ)ನೇಲೆ ಸೋರ್ಮೊನೆಯುಮಾದದೆ ಮೆಲ್ಪದಂ ಕರಂ ||
ಕಡುವದನುಕ್ಕಿಸೋರ್ದಪದನೆಂಬ ವಿಕಲ್ಪದ ನೀರ್ವದಂಗಳಾ |
ದೊಡನುಱೆ ಕೆಯ್ದುವಂ ಪಿಡಿದವಂಗದು ಹಾನಿಯನುಂಟುಮಾಡುಗುಂ || ೧೦೮ ||

ಕಂ|| ನಿಡಿದಪ್ಪ ಕೆಯ್ದುವೊಪ್ಪಂ |
ಬಡೆಯದೊಡೆ ಮಸೆದುರ್ದಿ ಕಳೆವುದಲ್ಲದೆ ಮೊಸೆಯಂ ||
ಕಡಿದಂದು ತಾ(ಕಾ)ಯಗೂಲಂ |
ಕಡಿದಂದಧಿಪತಿಗೆ ಮರಣಮಕ್ಕುಮಮೋಘಂ || ೧೦೯ ||

ಟೀ|| ಬೇವು, ಬೆಳ್ಳುಳ್ಳಿ, ಕೊಳೆವಾವು, ಸುಂಡಿಲಿ, ಪುಣ್, ಮೀನಪೊಲಸು, ಪೋತಿ, ಆವೆ, ತಗುಣೆ, ಗತ್ತ (ಮೂತ್ರ ?) ಬಾವಲ್ವಕ್ಕಿ ಈ ವಾಸನೆಗಳನುಳ್ಳಂತಹ ಬಟ್ಟೆಕೆಯ್ದುಗಳ್ ಅಶುಭಂಗಳ್—೧೦೭.

‡ ಟೀ|| ನಡುಕಡಿಯಾಗಿರುಹ, ತೋಲಿ ಬಿಂದು ಪ್ರಮಾಣಹೀನವಾಗಿರುಹ, ಮೂಱುಕಡಿ ತೋಱಿರುಹ, ಗುಲ್ಮ(ರ)ಲೊತೆ, ಗಾರೆ, (ಕೌಳು)ಪೊಡೆ, ಹೊರೆನೇಲೆ, ಸೋರ್ಮೊನೆ, ನೀರೂಟ ಕಿಱಿದಾಗಿರುಹ, ಹದಗೆಟ್ಟಿರುಹ ಈ ಮರ್ಯಾದೆಯಲ್ಲಿ ನೀರೂಟಂ ಪದನಿಲ್ಲದಿರುಹ ಇಂಥಾ ಕೆಯ್ದುಗಳಂ [2]ಅವನೊರ್ವಂ ಪಿಡಿವಂ ಆ ಕೆಯ್ದುಗಳ್ ಪಿಡಿದಾತಂಗೆ ಹಾನಿಯಂ ಮಾಳ್ಪವು—೧೦೮.

ಟೀ|| ಪಿಡಿವಂತಹ ಕೆಯ್ದು ಪ್ರಮಾಣಮಿಲ್ಲದೆ ಅತಿ ಉದ್ದವಾಗಿರ್ದೊಡೆ ಮಸೆದು ಉರ್ದಿ ಕಿಱಿದಂ ಮಾಡುವುದು. ಅವಲ್ಲದೆ ಉದ್ದ[3]ವಾದನಿತಂ ಕಡಿದು ಸಸಿನಂ ಮಾಡಲ್ ಆ ಕೆಯ್ದುವಂ ಪಿಡಿದ ಒಡೆಯಂಗೆ ಮರಣಮಂ ಪೇಳ್ವುದು. ತಾಯಗೂಲಂ ಕಡಿದ ಮರ್ಯಾದೆಯಲ್ಲಿಯುಂ ಆತಂಗೆ ಸಂದೇಹಮಿಲ್ಲದೆ ಮರಣಮಂ ಪೇಳ್ವುದು—೧೦೯.

1 ತೊಲಿ. 2 ಅವನಾನೊಬ್ಬರು ಹಿಡಿದಾರು ಆ ಕೆಯ್ದುಗಳ. 3 ವಾದಷ್ಟನೂ.

* ಟೀಕಾಕಾರನು ಗೋದಾವೆ ಎಂಬ ಶಬ್ದವನ್ನು ಎರಡು ಶಬ್ದಗಳೆಂದು ಭ್ರಮಿಸಿ ಗೋದೆ=ಓತಿ, ಆವೆ, ಆಮೆ ಎಂಬ ಎರಡು ಪ್ರಾಣಿಗಳೆಂದು ಅರ್ಥ ಬರೆದಿರುವನು. ಆದರೆ, ಜನ್ನ ಮಹಾಕವಿಯು ಯಶೋಧರಚರಿತ್ರೆಯಲ್ಲಿ "ಗೋದಾವೆಗಂಡ ನವಿಲಂತೆ" ಎಂಬ ಕಂದದಲ್ಲಿ ಗೋದಾವೆಯೆಂಬ ಒಂದು ಶಬ್ದಕ್ಕೆ ಓತಿಯೆಂಬ ಅರ್ಥವನ್ನಿಟ್ಟುಕೊಂಡಿರುವಂತೆ ತೋರುವುದು. (ಓತಿಗೆ ನವಿಲು ಹೆದರುವುದೆಂದು ಅದರ ಭಾವವು.)

‡ ಟೀಕಾಕಾರನಿಗೂ ಕೆಲವು ಶಬ್ದಗಳ ಅರ್ಥ ತಿಳಿಯದೆ ಮೂಲದ ಶಬ್ದಗಳನ್ನೇ ಬರೆದಿರುವನು.



ಚಂ|| ಅಸಿ ಮುಱಿಸಿರ್ದುದಂ ಕೆಸಱೊಳಟ್ಟಿದನನ್ಯರ ಕೆಯ್ಗೆ ಪೋಯ್ದುದಂ |
ಮಸೆಮುಱಿದಿರ್ದುದಂ ಕನಸಿನೊಳ್ ಪತಿ ಕಾಣ್ಬೊಡಮಲ್ಲದುಂ ಮ ನಿ |
ಟ್ಟಿಸಿ ನಡೆ ನೋಡುವಲ್ಲಿ ನೆಟಲಂತದಱೊಳ್ ವಿಕೃತಂಗಳಾಗಿ ಕ |
ಣ್ಗೆಸೆವೊಡನಾತನೊಳ್ಗುಣಮನೊಕ್ಕಸಿ ರಕ್ಕಸಿಯಂತೆ ನುಂಗುಗುಂ || ೧೧೦ ||

ಚಂ|| ಪೊಗರಳವಟ್ಟು ಪೊನ್ನನೊರೆದಂತೆವೊಲಿರ್ದೊಡೆ ಪದ್ಮಗಂಧದಿಂ |
[1]ಮಗಮಗಿಸುತ್ತುಮಿರ್ದೊಡೆ ಸಮಾಂಗುಳಮಪ್ಪೊಡೆ ಚೆಲ್ವವೆತ್ತು ಮು ||
ಷ್ಟಿಗೆ ಲಘುವಪ್ಪೊಡುತ್ಪಳದಳಚ್ಛವಿಯಪ್ಪೊಡೆ ತಾನೆ ವೀರಲ |
ಕ್ಷ್ಮಿಗೆ ನೆಲೆಯಕ್ಕುಮಾತೆಱದ ಬಾಳ್ವಿಡಿದಂ ಜಯಬಂಧುನಂದನಾ || ೧೧೧ ||

ದ್ರುತವಿಳಂಬಿತಂ|| ಎಣಿಸಿ ಪೆರ್ವೆರಲಿಂದಮೆ ಶಸ್ತ್ರಮಂ |
ಗುಣಿಸುಗಾವೆರಲಂ ಪದಿಮೂಱಱಿಂ ||
ಗಣಿದಮೆನವನೊತ್ತುವುದೇೞಱಿಂ |
ದುೞಿದುಮಂತವು ಶಸ್ತ್ರದಲಕ್ಷಣಂ || ೧೧೨ ||

* ಮ|| ಇನನಿಂ ನೋವು ಶಶಾಂಕನಿಂದೆ ಶುಭದಂ ಕೇಡಕ್ಕುಮಂಗಾರನಿಂ |
ತನಯರ್ಕಳ್ ಬುಧನಿಂ ಬೃಹಸ್ಪತಿಯೊಳಾದಂ ದರ್ಥಮಂ ಶುಕ್ರನಿಂ ||
ವನಿತಾಸಂಗಮೆ ಮಂದನಿಂದೆ ಮರಣಂ ಬರ್ಕುಂ ಧರಾಚಕ್ರದೊಳ್ |
........................................................ || ೧೧೩ ||

ಟೀ|| [2]ಪಿಡಿವಂಥಾ ಆಡಾಯುಧಂಗಳ್ ಮುಱಿದಿರ್ಪುದಂ, ಕೆಸಱೊಳಗೆ ಪೊಟ್ಟಿರ್ದುದಂ, ಮತ್ತೊರ್ವರ ಕೆಯ್ಗೆ ಪೋದುದಂ ಮಣ್ಬಿಡಿದಿರ್ದುದಂ ಆ ಕೆಯ್ದುವಂ ಪಿಡಿವೊಡೆಯನುಂ ಕನಸಿನಲ್ಲಿ ಈ ಮರ್ಯಾದೆಯೊಳ್ ಆಹದ ಕಾಣುಹ, ಅಲ್ಲಾ ಚೆನ್ನಾಗಿ ಮಸೆದಿರ್ಪ ಕೆಯ್ದುವಂ ನೋಡುವಲ್ಲಿ ಅದಱೊಳಗೆ ನೆೞಲ್ಗಳ್ ತನಗೆ ವಿಕಾರಂಗಳಾಗಿ ತೋಱಲ್ ಆ ಆಡಾಯುಧಮಂ [3]ಪಿಡಿದಾತನ ಸಮಸ್ತ ಗುಣಂಗಳುಮಂ ರಕ್ಕಸಿಯು ಮರ್ಯಾದೆಯಲ್ಲಿ ನುಂಗುವುದು—೧೧೦.

ಟೀ|| ಪೊಗರ್ ಚೆನ್ನಾಗಿ ಎಬ್ಬಿ ಬಂಗಾರಮನೊರೆದ ಮರ್ಯಾದೆಯಲ್ಲಿ ತೋಱಲ್ ತಾವರೆವೂವಿನ ಮರ್ಯಾದೆಯಲ್ಲಿ ವಾಸನೆಯಾಗಿ ಮಘಮಘಿಸುತ್ತಿರುಹ, ಅಳೆವಲ್ಲಿ ಸಮಾಂಗುಲಮಾಗಿರುಹ, ಚೆನ್ನಾಗಿ ಪಿಡಿದ ಮುಷ್ಟಿಗೆ ಲಘುವಾಗಿರುಹ, ಕನ್ನೆಯ್ದಿಲೆಸಳ ಮರ್ಯಾದೆಯಲ್ಲಿ ಕಾಂತಿಯನುಳ್ಳುದಾಗಿರುಹ, ಅಂಥಾ ಕೆಯ್ದು ಜಯಲಕ್ಷ್ಮಿಗೆ ನೆಲೆವನೆಯಾಗಿರ್ಪುದು, ಆ ಕೆಯ್ದುವಂ ಪಿಡಿದಾತಂಗೆ ಅತ್ಯಂತ ಲೇಸಂಕುಡುವುದು—೧೧೧.

ಟೀ|| ಅವುದಾನೊಂದು ಕೆಯ್ದುವಂ ಪೆರ್ಬೆರಲಿಂದಳೆದು ಆ ಬೆರಲ ಸಂಖ್ಯೆಯಂ ಪದಿಮೂಱಱಿಂ ಗುಣಿಸಿ ಅವನೇೞಱಿಂ ಭಾಗಿಸಿ ಉೞಿದ ಶೇಷಂ ಶಸ್ತ್ರಲಕ್ಷಣಮೆಂದಱಿವುದು—೧೧೨.

ಟೀ|| ಆ ಪಿಂದೆ ಭಾಗಿಸಿದ ಉೞಿದ ಶೇಷಂ ಒಂದುೞಿಯಲ್ ನೋವು, ಎರಡುೞಿಯಲ್

1 ಮಘಮಘಿ. 2-3 ಮಿತಿ.

* ಈ ಪದ್ಯಕ್ಕೆ ನಡುವೆ ಮತ್ತೊಂದು ಪಾದವಿರಬೇಕು, ಟೀಕೆಯೂ ಪೂರ್ಣವಾಗಿಲ್ಲ. ಗ್ರಂಥವು ಮಾತ್ರ ನಿರಂತರವಾಗಿ ಬರೆದಿದೆ. ಮುಂದೆ ಒಂದು ಪದ್ಯದ ಟೀಕೆ ಮಾತ್ರವಿದೆ. ಒಟ್ಟಿನಲ್ಲಿ ೧೧೩ನೆಯ ಪದ್ಯದ ಒಂದು ಪಾದ, ಅದರ ಟೀಕೆಯ ಭಾಗ, ೧೧೪ನೆಯ ಮತ್ತೊಂದು ಪದ್ಯ ಇಷ್ಟು ಗಳಿತವಾಗಿವೆ.

.................................................... |
.................................................... ||
.................................................... |
.................................................... || ೧೪ ||

— ಇಂತು ಶಸ್ತ್ರಲಕ್ಷಣಂ —

ಶುಭಂ, ಮೂಱು ಮಿಕ್ಕೊಡೆ ಕೇಡಂ ಪೇೞ್ವುದು ..................................................................................—೧೩.

ಟೀ|| ಎಂಟಱಿಂದೆ ಭಾಗಿಸಿ ಮಿಕ್ಕುದು ಯೋನಿ, ಪದಮನೆಂಟಱಿಂ ಗುಣಿಸಿ ಇಪ್ಪತ್ತೇೞಱಿಂದೆ ಭಾಗಿಸೆ ಬಂದುದು ವಯಸ್ಸು, ಮಿಕ್ಕುದು ನಕ್ಷತ್ರಂ, ಪದಮಂ ಮೂವತ್ತಾಱಿಂ ಗುಣಿಸಿ [ಮೂವತ್ತಱಿಂ] ಭಾಗಿಸೆ ಬಂದುದು ತಿಥಿ, ............ ನಾಲ್ಕು ಮಿಗಲ್ ಸಂತಾನಾಭಿವೃದ್ಧಿಯಪ್ಪುದು, ಅಯ್ದು ಮಿಕ್ಕೊಡೆ ಅರ್ಥಲಾಭಮಪ್ಪುದು, ಆಱು ಮಿಗಲ್ ಒಳ್ಳಿಹ ಸ್ತ್ರೀಯ ಕೂಟಮಪ್ಪುದು, ಏನುಂ ಮಿಗದೆ ಭಾಗೆ ಆಹಱಿಯಲ್ ಮರಣಮಂ ಪೇೞ್ವುದು—೧೪.

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ

ಶ್ರೀಮತ್ಕವಿತಾವಿಳಾಸತನೂಜಂ

ಶ್ರೀಮಚ್ಚಾವುಂಡರಾಯ

ವಿರಚಿತಮಪ್ಪ

**ಲೋಕೋಪಕಾರದೊಳ್**

ಸರ್ವಲಕ್ಷಣಪರಿಜ್ಞಾನಪ್ರಕರಣಂ

ಏಕಾದಶಾಧಿಕಾರಂ

---

# ದ್ವಾದಶಾಧಿಕಾರಂ

## ಶಕುನಾದಿಪ್ರಕರಣಂ.

ಕಂ|| ಆವೆಡೆಗಂ ಶಕುನದ ಸ |
ದ್ಭಾವಮೆ ಫಲದಾಯಿಯೆಂಬ ಬಗೆಯಿಂದಖಿಳೋ ||
ರ್ವೀವಿದಿತಮಾಗೆ ಪೇೞ್ಗುಂ |
ಚಾವುಂಡಂ ನೆಗೞ್ದ ಸರ್ವ[1]ಹಿತಶಕುನಮುಮಂ || ೧ ||

ನರಪತಿ ಸೇನೆಯೊಳಿ ಪಲಂ |
ಬರೆ ಳಂ ಮುಖ್ಯಂಗೆ ಗುಣದೊಳತ್ಯಧಿಕಂಗೊ ||
ರ್ವರೊಳಾರುಮಿಲ್ಲದೊರ್ವನೆ |
ಬರೆ ತನಗೆಂದಱಿತುಕೊಳ್ಗೆ ಶಕುನವ ಮತವ್ಯಂ || ೨ ||

ದೊರೆಕೊಳಿ ಶಕುನಂ ಗ್ರಾಮದೊ |
ಳರಣ್ಯಗಹ್ವರಚರಂಗಳೂರೊಳ್ ಪಗಲೊಳ್ ||
ಚರಿಯಿಸುವುವಿರುಳೊಳಿರುಳೊಳ್ |
ಚರಿಯಿಸುವುವು ಪಗಲೊಳಂ ಕೊಳಲ್ವೇಡರಿ(ಱಿ)ವಂ || ೩ ||

ಮ|| ಅರೆಜಾವಂ ಬೆಸವೋಲೆವಂಗೆ ಪಯಣಂಬೋಪಂಗೆ ತಾನಂದಿನೋ |
ರಿರುಳೊಱೇಱುವವಂಗೆ ತಿಂಗಳೊಸದೊರ್ಕ್ಕಲ್ ಪೋಪವಂಗಾವಗಂ ||
ವರುಷಂ ಮಾಣ್ದಿರವೇೞ್ದುದೆಯ್ದೆ ಶಕುನಂದುಸ್ಥಾನದೊಳ್ ವಕ್ರಮಾ |
ಗಿರೆ ವೈವಾಹಿಕದಲ್ಲಿಗಂತದನೆಮಾಣ್ಗೆಂದೀಗಮುವ್ಯಾಜದಿಂ || ೪ ||

ಟೀ|| ಆವುದೊಂದು ಕಾರ್ಯಕ್ಕಂ ಶಕುನಫಲಮಂ ಕುಡುವುದರಿಂದೆ ಶಕುನಪ್ರಪಂಚಮನೆಲ್ಲರುಮಱಿವಂತೆ ಚಾವುಂಡರಾಯಂ ಪೇೞ್ದಪಂ—೧.

ಟೀ|| ಅರಸರ ದಂಡೊಳಗೆ ಪಲಂಬರಿರ್ದೊಡಮವ ಮುಖ್ಯಸ್ಥಂಗಂ, ಗುಣಾಧಿಕಂಗಂ ಶಕುನಫಲಮಪ್ಪುದು, ಆರುಮಿಲ್ಲದೋರ್ವನಿರ್ದೊಡೆ ಅವಂಗೆಯೆ ಫಲಮಪ್ಪುದು—೨.

ಟೀ|| ಕಾಡಿನಲ್ಲಿ ಸಂಚರಿಸುವ ಮೃಗಪಕ್ಷಿಗಳೂರೊಳ್ ತಿರ್ದೊಡಂ ಪಗಲ್ ಚರಿಪ್ಪುವಿರುಳಲ್ಲಿಯುಂ ಇರುಳ್ ಚರಿಪುವು ಪಗಲಲ್ಲಿಯುಂ ತಿರ್ದೊಡಮಾ ಶಕುನಮಂ ಸ್ವೀಕರಿಸಲಾಗದು—೩.

ಟೀ|| ಉದಯಮಾಗಿ ನಾಲ್ಕು ಗಱಿಗೆಯೊಳ್ ಪಣಿಹಮಾಗಿ ಪೋಪಾತಂಗೆ, ಇ(ಅ)ಂದಿನ ರಾತ್ರಿಯೊಳ್ ಸುಖದಲ್ಲಿ ಕಾರ್ಯಮಾಗಿ ಪೋಪಾತಂಗೆ, ತಿಂಗಳೊಳ್ ಬೇರೂರ್ಗೆ ಪೋಗವೇಱುಮೆಂಬಾತಂಗೆ, ಒಂದು ವರ್ಷದೊಳ್ ಒಕ್ಕಲ್ ಪೋಪವಂಗೆ—ಇಂಥವರ್ಗಳ್ಗೆ ಈ ಪೇೞ್ದ ವೇಳೆಗಳಲ್ಲಿ ಆದ ಶಕುನಂಗಳ್ ಶುಭಾಶುಭ ಫಲಂಗಳಂ ಕುಡುವುವು. ಒಂದು ಠಾವಿನಲ್ಲಿ ವರುಷಂ ಸ್ಥಿರಮಾಗಿಪಾ(ದಾ)ರ್ತಂಗೆ ವಿವಾಹಕಾರ್ಯಮನೊಗಿಸುವಾತಂಗೆ ದುಸ್ಸ್ಥಾನದಲ್ಲಿ ಶಕುನಂ

1 ಹಿತಮುಂ(ಮಾ)ಶಕುನಂ.

ಕಂ|| ಪಯಣದೊಳಶೇಷ ಶಕುನಂ |
ನಯಮಂ ಕುಡೆ ಕಾರ್ಯಸಿದ್ಧಿ ಸಮವಾಯಂ ದು ||
ರ್ನಯಮಾದೊಡಸಗವಕ್ಕಿಯ |
ನಯದಿಂದಿಷ್ಟಾರ್ಥಸಿದ್ಧಿಯಕ್ಕುಮಮೋಘಂ || ೫ ||

ತಿರ್ದಲಿಕೆ ಬಂದ ಶಕುನಮ |
ಲ್ಲಿರ್ದಂತಿರೆ ಫಲವು ತಿರ್ದೆ ಪೆಱಉಟಿಲಾಭಂ ||
ತಿರ್ದಿದದುನಯಂಗೆ – |
ಪೊರ್ದದು ಫಲಮಂತದಕ್ಕೆ ಕಡೆವೊಂಗಶುಭಂ || ೬ ||

ಮ|| ಒಲವಿಂದಂ ಬಗೆ ತೀರ್ವೊಡಂ ಕುಟುಕಿನಿಂದಾ[1]ಹಾರಮಂ ಸ್ಥಾನದಿಂ |
ನೆಲೆಯಂ ಕೂಟದೆ ಕೂಟಮಂ ನಲಿಸದಿಂದಂ [2]ನಲ್ಮೆಯಂ ಗಲ್ಲದಿಂ ||
ಗೆಲವಂ ದಕ್ಷಿಣಚೇಷ್ಟೆಯಿಂ ಬಲಮನತ್ಯುತ್ಸಾಹದಿಂದಂ ನಿರಾ |
ಕುಲದಿಂದಂ [ಸ್ವನದಿಂ] ಸುಖಾಭ್ಯುದಯಮಂ ಪೇೞ್ಗೆಲ್ಲಿಯುಂ ತದ್ವಿದಂ || ೭ ||

(ಶಕುನಂತಿರ್ದಿದ ದಿನಮನುೞಿದು ಮಱುದಿನಂ ಪೋಗಲಾಗದು)

ತಿವಿದಿ|| ತಿರ್ದಿದ ದಿವಸಂ ಮಾಣ್ದು ದುರ್ ಬಟ್ಟಿಕ್ಕವಾ |
ತಿರ್ದನೆ ತಿರ್ದಿಂದು ಪಯಣಂಬೋಪಾತಂಗೆ ||
ಪೊರ್ದದು [3]ಲಾಭಂ ಬುಧಬಂದು || ೮ ||

---

ತೋಱಲ್ ಆತಂ ಪೋಪೆನೆಂಬ ಠಾವಂ ಬಿಟ್ಟು ಕಳೆವುದು. ಆ ಮಾಡುವೆನೆಂಬ ವಿವಾಹ ಕಾರ್ಯಮಂ ಮಾಡಲಾಗದು—೬.

ಟೀ|| ತಿರ್ದುವ ಶಕುನದ ಪಕ್ಕಿಗಳ್ ತನ್ನತ್ತಲೊತ್ತಿ ಚೆನ್ನಾಗಿ ತಿರ್ದಲ್ ತಾಂ ನೆನೆದ ಕಾರ್ಯಸಿದ್ಧಿಯಪ್ಪುದು. ಆ ಪಕ್ಕಿಗಳ್ ಕುಟುಕಂ ಕರ್ಚಿಕೊಂಡುತಿರ್ದಲ್ ಪೋಪಾತಂಗೆ ಸುಖಭೋಜನಮಪ್ಪುದು, ಇರ್ದ ಸ್ಥಾನದಿಂದೆ ತನ್ನ ನೆಲೆಯಂ ಪ್ರವೇಶಿಸಲ್ ಪೋಪಾತಂಗೆ ಸ್ಥಾನಪ್ರಾಪ್ತಿಯಪ್ಪುದು. ಶಕುನದ ಪಕ್ಕಿಗಳ್ ಪೆಣ್ಗಂಡುವೊಂದಾಗಿ ಹತ್ತಿರೆತಿರ್ದಲ್ ಪೋಪಾತಂಗೆ ಸ್ತ್ರೀಸಂಗಮಪ್ಪುದು. ಆ ಪಕ್ಕಿಗಳ್ ಉತ್ಸಾಹದಿಂದೆ ತಮ್ಮೊಳಗೆ ತಾವು ಆಡುತ್ತಿರಲ್ ಆ ಶಕುನಮಂ ಕೊಳ್ವಾತಂಗೆ ಮಹೋ(ನೋ)ತ್ಸಾಹಮಂ ಕುಡುವುದು, ತನಗೆ ಶಕುನಮಂ ಕುಡುವ ಪಕ್ಷಿ ಗೆಲುತ್ತುಮಿರಲ್ ಆ ಶಕುನಮಂ ಕೊಳ್ವಾತಂಗೆ ಗೆಲ್ಲಮಂ ಕುಡುವುದು, ಆ ಶಕುನದ ಪಕ್ಷಿಗಳ್ ಬಲದ ಚೇಷ್ಟೆಯಂ ಕುಡಲ್ ತನಗೆ ಒಲವಂ ಕುಡುವುದು, ಆ ಶಕುನದ ಪಕ್ಷಿ ತನ್ನ ಸಂತೋಷದಿಂದೆ ವ್ಯಾಕುಲಮಿಲ್ಲದೆ ಒಳ್ಳಿಯ ಧ್ವನಿಯಿಂದೆ, ಅಲ್ಲಾ ಚೇಷ್ಟೆಗಳಿಂದೆ ನಯಮಪ್ಪ ಒಳ್ಳಿಹ ಶಕುನಮಂ ಕುಡಲ್ ತನಗೆ ಲೇಸಿನ ಪೆರ್ಚುಗೆಯಂ ಪೇೞ್ವುದು—೭.

ಟೀ||. ಆವುದೊಂದು ಶಕುನದ ಪಕ್ಷಿಯು ತಿರ್ದಂ ಕೊಂಡು ಆ ದಿನದಲ್ಲಿ ತನ್ನ ಗೃಹದೊಳಿರ್ದು ಮಱುದಿನಂ ಆ ತಿರ್ದನೆ ತಿರ್ದಿಂದು ಪಯಣಮಂ ಮಾಡಿದಾತಂಗೆ ಲಾಭಕಾರ್ಯಮಾಗಲರಿಯದು—೮.

1 ಪಾಹವಮಂ. 2 ನಲ್ಲಿಯಂ. 3 ಲಾಭಂ ಮತ್ತದುಂ ಬುಧಬಂಧು.
* ೫ ಮತ್ತು ೬ರ ಟೀಕೆಯಿಲ್ಲ.



(ಇದಿರೊಳ್ ಬರ್ಪ ಒಳ್ಳಿಯ ವಸ್ತುಗಳ್)

ಮ|| ಕಳಸಂ ಕನ್ನಡಿ ತೋರಣಂ ಚಮರ ಛತ್ರದ್ವಯಂ ಭೇರಿ ಮಂ |
ಗಳತೂರ್ಯಂ ಗಣಿಕಾಜನಂ ಸುರಭಿ ಜಳಂ (ಗಂಧಂ) ಮಾಂಸ ಭಾರಂ ಪಣಾ ||
ವಳಿ ರತ್ನಂ ದಧಿ ಪೂರ್ಣಕುಂಭಮಿನಿತುಂ ಪೋಪಂಗೆ ಬರ್ಪಂಗನಾ |
ಕುಳದಿಂ ಕಟ್ಟಿದಿರ್ವಂದೊಡಿಷ್ಟಫಲಮಂ ಶ್ರೀಶಿಷ್ಟ ಕಲ್ಪದ್ರುಮಾ || ೯ ||

(ಇದಿರೊಳ್ ಬರ್ಪ ಪೊಲ್ಲ ವಸ್ತುಗಳ್)

ಚಂ|| ಬಱುಗೊಡನೆಣ್ಣೆ ಪತ್ತಿ ನುಲಿನೇಣ್ ಬಡಿಕೋಲ್ ಬಲೆಯಿರ್ದಿಲೆಲ್ಬು ಸಾ |
ವಱಿ ಪುರಿಯೋಡು ಸುಟ್ಟಡಗು ಪಾವೊಲಂ ಗಳಿತಾಶ್ರು ಮುಂಡೆ ಮೂ ||
ಕೊಱತಿ ವಿಮುಕ್ತಕೇಶಿಯಿದಿರೊಳ್ ಬರೆ ಕಾಣಲುಮಾಗದಂತು ಮೇ |
ಣೆಱ ಬಡಿ ನೂಂಕು ಕಟ್ಟು ಕದಱೆಂಬೊಡಮಾಗದು ಪೋಗಲೆತ್ತಲುಂ || ೧೦ ||

(ಶಾಂತದೀಪ್ತಸ್ಥಾನಂಗಳ್)

ಕಂ|| ಇನನೆಂಟುಂ ದೆಸೆಯೊಳಮಿ |
ರ್ದ ನೆಲೆನು(ಹೂ)ತಿ ಪೊಗೆ ನೆಳಲ್ ಕೆಸಱು ತೋಯಂ ಮೇ ||
ದಿನಿ [ಬೂದಿ] ಕೆಂಡಮೆನೆ ತರ |
ದಿನಕ್ಕುಮಿವು ಶಾಂತದೀಪ್ತಮ(ದ)ನ್ವರ್ಥಂಗಳ್ || ೧೧ ||

(ಸೀನ್)

ತನ್ನೊಡನೆಯವರ್ ತಾಂ ಪೆಱ |
ರೆನ್ನದೆ ಪಶುವೆನ್ನದೆಡಬಲಂ ಪೆಱಗಿದಿರಾ ||
ಸನ್ನಂ ದೂರಂ ಮೃಗಮೆಂ |
ದೆನ್ನದೆ ಮುನ್ನಿಪುದು ಸೀನನಚಳಿತವಚನಾ || ೧೨ ||

---

ಟೀ|| ಕಳಶಂ, ಕನ್ನಡಿ ಮೊದಲಾದುವು ಒಂದೆಡೆಯಿಂ ಪೋಪಂಗಂ ಒಂದೆಡಗೆ ಬರ್ಪಂಗಇತಿರ್ವಂದೊಡಿಷ್ಟಫಲಪ್ರಾಪ್ತಿಯಕ್ಕುಂ—೯.

ಟೀ|| ನೀರಿಲ್ಲದ ಬರಿಯ ಕೊಡಂ, ಎಣ್ಣೆ, ಹತ್ತಿ, ನುಲಿಯ ನೇಣ್, ಮೊದಲಾದ ವಸ್ತುಗಳ್ ಪೋಪಂಗೆ ಇದಿರೊಳ್ ಬರೆ ಕಂಡೊಡೆ ಎತ್ತಲುಂ ಪೋಗಲಾಗದು. ಇಱ, ಬಡಿ, ನೂಂಕು, ಕಟ್ಟು, ಕದಱು ಎಂಬ ಶಬ್ದಂಗಳಂ ಕೇಳ್ದೊಡಂ ಪಯಣಂ ಬೋಗಲಾಗದು—೧೦.

ಟೀ|| ಸೂರ್ಯನೆಂಟುಂ ದಿಕ್ಕುಗಳಂ ಮುಟ್ಟಿ ತಿರುಗುವ ವೇಳೆಯಲ್ಲಿ ಆ ಸೂರ್ಯಂ ಆವ ಸ್ಥಾನ[1]ದಲ್ಲಿರ್ಪಂ ಅಲ್ಲಿ ಮೊದಲ್ಗೊಂಡು ಹೂ(ಭೂ)ತಿ, ಹೊಗೆ, ನೆೞಲ್, ಕೆಸಱು, ಉದಕಂ, ಭೂಮಿ, ಬೂದಿ, ಕೆಂಡಂ ಇವು ಶಾಂತದೀಪ್ತ ಸ್ಥಾನಂಗಳೆಂದಱಿದುಕೊಳ್ವುದು—೧೧.

ಟೀ|| ತನ್ನ ಸಂಗಡದವರ್, ತಾಂ, ಲೋಗರ್, (ಪಶುಜಾತಿ) ಬಲಂ, ಹಿಂದು(ಗಡೆ), ಇದಿರ್, ಹತ್ತಿರೆ, ದೂರಂ, ಮೃಗಜಾತಿಗಳ್ ಇವು ಮೊದಲಾದುವೆನ್ನದೆ ಪಯಣಮಂ ಮಾಡುವಾತಂ ಸೀನಂ ಕೇಳಿ ಪರಿಹರಿಸದೆ ಪೋಗಲಾಗದು—೧೨.

1 ದಲ್ಲೇ ಇದ್ದಾನು.

(ಬೆಕ್ಕಿನ ಶಕುನಂ)

ಕಂ|| ಬೆಕ್ಕುಗಳದಿರೊಳಗಾಡಿದೊ |
ದರ್ಕೋದಯ ಸಮಯಮಪ್ಪಿನಂ ಪೋಗದೆ ಮಾ ||
ಣ್ದರ್ಕೆ ಪಗಲುಕ್ಕಿ ಕಾದಿದೊ |
ಡಿರ್ಕೆಂದಿನ ದೆವಸಮೊಳ್ಪನಱಸುವ ಮನುಜಂ || ೧೩ ||

(ಮೃಗಪಕ್ಷಿಶಕುನಂಗಳ್)

ಮ|| [1]ಬಸವಂ ಕೋಗಿಲೆ ಕೊಂಚೆಯುಂಚೆ ಕಪಿ ಸಾರಂಗಂ ನವಿಲ್ ಕೋಡಗಂ |
ಮುಸು ಕೊಂಕಂ ಪುಲಿ ಬಳ್ಳು ಪೆಣ್ಗುಱು ವೃಕಂ ಪೋಪಲ್ಲಿ ಬರ್ಪಲ್ಲಿಯುಂ ||
........ಸಾರ್ದು ಸ್ವರಂ ಗಯ್ವೊಡೆ ಶಾಂತಮಾಗಿ ಮನಕ್ಕೆ ಬಲದೊಳಿಯ್ದಿ ಸ |
ತಸಮಂ ವಾಮವಿಭಾಗದೊಳ್ ಪರಡೆಯೆಂತುಂ ತಾನದತ್ಯುತ್ತಮಂ || ೧೪ ||

ಚಂ|| ಮೃಗವಸಮಾಗಿ ಸಂತಸದೆ ಪಾಯ್ದೆಡದತ್ತಲುಮೊತ್ತಿ ಪೋಗೆ |
....................................ಪೋಪಾಗಳುಂ ಮೇಣ್ ||
ಪುಗುವಾಗಳುಂ ಬಲದತ್ತಲ್ಪೋಗೆ .............................. |
.........ಲಾಭಮದಿಂತು ಮರಲ್ಚಿ ಸಾರ್ವಂಗೆ ಶುಭದಂ.......... || ೧೫ ||

ಅನವದ್ಯಂ|| ಪೋಗೆ ತನ್ನೆಡದೊಳ್ ಪುಗೆ ಮತ್ತಂ ದಕ್ಷಿಣದೊಳ್ ನರಿ ವರ್ತಕಂ |
ಗೂಗೆ ಮೇಣ್ ಮಯಣಂ ನಯದಿಂದಂ ಸಾರ್ದು ಸರಂಗುಡೆ ಶಾಂತದೊಳ್ ||
ಮಾಗೆ ಗೊಂಕರುಕಪ್ಪೆ ದಸುಂಬಂ ತತ್ಕ್ರಮದಿಂದಮೆ ದೀಪ್ತ ದಿ |
ಗ್ಭಾಗದೊಳ್ ದನಿಗೆಯ್ಯೆ ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ || ೧೬ ||

ಟೀ|| ಆವನೊರ್ವಂ ಪಯಣಮಂ ಮಾಡುವಾತಂ ಇದಿರಾಗಿ ಸೂರ್ಯೋದಯದಿಂದಂ ಮುನ್ನಂ ಬೆಕ್ಕುಗಳಿದಿರಾಗಿ ಕಾದಲ್ ಆ ದಿನಂ ಪಗಲ್ ಪಯಣಮಂ ಮಾಡಲಾಗದು, ಸೂರ್ಯೋದಯಮಾದ ಬಳಿಕ್ಕಂ ಇದಿರಾಗಿ ಕಾದಲ್ ಲೇಸಂ ಬಯಸುವಾತಂ ಆ ದಿನಂ ಪಯಣಂ ಮಾಡಲಾಗದು—೧೩.

* ಟೀ||

ಟೀ|| ಮೃಗಂಗಳ್ ಸಮೂಹಮಾಗಿ ಆವನೊರ್ವಂ ಪಯಣಂ ಮಾಡುವಾಗಳ್ ಬಲದ ಭಾಗದಿಂದೆಡಕ್ಕೆ ಪೋಗಲ್ ಊರಂ ಪುಗುವಾಗಳ್ ಎಡದ ಕಡೆಯಿಂದೆ ಬಲದ ಕಡೆಗೆ ಪೋಗಲ್ ಉತ್ತಮ ಕಾರ್ಯಸಿದ್ಧಿಯಪ್ಪುದು. ಮರಳ್ದು ಬಲದಿಂದೆಡಕ್ಕೆ ಪೋಗಲತ್ಯುತ್ತಮಂ—೧೫.

ಟೀ|| ಆವನೊರ್ವಂ ಪಯಣಂ ಮಾಡುವಾಗಳ್ ನರಿ, ವರ್ತಕಂ, ಗೂಗೆ, ಮಯಣಂ, ಇವು ತನ್ನೆಡಕ್ಕೆ ಪೋಗಿ ಮತ್ತೆ ಬಲಕ್ಕೆ ಬರಲ್, ಗೊಂಕರು, ಕಪ್ಪೆ, ಪಸುಂಬಂ ಇವು ತಂತಮ್ಮ ರೀತಿಯಿಂದೆ ದೀಪ್ತಭಾಗದಲ್ಲಿ ಕರೆಯಲ್ ಕಾರ್ಯಸಿದ್ಧಿಯಪ್ಪುದು—೧೬.

1 ಬಸವಂ ಚಂಡಗವಂ ಕೋಗಿಲೆ (ಓಲೆಯ ಪಕ್ಕದಲ್ಲಿ—ಹಂಸೆ, ನರಿ, ಸಾರಂಗಂ, ಚಂಡಗತೋಳ— ಎಂದು ಬರೆದಿದೆ.

* ಟೀಕೆಯಿಲ್ಲ.



ಕಂ|| ಪರಡೆ ಪಸುಂಬಂ [1]ಪ್ಯೆನಂ |
ಎರಳೆ ನವಿಲ್ಮಾಗೆ ಪೆಟ್ಟೆ ಪೋದಗೆ ಕರಭಂ ||
ಶರಕಮಿವು ಪೋಗೆ ಶಾಲುಂ |
[2]ಬರೆ ಯೆಡಕೆಯುಂ ದೂರೊಳೊಳ್ಪುಮಚಳಿತವಚನಾ || ೧೭ ||

ಪೋಗೆ ಬಲನಾಗೆ ಪುಗಲೆಡ |
ನಾಗಿರೆ ಶಾಂತಮೊಳೆ ಸೇ(ಶ್ಯೆ)ನನುಚಿತಂ ಪುಗೆಯುಂ ||
ಪೋಗೆಯುಮೆಡದತ್ತಲ್ ಪುಗೆ |
ಮೂಗಿಯ ಶಕುನಂಗಳಿಷ್ಟಫಲಮಂ ಕುಡುಗುಂ || ೧೮ ||

ಪೆಣ್ಗಾಗೆ ಬೆಣ್ಣೆಗರಗಂ |
ಮುಂಗುರಿ ನವಿಲಸಗವಕ್ಕಿಯರಗಿಳಿ(ಣಿ) ಕಾರೇ ||
ಡಂ ಗಿಡುಗಂ ಸಿಂಚಾಮಿನಿ |
ತುಂ ಗ[3]ಮನಾಗಮದಲ್ಲಿ ತಾಂ ಪುಗೆ ಶುಭದಂ || ೧೯ ||

ಮ|| ಎರೆಯುಂ ಕರ್ಚಿ ಬಲಕ್ಕೆ ಪೋಗೆ ಶುಭದಂ ಪೆಣ್ಗಾಗೆ ಮೇಣಂತದಂ |
ಬರದೊಳ್ ಬಟ್ಟನೆ ಬಪ್ರೋಪತ್ಯಧಿಕಲಾಭಂ ಕಾಗೆ ಪೆಣ್ಗಾಗೆಯೆಂ ||
ಬೆರಡುಂ ಕಾದಿ ಬಲಕ್ಕೆ ಪೋಗೆ ಶುಭದಂ ಪೋಪಾವರಂಗೆ ಸೋಲ್ಕುಕಡೆಯೊಳ್ |
[4]ಮರಣಂ ತತ್ಸರ್ವ ವಿಪರ್ಯಯಂ ಜಯಶ್ರೀಕರಂ ? || ೨೦ ||

ಟೀ|| ಹರಡೆ, ಹಸುಂಬಂ, (ಶ್ಯೆನಂ) ನವಿಲ್, ಎರಳೆ, ಮಯಣಂ, ಪೋದಗೆ, ಪೊಟ್ಟೆ, (ಶರಕು) ಇವು ಮೊದಲಾದುವು ಊರಿಂ ಪೊಱಮಡುವಾಗಳ್ ಎಡದಿಂ ಬಲಕ್ಕೆ ಪೋಗಲ್ ಊರಂ ಪುಗುವಾಗಳ್ ಎಡದಿಂ ಬಲಕ್ಕೆ ಪೋಗಲ್ [5]ಒಳ್ಳಿತ್ತು—೧೭.

ಟೀ|| ಪಯಣದಲ್ಲಿ ಗಿಡುಗನ ಪಕ್ಷಿ ಎಡದಿಂದ ಬಲಕ್ಕೆ ಪೋಗಲ್, ಊರಂ ಪುಗುವಾಗಳ್ ಬಲದಿಂದಮೆಡಕ್ಕಂ ಪೋಗಲ್ ಉತ್ತಮಂ, ಮೂಗಿಯ ಪಕ್ಕಿ ಊರಂ ಪುಗುವಾಗಳ್ ಅಲ್ಲಾ ಪೊಱಮಡುವಾಗಳ್ ಈಯೆರಡು ವೇಳೆಗಳಲ್ಲಿಯುಂ ಎಡನಾಗಲ್ ಸರ್ವಕಾರ್ಯಸಿದ್ಧಿಯಪ್ಪುದು—೧೮.

ಟೀ|| ಪೆಣ್ಗಾಗೆ, ಬೆಣ್ಣೆಗರಗನ ಹಕ್ಕಿ, ಮುಂಗುರಿ, ನವಿಲ್, ಅಸಗವಕ್ಕಿ, ಅರಗಿಳಿ(ಣಿ), ಕಾರೇಡೆಯ ಹಕ್ಕಿ, ಗಿಡುಗಂ ಈ ಪಕ್ಷಿಗಳ್ ಊರಿಂ ಪೊಱಮಡುವಾಗಳ್, ಊರಂ ಪುಗುವಾಗಳ್ ಎಡದಿಂ ಬಲಕ್ಕೆ ಪೋಗಲುತ್ತಮಂ—೧೯.

ಟೀ|| ಪಯಣದಲ್ಲಿ ಪೆಣ್ಗಾಗೆ ಎಡದಿಂದಂ ಬಲಕ್ಕೆ ಕುಟುಕಂ ಕರ್ಚಿಕೊಂಡು ಪೋಗಲ್ ಕಾರ್ಯಸಿದ್ಧಿಯಪ್ಪುದು. ಆ ಪೆಣ್ಗಾಗೆ ಪಯಣಂ ಮಾಡುವಾತನ ಮುಂದೆ ಆಕಾಶಮಾರ್ಗದಲ್ಲಿ ತನ್ನಂ ತಾನೆ ಪ್ರದಕ್ಷಿಣಮಾಗಿ ತಿರುಗಿ ಬರಲ್ ಅಧಿಕಲಾಭಂ, ಗಂಡುಗಾಗೆ ಪೆಣ್ಗಾಗೆಯೊಂದಲುಮೊಂದಾಗಿ ಕೂಡಿ ಕಾದಿ ಬಲಕ್ಕೆ ಪೋಗಲೊಳ್ಳಿತ್ತು. ಆ ಕಾದುವಲ್ಲಿ ಪೆಣ್ಗಾಗೆ ಸೋಲ್ತೊಡೆ ಪಯಣಂ ಮಾಡುವಾತಂಗೆ ಮರಣಮಂ ಪೇಳ್ವುದು. ಆತನೊರ್ವನೂರಂ ಪ್ರವೇಶಿಸುವಲ್ಲಿ ಈ ಪಿಂದೆ ಪೇಳ್ದ ಶಕುನಂಗಳ್ ಎಡನಾಗಲ್ ವಿಪರ್ಯಯಮಾಗಲ್ ಉತ್ತಮಂ—೨೦.

1 ಶ್ಯೆವಂ. 2 ಬಡೆಯುಡಿಕೆಯುಂ. 3 ಗಮನಾಗಡದಲ್ಲಿ ತಾವಪ್ಪುಗೆ. 4 ಕರಣಂ ತತ್ಸರ್ವ ವಿಪರ್ಯಯ. 5 ಊರ ಪೋಗುವಾಗ ಬಲದಿಂದ ಎಡಕ್ಕೆ ಹಾಯಲು—ಎಂದು ಮತ್ತೆ ಬರೆದಿದೆ.

(ಆನೆಯ ಶಕುನಂ)

ವ|| ಆನೆಯ ಶಕುನಮಂ ಪೇಳ್ವೆಂ —

ಮ|| ಬಿಸುಸುಯ್ಯುತ್ತಿರೆ ಬೆರ್ಚಿ ಕಾಲ್ಪರಿಯೆ ಕಣ್ಮುಚ್ಚಿರ್ದು ಮೆಯ್ಯಿಕ್ಕೆ ಘೋಂ |
ಪಿಸೆ ಕಷ್ಟಂ ಜಯಯಾತ್ರೆಯೊಳ್ ಬಲವ ಕುಂಭಂ ಪೇಱಿ ಕಯ್ಯೆತ್ತಿ ಗ ||
ರ್ಜಿಸೆ ಸನ್ನಾಹಮುನಿಕ್ಕುವಲ್ಲಿ ಕರದಿಂದು ಶೀಕರಂ ಪೊಣ್ಮೆ ಸಂ |
ತಸದಿಂದಂ ಮುದಮುಣ್ಮೆ ವೈರಿಜನತಾ ನಿರ್ಧಾರಣಂ ವಾರಣಂ || ೨೧ ||

(ಅಶ್ವಶಕುನಂ)

ವ|| ಅಶ್ವಶಕುನಮಂ ಪೇಳ್ವೆಂ —

ಚಂ|| ಬಲಮುಱಿದಿರ್ಪೊಡಂ ದೆಸೆಗೆ ಬೆರ್ಚುವೊಡಂ ಮಲಮೂತ್ರ ಬಾಷ್ಪಸಂ |
ಕುಲಮೊಡವೋಪೊಡಂ ಹರಿಯಧೀಶನ ಸೋಲಿಕುಮೇಱುವಲ್ಲಿ ಸಂ ||
ಚಲಿಸದೆ ನಿಲ್ವೊಡಂ ಕಟರ್ದು ಪೆರ್ಚುವೊಡಂ ಬಲಚೇಷ್ಟೆಗೆಯ್ವೊಡಂ |
ಗೆಲಿಸುಗುಮಾವ ಸಂದೆಯುಮು (ಮಿಲ್ಲದಧೀಶನುಮಂ) [1]ಮಹಾಜಿಯೊಳ್ || ೨೨ ||

(ಶುನಕಶಕುನಂ)

ವ|| ಶುನಕ ಶಕುನಮಂ ಪೇಳ್ವೆಂ —

ಚಂ|| ಬಲದೆಸೆಡೆಕ್ಕೆ ಪೋಗೆ ಪರಿದುದ್ದಮನೇಱಿರೆ ಸಾರ್ದು ಶಾಂತದೊಳ್ |
ನಿಲೆ ಬಲಚೇಷ್ಟೆಗೆಯ್ಯೆ ಮನಸಂತಸದಿಂ ವಿವಿಧಾನ್ನ ಭಕ್ಷ್ಯಮಂ ||
ನೆಲೆ ನಡುವಟ್ಟೆಯೊಳ್ [2]ಕೆಲಸಿ ಮೂತ್ರಿಸೆ ಪೇರಡಿ ತನ್ನನಟ್ಟಿಯಿಂ |
ನಲಿನಲಿದಾಡೆ ಪೋದ ಮನುಜಂ ಪಡೆಗುಂ [3]ತನಗಿಷ್ಟಸಿದ್ಧಿಯಂ || ೨೩ ||

ಟೀ|| ಅರಸಂ ದಂಡಯಾತ್ರೆಯಂ ಮಾಡುತ್ತಿರ್ಪ ವೇಳೆಯಲ್ಲಿ ಆನೆಗಳ್ ಅವಾಗಳುಮಾವು ಸಿರಂ ಬಿಟ್ಟು ಸುಯ್ಯುತ್ತಿರಲ್ ಬೆರ್ಚಿ ಓಡಲ್, ಕಣ್ಗಳಂ ಮುಚ್ಚಿಕೊಳಲ್, ಮಗ್ಗುಲಿಕ್ಕಲ್, ತೂಂಕಡಿಸಲ್ ಈ ಮರ್ಯಾದೆಯ ಚೇಷ್ಟೆಗಳಂ ಮಾಡುತ್ತಿರಲ್ ಪಯಣಂ ಮಾಳ್ಪ ಅರಸಿಂಗೆ ಒಳ್ಳಿತಲ್ಲ. ಆನೆ ಬಲದ ಕುಂಭಸ್ಥಳಮಂ ಸೊಂಡಿಲಲ್ಲಿ ಮುಟ್ಟಿಕೊಳಲ್, ಸೊಂಡಿಲಂ ಮೇಲಕ್ಕೆ ನೆಗಹಿಕೊಳಲ್, ಧ್ವನಿಮಾಡಿ ಗರ್ಜಿಸಲ್ ಕಾಳೆಗಮಪ್ಪುದು. ಆ ಆನೆ ಸೊಂಡಿಲಿಂದಮುದಕಮಂ ಚೆಲ್ಲಲ್ ಮದಂದೋಱುತ್ತಿರಲ್ ಈ ಶಕುನದಿಂದೆ ವೈರಿರಾಯರಂ ಸೀಳ್ ಬಿಸುಡುವ (ಹಾಯ್ಕುವ) ಗೆಲ್ಲಮಂ ಕುಡುವುದು—೨೧.

ಟೀ|| ಅವನೊರ್ವಂ [4]ಕಾದುವೆನೆಂದು ಕುದಿರೆಯನೇಱುವಲ್ಲಿ ಸ್ವರ(ಬಲ)ಹೀನವಾಗಲ್ ಅತ್ತಿತ್ತ ಬೆರ್ಚಲ್, ಲದ್ದಿಯನಿಕ್ಕಲ್, ಗತ್ತಮಂ [6]ಪಾಲಿಸಲ್ ಈ ಮೂಱುಮೊಂದೇ ಬಾರಿಯಾಗುಹ, ಅಲ್ಲಾಡಿಸುಹ, ಇಂತಹ ಚೇಷ್ಟೆಗಳಂ ಮಾಡಲ್ ಆ ಕುದಿರೆ ಸೋಲಮಂ ತರ್ಪುದು, ಅಲ್ಲಾ ಚಂಚಲಮಾತ್ರಮಿಲ್ಲದೆ ಸ್ಥಿರಮಾಗಿರುಹ, ಉಪ್ಪರಿಸುಹ, ಬಲಚೇಷ್ಟೆಯಂ ಮಾಡುಹ ಈ ಗುಣಂಗಳಿಂದೆ ಈ ಕುದಿರೆ ಮಹತ್ತಪ್ಪ ಕಾಳೆಗದೊಳಗೆ ತನ್ನನೇಱಿದಾತಂಗೆ ಗೆಲ್ಲಮಂ ಕುಡುವುದು—೨೨.

ಟೀ|| ಅವನೊರ್ವ ಶಕುನಮಂ ನೋಳ್ಪಲ್ಲಿ ಶುನಕನೆಡದಿಂದೆ ಬಲಕ್ಕಂ ಪೋಗಲ್, ಉದ್ದ

1 ಮಹಾಜಿಯೊಳ್ ಜಯಿಸುಗುಂ. 2 ಕರಳ್ಕೆಲಸಿ. 3 ತನಗಿಷ್ಟ. 4 ಕಾದೇನೆಂದು. 5 ನಿಕ್ಕುಹ. 6 ಪಾಳಿಸುಹ.



ಮಲ್ಲಿಕಾಮಾಲೆ— ಹಿಂದೆ ವಕ್ರಿಸೆ ಮುಂದೆ ತಿರ್ದೆ [1]ಸವ ಂತು ಮುಂದೆ ಧನಕ್ಷಯಂ |
ಹಿಂದೆ ಮೋಣಾಗು ಮುಂದೆ ವಕ್ರಿಸೆ ಹಿಂದೆ ತಿರ್ದೆ ಶುಭಾವಹಂ ||
ಹಿಂದೆ ಪೋಲ್ವುದು ಮುಂದೆ ಮೋಣ್ ಪುಗೆ (ಹಿಂದೆ [2]ನಿಟ್ಟಿಸಿ ಪೊಕ್ಕೊಡಂ |
ಬಂದೊಡಂ ತನುವಿತ್ತನಾಶನಮೆಂಗುಮಾಸರಮಾತ್ಮಜಂ || ೨೪ ||

ಚಂ|| ಮದುವೆಗೆ ನೋಡೆ [3]ಬಂದೆಡಕೆ ತಮ್ಮೊರಡುಂ ನಲಿದಾಡೆ ಕೂಡಿ ಶಾಂ |
ತ[4]ದೊಳರೆ ಸೇರ್ದು ಸಂತಮಿರೆ ನಿಂದೆಡಚೇಷ್ಟೆಗೆಯ್ಯೆ ಶೋಭನ ||
ಪ್ರದ ಮೊಲೆಯೊಳ್[ಪೊಸಂತಿಲೊಳಗಂ] ತಲೆಯಿಕ್ಕಿರೆ ಮಾಣಮೊಳೆ [5]ಮೋಣ್ |
ಪದದೊಳೆ ಭೂಮಿಯಂ ಕೆರೆದು ವಿಷ್ಟಿಸೆ ಮಾಣ್ಬುದು ತದ್ವಿವಾಹಮಂ || ೨೫ ||

ತರಳಂ|| ಉಡಿಸೆ ಮೂತ್ರಿಸೆ ನಕ್ಕೆ ಪೊರ್ಕುಳ ತ ಣಮಂ ಬಲಚೇಷ್ಟೆಯಂ |
ಕುಡೆ ಬಲಾಶ್ರಿತನಾಗೆ ಪೆಣ್ಣೊಡಗುಂಡೆಯೇಸಮಂದಲ್ಲಿ ಕಾ ||
ಲಿಡೆ ಪೊಕಲ್ವು ರ[7]ದೇಟೆ ಸುಸ್ವರದೂಳೆ ಪೆರ್ಮುಟೆ ಕೊಳ್ಗುಮಂ |
ಗೆಡದ ಚೇಷ್ಟೆಗೆಯಲ್ಕೆ [8]ವಿಷ್ಟಿಸೆ ಸುಯ್ಯೆ ಪೇರಡಿ ನಿಂದಿತಂ || ೨೬ ||

ಮನೆಂಱು ಪತ್ತಲ್ ಎರ್ಡಡೆಗೆ ಪೋದುದು ಶಾಂತದಿಕ್ಕಿನಲ್ಲಿ ನಿಲಲ್, ಬಲದಭಾಗದ ಚೇಷ್ಟೆಯಂ ಮಾಡಲ್ ತನ್ನ ಸಂತೋಷದಿಂದೆ ತನಗೆ ಸಲ್ವಂತಹ ನಾನಾ ಪ್ರಕಾರದ ಆಹಾರಮಂ ಕೊಳಲ್, ಅಡ್ಡವಾಯುತ್ತೆ ನಡುತಟ್ಟೆಯಲ್ಲಿ ನಿಂದು ಮೂತ್ರಿಸಲ್ ಪೆಣ್ಣಾಯ್ ಗಂಡು ನಾಯ್ಗಳ್ ತಮ್ಮ ಮೇಳದಿಂದೆ ಕೂಡಿ ನಲಿದಾಡುತ್ತಿರಲ್ ಈ ಶಕುನದಿಂದೆ ಪೋಪಂತಹ ಮನುಷ್ಯಂಗೆ ನೆನೆದ ಕಾರ್ಯ ಸಿದ್ಧಿ ಅಪ್ಪುದು—೨೩.

ಟೀ|| ಅವನೊರ್ವಂ ಶಕುನಮಂ ನೋಡುವಂಗೆ ಹಿಂದಣ ಭಾಗದಲ್ಲಿ ನಾಯ್ ತಡೆದು ಮುಂದೆ ತಿರ್ದುತ್ತಿರಲ್ [9]ಧನಕ್ಷಯಮಂ ಪೇಳ್ವುದು. ಆ ನಾಯ್ ಮುಂದೆ ತಡೆದು ಹಿಂದೆ ನಾನೆ ತಿರ್ದಲ್ ಒಳ್ಳಿತ್ತು. ಆ ತಿರ್ದಿದ ಶ್ವಾನಂ ಹಿಂಗೊಂಡು ಬರಲ್ ಅಲ್ಲಾ ಮುಂದೆ ಬರಲ್, ಅಲ್ಲಾ ಅಡ್ಡ ನಿಲಲ್, ಅಲ್ಲಾ ಮುಂದೆ ನಡೆಯಲ್, ವಿಷ್ಟಿಸಲ್, ಪೊಕ್ಕು ಅಡ್ಡಂ ಬಂದೊಡೆ ಆ ಪಯಣದಾತಂಗೆ ಅರ್ಥಪ್ರಾಣದಿಂದೆ ಹಾನಿಯಂ ಪೇಳ್ವುದು—೨೪.

ಟೀ|| ಅವನೊರ್ವಂ ವಿವಾಹಕಾರ್ಯಕ್ಕೆ ಅರ್ಚಿಸಿ ನೋಡಲ್ ಶ್ವಾನಂ ಬಲದಿಂದೆಡಕ್ಕೆ ಪಾಯಲ್ ಪೆಣ್ಗಂಡುಮೊಳಗೆ ತಾವು ಸಮ್ಮೇಳದಿಂದಿರಲ್ ಅಲ್ಲಾ ಪೆಣ್ಗಂಡುಮೆರಡುಮೊಂದಾಗಿ ಇರಲ್, ಶಾಂತದಿಕ್ಕಿನಲ್ಲಿ ಆಯೆರಡು ನಾಯುಂ ಸೇರಿರಲ್ ಎಡಚೇಷ್ಟೆಯಂ ಮಾಡಲ್ ಈ ಪೇಳ್ದ ಚೇಷ್ಟೆಗಳಿಂದೆ ಆ ವಿವಾಹಕಾರ್ಯ ಸಿದ್ಧಿಯಪ್ಪುದು. ಅಲ್ಲಾ ಒಲೆಯೊಳಗೆ ಹೊಸ್ತಿಲ ಮೇಲೆ ತಲೆಯಂ ಸುರುಟಿಕ್ಕೊಂಡು ಮಲಗಿರಲ್ ಬಿಡದೆ [10]ಒಳರುತ್ತಿರಲ್ ಒಂದು ಠಾವಿನಲ್ಲಿ ಸ್ಥಿರಮಾಗಿ ನಿಲ್ಲದೆ ಅತ್ತಿತ್ತ ಪರಿದಾಡಲ್ ಅಲ್ಲಾ ಭೂಮಿಯಂ ಕೆರೆದು ಅಲ್ಲಿ ವಿಷ್ಟಿಸಲ್ ಈ ಶಕುನಗಳಿಂದೆ ಆ [11]ಮಾಟ್ಪೆನೆಂದು ನೆನೆದಿಹಂತಹ (ವಿವಾಹ) ಕಾರ್ಯ ಸಿದ್ಧಿಯಾಗದು—೨೫.

ಟೀ|| [12]ಮಲಿಕೆಯಿಲ್ಲದಿರೆ ಅರ್ಚಿಸಿ ನೋಡಲ್ ಶ್ವಾನಂ ಉಡಿಕೆಯಾಗಲ್, ಅಲ್ಲಾ ಮೂತ್ರ

1 ಸಮೃದ್ಧಿ. 2 ವಕ್ರಿಸೆ. 3 ಬಂದೆಡ ಸೇರಿ. 4 ದೊಳರಲ್ಕೆಲೆಗೊಂಡು. 5 ಭೂಮಿಯಂ ಪರಿವಿ ವಕ್ರಿಸೆ ಮಾಣ್ಬುದು. 6 ಯೆಸಮೆಮರ. 7 ದೆಗೆ. 8 ವಕ್ರಿಸೆ. 9 ಲಾಭವ. 10 ಪುರುಳುತ್ತಿರಲ್. 11 ಮಾಡೇನೆಂದು. 12 ಮಳೆಯಲ ದೊರೆ ಎಂದು.

ಕಂ|| ಉಡಿಸೆ ಬಲಚೇಷ್ಟೆಯಂ [1]ಕುಡೆ |
ಕಡೆವಾಯುಂ ನಕ್ಕಿ ಪೊರ್ದೆ ಶಾಂತಮನಿದಿರೊಳ್ ||
ನಡೆ ಪರಡೆಯಾರಂ ಬ |
ರ್ಕೊಡರ್ಚೆ ನಡೆವಲ್ಲಿ ಭೂಮಿ ತಪ್ಪದೆ ಬೆಳೆಗುಂ || ೨೭ ||

ಚಂ|| ಕುಸಿಯದೆ ಕಾಳೆಗಕ್ಕೆ ನಡೆಯಂದೆಡೆಯೊಳ್ ಶುನಕಂ ಕಡಂಗಿ [2]ವ |
ಕ್ರಿಸೆ ಬಲಚೇಷ್ಟೆಗೆಯ್ಯೆ ನೃಪಚಿಹ್ನದಮೇಲೆಡಗಾಲನೆತ್ತಿ ಮೂ ||
ತ್ರಿಸೆ ಜಯಮಕ್ಕು [3][ಮೂಗಟಿಸೆ] ಜೋಂಪಿಸೆ ಸಿಂಪೆಡಚೇಷ್ಟೆಗೆಯ್ಯೆ ಶಂ |
ಕಿಸುತಿರೆ ಕರ್ಣಮಂ ಬಿದಿರೆ ತಾನೆ ಪರಾಜಯಮಕ್ಕುಮಾಜಿಯೊಳ್ || ೨೮ ||

ಪೃಥ್ವಿ|| ರು[ಜಾ]ರ್ತನ ಗೃಹಕ್ಕೆ ಪೋಪೆಡೆಯೊಳಂ ಬಿದಿರ್ದಂಗಮಂ |
ವಿಜೃಂಭಿಸೆ ವಿಚೇಷ್ಟೆಗೆಯ್ಯೆ ಪುಗೆ ದೀಪ್ತಮಂ [4]ಬೆ |
ರ್ಚೆ ಜಾಗರ ಮದಾನನಂ ನಿರುಜನೆಂಗೆ ಪೇಣ್ ಕಿರ್ದೆ ಸು |
ಯ್ಯೆ ಜೋಂಪಿಸೆ ಸಿಕೃಷ್ಟಮಪ್ಪುವನೆ ಮುಟ್ಟೆ ಸಾವೆಯ್ದುಗುಂ || ೨೯ ||

ಸಲ್ ಅಲ್ಲಾ ಪೊರ್ಕುಟಿಸ್ಥಾನಮಂ ನಕ್ಕಿಕೊಳುತ್ತಿರಲ್, ಬಲಚೇಷ್ಟೆ ಮಾಡಲ್, ಬಲಭಾಗದಲ್ಲಿ ಬಂದು ನಿಲ್ಲಲ್ ಪೆಣ್ಣಾಯ್ಗಂ ಕೂಡಲ್ ಇದಿರಲ್ಲಿ ಒಳ್ಳಿಯಮರಗಾಮರನ ಮೇಲೆ ಕಾಲಂ ನೀಡಲ್ ಮಲಂಗಿದ ತಾವಿಂದೇಟಲ್ ಒಳ್ಳಿಹ ಸ್ವರದಿಂದೂಳಲ್ ಈ ಶಕುನದಿಂದೆ ಸುವೃಷ್ಟಿಯಪ್ಪುದು. ಅಲ್ಲಾ ಎಡಚೇಷ್ಟೆ ಮಾಡಲ್, ವಿಷ್ಟಿಸಲ್ ಸುಯ್ಯಲ್ ಈ ಮರ್ಯಾದೆಯ ಚೇಷ್ಟೆಯಂ ಮಾಡಲ್ ವೃಷ್ಟಿಯಾಗದೆಂದಱಿವುದು—೨೬.

ಟೀ|| ಆವನೊರ್ವಂ ಬೇಸಾಯಮಂ ಮಾಳ್ಪೆನೆಂದು ನಡೆವಲ್ಲಿ ಶ್ವಾನಂ ಎಡದಿಂದೆ ಬಲಕ್ಕೆ ಪಾಯಲ್, ಬಲಚೇಷ್ಟೆಯಂ ಮಾಡಲ್, ತನ್ನ ಕಟವಾಯಂ ನಕ್ಕಲ್ ಶಾಂತದಿಕ್ಕಂ ಸಾರಲ್ ಇದಿರಾಗಿ ಬಂದು ಮಲಗಲ್ ಈ ಶಕುನಗಳಿಂದಾ ಭೂಮಿ ಚೆನ್ನಾಗಿ ಬೆಳೆವುದು—೨೭.

ಟೀ|| ಆವನೊರ್ವಂ ಕಾಳೆಗಕ್ಕೆ ನಡೆವಲ್ಲಿ ಶ್ವಾನಂ ಬಲದಿಂದೆಡಕ್ಕೆ ಪಾಯಲ್, ಬಲಚೇಷ್ಟೆಯಂ ಮಾಡಲ್, ಮುಂದೆ ಮಲಗಲ್, ಚಾಮರಂ, ಜೋಡು (ಕವಚಂ) ಹಲ್ಲಣಂ, ಪಕ್ಕರಿಕೆ ಮುಂತಾದ ರಾಜಚಿಹ್ನಂಗಳ ಮೇಲೆಡಗಾಲೆತ್ತಿ ಮೂತ್ರಿಸಲ್ ಜಯಮಪ್ಪುದು. ಅಲ್ಲದೆ, ಆಗುಳಿಸಲ್, ತೂಂಕಡಿಸಲ್ ಇದಿರಾಗಿ ಬಂದು ಎಡಚೇಷ್ಟೆ ಮಾಡಲ್, ಹಿಂದುಮುಂದು ನೋಡಿ ಶಂಕಿಸುತ್ತಿರಲ್, ಕಿವಿಗಳಂ ಕೊಡಹಿಕೊಳಲ್ ಇವಱಿಂ ಸೋಲಮಪ್ಪುದು—೨೮.

ಟೀ|| ಆವನೊರ್ವಂ ರೋಗಿಯಂ [5]ನೋಳ್ಪೆನೆಂದು ಆತನ ಮನೆಗೆ ನಡೆಯಲ್ ಶ್ವಾನಂ ತನ್ನ ದೇಹಮಂ ಕೊಡಹಿಕೊಂಡುಚ್ಛ್ವಾಸದಿಂ ಬೆರ್ಚುತ್ತಿರಲ್, ಚೇಷ್ಟೆಗಳಂ ಮಾಡಲ್, ದೀಪ್ತಸ್ಥಾನಮಂ ಪುಗಲ್, ಬೆರ್ಚಿ ಓಡಿಪೋಗಲ್, ಆರೋಗಿ [ನೀರೋಗಿ]ಯಪ್ಪಂ. ಅಲ್ಲದೆ ಎಡದಿಂದೆ ಬಲಕ್ಕೆ ಪಾಯಲ್, ಸುಯ್ಯಲ್, ತೂಂಕಡಿಸಲ್, ಅಲ್ಲನಂಥಾ ಸ್ಥಾನಮಂ ಮುಟ್ಟಿಕೊಳಲ್ ಆ ರೋಗಿಗೆ ಕಷ್ಟಮಂ ಪೇಳ್ವುದು—೨೯.

1 ಯಮಮಾಡೇನೆಂದು. 2 ಹಿಂದೆ ವೃಷ್ಟಿಸೆ ಎಂಬೆಡೆಗಳಲ್ಲೆಲ್ಲಾ ವಕ್ರಿಸೆ ಎಂದಿದೆ. ಅದುಮರಿಂದ, ಇಲ್ಲಿಯೂ ವೃಷ್ಟಿಸೆ ಎಂದಿರಬಹುದು. ಟೀಕಾಕಾರನು ಬಲದಿಂದೆಡಕ್ಕೆ ಹಾಯಲ್ ಎಂದು ಅರ್ಥ ಬರೆದು ಮುಂದೆ ಮಲಗಲ್ ಎಂಬುದನ್ನು ಹೆಚ್ಚಾಗಿ ಸೇರಿಸಿರುವನು. 3 ಗ್ರಂಥ ನಿರಂತರವಾಗಿ ಪ್ರತಿಯಲ್ಲಿ ಬರೆದಿದೆ, ಟೀಕೆಯನ್ನು ಸೇರಿಸಿ ಪೂರ್ಣಗೊಳಿಸಿದೆ. 4 ಪೆರ್ಚಿ. 5 ನೋಡುವೆನೆಂದು.



ಚಂ|| ಉದಯದೊಳೂರ ನಟ್ಟನಡುವಿರ್ದು ನಕ್ಷತ್ರಿ ಬಿಟ್ಟಗುಟ್ಟೆ ಪಾ |
ಣದೆ ಶುನಕಂಗಳೂಳ್ವುದವನೀಪತಿಗಕ್ಕುಮಪಾಯಮಪ್ಪದು ||
ಪ್ಪುದನಡರ್ದೇಱಿ ಕೇಱಿ ಕರೆಯುತ್ತಿರೆ ಪೆರ್ಮಳೆಯಕ್ಕುಮಬ್ದಕಾ |
ಲದೊಳೆನಸುಂ ನಯಂ ಪಸವು [ಮಂತಿರೆ] ಕೂಡುಗುಮನ್ಯಕಾಲದೊಳ್ || ೩೦ ||

ಮ|ಸ್ರ|| ನಡೆವಾಗಳ್ ಕಾಲ್ಗಳಂ ಮುಟ್ಟೆದೊಡೆ ಪಯಣಮಿಲ್ಲೆಂಗೆ ಮೇಣ್ ಸಂತಮಿರ್ದೊಂ |
ದೆಡೆಯೊಳ್ ಪಿಂಗಾಲ್ಗಳಂ ಮುಟ್ಟಿದೊಡೆ ಪಯಣಮುಂಟೆಂಗೆ ಶಾಂತಾಶ್ರಿತಂ ಬಂ ||
ದೆಡಗಾಲಂ ಮುಟ್ಟೆ ಲಾಭಂ ಬಲದ ಚರಣಮಂ ಮುಟ್ಟೆ ದುಃಖಾವಹಂ ಪೇ |
ರಡಿ ಕೆಯ್ಯಂ ಕಾಲುಮಂ ಮುಟ್ಟೆದೊಡೆ ಭಯಮಾಕಸ್ಮಿಕಂ ತಾನದಕ್ಕುಂ || ೩೧ ||

ಕಂ|| ಶುನಕನೊಡಗೂಡಿ ಕಿರ್ದ |
ಶುನಕಿಗಮಾಕಿರ್ದೆ ಕಿರ್ದು [2]ಬೆನ್ನಡೆಕಂದಾ ||
ಶುನಕಂ ವಕ್ರಿಸಿದ ನಯಂ |
ಶುನಕಿಯ ಕಿರ್ದಕ್ಕುಮೆಂದನಚಳಿತವಚನಂ || ೩೨ ||

— ಇಂತು ಶುನಕಶಕುನಂ —

ಇಂ ಪಿಂ ಗ ಳಿ ಯ ಶ ಕು ನ ಂ

ವ|| ಪಿಂಗಲಿಯ ಶಕುನಮಂ ಪೇಳ್ವೆಂ —

ಟೀ|| ಉದಯಕಾಲದಲ್ಲಿ ಶುನಕಂಗಳ್ ಊರ ನಟ್ಟನಡುವೆ ನಿಂತು ಸೂರ್ಯನತ್ತ ಮುಖವಾಗಿ ನಿಂತು ಊಳಲ್ ಅರಸಿಂಗೆ ಅಪಾಯಮಂ ಪೇಳ್ವುದು. ವರ್ಷಾಕಾಲದಲ್ಲಿ ಉನ್ನತಮನೇಱಿ ಊಳಿಡಲ್ (ಮಹಾ) ವೃಷ್ಟಿಯಪ್ಪುದು, ಅಲ್ಲದೆ ಮಾಗಿ, ಬೇಸಗೆಕಾಲಗಳಲ್ಲಿ ಉನ್ನತಮನೇಱಿ ಊಳಿಡಲ್ ದುರ್ಭಿಕ್ಷಮಂ ಪೇಳ್ವುದು—೩೦.

ಟೀ|| ಪಯಣವಾದಾತಂ ಶುನಕನನರ್ಚಿಸಲ್ ಆ ಶುನಕಂ ನಡೆಯುತ್ತೆ ತನ್ನ ಮುಸುಡಿಂದೆ ಕಾಲ್ಗಳಂ ಮುಟ್ಟಿಕೊಳಲ್ ಪಯಣಮಿಲ್ಲೆಂದಱಿವುದು. ಸುಮ್ಮನಿರ್ದು ತನ್ನ ಪಿಂಗಾಲಂ ಮುಟ್ಟಿಕೊಳಲ್ ಪಯಣಮುಂಟೆಂದು ಪೇಳ್ವುದು, ಶಾಂತದಿಕ್ಕಿನಲ್ಲಿ ಬಂದು ನಿಂತು ತನ್ನೆಡಗಾಲಂ ಮುಟ್ಟಿಕೊಳಲ್ ಲಾಭಮಂ ಪೇಳ್ವುದು. ಅಲ್ಲಾ ಬಲಗಾಲಂ ಮುಟ್ಟಿಕೊಳಲ್ ದುಃಖಮಂ ಪೇಳ್ವುದು. ಅಲ್ಲಾ ಆ ನಾಯ್ ಕೆಯ್ಕಾಲ್ಗಳೆರಡುಮಂ ಮುಟ್ಟಿಕೊಳಲಾಕಸ್ಮಿಕದಿಂ ಶತ್ರುಭಯಮಂ ಪೇಳ್ವುದು—೩೧.

ಟೀ|| ಆವನೊರ್ವಂ ಶಕುನಮಂ ನೋಡುವಲ್ಲಿ ಗಂಡುನಾಯ್ ಪೆಣ್ಣಾಯ್ ಸಹಿತವಾಗಿ ಕಿರ್ದಲ್ ಆ ಗಂಡುನಾಯ್ ಕಿರ್ದಿನವೊಳಗೆ ಅಡಂಗುವುದು, ಆ ಪೆಣ್ಣಂ ಬಿಟ್ಟು ಗಂಡುವೊಂದೆ ಕಡೆಯಲ್ ಆ ಪೆಣ್ಣಾಯ್ ಕಿರ್ದಿನ ಪ್ರಯೋಜನವಾಗಿಪ್ಪುದು—೩೨.

1 ಬೆನ್ನಡ.

ಚಂ|| ಕಡಿದೊಣಗಿರ್ದ ಬೆಂದುಡಿದ ಕೊಂಬುಗಳಿಲ್ಲದ ಬಳ್ಳಿಸುತ್ತುಗೊಂ |
ಡಡರಿದ ಬೆಮ್ಮರಂಗಳೊಡನೊಂದಿದ ಮೂರ್ಬಳಸಿಲ್ಲದಿರ್ಪ ಪು ||
ತ್ತಿಡಿದಿರ್ದ ಬಂಜೆ ಕೈಪೆಮರನೊಂದದ ಬಾಧೆಗಳೊಂದುವಿಲ್ಲದಿ |
ರ್ಪೆಡೆಗಳ ಸದ್ವಿಶಾ ಊರು? ಪಶ್ಚಿಮದೊಳ್ ನೆಲಸಿರ್ದು ಲೀಲೆಯಿಂ || ೩೩ ||

ಕಂ|| ಜಗತಿ ? ತಿರ್ದುವೊಡಂ ಶ |
ತ್ರುಗಳಟಪಂ ಬಿರ್ದಿನರ ಬರವಂ ಮುಟಿಯಂ ಕಾ ||
ಳೆಗವುಂ ರುಜೆಯುಂ ಸಾವಂ |
ನೆಗಟಿಸುಗುಂ ಮೂಡಜೆಂದಿನೋತ್ಕರನುದ[1]ಯಂ || ೩೪ ||

— ಇಂತು ಪಿಂಗುಲಿಯ ಶಕುನಂ —

(ವಾಯಸ (ಕಬ್ಬಿಲೆಯ) ಶಕುನಂ)

ವ|| ಇನ್ನು ವಾಯಸ ಶಕುನವುಂ ಪೇಲ್ವೆಂ —

‡ ಕಂ|| ಧನಲಾಭಮು[ನೊಳ್ಪುಣಿಸಂ |
ಕನಕವು]ನೋಪವರಕೂಟಮುಂ ಬೇವಸಮುಂ ||
ಮನಕತಮುನಾಜಿಯುಂ ರುಜೆ |
ಯನೆಯ್ದೆ ಕಬ್ಬಿಲೆಯೆ ತಿಳಿಪುಗುಂ ಮುಂಬಗಲೊಳ್ || ೩೫ ||

ಕಳಮುಂ ಕಾಳೆಗಮುಂ ಬಹು |
ಜಳಮುಂ ಬಿರ್ದಿನರವೊಸಗೆಯುಂ ಲಾಭಮುನೋ ||
[3]ಪಳ ಬರವನೊಳ್ಪನಱಿಪುಗು |
ಮಿಳೆಗೆಲ್ಲಂ ನೆಗೞೆ ವಾಯಸಂ ನಡುವಗಲೊಳ್ || ೩೬ ||

ಟೀ|| ಧನಲಾಭಂ, ಪ್ರಶಸ್ತಾಹಾರಂ, ಬಂಗಾರಂ, ತನಗೆ ಬರ್ಪ ಇಷ್ಟರ ಕೂಟಂ, ಉಬ್ಬೆಗಂ, ದುಃಖಂ, ಕಾಳೆಗಂ [2]ವ್ಯಾಧಿ ಇವಂ ಜಾವದ ವೇಳೆಯಲ್ಲಿ ಕಬ್ಬಿಲೆ ಕರೆಯಲ್ ಈ ಪೇೞ್ದ ಫಲಂಗಳಂ ಪೇೞ್ವುದು—೩೫.

ಟೀ|| ಕಳಮುಂ, ಕಾಳೆಗಮುಂ, ಜಳಮುಂ, ನಂಟರ್ಕಳಂ, ಉತ್ಸಾಹವಾರ್ತೆಯುಂ, ಲಾಭಕಾರ್ಯಮುಂ, ತನಗೆ ಪ್ರಿಯರಾಗಿರ್ದ ಸ್ತ್ರೀಯರ್ಕಳ ಬರವಂ, (ಬಹುಮುೞೆಯುಂ) ಮಧ್ಯಾಹ್ನದ ಕಬ್ಬಿಲೆ ಪೇೞ್ವುದು—೩೬.

1 ಯದೊಳ್. 2 ವಿವ್ಯಾದಿಯನು. 3 ನೊಳಪಳ ಬರವುನೊಳ್ಪನಱಿಪುಗುಮುೞೆಗೆಲ್ಲಂ ನೆಗೞೆ (ಟೀಕಾಕಾರನು ಈ ಮೂಲಪ್ರತಿಯ "ಮುೞೆಗೆಲ್ಲಂ" ಪಾಠವನ್ನು ನಂಬಿ, ಬಹುಮುೞೆ ಎಂಬರ್ಥವನ್ನು ಸೇರಿಸಿರುವನು. ಅಱಿಪುದುಂ ಎಂದು ವಾಕ್ಯ ಮುಗಿದ ಬಳಿಕ ಆ ವಾಕ್ಯಕ್ಕೆ ಸೇರಿದ ಮತ್ತೊಂದು ಪದವಿರಲಾರದೆಂಬ ತಿಳಿವು ಟೀಕಾಕಾರನಿಗಿಲ್ಲವಾಗಿದೆ.

* ಈ ಪದ್ಯಗಳಿಗೆ ಟೀಕೆಯಿಲ್ಲ, ೩೩ನೆಯ ಪದ್ಯವಾದ ಬಳಿಕ ವಾಯಸ ಶಕುನಮುಂ ಪೇೞ್ವೆಂ ಎಂದಿದೆ. ಮತ್ತು ೩೪ನೆಯ ಪದ್ಯದಿಂದ ಪದ್ಯಸಂಖ್ಯೆ—೧, ೨ ಎಂದು ಆರಂಭಿಸಿದೆ.

‡ ಈ ಕಂದದಲ್ಲಿ ಗ್ರಂಥ ಪಾತವಿದೆ; ಗ್ರಂಥ ನಿರಂತರವಾಗಿದೆ; ಟೀಕೆಯನನುಸರಿಸಿ ಪೂರ್ಣಗೊಳಿಸಿದೆ.



ಕಂ|| ಸವನಿಸುಗುಂ ರಿಪುಭಯಮಾ |
ಹವಮುಬ್ಬೆಗಮಧಿಕವೃಷ್ಟಿ ರುಜೆ ವಿಭವಂ ವೈ ||
ರಿವಿನಾಶಂ ಧನಧಾನ್ಯ |
ಪ್ರವೃದ್ಧಿ [1]ಕಬ್ಬೇಳೆ ಕರೆಯೆ ಯಾಮತ್ರಯದೊಳ್ || ೩೭ ||

ಮರಣಂ ಬೇವಸಮಿಷ್ಟರ |
ಬರವಂಗನೆಯ ಕೂಟಮೊಳ್ಪುಣಿಸಧಿಕಂ ||
ಸಿರಿ ಪರವೋತ್ಸಾಹಮುಮಂ |
ದೊರೆಕೊಳಿಸುಗುಮಸ್ತಸಮಯದೊಳ್ ಕೃಷ್ಣಖಗಂ || ೩೮ ||

ಶ್ರೀನೆಲಸುವೊಡಂ ಕರಿತುರ |
ಗಾನೀಕದ ಬರವನಿಷ್ಟಸುಖಮುಂ ರಿಪುಸಂ ||
ಧಾನಮನೊಳ್ಪಂ ಬ್ರಹ್ಮ |
ಸ್ಥಾನದೊಳಿನತನಯನೊಳೆ ಪೇೞ್ವುದು ಸತತಂ || ೩೯ ||

* ಸಂ|| ದಿಗ್ವಾಯಸಸ್ವನೈರ್ಯುಕ್ತಂ [ಸ್ಥಿತ] ಸ್ಥಾನಸಮನ್ವಿತಂ ||
ಅಷ್ಟಾಭಿಸ್ತು ಹರೇದ್ಭಾಜ್ಯಂ ಶೇಷಂ ವರ್ಗಂ ಸಮಾದಿಶೇತ್ || ೧ ||
ಏಕಪಂಚನವಾತ್ಮಾನಂ ದ್ವಿಷಟ್ಕದಶಮನ್ಯತಃ ||
ತ್ರಿಸಪ್ತೈಕಾದಶೋ ಮಿತ್ರಂ ಚತುರಷ್ಟದ್ವಾದಶೋ ರಿಪುಃ || ೨ ||

— ಇಂತು ವಾಯಸಶಕುನಂ —

ಟೀ|| ಪಗೆಗಳ ಕಡೆಯ ಭಯಮುಂ, ಕಾಳೆಗಮುಂ, ಮನಸ್ಸಿಗೆ ಕ್ಲೇಶಮುಂ, ಬಹುಳವೃಷ್ಟಿಯುಂ, ವ್ಯಾಧಿಯುಂ, ಐಶ್ವರ್ಯಮುಂ, ಶತ್ರುಗಳ ಕೇಡಂ, ಧನಧಾನ್ಯದ ಪೆರ್ಚಂ ಮೂಱನೆಯ ಜಾವದಲ್ಲಿ ಕಬ್ಬಿಳೆ ಕರೆಯಲ್ ಈ ಪೇೞ್ದ ಕಾರ್ಯಂಗಳಂ ಸೂಚಿಸುವುದು—೩೭.

ಟೀ|| ಸಾವಿನ ವಾರ್ತೆ, ಉಬ್ಬೆಗಂ, ಮುೞೆ, ನಂಟರ ಬರವು, ಸ್ತ್ರೀಯರ ಕೂಟಂ, ಒಳ್ಳಿತಪ ಊಟಂ, ಬಹುಳೈಶ್ವರ್ಯಂ, ಉತ್ಸಾಹಂ ಇವನಸ್ತಮಯದಲ್ಲಿ ಕಬ್ಬಿಳೆ ಕರೆಯಲ್ ಪೇೞ್ದ ಫಲಮಂ ಸೂಚಿಸುಗುಂ—೩೮.

ಟೀ|| ಐಶ್ವರ್ಯಮುಂ, ಆನೆ ಕುದಿರೆಗಳ ಬರವಂ, ತನ್ನ ನೆನೆದ ಕಾರ್ಯಸಿದ್ಧಿಯುಂ, ಶತ್ರುಗಳ ಸಂಧಾನಮುಂ, ಒಳ್ಳಿಹ ಕಾರ್ಯಮುಂ ಬಹ್ಮಸ್ಥಾನದ ಕಬ್ಬಿಲೆ ಇವಂ ಸೂಚಿಸುವುದು—೩೯.

ಸಂ|| ಟೀ|| ಆ ವಾಯಸಮಿರ್ದ ದಿಕ್ಕಂ, ಕಬ್ಬಿಲೆ ಕರೆದ ಸ್ವರಮುಂ ಕುಳಿತಿರ್ದ ಸ್ಥಾನಮುಂ ಕೂಡಿ ಎಂಟಱಿಂ ಭಾಗಿಸುವುದು, ಉೞಿದ ಶೇಷಮುಂ ವರ್ಗಮೆಂದು ಪೇೞ್ವುದು—೧.

ಟೀ|| ಒಂದು ಸ್ವರಂ, ಐದು ಸ್ವರಂ, ಒಂಬತ್ತು ಸ್ವರಂ ಇವಂ ಕರೆಯಲ್ ತನಗೆ ಪೇೞ್ವುದು—ಎರಡು, ಆಱು, ಪತ್ತು ಈ ಸಂಖ್ಯೆಯ ಸ್ವರಮಂ ಕರೆಯಲ್ ಲೋಗರಿಗೆ ಪೇೞ್ವುದು. ಮೂಱು, ಏೞು, ಪನ್ನೊಂದು ಈ ಸಂಖ್ಯೆಯ ಸ್ವರಮಂ ಕರೆಯಲ್ ತನ್ನ ಮಿತ್ರರ್ಗೆ ಪೇೞ್ವು

1 ಕಬ್ಬಿಳೆ.

* ಎರಡು ಸಂಸ್ಕೃತ ಶ್ಲೋಕಗಳೂ, ಟೀಕೆಗಳೂ ಇವೆ. ಇವು ಗ್ರಂಥಕರ್ತೃವಿನವೋ, ಅಲ್ಲವೋ ಎಂದು ಶಂಕಾಸ್ಪದವಾಗಿದೆ.

(ಇನ್ನು ಪಲ್ಲಿಯ ಶಕುನಂ)

ವ|| ಪಲ್ಲಿಯ ಶಕುನಮಂ ಪೇೞ್ವೆಂ —

ಮಾಲಿನಿ|| ಅೞಿವನುಱಿಯೊಳೇೞಂ ಧೂಮದೊಳ್ ಶ್ರೀಯಪೆರ್ಚಂ |
ನೆಱಲೊಳೊಸಗೆವಾತಂ ಪಂಕದೊಳ್ ತೋಯದೊಳ್ ಕೆ ||
ಯ್ಗೞಿಯೆ ಜಯಮನೊಳ್ಪಂ [ನೋಡಲಾ] ಧಾತ್ರಿಯೊಳ್ ಸಾ |
ರ್ವೞಲನೊದವಕೇಡಂ ಕೆಂಡದೊಳ್ ಪಲ್ಲಿ ಪೇೞ್ಗುಂ. || ೪೦ ||

— ಇಂತು ಪಲ್ಲಿಯ ಶಕುನಂ —

(ಇಱುಹೆಯ ಶಕುನಂ)

ವ|| ಇನ್ನಿಱುಹೆಯ ಶಕುನಮಂ ಪೇೞ್ವೆಂ —

ತರಳಂ|| ಮನೆಯಮಧ್ಯದೊ[ಳರ್ಥ]ಮಿಂದ್ರನೊಳುಬ್ಬೆಗಂ ಶಿಖಿಯೊಳ್ ಸುಹೃ |
ಜ್ಜನ ಸಮಾಗಮಮಂತಕಾಸೆಯೊಳೊಳ್ಪು ನೈಋತಿಯೊಳ್ ಬೞಂ ||
ವನಧಿನಾಥನೊಳಿಷ್ಟಸಿದ್ಧಿ ಸಮೀರನೊಳ್ [1]ಸತಿ ಧನದ(ಯಕ್ಷ)ನೊಳ್ |
ಧನಮುಮೀಶನೊ[ಳಾವಗಂ] ಭಯಮಕ್ಕುಮೆಂದುಮಿಱುಂಪೆಯೊಳ್ || ೪೧ ||

ವ|| ಒಲೆಯೊಳ್ ವಹ್ನಿಭಯಂ ಪ್ರದೀಪದೆಡೆಯೊಳ್ ಸರ್ವಸ್ವನಾಶಂ ಪೊಸಂ |
ತಿಲೆಯೊಳ್[2]........ಘೃತಭಾಂಡದೊಳ್ ಬಡತನಂ ಕೇಲೊಳ್ ಬೞಂ ಧಾನ್ಯಸಂ ||
ಕುಲದೊಳ್ ಧಾನ್ಯದಕೇಡು ಮಂಚದಡಿಯೊಳ್ ಕುತ್ತಂ ಪಶುಸ್ಥಾನದೊಳ್ |
ಲಯಮಂ ಗೋ[3]ನಿವಹಕ್ಕಿಱುಂಪೆಯುದುಮೆಟ್ಟಿಂದಕ್ಕುಮವ್ಯಾಜದಿಂ || ೪೨ ||

---

ದು. ನಾಲ್ಕು, ಎಂಟು, ಪನ್ನೆರಡು ಈ ಸಂಖ್ಯೆಯ ಸ್ವರಮಂ ಕರೆಯಲ್ ತನ್ನ ಶತ್ರುಗಳ್ಗೆ ಪೇೞ್ವುದು—೩.

ಟೀ|| ದೀಪ್ತಸ್ಥಾನದಲ್ಲಿ ಪಲ್ಲಿ ಕರೆಯಲ್ ಕಾರ್ಯಹಾನಿಯಂ ಪೇೞ್ವುದು, ಪೊಗೆಯಸ್ಥಾನದಲ್ಲಿ ಕರೆಯಲ್ ನೋವಂ ಪೇೞ್ವುದು, ಶಾಂತದಿಕ್ಕಿನಲ್ಲಿ ಕರೆಯಲ್ ಐಶ್ವರ್ಯಮಂ ಪೇೞ್ವುದು; ಕೆಸಱಸ್ಥಾನದಲ್ಲಿ ಕರೆಯಲ್ ಉತ್ಸಾಹವಾರ್ತೆಯಂ ಪೇೞ್ವುದು; ಉದಕಸ್ಥಾದದಲ್ಲಿ ಕರೆಯಲ್ ಜಯಮಂ ಪೇೞ್ವುದು; ಭೂಮಿಯಸ್ಥಾನದಲ್ಲಿ ಕರೆಯಲ್ ಲೇಸಂ ಪೇೞ್ವುದು; ಬೂದಿಯಸ್ಥಾನದಲ್ಲಿ ಕರೆಯಲ್ ದುಃಖಮಂ ಪೇೞ್ವುದು; ಕೆಂಡದ ಸ್ಥಾನದಲ್ಲಿ ಕರೆಯಲ್ ಕೇಡಂ ಪೇೞ್ವುದು—೪೦.

ಟೀ|| ಕೆಂಪಿನಿಱುಹೆ ಮನೆಯೊಳಗೆ ಮುತ್ತಿ ಏೞಲ್ ಆವಱ ಲಕ್ಷಣಮಂ ಪೇೞ್ವೆಂ. ನಡುಮನೆಯಲ್ಲಿ ಏೞಲ್ ಅರ್ಥಲಾಭಮಂ ಪೇೞ್ವುದು; ಮೂಡಣದಿಕ್ಕಿನಲ್ಲಿ ಏೞಲ್ ಕ್ಲೇಶಮಂ ಪೇೞ್ವುದು; ಅಗ್ನಿಯದಿಕ್ಕಿನಲ್ಲಿ ಏೞಲ್ ಇಷ್ಟಜನಂಗಳ ಬರವಂ ಪೇೞ್ವುದು; ತೆಂಕಣದಿಕ್ಕಿನಲ್ಲಿ ಏೞಲ್ ಲೇಸಂ ಪೇೞ್ವುದು; ನೈಋತಿಯ ದಿಕ್ಕಿನಲ್ಲಿ ಏೞಲ್ ಬೞಮಂ ಪೇೞ್ವುದು; ಪಡುವಣ ದಿಕ್ಕಿನಲ್ಲಿ ಏೞಲ್ ನೆನೆದ ಕಾರ್ಯಸಿದ್ಧಿಯಂ ಪೇೞ್ವುದು; ವಾಯುವ್ಯದಿಕ್ಕಿನಲ್ಲಿ ಏೞಲ್ ಸತಿಯ ಲಾಭಮಂ ಪೇೞ್ವುದು; ಉತ್ತರದಿಕ್ಕಿನಲ್ಲಿ ಏೞಲ್ ಅರ್ಥಲಾಭಮಂ ಪೇೞ್ವುದು ಈಶಾನ್ಯದಿಕ್ಕಿನಲ್ಲಿ ಏೞಲ್ ಭಯಮಂ ಪೇೞ್ವುದು—೪೧.

ಟೀ|| ಒಲೆಯೊಳಗೇೞಲ್ ಅಗ್ನಿಭಯಮಂ ಪೇೞ್ವುದು; ದೀವಿಗೆಯಂ ಪೊತ್ತಿಸುವ ತಾವಿ

1 ಸತಿಯುಟ. 2 ಪತಿಗಾಗಂ. 3 ನಿವಹಕ್ಕೆ ಕೆಳನಿಱುಂಪೆಯೆೞ್ದುಂದುಮಕ್ಕುಮಿಾ.



ಕಂ|| ಬಟ್ಟೆಗಳೊಳ್ ದೇಗುಲದೊಳ್ |
[1]ಪಟ್ಟಗಳೊಳ್ ಬೀದಿಯೆಡೆಯೊಳಱವಟ್ಟಿಗೆಯೊಳ್ ||
ನೆಟ್ಟನೆಯಿಱುಂಪೆಯೇೞಲ್ |
ಕೆಟ್ಟಪುದೂರೆಂದು ಪೇೞ್ಗುಮಚಳಿತವಚನಂ || ೪೩ ||

— ಇಂತು ಇಱುಹೆಯ ಶಕುನಂ —

(ಅಣಂಬೆಯ ಶಕುನಂ)

ವ|| ಇನ್ನಣಂಬೆಯ ಶಕುನಮಂ ಪೇೞ್ವೆಂ —

ಕಂ|| [2]ಆಳಂಬಿ ಮೂಡೆ ವಿಭವಂ |
ಜ್ವಾಳಿ ಭಯಂ ಪೊಸಗೆ ಬಿರ್ದಿನರ್ [3]ಲಾಭಮುಮಂ || *
ಶ್ರೀಳೀಳೆ ದುಃಖಮೞಿವುಗ |
ಳಾಳೋಚಿಸೆ ಮೂಡಣೀಡೆ ನಡುಮನೆವರೆಗಂ || ೪೪ ||

---

ನಲೇೞಲ್ ಸರ್ವನಾಶಮಂ ಪೇೞ್ವುದು; ಹೊಸ್ತಿಲಲ್ಲೇೞಲ್ ಒಡೆಯಂಗೆ ಕೇಡಂ ಪೇೞ್ವುದು; ತುಪ್ಪದ ಕುಡಕೆಯ ತಳದಲ್ಲಿ ಏೞಲ್ ದಾರಿದ್ರ್ಯಮಂ ಪೇೞ್ವುದು; ನೀರಹರವಿಯ ತಳದಲ್ಲಿಯೇೞಲ್ ಬೞಮಂ ಪೇೞ್ವುದು; ಧಾನ್ಯಂಗಳಿರ್ದ ತಾವಿನಲ್ಲೇೞಲ್ ಧಾನ್ಯದ ಕೇಡಂ ಪೇೞ್ವುದು; ಮಲಗುವ ಮಂಚದಲ್ಲಿಯೇೞಲ್ ರೋಗಮಂ ಪೇೞ್ವುದು; ಪಟ್ಟಿಗಳೊಳಗೆ ಏೞಲ್ ಜೀವಧನಂಗಳ್ಗೆ ಲಯಮಂ [4]ಪೇೞ್ವುದು; ಕೆಚ್ಚನೆಯಿಱುಂಪೆಗಳಿಂಥಾ ಸ್ಥಾನಂಗಳಲ್ಲಿೞ್ದೊಡೆ ಈ ಪೇೞ್ದ ಫಲಂಗಳ್ ಸಂದೇಹಮಿಲ್ಲದೆ ಅಪ್ಪುದು—೪೨.

ಟೀ|| ನಡೆವ ಬಟ್ಟೆಗಳೊಳಗೆ ದೇವಾಲಯಂಗಳೊಳಗೆ, ಮಂತೆಯಂಗಳೊಳಗೆ, ಅಱವಟ್ಟಿಗೆಯ ಮನೆಯಮೊಳಗೆ ಈ ತಾವುಗಳಲ್ಲಿ ಕೆಂಪಿನಿಱುಹೆಗಳೇೞಲ್ ಆ ಊರಿಂಗೆ ಕೇಡಂ ಪೇೞ್ವುದು—೪೩.

ಟೀ|| ಅಣಂಬಿಗಳ್ ಮನೆಯೊಳಗೆ ಮೂಡಣದಿಕ್ಕಿನಲ್ಲೇೞಲ್ ಲೇಸಂ ಪೇೞ್ವುದು; ಅಗ್ನಿಯ ದಿಕ್ಕಿನಲ್ಲೇೞಲ್ ಅಗ್ನಿಭಯಮಂ ಪೇೞ್ವುದು; ತೆಂಕಣದಿಕ್ಕಿನಲ್ಲೇೞಲ್ ಉತ್ಸಾಹಮಂ ಪೇೞ್ವುದು; ನೈಋತ್ಯದಿಕ್ಕಿನಲ್ಲೇೞಲ್ ನಂಟರ ಬರವಂ ಪೇೞ್ವುದು; ಪಡುವಣ ದಿಕ್ಕಿನಲ್ಲೇೞಲ್ ಲಾಭಮಂ ಪೇೞ್ವುದು; ಬಡಗದಿಕ್ಕಿನಲ್ಲೇೞಲ್ ಧನಲಾಭಮಂ ಪೇೞ್ವುದು; ವಾಯುವ್ಯದಿಕ್ಕಿನಲ್ಲೇೞಲ್ ಧನಲಾಭಮಂ ಪೇೞ್ವುದು; ಬಡಗದಿಕ್ಕಿನಲ್ಲೇೞಲ್ ಐಶ್ವರ್ಯಮಂ ಪೇೞ್ವುದು; ಈಶಾನ್ಯದಿಕ್ಕಿನಲ್ಲೇೞಲ್ ದುಃಖಮಂ ಪೇೞ್ವುದು; ನಡುಮನೆಯೊಳಗೇೞಲ್ ಕೇಡಂ (ಅೞಿವಂ) ಪೇೞ್ವುದು ಎಂದಱಿವುದು—೪೪.

1 ಗೋತಾಣದೊಳ್—(ಈ ಪಾಠದಲ್ಲಿ ಪ್ರಾಸದೋಷವಿದೆ. ಟೀಕಾಕಾರನು ಮಂತೆಯದೊಳ್ ಎಂಬ ಪಾಠವನ್ನು ಹಿಡಿದು ಟೀಕೆ ಬರೆದಿರುವನು.) 2 ಅಣಂಬಿ. 3 ಲಾಭಮನರ್ಥಮಂ. 4 ಸೂಚಿಸುವುದು.

* ಈ ಪದ್ಯದಲ್ಲಿ ಎಂಟು ದಿಕ್ಕುಗಳು ಮತ್ತು ನಡುವಣ ಭಾಗ ಸೇರಿ ಒಂಬತ್ತು ಸ್ಥಳಗಳಾಗುವುವು. ಇದನ್ನನುಸರಿಸಿ ಫಲಗಳಲ್ಲೂ ಒಂಬತ್ತಿರಬೇಕು. ಟೀಕಾಕಾರನು ಜ್ವಾಳಿಭಯಂ—ಎಂಬುದನ್ನು ಒಂದು ಪದವನ್ನಾಗಿ ಭ್ರಮಿಸಿ ಫಲಗಳು ಎಂಟಾಗುವುದರಿಂದ ಲಾಭಮನರ್ಥಮುಂ—ಎಂದು ಪಾಠ ಕಲ್ಪಿಸಿ ಅರ್ಥವೆಂಬ ಪದವನ್ನು ಕಂದಾರ್ಥದಲ್ಲಿ ಸೇರಿಸಿರುವನು. ಹೀಗಾದರೆ ಛಂದಸ್ಸು (ಕಂದಲಕ್ಷಣ) ಕೆಡುವುದು. ಆದುದರಿಂದ ಜ್ವಾಳಿ—ಬೆಂಕಿಯ ಭಯ, ಭಯಂ—ಸಾಮಾನ್ಯವಾದ ಭಯ ಎಂಬ ಅರ್ಥ ಹೇಳಿಕೊಂಡರೆ ಸಮಂಜಸ.

(ಸಾಮಾನ್ಯಶಕುನಂಗಳ್)

ಕಂ|| ಕಱು ಮನೆಯನೇಱೆ ಪುತ್ತಿಡೆ |
* [1]ಪೊಱಸೊಳಗಂ ಪೊಕ್ಕು ಪೋಗೆ ಜೇನಿಡಲುರಗಂ ||
ಪೊಱಮಡೆ ಗೃಹದ ನಡುಕಡೆಯ |
ಮಱಯದೊಡಾಗೃಹ[2]ದೊಳಿರ್ದೊಡಕ್ಕಂ ಕೇಡುಂ || ೪೫ ||

ಗೃಹದೊಳ್ ತನಗಂ [3]ದೇವರ |
ಗೃಹದೊಳಗರಸಿಂಗೆ ತತ್ಸಭಾಲಯದೆಡೆಯೊಳ್ ||
ಸಹಜಗ್ರಮೆ ? [4]ಸಂಗತ |
ಬಹಳ ಸ್ಥಾನದೊಳೆ ಪಿರಿಯನಪ್ಪಂಗಕ್ಕುಂ || ೪೬ ||

ಸೀನಂ ಬೆಕ್ಕಿನ ದನಿಯುಂ |
ಮಾನಿನಿಯರ್ ಪಾಡಿ ನೀಡಿ ಅಳಿಯಿಪ ಧನಿಯುಂ ||
ಕಾನನದೊಳಿರ್ದ ಪೊಗೆಯುಂ |
ತಾನಾಗಿಯೆ ಕಂಡು ಪೋಗಲಾಗದು ಮನುಜಂ || ೪೭ ||

ಟೀ|| ಎಳಗಱು ಮನೆಯನೇಱಲ್, ಮನೆಯೊಳಗೆ ಪುತ್ತಿಡಲ್, ಕಾಡಪಾರಿವಾಳವು (ಪೊಱಸು) ಮನೆಯೊಳಗೆ ಪೊಕ್ಕು ಪೋಗಲ್ (ಜೇನುಗಳು, ಹಾವುಗಳು ಮನೆಯುವೊಳಹೊಕ್ಕು ಹೊಱವಡಲು—ಎಂಬುದು ಟೀಕಾಕಾರನ ಟೀಕೆಯು ಪ್ರಾಮಾದಿಕ.) ಮನೆಯೊಳಗೆ ಜೇನಿಡಲ್ ಈ ಪೇೞ್ದ ಮರ್ಯಾದೆಯಲ್ಲಿ ಆವುದೊಂದು ತಾನಿರ್ಪ ಮನೆಯುಂ ಸಂದೇಹವಂ ಮಾಡಿ ಮಱಯದಿರ್ದೊಡೆ ಕೇಡಪ್ಪುದು—೪೫.

ಟೀ|| ಈ ಪೇೞ್ದಂಥಾ ಕುಱುಹುಗಳ್ ಮನೆಯಲ್ಲಿ ತೋಱಲ್ ಆ ಮನೆಯೊಡೆಯಂಗೆ ಫಲವಂ ಪೇೞ್ವುದು; ದೇವಾಲಯಂಗಳಲ್ಲಿ ತೋಱಲ್ ಅರಸಿಂಗೆ ಪೇೞ್ವುದು; ಊರಮಧ್ಯದ ಮಂಟಪದಲ್ಲಿ ತೋಱಲ್ ಆ ವೂರ ಪ್ರಭುವಿಂಗೆ ಪೇೞ್ವುದು; ನೆರೆದಿದ್ದ ಮಂದಿಯಲ್ಲಿ ತೋಱಲ್ ಆ ಮಂದಿಯಲ್ಲಿ ಮುಖ್ಯಂಗೆ ಪೇೞ್ವುದು—೪೬.

ಟೀ|| ಪಯಣಮಂ ಮಾಡುವಾತಂ ಸೀನದನಿಯುಂ ಕೇಳಲ್, ಬೆಕ್ಕುಗಳೊಱಲುವ ಧ್ವನಿ ಪೆಂಗುಸು ಹಳವಿಡಿಸಿಕೊಂಡು ಅಳುವ ಧ್ವನಿ, ಅಡವಿಯಲ್ಲಿ ಕಾೞ್ಕಿಚ್ಚು ಎೞ್ದು, ಉರಿಯಿಲ್ಲದ ಪೊಗೆ ಕಾಣುಹ, ಇಂಥವಂ ತಾಂ ಕೇಳಿ ಕಂಡು ಪಯಣಮಂ ಮಾಡಲಾಗದು—೪೭.

1. ಪೊಜಗೊಳಗು. 2 ಹದಿ. 3 ದೇವಗು. 4 ಸಂಗತಿ.

* ಟೀಕಾಕಾರನು ಪೊಱಗೊಳಗು ಎಂಬ ಪಾಠವನ್ನಿಟ್ಟುಕೊಂಡು ಜೇನಿಡಲ್ ಎಂಬಲ್ಲಿರುವ ಜೇನ್ ಶಬ್ದವನ್ನು ಪೊಱಗೊಳಗಂ ಪೊಕ್ಕು ಪೋಗೆ ಜೇನ್ ॥ ಎಂದನ್ವಯಿಸಿ ಜೇನಹುಳುಗಳು ಎಂಬುದನ್ನೂ ಹಿಂದಿರುವ ಪುತ್ತಿಡೆಶಬ್ದದಿಂದ ಹಾವುಗಳು ಎಂಬ ಶಬ್ದವನ್ನೂ ಸೇರಿಸಿಕೊಂಡು ಟೀಕೆಮಾಡಿರುವನು. ಆದರೆ, ಟೀಕಾಕಾರನು ಪ್ರಾಚೀನ ಶಬ್ದಗಳ ಸ್ವರೂಪವನ್ನೂ, ಅರ್ಥವನ್ನೂ, ಸಂಪ್ರದಾಯವನ್ನೂ ತಿಳಿಯದೆ ಸೊ ಎಂಬ ಅಕ್ಷರವನ್ನು ಗೊ ಎಂದು ಭ್ರಮಿಸಿ ತನ ಸ್ವಂತ ಬುದ್ಧಿಯ ಅರ್ಥವನ್ನು ಬರೆದಿರುವನು. ಉತ್ಪಾತಾಧ್ಯಾಯದ ೬೩ ಪದ್ಯವನ್ನು ಸ್ಮರಣೆಗೆ ತಂದುಕೊಂಡಿದ್ದರೆ ಈ ಅಕ್ಷರಭ್ರಾಂತಿಯಿಂದ ಅರ್ಥಭ್ರಾಂತಿಗೆ ಇಳಿಯುತ್ತಿದ್ದಿಲ್ಲ.



ಮ|| ಮೊಸರಂ ದುಗ್ಧಮನಾಜ್ಯಮಂ ಸೆಗಣಮಂ ಧಾನ್ಯಂಗಳಂ ಫೇನಮಂ |
ರಸಮಂ ಧಾನ್ಯಮನಾರ್ದ್ರಮೃತ್ತಿಕೆಗಳಂ ರತ್ನಂಗಳಂ ಮಕ್ಕಳಂ ||
ವಸುಧಾಧೀಶ್ವರನಿಷ್ಟರಂ ಸಮಯಮಂ [1]ಪ್ರವ್ರಜ್ಯಮಂ ಮದ್ಯಮಂ |
ಬಸೆಯುಂ ತನ್ನಿದಿರಾಗಿ ಬರ್ಪವನ(ನಿಂ) ಕಾಣ್ಬಂತುಟಿತ್ಯುತ್ತಮಂ || ೪೮ ||

(* ಓಸರಿಯ ಶಕುನಂ)

ವ|| ಓಸರಿ(ಱ)ಯ ಕ್ರಮಮಂ ಪೇೞ್ವೆಂ —

ಕಂ|| ಅವಿರಳಮತಿ ಮಂತ್ರಿಪೊಡೆಡ |
ಗಿವಿಯಂ ನಿಜವಾಮಹಸ್ತದಿಂ " ಚಾಮುಂಡೀ ||
ಶ್ರವಣಪಿಶಾಚೀ ಸ್ವಾಹಾ " | .
ಪ್ರವಿದಿತ ವರಮಂತ್ರದಿಂದುಪಶ್ರುತಿಗೇಳಲ್ || ೪೯ ||

ಓಸಱಯಂ ಕೇಳ್ವೊಡೆ ಸಂ |
ಧ್ಯಾಸಮಯಂ ಮೂಱುಮುತ್ತಮಂ ಮತ್ತವಱೊಳ್ ||
ವಾಸರನಾಥೋದಯದೊಳ್ |
ಮಾಸರಮುಚಿತಂ ಸರಸ್ವತೀಮುಖತಿಲಕಾ || ೫೦ ||

ಮ|| ಮನೆಯಿಂದೋಸಱಗೇಳಲೆಂದು ಬರಲಾಗಳ್ ಭೇರಿಮಾಂಗಲ್ಯತೂ |
ರ್ಯನಿನಾದಂ ಗುಡಿ ತೋರಣಂ ಪ್ರಹಸಿತಂ ಶೇಷಾಕ್ಷತಂ ಗೀತಮುಂ ||
ಬಿನಿತುಂ ಕಟ್ಟಿದಿರಾಗಿ ತೋಱೆ ಶುಭದಂ ಮತ್ತಾವುದುಂ ತಮ್ಮೊಳಂ |
† [2]ತ್ರೆನಿವಾದಂ ಕೊಳೆ[3]ನಿಂದಿ ಮೇಷದವರಂ [4]ಕಾಣಲ್ಕೆ ದೋಷಾವಹಂ || ೫೧ ||

ಟೀ|| ಅವನೊರ್ವಂ ಪಯಣಮಂ ಮಾಡುವಲ್ಲಿ ಮೊಸರ ಮಡಕೆ, ಹಾಲಮಡಕೆ, ತುಪ್ಪ ತುಂಬಿದ ಮಡಕೆ, ಸಹಣಂ, ಧಾನ್ಯಂಗಳ ಸಮೂಹಂ, ಕಱಿವ ಆಕಳ್, ಪಾದರಸಂ, ಧಾನ್ಯದ ಹೊಱೆ, ಹಸಿಯ ಮಣ್ಣು, ರತ್ನಂಗಳ್, ಶಿಶುಗಳ್, ಅರಸಂ, ಬಂಧುಜನಂಗಳ್, ಸಮಯದವರ ಸಮೂಹಂ, ಸನ್ಯಾಸಿ, (ಹುಂದಿದ್ದ ಆಗಮೆಲಲ್, ಬರ್ಪಂಥ ವಸ್ತುಗಳ್—ಎಂಬ ಟೀಕೆಯು ಪಾಠಭ್ರಾಂತಿಯಿಂದಾದುದು) ಸುರೆ, ಬಸೆ, ಇಂಥವು ಇದಿರಾಗಿ ಬರಲ್ ಉತ್ತಮಂ—೪೮.

ಟೀ|| ವೃಥೆನುಪ್ಪ ಬುದ್ಧಿಯುಳ್ಳಾತಂ ಓಸಱಯಂ ಕೇಳ ಪೋಪಲ್ಲಿ ಎಡಗಿವಿಯಂ ಎಡಗೆಯ್ಯಿಂದೆ ಮುಚ್ಚಿಕೊಂಡು "ಎಲೆ ಕರ್ಣಪಿಶಾಚವಪ್ಪದೇವತೆಯಪ್ಪಂತಹ ಚಾಮುಂಡಿಶಕ್ತಿಗೆ ಶ್ರವಣಪಿಶಾಚೀಸ್ವಾಹಾ" ಎಂಬ ಮಂತ್ರಮಂ ಪೇೞ್ದು ಓಸಱಯಂ ಕೇಳ್ವುದು—೪೯.

ಟೀ|| ಆವನೊರ್ವನೋಸಱಯಂ ಕೇಳ್ವೊಡೆ ಉದಯ ಮಧ್ಯಾಹ್ನಾಸ್ತಮಯಮೆಂಬ ತ್ರಿಸಂಧ್ಯೆವೊಳ್ಳಿತ್ತು. ಅವಱೊಳಗೆ ಸೂರ್ಯೋದಯಕಾಲಮುತ್ತಮಮೆಂದಪ್ಪುದು—೫೦.

ಟೀ|| ಆವನೊರ್ವನೋಸಱಯಂ ಕೇಳ್ವೆನೆಂದು ಮನೆಯಿಂದಂ ಪೊಱಮಟ್ಟು ಬರ್ಪ ಸಮಯದಲ್ಲಿ ಭೇರಿಯಧ್ವನಿ, ಶುಭಕಾರ್ಯ ನಿಮಿತ್ತಮಾಗಿ ಬಾರಿಸುವ ಪಱೆಯ ಧ್ವನಿಗಳ್,

1 ಪ್ರಭ್ರ(ಭೃ)ಜ್ಯ. 2 ತೆನಿನಾದಂ. 3 ನಿರ್ನಿಮೇಷದವರಂ? 4 ಕಾಣ್ಗೆ.

* ಓಸರಿ ಶಬ್ದಕ್ಕೆ—"ಉಪಶಾಚಕ" ಎಂಬುದು ಸಂಸ್ಕೃತ ಪರ್ಯಾಯಶಬ್ದ.

† ಈ ಪಾದದ ಪಾಠವು ಶುದ್ಧವಾಗಿಲ್ಲ, ಪ್ರಾಕ್ಷರವೇ ಪಲ್ಲಟವಾಗಿದೆ. ಆ ಪಾಠವನ್ನೇ ನಂಬಿ ಟೀಕಾಕಾರನು ಟೀಕೆ ಬರೆದಿರುವನು. ಈ ಟೀಕೆ ಸಮಂಜಸನೆಂದು ತೋರುವುದಿಲ್ಲ; ಸರಿಯಾದ ಪಾಠವೂ ದೊರಕಲಿಲ್ಲ.

ಕಂ|| ನೃಪಬಾಧೆ ಕಳ್ಳರಿಂದಾ |
ದ ಪುಯ್ಯಲಗ್ನಿಪ್ರಕೋಪನುಂಬ್ಬರದಿಂದ ||
ಪ್ಪುಪಸರ್ಗಮೆನಿಪವಾರ್ತಾ |
ಪ್ರಪಂಚವಾದಲ್ಲಿ ಕೇಳಬೇಡೋಸಜಾಯಂ || ೫೨ ||

ನೀರಪೊಟ್ಟೆ ಪಾಡುವೆಡೆ ಹೊಲ |
ಗೇರಿ ಪರೀತವನವಸಗವನೆ ಸಭೆ ದೇವಾ ||
ಗಾರಂ ಚೌಪಟಮೆಸೆದಿ |
ರ್ಪಾರವೆಯಿಂಬೆಡೆಗಳುಚಿತವೋಸಜಾಗೇಳಲ್ || ೫೩ ||

ಅರೆನುಡಿವ ಸರಸವಾಡುವ |
ನರಲುವ ಪುಯ್ಯಲಿಡುವ ಕನವರಿಸುವ ಗೋ ||
ಳ್ಗರೆದಳ್ವ ಪಲುಂಬುವ ನುಡಿ |
ವಿರಸವುಪಶ್ರುತಿಯೊಳೀಯುವೆಂತುಂ ಫಲಮಂ || ೫೪ ||

ಮಂಗಳಂ|| ಎಡೆಯೊಳಾದ ನುಡಿಯೆಲ್ಲಮುವಂ [ನಿಜ] ಕಾರ್ಯಮಂ |
ನಡೆದು ಕೇಳ್ದ ನುಡಿ ಚಿಂತಿತಕಾರ್ಯಮನೆಯ್ದಿವ ||
ಪೆಡೆಯೊಳಾದ ನುಡಿ ಪೋಗೆ ನಿಮಿರ್ಚಿದ ಕಾರ್ಯಮಂ |
ಕುಡುಗುಮೆಂದಱದು ಪೇೞ್ವುದುಪಶ್ರುತಿಯುಕ್ತಿಯಂ || ೫೫ ||

(ಪತಾಕೆ), ತೋರಣಂ, ನಗುತ್ತೆ ಇದಿರಾಗಿ ಬರುಹ, ಮಂತ್ರಾಕ್ಷತೆಯ ಆಶೀರ್ವಾದ ಧ್ವನಿ, ಹಾಡುವ ಧ್ವನಿ, ಇವು ಮೊದಲಾದುವಂ ಕಾಣಲ್, ಕೇಳಲ್ ಉತ್ತಮಂ, ಇವಲ್ಲದೆ ಜಗಳ ವಾಡುವ ಧ್ವನಿ, ನಿಂದ್ಯವಪ್ಪ ಕಷ್ಟದ ನುಡಿಗಳ್, ಕುಱಗಳಂ ಕೊಂಡುಬರ್ಪುದು ಇಂಥವಂ ಕಾಣಲ್ ಒಳ್ಳಿತಲ್ಲ—೫೧.

ಟೀ|| ಅರಸುಗಳ ಬಾಧೆಗೊಳಗಾಗಿರ್ದ ಮನೆಗಳ್, ಕಳ್ಳರಿಂದೆ ಕನ್ನಂಬೋದ ಮನೆಗಳ್, ಬೆಂದ ಮನೆಗಳ್, ಬಹಳಮಪ್ಪ ದುಃಖವಾರ್ತೆಯಂ ಕೇಳ್ದಂಥಾ ಮನೆಗಳಲ್ಲಿರ್ದು ದುಃಖಿತರಾಗಿ ಇರ್ಪವರ ಮನೆಗಳ್ ಇಂತಹ ಮನೆಗಳಲ್ಲಿ ಓಸಱಯಂ ಕೇಳಲಾಗದು—೫೨.

ಟೀ|| ನೀರಪೊಟ್ಟೆ, ಪಲಂಬರೊಂದಾಗಿ ಕುಳಿತಿರ್ಪ [1]ಠಾವುಗಳ್, ಪೊಲಗೇರಿ, ಮಸಣ ವಟ್ಟಿಗೆ, ಅಸಗರ ಮನೆ, ಬಹುಮಂದಿ ನೆರೆದಿರ್ದ ಠಾವು, ದೇವಾಲಯಂಗಳ್, ಮಂಟಪಂಗಳ್, ಒಳ್ಳಿಯದಾಗಿರ್ದ ಅರಮನೆಗಳ್ ಇಂತಹ ಠಾವುಗಳಲ್ಲಿ ಓಸಱಯಂ ಕೇಳ್ವುದುತ್ತಮಂ—೫೩.

ಟೀ|| ನುಡಿವಲ್ಲಿ ಪೂರಣೆಯಿಲ್ಲದ ನುಡಿ ನುಡಿಹ, ಸರಸದ ನುಡಿಗಳ ನುಡಿಹ, ನರಲುವ ನುಡಿಗಳಾಗಿರುಹ, ಪುಯ್ಯಲಿಡುಹ, ಅಳುಹ, ಕನವರಿ[2]ಸುಹ ಅಯ್ಯೋ ಎನುತೆ ಅಳುವ ಧ್ವನಿ, ಹಲಬುವ ಧ್ವನಿ ಇಂಥಾ ನುಡಿಯನೋ(ಗಳೊ)ಸಜಾಗೇಳ್ವಲ್ಲಿ ಶಕುನಂಗಳ್ಗೆ ಸಲ್ಲವು; ಫಲಮಂ ಕುಡಲರಿಯವು—೫೪.

ಟೀ|| ಓಸಱಗೇಳಲ್ ಪೋಪಾಗಳ್ ಮಧ್ಯದಲ್ಲಿ ಪೇಳ್ದ ನುಡಿಗಳ್ ಒಳ್ಳಿಹ ನುಡಿಯಾದೊಡೆ ನೆನೆದ ಕಾರ್ಯಮಂ ಸಿದ್ಧಿ ಮಾಡಿ ಕುಡುವುದು. ನಡೆದು ಹೋಗಿ ಕೇಳ್ದಂತಹ ನುಡಿಗಳ್ ಅಲ್ಪಕಾರ್ಯ ಸಿದ್ಧಿಯಂ ಮಾಡಿ ಕುಡುವುದು. ತಾಂ ಕ್ಷಣಮಂ ಕೊಟ್ಟಿರ್ದ ಮನೆಯ ಸಮೀಪದಲ್ಲಿ ಆದ ನುಡಿ ಮುಂದೆಯಪ್ಪ ಲೇಸಿನ ಕಾರ್ಯಮಂ ಸೂಚಿಸುವುದು. ಉಪಶ್ರುತಿಯಲ್ಲಿ ನುಡಿದ ನುಡಿ ಈ ಮರ್ಯಾದೆಯಲ್ಲಿ ಫಲಮಂ ಕುಡುವುದು—೫೫.

1 ಠಾವುಗಳು ಕ್ಷೇತ್ರಗೇಱ, 2 ಕೆಯನುದಿ.



ಮ|| ಮುದದಿಂದೋಸಱಗೇಳಲೆಂದು ನಿಲೆ ಪೋನಂಗೊಂ[1]ಡು ಸಲ್ಲಾಪಗು |
ಟ್ಟದೆ ಮಾಣ್ದಿರ್ದೊಡೆ [2]ನಿಷ್ಫಲಂ ಕೆಲದವರ್ ಮಾತಾಡೆ [4]ಬೇಱಕೊಂದು [3]ತಾ ||
ಣದೆಯಕ್ಕುಂ ಫಲಮಲ್ಲಿ ಬಾರಿಸುವ ಸೂರುಳ್ಗಾಣೆಯಿಟ್ಟಿರ್ಪ್ಪ ಚಿ |
ತ್ತದ ಕಾರ್ಯಕ್ಕನುರೂಪಮಪ್ಪ ನುಡಿಗಳ್ ಸತ್ಯಂಗಳಂತೆಲ್ಲಿಯುಂ || ೫೬ ||

ಕಂ|| ನುಡಿಯಂ ಕೇಳ್ದಾಯತ್ತದೊ |
ಳೊಡಂ[4]ಬಡದು ನುಡಿವ ಪೊಳ್ನುಡಿಯೆ ಯೆರ್ದೆಯೊಳ್ ಮಾ ||
ರ್ನುಡಿವ ನುಡಿಗಳೊಳಮೆಂತುಂ |
ತೊಡರ್ದುತ್ತರಿಸಿದ ನುಡಿಯೆ ಕರಂ ಬಲವಂತಂ || ೫೭ ||

* ಪಿರಿಯಕ್ಕರ|| ತರದಿಂ ಪಂಚಾಂಗನಿರ್ಣಯಂ ನವಪಟೇಲ್ಪ್ರಕೃತಿ ವಾಸ್ತು ವೃಕ್ಷಾಪತಶಾಂತಿ |
ವರಜಲಾರ್ಗಳಂ ವೃಕ್ಷಾಯುರ್ವೇದೋಕ್ತಿ ಗಂಧಯುಕ್ತಿಕ್ರಮಂ [6]ಸೂಪಶಾಸ್ತ್ರಂ |
ನರಗಜಾಶ್ವಗೋವೈದ್ಯಮಿ ವಿಷತತ್ವಂ ಲಕ್ಷಣಂ ಶಕುನಮೆಂಬಧಿಕಾರಂಗಳ್ |
ಧರೆ(ಯ) ಬಣ್ಣಿಸೆ ಲೋಕೋಪಕಾರಮಂ ಕಾವ್ಯವಿಳಾಸನಿಂಬಾಗಿ ಪೇೞ್ದಂ || ೫೮ ||

ಕಂ|| ಮೇದಿನಿಯುಪಕಾರಂ ಕಲಿ |
ಪೋದುಗಳೆನಿತೊಳವವಿಲ್ಲಿ ನೆಲಸಿರ್ದು ಬುಧೋ ||
ಪಾದೇಯಮಾದ ದೂಸಱ |
ನಾದುದು ಲೋಕೋಪಕಾರಮೆಂದನ್ವರ್ಥಂ || ೫೯ ||

ಟೀ|| ಸಂತೋಷದಿಂದೋಸಱಗೇಳ್ವೆನೆಂದು ಅಕ್ಷತೆಯಂ ತಳಿದು ನಿಲಲ್ ಮೋನದಲ್ಲಿ ಮೂಗರ ಮರ್ಯಾದೆಯಲ್ಲಿ ಮಾತನಾಡದಿರ್ದೊಡೆ, ಆ ಕಾರ್ಯಂ ಫಲಮಿಲ್ಲಮೆಂದು ಪೇೞ್ವುದು. ತಾಂ ಕ್ಷಣಂಗೊಟ್ಟ ಮನೆಯವರಲ್ಲದೆ ಬೇಱಕೊಂದು ಮನೆಯ(ವರ್)ಲ್ಲಿ ಒಳ್ಳಿಹ ಮಾತನಾಡಲ್ ತಾನಿರ್ದ ಸ್ಥಾನಮಲ್ಲದೆ ಪರಸ್ಥಾನದಲ್ಲಿ ಕಾರ್ಯಮಪ್ಪುದು. "ಈ ಮಾತನಾಡದಿರು" ಎನುತ್ತೆ ಆಣೆಯಿಡುಹ, ಸೂರುಳಿಸುಹ ಇಂಥಾ ನುಡಿಗಳಿಂದೆ ತಾಂ ಮನಸ್ಸಿನಲ್ಲಿ ನೆನೆದ ಕಾರ್ಯಂಗಳ್ ಸಂದೇಹಮಿಲ್ಲದೆ ಅಪ್ಪುದು—೫೬.

ಟೀ|| ಓಸಱಗೇಳಲ್ ಪೋದ ಠಾವಿನಲ್ಲಿ ಒಡಂಬಡಿ(ಟ್ಟ)ರೆ ನುಡಿವ ನುಡಿಗಳಲ್ಲಿ ಒಳ್ಳಿತ್ತನುಡಿ ದೊಡಂಬಡಿಸುವ ಒಳಗೆ ನುಡಿವ ನುಡಿಗಳೊಳಗೆ ಒಂದೆರಡು ಹೊಲ್ಲಹ ನುಡಿಗಳಿರ್ದೊಡೆ ಮೊದಲ ನುಡಿಗಳೇ ಬಲವತ್ತರನೆನಿಸಿಕೊಳ್ವುವು—೫೭.

1 ಡ ಉಲ್ಲಾಪಗುಟ್ಟದೊಡೆ. 2 ನಿಷಂ. 3 ತಾನಿದೆಗಕ್ಕುಂ, ತಾ ದೊಳಕ್ಕುಂ. 4 ಬಡದಿರ್ದಂದು, 5 ವೇದೋಕ್ತಿಯಿಂ. 6 ಶ್ಯೋಪತ್ರಾ.

* ಇನ್ನು ಮುಂದಣ ಪದ್ಯಗಳಿಗೆ ಟೀಕೆಯಿಲ್ಲ. ಇವುಗಳಲ್ಲಿ ಕೆಲವು ಗ್ರಂಥದ ಆದಿಭಾಗದಲ್ಲೇ ಬಂದಿವೆ.

ಮ|| ಪಲವುಂ ಲೌಕಿಕಶಾಸ್ತ್ರಮುಳ್ಳುದಱಿಂ ಲೋಕೋಪಕಾರಂ ಜಗ |
ತ್ತಿಲಕಂ ರಾಜಸಮಾಜಪೂಜಿತಮಿದಂ ತಾತ್ಪರ್ಯದಿಂದಂ ಸ್ವಗೋ ||
ತ್ರ ಲಲಾಮಂ ಕವಿತಾವಿಳಾಸತನುಜಾತಂ ಪೇಳ್ದನೆಂದಂದು ಕೇ |
ವಲಮಲ್ಲಿಂತಿದು "ಪೊಂಗೆ ಕಂಪು ದೊರೆಕೊಂಡಂ" ತಾದುದೇಂ ಸಾರಮೋ || ೬೦ ||

ಶಾ|| ಛಂದಃಪೂರಣಮಾತ್ರದೋದುಗಳೊಳೀ ಲೋಕೋಪಕಾರಂ ಪ್ರತಿ |
ಚ್ಛಂದಂ ಶಾಸ್ತ್ರಕವಿತ್ವದೋಜೆಗೆ ಮತಂ ತದ್ಜ್ಞರ್ ಮನಂಗೊಳ್ವರೆಂ |
ದೆಂದುಂ ಕಾವ್ಯಕವಿತ್ವಮೆಂತುಮುಪಮಾತೀತಂ ರಸೋಪೇತಮೆಂ |
ದೆಂದುಂ ಕಾವ್ಯವಿಳಾಸವಾಗ್ವಿಭವಮಂ ಬಣ್ಣಿಪ್ಪನೇವಣ್ಣಿಪಂ || ೬೧ ||

ಉ|| ಪಂಡಿತಪುಂಡರೀಕ ವನಚಂಡಕರಂ ಧೃತಸದ್ಗುಣಾವಳೀ |
ಮಂಡನನಿಂದು ನಿರ್ಮಳಯಶೋ[1]ಲಲಿತಂ ಪುರುಷಾರ್ಥಮಾಲತೀ ||
ಮಂಡನನತ್ಯುದಾರಚರಿತಂ ನೆಗಲ್ದಂ ಜಗತೀತಳಕ್ಕೆ ಚಾ |
ವುಂಡನುದಾರಶೀಲನಿಧಿ ತಂದೆಯೊಳಚ್ಚಿನೊಳೊತ್ತಿದಂದದಿಂ || ೬೨ ||

ಕಂ|| ಸ್ನೇಹಂ ಕೆಯ್ಮಿಗೆ ಬುಧಸಂ |
ದೋಹಮುಮಾದರಿ(ಸೆ)ಸಿ ಪಿರಿದನೀವೆಡೆಗೆ ಗುಣ ||
ಗ್ರಾಹಕನೆನಿಸಿದಖಿಳಜನ |
ಗ್ರಾಹಕ ಚಾವುಂಡರಾಜನಂ ಪೊಗಟದರಾರ್ || ೬೩ ||

ಮ|| ಸಮದಾರಾತಿನೃಪೇಂದ್ರಗಂಧಗಜ ಕುಂಭಾಸ್ಫಾಲನಾಭೀಳ ವಿ |
ಕ್ರಮಸಿಂಹಂ ಜಯಸಿಂಹಚಕ್ರಿದಯೆಯಿಂ ಕೆಯ್ಕೊಂಡು ಸರ್ವಾಧಿಕಾ ||
ರಮನಿತ್ತಲ್ಕಱೊಳೆಯ್ದೆ ಮೆಚ್ಚಿ ಪೊರೆದಂ ತಾನೆಂದೊಡಾರಯ್ದು [2]ನೋ ||
ಡೆ ಮಹೀಭಾಗದೊಳುನ್ನತಿಕ್ಕೆ ವಡೆವಂ ಚಾವುಂಡನೇಂ ಧನ್ಯನೋ [3]|| ೬೪ ||

ಮ|| ಚದುರಿಂ ನಾಂಟೆ ವಿವೇಕದಿಂ ನ(ದೆ)ಡಪಿ ಬಿಣ್ಪಿಂ ಕೂಡಿ ಬೇರೂಱೆ ಸ |
ತ್ಯದೊಳತ್ಯುನ್ನತಮಾಗಿ ಸೌಂದರತೆಯಿಂ ಕಣ್ಗೊಪ್ಪಿ ಸೈಪಿಂ ಕವ ||
ಲ್ತು ದೃಢಜ್ಞಾನದಿನೆಯ್ದೆ ಪಲ್ಲವಿಸಿ ಪೆಂಪಿಂ ಪೂತುದಾರತ್ವಸಂ |
ಪದದಿಂದಂ ಫಲಮಾಯ್ತು ಸರ್ವಜನಕಂ ಶ್ರೀಶಿಷ್ಟಕಲ್ಪದ್ರುಮಂ || ೬೫ ||

ಕಂ|| ಇದು "ಮುನಿವೇದಾಂಕ" ಶಕಾ |
ಬ್ದದ ಕ್ರೋಧನ[4]ವತ್ಸರ ಮೃಗಶೀರ್ಷದ ಸಿತಪ ||
ಕ್ಷದ ಬಿದಿಗೆಯು ಗುರುಪುಷ್ಯದೊ |
ಳುದಯಿಸಿ ಲೋಕೋಪಕಾರಮೆಸೆದುದು ಜಗದೊಳ್ || ೬೬ ||

1 ಲಲಿತಾವೃತಾರ್ಥಮಾಳತೀ. 2 ನೋಡಿ ಪುಷೋ ಭಾಗದೊಳುಂದಲಿಕ್ಕೆ ಎಡದಂ ಳು. 3 ಸಂಖ್ಯೆ ೧೬ ಎಂದಿದೆ. 4 ವತ್ಸರ ಮಾರ್ಗ.



ಮ|| ಜನನಾಥಂ ಜಯಕೇಶಿದೇವನೊಸೆದೇಕಚ್ಛತ್ರದಿಂದಾಳ್ಗೆ ಮೇ |
ದಿನಿಯಂ [1]ನೀರ್ಮಟಿ ಕೊಳ್ಗೆ ಪೆರ್ಮುಗಿಲೆಗಾಯುಂ ಶ್ರೀಯುಮಾರೋಗ್ಯಮುಂ ||
ಧನಮುಂ ಧಾನ್ಯಮುಮಕ್ಕೆ ಸರ್ವಜಗಕೀ ಲೋಕೋಪಕಾರಂ ಚತು |
ರ್ವನಧಿಪ್ರಾವೃತಧಾತ್ರಿಯೊಳ್ ಪರೆಗೆ ಆಚಂದ್ರಾರ್ಕತಾರಂಬರಂ || ೬೭ ||

## ಗದ್ಯಂ

ಇದು ಸಮಸ್ತ ಭುವನಜನವಿನೂತಂ ಹರವರಪ್ರಸಾದೋತ್ಪನ್ನವಾಗ್ವಿಳಾಸಂ
ಶ್ರೀಮತ್ಕವಿತಾವಿಳಾಸತನೂಜಂ
ಶ್ರೀಮಚ್ಚಾವುಂಡರಾಯ
ವಿರಚಿತಮಪ್ಪ
**ಲೋಕೋಪಕಾರದೊಳ್**
ಶಕುನಾದಿಪ್ರಕರಣಂ
ದ್ವಾದಶಾಧಿಕಾರಂ

---

**ಲೋಕೋಪಕಾರಂ**
ಸಮಾಪ್ತಂ



1 ಇಲ್ಲಿ ಸೂಟ್ಮಟಿ - ಎಂದಿರಬಹುದು, ಸೂಟ್ ಎಂದರೆ ಸರದಿ, ಒಂದಾದ ಮೇಲೆ ಒಂದರಂತೆ ಕ್ರಮವಾಗಿ ಬರುವ ಮಳೆ ಸುರಿಯಲಿ ಎಂದು ತಾತ್ಪರ್ಯ. ತಮಿಳಿನಲ್ಲಿಯೂ "ತಿಂಗಳ್ ಮುಮ್ಮಾರಿ ಪೆಯ್ಯು"— (ಎಂದರೆ ತಿಂಗಳಿಗೆ ಮೂರು ಮಳೆ ಹುಯ್ಯು) ಎಂದು ಹೇಳುವ ಸಂಪ್ರದಾಯವಿದೆ.

## ವೃತ್ತಜಾತಿ ಸಂಖ್ಯೆಗಳನ್ನು ಸೂಚಿಸುವ ಪಟ್ಟಿ

| ವೃತ್ತಗಳ ಹೆಸರು | ಅಧಿಕಾರಗಳ ಸಂಖ್ಯೆ 1 | 2 | 3 | 4 | 5 | 6 | 7 | 8 | 9 | 10 | 11 | 12 | ಒಟ್ಟು ವೃತ್ತ ಸಂಖ್ಯೆ |
|---|---|---|---|---|---|---|---|---|---|---|---|---|---|
| 1. ಕಂದಂ | 32 | 26 | 24 | 35 | 27 | 46 | 65 | 44 | 214 | 40 | 51 | 33 | 637 |
| 2. ಉತ್ಪಲಂ | 4 | 1 | .... | 6 | .... | 1 | .... | 2 | 1 | .... | 3 | 1 | 19 |
| 3. ಶಾರ್ದೂಲಂ | 2 | .... | .... | 1 | .... | .... | .... | .... | .... | 1 | 3 | 1 | 8 |
| 4. ಸ್ರಗ್ಧರೆ | .... | .... | .... | .... | .... | .... | .... | .... | .... | .... | 1 | .... | 1 |
| 5. ಮತ್ತೇಭಂ | 8 | 7 | 4 | 14 | 5 | 5 | 2 | 3 | 12 | 2 | 16 | 14 | 92 |
| 6. ಮಹಾಸ್ರಗ್ಧರೆ | 5 | 4 | 1 | 8 | .... | .... | .... | .... | 1 | 1 | 11 | 1 | 32 |
| 7. ಚಂಪಕಂ | 2 | 10 | 2 | 13 | 4 | 4 | 3 | 7 | 10 | 7 | 15 | 8 | 85 |
| 8. ಪೃಥ್ವಿ | .... | .... | .... | 3 | 3 | 1 | .... | 1 | 1 | 1 | 3 | 1 | 14 |
| 9. ಮಲ್ಲಿಕಾಮಾಲೆ | .... | .... | .... | 2 | .... | .... | .... | .... | .... | .... | .... | 1 | 3 |
| 10. ಮಾಲಿನಿ | .... | .... | .... | 1 | 1 | 1 | .... | .... | .... | .... | 2 | 1 | 6 |
| 11. ದ್ರುತವಿಲಂಬಿತಂ | .... | .... | .... | 1 | .... | .... | .... | .... | .... | .... | 1 | .... | 2 |
| 12. ಹರಿಣಿ | .... | .... | .... | 1 | .... | .... | .... | .... | 1 | .... | 3 | .... | 5 |
| 13. ಅನವದ್ಯಂ | .... | 1 | .... | 1 | .... | .... | .... | .... | .... | .... | .... | 1 | 3 |
| 14. ಮಂದಾಕ್ರಾಂತೆ | .... | .... | .... | 1 | .... | .... | .... | .... | .... | .... | .... | .... | 1 |
| 15. ಮಂಗಳಂ | .... | .... | .... | .... | .... | .... | .... | .... | .... | .... | .... | 1 | 1 |
| 16. ತರಳಂ | 1 | .... | .... | 1 | .... | .... | 1 | .... | 3 | 1 | .... | 2 | 9 |
| 17. ಮುದ್ರಿಕೆ | .... | .... | .... | .... | .... | .... | .... | .... | .... | .... | 1 | .... | 1 |
| 18. ಉಜ್ಜ್ವಳಂ | .... | .... | .... | .... | .... | .... | .... | .... | 1 | .... | .... | .... | 1 |
| 19. ರಥೋದ್ಧತೆ | .... | .... | .... | .... | .... | .... | .... | .... | 1 | .... | .... | .... | 1 |
| 20. ನವನಳಿನಂ | .... | .... | .... | .... | .... | .... | .... | .... | 1 | .... | .... | .... | 1 |
| 21. ಶಿಖರಿಣಿ | .... | .... | .... | .... | .... | .... | .... | 1 | .... | .... | .... | .... | 1 |
| 22. ಪಿರಿಯಕ್ಕರಂ | 2 | 3 | 1 | 1 | .... | 1 | .... | .... | .... | .... | 3 | 1 | 12 |
| 23. ತ್ರಿವಿಧಿ | .... | 2 | .... | .... | .... | .... | .... | .... | .... | .... | .... | 1 | 3 |
| ಒಟ್ಟು. ಅಧಿ. ವೃ. ಸಂಖ್ಯೆ.... | 56 | 54 | 32 | 89 | 40 | 59 | 71 | 57 | 246 | 53 | 114 | 67 | 938 |

# ಪರಿಶಿಷ್ಟ ೨

## ಗ್ರಂಥಸ್ಥ ವೃತ್ತಕಂದಗಳ ಅಕಾರಾದ್ಯಾದ್ಯಕ್ಷರಾನು ಕ್ರಮಣಿಕೆ



* ಈ ಅಧಿಕಾರದಲ್ಲಿ ೧೯೮ ಎಂಬ ಪದ್ಯಸಂಖ್ಯೆಯು ಪ್ರಮಾದದಿಂದ ೧೭೮ ಎಂದು ಮುದ್ರಿತವಾಗಿ, ಮುಂದಣ ಪದ್ಯ ಸಂಖ್ಯೆ ಇದರ ಕ್ರಮವನ್ನೇ ಅನುಸರಿಸಿ ಮುದ್ರಿತವಾಗಿರುವುದರಿಂದ ಇಲ್ಲಿಂದ ಮುಂದಣ ಪದ್ಯ ಸಂಖ್ಯೆಗಳಿಗೆ ೨೦ನ್ನು ಸೇರಿಸಿ ಬ್ರಾಕೆಟ್ಟಿನಲ್ಲಿ ಸರಿಯಾದ ಸಂಖ್ಯೆಯನ್ನು ಕೊಟ್ಟಿದೆ.

*೪೬ ಸಂಖ್ಯೆಯು ಪ್ರಮಾದದಿಂದ ೪೭ ಎಂದು ಮುದ್ರಿತವಾಗಿರುವುದರಿಂದ ಶ್ಲೋಕ ಸಂಖ್ಯೆಯು ಇಲ್ಲಿಂದ ಮುಂದೆ ಒಂದೊಂದರಂತೆ ಗ್ರಂಥದಲ್ಲಿ ಹೆಚ್ಚಿದೆ.

* ಈ ಅಧಿಕಾರದಲ್ಲಿ ೨೬ನೆಯ ಪದ್ಯ ಸಂಖ್ಯೆ ೨೫ ಎಂದು ಪ್ರಮಾದದಿಂದ ಮುದ್ರಿತವಾಗಿರುವಕಾರಣ ಇಲ್ಲಿಂದ ಪದ್ಯಸಂಖ್ಯೆ ಒಂದೊಂದನ್ನು ಹೆಚ್ಚಿಸಿಕೊಳ್ಳಬೇಕು.

ಹಿಂದೆ ಬಿಟ್ಟುಹೋಗಿರುವುದು—ಅದಿದುವೆನ್ನದೆ ದ್ವಿ. ೨೧

Sreevathsa Press, Royapettah, Madras.

## ಪರಿಶಿಷ್ಟ ೩

### ಮೂಡಬಿದ್ರೆ ಶ್ರೀ. ಲೋಕನಾಥಶಾಸ್ತ್ರಿಗಳು ಕಳುಹಿಸಿದ ಓಲೆಯ ಗ್ರಂಥದ ಆದಿಯ ಪತ್ರಗಳಲ್ಲಿರುವ ವಿಷಯಗಳು*

ಆನೆ ಬಾಹುವಿಂಗೆ, ಕಿರುಬುಲಿ ಬಾಹುವಿಗೆ, ಅವುಶ(ಷ)ದಿ, ಗುಳ್ಳದ ಹಣ್ಣಿನ ರಸ, ...ಯೆಕ್ಕೆಯ ಹಾಲನು ಯಿಾ ಮೂರನೂಕೂಡಿ ಮರ್ದಿಸಿ ಪೂಸೂದು, ವಾಮಭಾಗದಲೂ ಯಂತ್ರ ನೆತ್ತಿಯಲ್ಲಿ ತ್ರಿಶೂಲವ ಬರವದು, ಬಿಳಿಯ ಗುಳ್ಳದ ಹಣ್ಣಿನ ರಸವ ಪೂಸೂದು, ಆನೆಬಾಹು ಇಳಿಗುಂ, ಬೆಂಡಿನ ಮುಳ್ಳಿನಲ್ಲಿ ಮೂರು ದಿನ ಹುಯಿವದು, ಬಾಹು ಕೊರಳ ಕಟ್ಟಿದರೆ ಅಂಬಿಸ, ಹಿಲುಕಿನಲ್ಲಿ ತಿರುಹುವುದು, ಜೀವಜನಗಳು ಅಳಿಗರುವ ಹಾಯಿಕುವುದಕ್ಕೆ ಹಿಂದಣ ಯೆಡಮುಕಾಲ ತಿಲಕದ ಯೆಲುಬಿನಲೂ ಯೆ(ಲೆ)ಡವ ಬರೆವದು, ಬಾಲದ ಕೆಳಗೆ ನಾಲ್ವೆರಳ ಬಿಟ್ಟು ಬರೆವದು, ........ವೊಪ್ಪಾಲೆಗೆ ಹಿಡಿ ಕೊಳಗುಬಾವುದು, ಆದಕ್ಕೆ ನಡೆಯಲಾರದು. ಯೆಕ್ಕೆಯ ಹಾಲು, ಯೆಳ್ಳೆಣ್ಣೆ, ಗುಳ್ಳದ ಹಣ್ಣಿನ ಗಿಂಜು ಇವಂ ಚಾರಿಸಿ, ಎಡದ ಕಾಲಾದಡೆ ಬಲಂ ಪೂಸೂದು, ಬಲದ ಕೆನ್ನೆಯೊಳ್ ತೊಡೆವದು, ಬಲದ ಕಾಲಾದಡೆ ಆ ಕಾಲ ಪೂಸೂದು, ಎಡದ ಕಾಲಾದಡೆ ಕನ್ನೆಯೊಳು ಪೂಸೂದು.

ಅಸಿತ ಜಲದವರ್ಣಾ ದೀರ್ಘನಾಸೋಗ್ರದಂಷ್ಟ್ರಾ ಕುಟಿಲಹಸಿತವಕ್ತ್ರಾಪೀಡಿತೇಂತೇವ್ರಾಯು ಜಂಬ ‖ ಅಖಿಲಹಿತಂ ಸುಹಸ್ತಂ ವಿಸ್ಫುಲಿಂಗಂ ಸುಖಾಂತೇ ವಿತರತಿಭುವಿಮಧ್ಯೇ ಕಾರ್ಯನಾಶಾಯ ವಿಷ್ಟಿಃ ‖ ಕೃಷ್ಣ ತೃತೀಯಾದಶಮಿಾ ಚ ರಾತ್ರೌಸ ಸಪ್ತಮಿಾ ಭೂತದಿವಾ ಚ ವಿಷ್ಟಿಃ ‖ ಏಕಾದಶೀನಕ್ತಮತ ಶ್ಚತುರ್ಥೀ ಶುಕ್ಲಾಷ್ಟಮಿಾ ಪೂರ್ಣ ದಿವಾಚ ವಿಷ್ಟಿಃ ‖ ನೀಹಾರಾಂಶೋಃ ಘುತನುತಯಾ ಯಾ ತಿಥಿರ್ಭೂತಸಂಜ್ಞಾನೂನಂ ತಸ್ಯಾಭವತಿ ಶಕುನೀನಾಮಭಾಗೇ ದ್ವಿತೀಯೇ ‖ ಯೆ ತಿಥ್ಯರ್ಧೆ ತದನುಭವತಸ್ತೇ ಚತುಷ್ಪಾದನಾಗೇ ಕಿಂಸ್ತುಘ್ನಾಖ್ಯಂ ಪ್ರತಿಪದಿದಳೇ ಪ್ರಾಜ ಸಂತೊವದನ್ತಿ ‖ ನಾಗಯೋಗ ಖಗಾಲಿಂಗಾರಾಗಪೂಗನಗಾಧರಾ ‖ ದೂಱಸಾಜಹರೊದೀವಾ ಮೇಷಾದೇರ್ದ್ದಿವನಾಡಿಕಾಃ, ತದ್ವಿಮೋ ಭಜ ಸಾಂಗಾದಿತಿವಾಱನಾಡಿಕಾಃ —

(ಸರ್ವರಕ್ಷೆ)

| | | | | | | |
|---|---|---|---|---|---|---|
| ಅ | ಆ | ಇ | ಈ | ಉ | ಊ | ಋ |
| ಜ | ಝ | ಞ | ಟ | [illegible] | ಡ | ೠ |
| ಛ | ಭ | ಮ | ಯ | ರ | ಫ | ಌ |
| ಚ | ಬ | ಸ | ಹ | [illegible] | ಣ | ೡ |
| ಙ | ಷ | ಬ | ಶ | ವ | ತ | [illegible] |
| ಘ | ಪ | ನ | ಧ | ದ | ಥ | ಐ |
| ಗ | ಖ | ಕ | ಅಃ | ಅಂ | ಔ | ಓ |



* ಈ ಗ್ರಂಥದಲ್ಲಿ ಹೇಳಿರುವ ವೈದ್ಯ, ಜ್ಯೋತಿಷ, ಶಕುನ, ಸರ್ವಲಕ್ಷಣಗಳಿಗೆ ಸಂಬಂಧಪಟ್ಟ ವಿಷಯಗಳಿದ್ದುದರಿಂದ ಪರಿಶಿಷ್ಟದಲ್ಲಿ ಕೊಟ್ಟಿದೆ.

ಅಂಗಸ್ಪಂದನ ಶುಭಾಶುಭಂಗಳ್:—

ಶಿರಸಃ ಸ್ಪಂದನೇ ರಾಜ್ಯಸ್ಥಾನಲಾಭೋ ಲಲಾಟಕೇ |
ಭ್ರೂಯುಗ್ಮೇ ಕಲಹಂ ಚೈವ ಭ್ರೂಮಧ್ಯೇಪ್ರಿಯಸಂಗಮಃ ||

ನೇತ್ರಪ್ರಾಂತೇ ಪ್ರಿಯಾಪ್ರಾಪ್ತಿಃ ಕಪೋಲೇ ಚ ವರಾಂಗನಾ |
ನಾಸಿಕಾಯಾಂ ಧ್ರುವಂ ಮೃತ್ಯುಃ ವೋಷ್ಠೇ ಮೃಷ್ಟಾನ್ನಭೋಜನಂ ||

ಅಧರೋಷ್ಠೇ ಯೌವನಕ್ರೀಡಾ ಹನುರ್ದೇಶೇ ಮಹಾಭಯಂ |
ಪೃಷ್ಠೇ ಪರೋಕ್ಷವಾರ್ತಾ ಚ ಸ್ಕಂಧೇ ಬಂಧುಸಮಾಗಮಃ ||

ಉದರೇಭೀಪ್ಸಿತ(ಂ) ಸಿದ್ಧಿಃ ಜಠರೇ ಭೋಗಸಂಗಮಃ |
ವಾಹನಾಪ್ತಿರ್ಕಟಿದೇಶೇ ಗುಹ್ಯೇ ವರವಧೂರಪಿ ||

ಊರುಯುಗ್ಮೇ ಚ ವಸ್ತ್ರಾಣಿ ಕರಮಧ್ಯೇ ಧನಾಗಮಃ |
ಪಾದಯೋರ್ಗಮನಪ್ರಾಪ್ತಿಃ ತತ್ಸ್ಯಾತ್ ಸ್ಪಂದನಲಕ್ಷಣಂ ||*

ಛಾಯಾಲಗ್ನವ ನೋಡುವ ಕ್ರಮ:— ಅವನಾನೊಬ್ಬ ಬಂದು ಬೆಪ್ಪಿಕಾರ್ಯಮಂ ಬೆಸಗೊಳಲಾಗಿ, ಬಂದ ಸಮಯದಲ್ಲಿ ಮೆಟ್ಟ ನಿಕ್ಕಿನೋಡುವುದು (ಅದಕ್ಕೆ) ಪಾದ ಒಂದಕ್ಕೆ ಬ್ರಹ್ಮಸ್ಥಾನ – ಎರಡಕ್ಕೆ ಲೇಸುಮಾತು, ಮೂರಕ್ಕೆ ಕಾಳಗ, ನಾಲ್ಕಕ್ಕೆ ಭಂಗ, ಅಯಿದಕ್ಕೆ ದೊಂಬಿ, ಆರಕ್ಕೆ ವ್ಯಾಧಿ, ಏಳಕ್ಕೆ ಅಂಕ ಉಂಟು, ಎಂಟಕ್ಕೆ ತಾನೆ ಸಾವ, ಒಂಭತ್ತಕ್ಕೆ ಅರ್ತ್ಥಭಂಡಾರವುಂ ಗೆಲುವ, ಹತ್ತಕ್ಕೆ ಆಪತ್ತು, ಹನ್ನೊಂದಕ್ಕೆ ನಾರಾಂಕಿ ಸಾವು, ಹನ್ನೆರಡಕ್ಕೆ ಹರಿಬಕ್ಕೆ ಬಂದವ ಸಾವ, ಹದಿಮೂರಕ್ಕೆ ಪಾಂಡವರು ಭೂಮಿಯುನ್ನು ಬಿಟ್ಟರು, ಹದಿನಾಲ್ಕಕ್ಕೆ ಆವಾರ್ತೆಯು ಕೇಳಿದರು, ಹದಿನೈದಕ್ಕೆ ಸೀತೆ ಸೆರೆಹೋದಳು, ಹದಿನಾರಕ್ಕೆ ಆವಾರ್ತೆಯು ಕೇಳಿದರು, ಹದಿನೇಳಕ್ಕೆ ಹನುಮ ಲಂಕೆಗೆ ಲಂಘಿಸಿದ, ಹದಿನೆಂಟಕ್ಕೆ ಆವಾರ್ತೆಯು ಕೇಳಿದರು, ಹತ್ತೊಂಬತ್ತಕ್ಕೆ ಶ್ರೀರಾಮ ಲಂಕೆಯ ಕೊಂಡ, ಇಪ್ಪತ್ತಕ್ಕೆ ಈಶ್ವರ ತ್ರಿಪುರಮಂ ಗೆಲ್ದ, ಮತ್ತೆ ಒಂದು ಮೊದಲಾಗಿ ವಿಶೇಷವಾದುದ ಹಿಂದಣ ರೀತಿ ನೋಡಿಕೊಳ್ವುದು. ತಪ್ಪಸಲ್ಲದು, ಒಂದೈದರಿಂದ ಬರ್ಕುಂ ಸಂದೇಹಂ, ಆರುನಾಲ್ಕರೊಳತಿದೂರಂ ಬಂದಿರ್ಕ್ಕುಂ, ಏಳುಮೂರರೊಳೆಂದಿಗುಂ ಬಾರನೆಂನ್ಬು, ಎರಡೆಂಟರೊಳಂ.

(ಸೀನಿನ ಶಕುನಂ)

*ಛೈ ಷಜ್ಯೇ ವಾಹನಾರೂಢೇ ಸಂಗ್ರಾಮೇ ಸುರತಕ್ರಿಯೇ |
ಮಂತ್ರಾರಂಭೇ ಬೀಜವಾಪೇ(ವ) ಕ್ಷುತಮತ್ಯಂತ ಶೋಭನಂ ||
ಪ್ರತಿಪರ್ವ್ವಂ ತ್ರೀಣಿಘಟಿಕಾ ಷೋಡಶಂತು ಮಹೇಶ್ವರಃ |
ಬೌದ್ಧಃ ತ್ರಿಪಂಚಕಶ್ಚೈಕ ಜೈನಪರ್ವಾಣಿ ವಿಂಶತಿಃ ||
ವಣ್ಣಾರ್ ಮಂತ್ರಿಮಹತ್ತರಾ ತಳವರಾ ದೇಶಾಧಿಕಾರೀಕುಲ |
ಸ್ತ್ರೀವೃದ್ಧೋ ಗಣಕಃ ಪುರೋಹಿತಯುತಸ್ಸರ್ವಾಧಿಕಾರೀತಿ ಚ ||
ದಂಡಶ್ರೇಷ್ಠೀವರಾ ಚತುರ್ಬಲಮತಿ ಪ್ರೋಕ್ತಾ ಚನಿತ್ಯಾರ್ಥಿಭಿಃ |
ಶ್ರೇಷ್ಠಾ(ಷ್ಟಾ) ದಶಭಿಸ್ತಯಾಪರಿವೃತೋ ಹೋರಾ ಕಿರೀಣಸ್ಕೃತಃ? ||
ರಾಜಾನಃ ಪ್ರಾಣಿನಾಂ ಪ್ರಾಣಾಃ ತೇಷು ಸತ್ಸ್ವೇವ ಜೀವನಾತ್ |
ತದತ್ರ ಸದಸತ್ಕೃತ್ಯಂ ಲೋಕಮೇವಂ ಕೃತಂ ಭವೇತ್ |
ಅಸಮರ್ಥಂ ಪರಿತ್ಯಜ್ಯ ಸಮರ್ಥೇನ ಚ ಭುಜ್ಯತೇ ||



(ಪ್ರಯಾಣ ಮಾಡುವ ತಿಥಿ ದಿಕ್ಕುಗಳು)

ನಮಸಿದ್ಧೇಭ್ಯಃ—

ಮೂಡ ಚತುರ್ದಶಿ ಯಗ್ನಿಗೆ |
ನೋಡಷ್ಟಮಿ [1]ತೆಂಕಲಿಂಗೆ ಸಪ್ತಮಿ [2]ದಿವಸಂ ||
ನೋಡಲ್ [3]ನಿರುತಿಗೆ ಪೌರ್ಣಮಿ |
[4]ಬೇಡ ಗಡಾ ಪಶ್ಚಿಮಕ್ಕೆ [5]ಪಂಚಮಿದಿವಸಂ || ||೧||

ಪವನಂಗೆ ದಶಮಿ [6]ದಿವಸಂ |
ಬವನಾದೊಡೆ [7]ಬಡಗ ಸಲ್ಲ ಯೇಕಾದಶಿಯೊಳ್ ||
ಶಿವನತ್ತ ತದಿಗೆ ಯಾಗದು |
ವವಯುವದಿಂದಜಾದು[8]ಕೊಳ್ಗೆ ತಿಥಿಶೂಲೆಗಳಂ ||೨||

ಗೌಳಿ ಮೆಯ್ಯಮೇಲೆ ಬಿದ್ದ ಫಲ—

ಮಸ್ತಕದ ಮೇಲೆ ಬೀಳಲ್ ಕಲಹ, ಮುಡಿಯ ಮೇಲ್ಕೆ ಬೀಳೆ ಮರಣಂ, ಶಿರದ ಮೇಲೆ ಬೀಳೆ ತಾಯ್ಗೆ ಮರಣಂ, ಶಿರದ ಹಿಂದೆ ಬೀಳೆ ತಂದೆಗೆ ಮರಣಂ, ಶಿರದ ಬಲಭಾಗದಲ್ಲಿ ಬೀಳೆ ಅಣ್ಣಂಗೆ ಮರಣಂ, ಎಡಭಾಗದಲ್ಲಿ ಬೀಳೆ ತಮ್ಮಂಗೆ ಮರಣಂ, ಬಲದ ಹೆಡತಲೆಯ ಮೇಲೆ ಬೀಳೆ ಅರ್ಥನಾಶಂ, ನೊಸಲ ಮೇಲೆ ಬೀಳೆ ಧನಸಂಪತ್ತು, ಬಲದ ಹುಬ್ಬಿನ ಮೇಲೆ ಬೀಳೆ ಅರಸು ಮನ್ನಣೆ, ಎಡದ ಹುಬ್ಬಿನ ಮೇಲೆ ಬೀಳೆ ಬಾಧೆ, ಬಲದ ಕಿವಿಯ ಮೇಲೆ ಬೀಳೆ ಲಾಭಂ, ಎಡದ ಕಿವಿಯ ಮೇಲೆ ಬೀಳೆ ಐಶ್ವರ್ಯಂ, ಬಲದ ಕಣ್ಣ ಮೇಲೆ ಬೀಳೆ ಬಂಧನಂ, ಎಡದ ಕಣ್ಣ ಮೇಲೆ ಬೀಳೆ ಶೋಕಂ, ಮೂಗಿನ ಮೇಲೆ ಬೀಳೆ ವ್ಯಾಧಿ, ಮೇಗಣ ತುಟಿಯ ಮೇಲೆ ಬೀಳೆ ದಂಡಿಗೆ ಪದವಿ, ಕೆಳಗಣ ತುಟಿಯ ಮೇಲೆ ಬೀಳೆ ಲಾಭಂ, ಬಲದ ಕದಪಿನ ಮೇಲೆ ಬೀಳೆ ಮರಣವಾರ್ತೆ, ಎಡದ ಕದಪಿನ ಮೇಲೆ ಬೀಳೆ ರಾಜಭಯಂ, ಗಡ್ಡದ ಮೇಲೆ ಬೀಳೆ ಅರಸು ಕೊಡುವ ಲಾಭಂ, ಕೊರಳ ಮೇಲೆ ಮುಂದೆ ಬೀಳೆ ವಿಷದಭೀತಿ, ಕೊರಳ ಮೇಲೆ ಬೀಳೆ ರತ್ನದ ತೊಡುಗೆ, ಕೊರಳ ಮೇಲೆ ಬಲದ ಭಾಗದಲ್ಲಿ ಬೀಳೆ ಲಾಭಂ, ಕೊರಳ ಎಡದ ಭಾಗದಲ್ಲಿ ಬೀಳೆ ಲೇಸು, ಬಲದ ಹೆಗಲ ಮೇಲೆ ಬೀಳೆ ವ್ಯಾಕುಲತೆ, ಎಡದ ಹೆಗಲ ಮೇಲೆ ಬೀಳೆ ಶತ್ರುಬಾಧೆ, ಬಲದ ಭುಜದ ಮೇಲೆ ಲಾಭಂ, ಎಡದ ಭುಜದ ಮೇಲೆ ಲೇಸು, ಬಲದ ತೊಡೆ ಮೇಲೆ ಬೀಳೆ ಅರಸು ಮನ್ನಣೆ, ಎಡದ ಕೊರಳ ಮೇಲೆ ಸ್ತ್ರೀ ಸಂಭೋಗಂ, ಬಲದ ಮುಂಗಣ್ಣ ಮೇಲೆ ಬೀಳೆ ಲಾಭಂ, ಎಡದ ಮುಂಗಣ್ಣ ಮೇಲೆ ಬೀಳೆ ಲೇಸು, ಬಲದ ಮೊಳಕೆಯ್ಯ ಮೇಲೆ ಬೀಳೆ ಪುತ್ರನಾಶಂ, ಎಡದ ಮೊಳಕೆಯ್ಯ ಮೇಲೆ ಬೀಳೆ ಅರ್ಥನಾಶಂ, ಬಲದ ಮಣಿಕೆಯ್ಯ ಮೇಲೆ ಬೀಳೆ ಮನಸ್ತಾಪಂ, ಎಡದ ಮಣಿಕೆಯ್ಯ ಮೇಲೆ ಬೀಳೆ ಶುಭಂ, ಬಲದ ಅಂಗಯ್ಯ ಮೇಲೆ ಬೀಳೆ ಲೇಸು, ಎಡದ ಅಂಗಯ್ಯ ಮೇಲೆ ಬೀಳೆ ಮರಣಂ.

*೧. ಗರ್ಭಾದಾನ, ೨. ಪ್ರಮೋದ, ೩. ಪುಂಸವನ, ೪. ಸೀಮಂತ, ೫. ಜಾತಕರ್ಮ. ೬. ನಾಮಕರಣ, ೭. ಉಪವೇಶನ, ೮. ಅನ್ನಪ್ರಾಶನ, ೯. ಗಮನಾಭ್ಯಾಸ, ೧೦. ಚೌಲಕರ್ಮ. ೧೧. ಅಕ್ಷರಾಭ್ಯಾಸ, ೧೨. ಪುಸ್ತಕಗ್ರಹಣ, ೧೩. ಉಪನಯನ, ೧೪. ಸಮಾವರ್ತನ, ೧೫. ವಿವಾಹ, ೧೬. ಸಂನ್ಯಾಸನಂ.

(ಇತಿ ಷೋಡಶಕ್ರಿಯಾಃ)

1 ದಕ್ಷಿಣಕ್ಕೆ. 2 ಮತ್ತಾ. 3 ನೈರುತಿಗೆ. 4 ನೋಡಾ. 5 ಪಶ್ಚಿಮಂ ತಿಥಿ ಶೂಲಂ. 6 [illegible]. 7 ಪೋಗಲಾಗದೇಕಾ. 8 ಕೊಳ್ಳು.

*ಇವು ಜೈನಸಂಪ್ರದಾಯದ ಷೋಡಶಕ್ರಿಯೆಗಳು.

ಶಸ್ತ್ರಲಕ್ಷಣಂ—

ಎಡಸೊತ್ತೆ ಬಲದಿ ವಾಕಡಿ।
ತಡೆಯದೆಱು(ಯಿ)ದಿರಲ್ಲಿ ಮೂಱು ಬೆಸ್ನೊಳ್ ಕಳವುಂ॥
ಕಡುಗಲಿ ಬ್ರಹ್ಮೇತಿಯಡುಂ।
ತಡೆಯದೆ ತಾಂ ಸೂರೆಯಿಂದ ಮೆಂದರ್ ಗಾರ್ಗ್ಯರ್ ॥ ೧ ॥

ನೂಲಿನ ಮೊನೆವರ ಮಿಕ್ಕಿದ।
ನೂಲಂ ಸರಿವಿಡಿದು ಕೈದುಮಧ್ಯದ ಸಂಖ್ಯೆಯ॥
ಲಾ ಯೆಂಟುಭಾಗ ಕಳೆಯಲ್।
ಮೇಲಿದ್ದುದಱಿಂದೆ ಕುಲಜ ಫಲಮಂ ಪೇೞ್ಗಾ ॥ ೨ ॥

ಕುಲವೈಶ್ಯನಾಗೆ ಸಂಪದ।
ಪೊಲವಿಂದಂ ಕುರುಬನಾಗೆ ಮರಣಮದಕ್ಕುಂ॥
ಸಲೆ ಶೂದ್ರನಿಂದೆ ಸಂಪದ।
ಕುಲನಾವಿದನಿಂದೆ ದುಃಖಮುಕ್ಕು ಮಮೋಘ(ಹ)ಂ ॥ ೩ ॥

ಅರಸಿನೊಳೈಶ್ವರ್ಯಂ ತಾಂ।
ನಿರುತಂ ಚಂಡಾಲನಿಂದೆ ಸ್ತ್ರೀಯರುಮುಱಗುಂ॥
ವರವಿಪ್ರನಿಂದೆ ಸಂಪದ।
ಸಲೆ ಕೀಲಿಗನಿಂದೆ ದುಃಖಮುಕ್ಕುಮಮೋಘಂ ॥ ೪ ॥

ಇಂದ್ರ ಅರಸು, ಅಗ್ನಿ ಕುರುಬಂ, ಯಮ ಶೂದ್ರಂ, ನಿರುತಿ ನಾವಿದಂ, ವರುಣ ವೈಶ್ಯಂ, ವಾಯುವ್ಯ ಅನಾಮಿಕಂ, ಕುಬೇರ ಬ್ರಾಹ್ಮಣಂ, ಈಶಾನ್ಯ ಮಾದಿಗಂ.

ಕೆಯ್ದುವಿನ ಪ್ರಮಾಣ ಫಲಂ—

ಆಕೈದಿನ ಉದ್ದನೂಲಂ ಹಿಡಿದು, ಆ ನೂಲಂ ಆಕೈದಿನ ಮಧ್ಯದ ಮೆಯ್ಯ ಅಗಲದ ಪ್ರಮಾಣದಲು, ಅಷ್ಟದಿಕ್ಕಿಗೆ ಸ್ಥಾಪಿಸಿಕೊಂಡು ಬರಲು ಆವ ದಿಕ್ಕಿನಲ್ಲು ನಿಂದಿತು, ಆ ದಿಕ್ಕಿನ ಫಲಮಂ ನೋಡಿಕೊಳ್ವುದು.

ಶ್ರೀ ಚಂದ್ರನಾಥಾಯ ನಮಃ

ನಾಳಾವಳಿ—

ಅಕಚಟತ ಪಯಶವರ್ಗಂ ದಶಗುಣಿತಂ ಪೃಚ್ಛನಾಮಸಂಯುಕ್ತಂ।
ಅಷ್ಟಾಭಿಶ್ಶೇಷಹರೈಃ ತಚ್ಛೇಷಂ ಋಣಮಾದಿಶೇತ್ ವಿಜ್ಞಃ ॥

ಮತಾಂತರಂ—

ಸ್ವವರ್ಗಂ ದ್ವಿಗುಣೀಕೃತ್ಯ ಪರವರ್ಗೇಣ ಸಂಯುಕ್ತ(ತ)ಂ।
ಅಷ್ಟಾಭಿಶ್ಶೇಷಹರೈಸ್ತಚ್ಛೇಷಂ ಋಣಮಾಚರೇತ್ ॥

ತಾರಾಬಲಂ—

ಜನ್ಮ ಸಂಪದ್ವಿಪತ್ ಕ್ಷೇಮ ಪ್ರತ್ಯಹಂ ಸಾಧನಂ ವಧಃ।
ಮೈತ್ರಂ ಪರಮೈತ್ರಂ ಚ ಜನ್ಮಾದೀನಾಂ ಪುನಃ ಪುನಃ ॥

(ಇತಿ ತಾರಾಬಲಂ)



ಅಥಚಂದ್ರಬಲಂ—

ಜನ್ಮಾನಲ ರುತುಸಪ್ತಮದಶಮೈಕಾದಶೀ ಶುಭಶ್ಚಂದ್ರಃ।
ದ್ವಿಚತುರ್ಥಪಂಚಮಾಷ್ಟಮ ನವಮದ್ವಾದಶಾಶುಭಾಃ॥

(ಇತಿ ಚಂದ್ರಬಲಂ)

ಯಮಭ—

ಪಾಡ್ಯದೊಳುತ್ತಮ ಬಿದಿಗೆಯೊಳ್ ಪ್ರೀತಿಕರಂ – ತೃತೀಯದೊಳ್ ಧನಾಗಮಂ ನೋಡಾ ಚತುರ್ಥಿಯೊಳ್ ಕಲಹಂ – ಪಂಚಮಿಯೊಳ್ ಶ್ರೀ – ಷಷ್ಠಿಯೊಳ್ಕರ ಪ್ರಥಿತನಕ್ಕುಂ ಸಪ್ತಮಿಯೊಳಿಷ್ಟಫಲಂಗಳನೆಯ್ದುಗು – ಯೆಂಟರೊಳ್ ಕೇಡವೋರ್ಕೆಮೆಂದುಸುಪೂರ್ವಾವಗ ಸೌಗತಗಾರ್ಗ್ಯ ಮಿನಿತುಮತಂ?

ಮರಣಂ ರಂಧ್ರನೊಳಾವಗಂ ದಶಮದೊಳ್ ಪ್ರೇಮಾಸ್ಪದಂ ರುದ್ರನೊಳ್।
ಪಿರಿದಪ್ಪರ್ಥಮುಮಂತೆ ಪನ್ನೆರಡರೊಳಂ ಪ್ರಾಣಕ್ಕೆ ಸಂದೇಹಮಂ॥
ನಿರುತಂ ಸಿದ್ಧಿಕರಂ ತ್ರಯೋದಶಿಯೊಳಂ ಚ(ಚಾ)ತುರ್ದಶೀ(ಯುಂ) ವರ್ಜಿತಂ।
ಕರಕಷ್ಟಂ ಪಯಣಕ್ಕೆ ಪರ್ವವೆರಡುಂ ಶ್ರೀಗಾರ್ಗ್ಯ ಶಿಷ್ಟೋಕ್ತಿಯಿಂ॥

(ಇವೆರಡು ಕನ್ನಡ ಪದ್ಯಗಳೂ ಅಶುದ್ಧಗಳಾಗಿವೆ.)

ಮೂಡಲ್ ರವಿ ಕನಕನಗ್ನಿಗೆ।
ನೋಡಲ್ ಗು[ರು] ತೆಂಕಲಿಂದು ನೈರುತಿಬುಧನುಂ॥
ಪಡುವಲ್ ಶುಕ್ರಂ ವಾಯುವ್ಯನೊಳ್ ಶನಿ।
ಬಡಗಲ್ ಸೋಮವಾದ ನಡೆ ವೇಧೆ ಗಂದಾರ ಶೂಲವೆಂದರ್ ಗಾರ್ಗ್ಯರ್ ॥

(ಇವೆರಡು ಕಂದಾರ್ಧಗಳೂ ಎರಡು ಕಂದಗಳ ಪೂರ್ವಾರ್ಧಾಪರಾರ್ಧಗಳಿರಬಹುದು.)

ಮೂಡಚತುರ್ದಶಿ.........

(ಒಂದು ಹಿಂದೆ ಹೇಳಿದ ಪದ್ಯಗಳಿವೆ.)

| | | | | |
|---|---|---|---|---|
| ಬ್ರ | ಹ್ರೀಂ | ಜ್ಯೋತಿ | ಹ್ರೀಂರ | ಜ್ಯೋತಿ |
| ಹ್ರೀಂ | ದೇವ ದತ್ತಸ್ಯ | ದೇವ ದತ್ತಸ್ಯ | ದೇವ(ತಿ) (ದತ್ತಸ್ಯ) | ದೇವ ದತ್ತಸ್ಯ |
| ಕ್ಲೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ |

ಈ ಯಂತ್ರಮಂ ಜೀವದನಂಗಳ ಕಟ್ಟುವ ಕೊಟ್ಟಗೆಯೊಳಗೆ ಹೂಳಲು ಕಾಲುಜ್ವರ, ಬಾಯಿ ಜ್ವರ ಮಾಣ್ಗುಂ. ಪೂರ ಹೊರಗೂ ಕಟ್ಟೊದು.

| | | |
|---|---|---|
| ರಂದ್ರಂ ಕ್ಷ | | ೨೦ ಠಝಂ |
| ವ್ರಳ ವ್ರ | ವ್ರಳ ವಂ | 卐 ವ್ರಳ ವಿಂ |

ಯಿಾ ಯಂತ್ರ ಹಲ್ಲತಿಂಬುದಕ್ಕೆ, ಹೊಲ್ಲದ ಕನಸ ಕಾಂಬುದಕ್ಕೆ, ಮಗ್ಗಿಲೊಳಗೆ ಮೂತ್ರಿಸು ದಕ್ಕೆ ಕಟ್ಟೊದು.




ಯಿಾ ಯಂತ್ರ ದೀವಳಿಗೆ ಪಾಡ್ಯದಿನ ಕಂಟನಲಿ? ಬರದುನುಡಿಸೆ ಜೀವದನವಿಗೆ ಕಾಲು ರೋಗ ಮಾಣ್ಗುಂ.

ಕ್ಷ್ರೀ ಕ್ಷ್ರೀ ಕ್ಷ್ರೀ ಕ್ಷ್ರೀ

| | | | | | |
|---|---|---|---|---|---|
| ಕ್ಷ್ರೀ | ೮೦೦ | ೭೦೦ | ೫೦೦ | ೭೨೦ | ಕ್ಷ್ರೀ |
| ಕ್ಷ್ರೀ | ಹ್ರೀ | ಹ್ರೀ | ಹ್ರೀ | ಯರ್ರ | ಕ್ಷ್ರೀ |
| ಕ್ಷ್ರೀ | ೨೯೦ | ೬.೭೦ | ೨೨೨ | ೪೦೫ | ಕ್ಷ್ರೀ |
| ಕ್ಷ್ರೀ | ೪೪೫ | ೧೧೦ | ೯೯೯ | ೭೦೦ | ಕ್ಷ್ರೀ |

ಹ್ರೀ ಹ್ರೀ ಹ್ರೀ ಹ್ರೀ

ಈ ಯಂತ್ರ ಪಿಶಾಚಿ, ಬ್ರಹ್ಮರಾಕ್ಷಸ, ಕುಂಭಿನೀಜಟ್ಟಿಗೆ ಮೊದಲಾದ ಸರ್ವಗ್ರಹೋಚ್ಚಾಟನ.



| | | | |
|---|---|---|---|
| ೩೦ | ೧೬ | ೧೮ | ೩೬ |
| ೧೧ | ೪೪ | ೨೨ | ೨೪ |
| ೩೮ | ೧೭ | ೨೦ | ೩೭ |
| ೨೮ | ೨೬ | ೪೦ | ೬ |

ನಾಗಾರ್ಜುನ ಯಂತ್ರ – ಸರ್ವಗ್ರಹೋಚ್ಚಾಟನ – ರಕ್ಷೆಗಟ್ಟುವುದು.

# ಪರಿಶಿಷ್ಟ ೪

## ಕವಿಯ ಬಿರುದುಗಳು (ಗ್ರಂಥದ ಆಕರಗಳು)

ಕವಿಯು ತನ್ನ ಹಲವು ಬಿರುದುಗಳನ್ನು ಗ್ರಂಥದೊಳಗೆ, ಅಲ್ಲಲ್ಲಿ ಹಲವು ಪದ್ಯಗಳ ಕೊನೆಯಲ್ಲಿ ಸೇರಿಸಿರುವನು, ಅವುಗಳನ್ನು ಸಂಗ್ರಹಿಸಿ ಇಲ್ಲಿ ಕೊಟ್ಟಿದೆ—

(1) ಜಯಬಂಧುನಂದನಾ—ಪ್ರ-೩. ಪಂ-೨೪, ೩೧. ಸ-೨. ಏ-೮೮. ಆ-೧೨. ದ-೪೯ (೫೦). ಏ-೮೮, ೧೧.

(2) ಅಚಳಿತವಚನಾ—ಪೀ-೭ (ಇದು ಇವನ ವಂಶಕ್ಕೆ ಬಂದ ಬಿರುದೆಂದು ತೋರುವುದು.) ಪ್ರ-೨೫. ದ್ವಿ-೩೮, ೪೨. ಚ-೧, ೯, ೮೩. ಪಂ-೧, ೭, ೧೫, ೩೧. ಷ-೨, ೫೩ (೫೨), ೫೮ (೫೯). ಸ-೧೭, ೨೯. ನ-೪೧, ೬೯, ೧೦೩. ದ-೩೩. ಏ-೨೨. ದ್ವಾ-೧೨, ೧೭, ೩೨, ೪೩.

(3) ಸರಸ್ವತೀಮುಖತಿಲಕಾ—ದ್ವಿ-೧. ಷ-೩೧, ೪೬, ೫೩ (೫೨). ಸ-೧೫, ೪೭. ಆ-೩೪. ನ-೪೪, ೯೯, ೧೪೬. ದ-೧, ೪೪ (೪೫). ಏ-೭೮. ದ್ವಾ-೫೦.

(4) ಬುಧಬಂಧೂ—ದ್ವಿ-೨೧. ತೃ-೨. ಸ-೧, ೩೨. ಆ-೩೭, ೪೪. ನ-೪೦, ೮೮. ದ್ವಾ-೮.

(5) ಶ್ರೀಶಿಷ್ಟಕಲ್ಪದ್ರುಮಾ—ಪೀ-೧೬, ೨೨. ಚ-೯. ಪಂ-೧೩, ೨೭, ೨೯. ಷ-೪೨, ೬೦ (೫೯). ಆ-೫. ಏ-೪೧. ದ್ವಾ-೯, ೬೫.

(6) ಕಾವ್ಯವಿವೇಕಂ—ಷ-೧.

(7) ಕಾವ್ಯವಿಳಾಸ—ಪೀ-೧೬. ಆ-೧. ನ-೧. ದ್ವಾ-೫೯, ೬೧.

(8) ವಿಬುಧಕಲ್ಪವೃಕ್ಷಂ—ಆ-೩೯.

(9) ಬಲ್ಲಿದಂ—ಏ-೬೩ (ಬಲ್ಲಿದನೋದಿನಿಷ್ಟದಿಂ).

(10) ಧರ್ಮಧರ್ಮಾತ್ಮಜ—ಪೀ-೧೬.

(11) ವಾಗ್ವಧೂಮಂಡನಮುಖತಿಲಕಂ—ಪೀ-೧೬.

(12) ದಾನವಿನೋದಂ—ಪೀ-೧೬.

(13) ಬುಧೈಕಾಶ್ರಯಂ—ಏ-೨೩.